# ಅಮೃತ




ಪ್ರಾತಃಸ್ಮರಣೀಯ ಶ್ರೀ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು

# ಅಮೃತ

ಸಂಪಾದಕ:
ಕೊರ್ಲಹಳ್ಳಿ ವೇಂಕಟೇಶಾಚಾರ್ಯ

ಪ್ರಕಾಶಕರು:
ಶ್ರೀವಿದ್ಯಾಮಾನ್ಯಪ್ರಕಾಶನ
ಶ್ರೀಹೃಷೀಕೇಶತೀರ್ಥ ಸ್ಮಾರಕ ಟ್ರಸ್ಟ್
ಪಲಿಮಾರು ಮಠ, ರಥಬೀದಿ
ಉಡುಪಿ

# AMRUTA

Edited: by Korlahalli Venkateshacharya

Published by: **SrividyamanyaPrakashna**

**Sri Hrisheekesha Theertha Swamiyar Smaraka Trust**
**Palimar Matha, Car Street**

Udupi Karnataka. India

first Edition: 2001 [ 2000 Copies]



pages : XXXII+248+48

cover design & layout : K.M. Sheshagiri
Sree VidyamanyaVinyasa Vikasana Samsat

Typeset : Ananta Krishna Nijagal
of Padmashree Graphics, Bangalore-50

printed at : Rashtrotthana muduranalaya
Kemprgowda Nagar. Bangalore-19

Book can be had from Publisher

**PalimarMatha, Car Street**

Udupi Karnataka. India

# ತರಂಗ

# ಮೇರುಮಂದರ

ಪರಮಪೂಜ್ಯರಾದ ಶ್ರೀಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು ಅನ್ವರ್ಥಕ ಗುರುಗಳು.

ಗುರು ಅಂದರೆ ಹಿರಿದಾದದ್ದು- ದೊಡ್ಡದಾದದ್ದು.

ನಮ್ಮ ಪೂಜ್ಯರು ಎಲ್ಲರಿಗೂ ಹಿರಿಯರು. ಎಲ್ಲರಿಗಿಂತ ದೊಡ್ಡವರು.

ಅವರನ್ನು ಕರೆಯುವ ಶಬ್ದವೇ ದೊಡ್ಡಸ್ವಾಮಿಗಳೆಂದು.

ಅಂದಿಗೂ-ಇಂದಿಗೂ-ಎಂದೆಂದಿಗೂ ದೊಡ್ಡವರೇ ಅವರು.

ಅವರ ಹಿರಿತನ-ಗುರುತನ-ದೊಡ್ಡತನ ಅದು ಅನಂತ ಅಪಾರ.

ಹೀಗಾಗಿ ಪೂಜ್ಯರ ಭೂಮತ್ವವನ್ನು ಶಬ್ದದಿಂದ ಅಳೆಯಲಾಗದು.

'' ಯತೋ ವಾಚೋ ನಿವರ್ತಂತೇ'' ಅನ್ನುವ ಆರ್ಷವಾಣಿ ಪೂಜ್ಯರ ಬಗ್ಗೆಯೂ ಸ್ವಲ್ಪಮಟ್ಟಿಗೆ ಅನ್ವಯಿಸುತ್ತದೆ.

ಈಗಾಗಲೇ ಬೇರೆ ಬೇರೆ ತರದಲ್ಲಿ ಪೂಜ್ಯರ ಹಿರಿತನದ ಸಂಚಯದ ಕಾರ್ಯ ನಡೆದಿದೆ. ನಡೆಯುತ್ತದೆ.

''ಪಶ್ಯಂತೋಽಪಿ ನ ಪಶ್ಯಂತಿ ಮೇರೋಃ ರೂಪಂ ವಿಪಶ್ಚಿತಃ''

ಜ್ಞಾನಿಗಳು ಮೇರುವನ್ನು ಕಂಡಿದ್ದಾರೆ. ಯಾವುದೋ ಒಂದು ತುಣುಕು ಅಷ್ಟೇ ಕಾಣದ ಅಂತಗಳೇ ಅಪಾರ.

ಮೇರುವ್ಯಕ್ತಿತ್ವದ ಶ್ರೀಪಾದರ ಬಗ್ಗೆಯೂ ಈ ಮಾತು ಅಕ್ಷರಶಃ ಸತ್ಯ.

ಆನೆಯ ಬಾಲ ಮುಟ್ಟಿ ಆನೆ ಅಳೆದಂತೆ.

ನಮ್ಮದೂ ಇನ್ನಷ್ಟು ಯತ್ನ. ಸೊಂಡಿಲು ಮುಟ್ಟಿ ಆನೆ ಅಳೆದ ಕೃತಕೃತ್ಯತೆ.

ಹಾಗಂತ ವ್ಯರ್ಥಪ್ರಯತ್ನವಲ್ಲ. ಬೇರೆ ಬೇರೆ ದೃಷ್ಟಿಕೋನವಷ್ಟೆ.

ನಮ್ಮ ಕೊರ್ಲಹಳ್ಳಿ ವೇಂಕಟೇಶಾಚಾರ್ಯರು ಈ ಪುಸ್ತಕಕ್ಕಾಗಿ ಅಹರ್ನಿಶಿ ಶ್ರಮ ಪಟ್ಟಿದ್ದಾರೆ.

ಈ ಗ್ರಂಥಕ್ಕೆ ಆಧಾರಸ್ತಂಭದಂತಿರುವ ಶೇಷಗಿರಿಯವರ ಸಾಧನೆ ವೆಂಕಪ್ಪನನ್ನು ಹೊತ್ತ ಶೇಷಗಿರಿಯನ್ನು ನೆನಪಿಸುತ್ತದೆ.

ಬಾಲ್ಯ-ಯೌವನ-ವಾರ್ಧಕದ ಅತ್ಯಪೂರ್ವ ಭಾವಚಿತ್ರಗಳ ಸಂಗ್ರಹ ಇಲ್ಲಿದೆ.

ಅಪೂರ್ವ ಸಾಧನೆಗಳ ಸಂಯೋಜನೆ ಇದೆ. ಪೂಜ್ಯರನ್ನು ಹತ್ತಿರದಲ್ಲಿ ಕಂಡವರ ಒಡನಾಟದ, ಅಂತರಂಗದ ತುಡಿತ ಇದೆ. ಏನಿದೆ ಏನಿಲ್ಲ ಪೂಜ್ಯರ ಜಿಜ್ಞಾಸೆ ಮಾತ್ರ ಇದೆ, ಪೂಜ್ಯರ ಅನುಗ್ರಹ ರಕ್ಷೆಯಂತೂ ಇದ್ದೇ ಇದೆ.

**ಸಪ್ರೇಮ ನಾರಾಯಣ ಸ್ಮರಣೆಗಳು**

**ಶ್ರೀವಿದ್ಯಾಧೀಶತೀರ್ಥರು.**

**ಪಲಿಮಾರುಮಠ**

**ವೃಷ-ವೈಶಾಖ- ಏಕಾದಶೀ** **ಉಡುಪಿ**

# ಮಂಥನ

ಅಂದೊಮ್ಮೆ ದೇವತೆಗಳು ಅಮೃತವನ್ನು ಪಡೆದರು ಪಾಲ್ಗಡಲ ಕಡೆದು. ಇಂದು ನಾವು ಪಡೆದಿದ್ದೇವೆ ಮತ್ತೊಂದು ಅಮೃತ. ಅದು ಬಂದ ಹಿನ್ನೆಲೆ ತೆರೆದು ಕೊಂಡಿದೆ ತಮ್ಮೆದುರು.

ಈ 'ಅಮೃತ'ದ ಉದಯಕ್ಕಾಗಿ ನಡೆದಿದೆ ಲೇಖಕನ ಮಂಥನ.

ಈ ಮಂಥನಕ್ಕೆ ಆಧಾರ ಶ್ರೀಪಲಿಮಾರು ಮಠಾಧೀಶ ಶ್ರೀವಿದ್ಯಾಧೀಶತೀರ್ಥರೆಂಬ ಸುಂದರ ಮೇರು ಮಂದರ.

ಮಂಥನಕ್ಕೆ ಸಹಕರಿಸಿದ ವಾಸುಕಿಯಂತೆ ವಿನ್ಯಾಸದ ಮೂಲಕ ಸಹಕರಿಸಿದ ಗುರುಗಳ ನಿಷ್ಠಾವಂತ ಭಕ್ತ ಶ್ರೀ ಕೆ, ಎಮ್.ಶೇಷಗಿರಿ.

ಮಂಥನಕ್ಕೆ ತಮ್ಮ ಬಲವನ್ನು ನೀಡಿದ ದೇವತೆಗಳಂತೆ ಅಕ್ಷ ರಗಳ ವಿನ್ಯಾಸ, ಫೊಟೋ ಸ್ಕ್ಯಾನ್ ಮಾಡಿದ ಮಹ ನೀಯರು, ಅನೇಕ ಹಿರಿಯ ವಿದ್ವಾಂಸರು ಹಾಗೂ ಗುರುಗಳ ಭಕ್ತರು.

ಅಮೃತವನ್ನು ಸವಿದ ದೇವತೆಗಳಂತೆ ಈ ಅಮೃತವನ್ನು ಸವಿಯುವವರು ಸಕಲ ಹರಿವಾಯುಗುರು ಭಕ್ತರು.

ಮೂವತ್ತೆರಡು ಗುಣಗಳಿಂದ ಕೂಡಿದ ಶ್ರೀಮದಾಚಾರ್ಯರ ಪೂರ್ಣ ಸನ್ನಿಧಾನವಾತ್ರರಾದ ನನ್ನ ಸ್ವರೂಪೋದ್ಧಾರಕರಾದ ಪರಮ ಪೂಜ್ಯ ಗುರುಗಳ ಚರಿತಾಮೃತದ ಈ ಹೊತ್ತಿಗೆಯಲ್ಲಿ ವಿಭಾಗಗಳು ಮೂವತ್ತೆರಡು. ಕೊನೆಯ ಭಾಗದಲ್ಲಿ ಗುರುಗಳ ಪವಿತ್ರ ಜೀವನವನ್ನು ಪ್ರತಿಬಿಂಬಿಸುವ ಭಾವಚಿತ್ರಗಳ ವಿಭಾಗ ''ಅಮೃತಬಿಂದು''

ಇಲ್ಲಿರುವ ಲೇಖನ ಹಾಗೂ ಭಾವಚಿತ್ರಗಳ ಸಂಗ್ರಹಗಳೆರಡೂ ಅಪೂರ್ಣ ಎಂಬುದೂ ಸ್ಪಷ್ಟ. ಕಾರಣ, ಗುರುಗಳ ಚರಿತೆ ಬರೆದಷ್ಟೂ ಮುಗಿಯದು. ಕ್ಷೀರಸಾಗರದಂತೆ ಅಗಾಧ ಆದರೆ ಅತಿಮಧುರವದು.

ಆ ಸಾಗರದ ಒಂದು ಬಿಂದುವನ್ನು ಮಾತ್ರ ಸವಿಯುವ ಪ್ರಯತ್ನ ಈ ''ಅಮೃತ''

ಭಾಗವತಾದಿಗ್ರಂಥಗಳನ್ನು ಎಲ್ಲಾ ಮಾಧ್ಯಮಗಳಲ್ಲಿಯೂ ಪ್ರಕಟಿಸಬೇಕೆಂಬುದು ಪೂಜ್ಯ ಗುರುಗಳ ಕನಸು. ಅದನ್ನು ನೆನಸಾಗಿಸಲು ಹೊರಟಿದೆ ಅವರ ಉತ್ತರಾಧಿಕಾರಿಗಳಾದ ಶ್ರೀವಿದ್ಯಾಧೀಶತೀರ್ಥರಿಂದ ಉದಿಸಿದ ಒಂದು ಕೂಸು. ಅದು ''ಶ್ರೀವಿದ್ಯಾಮಾನ್ಯ ಪ್ರಕಾಶನ.'' ಇದು ''ಶ್ರೀಹೃಷೀಕೇಶತೀರ್ಥಸ್ಮಾರಕ ಟ್ರಸ್ಟ್'' ನ ಸಹ ಸಂಸ್ಥೆ.

ಅದರ ಮೂಲಕ ಗುರುಗಳ ಬಯಕೆಯಂತೆ ಗ್ರಂಥ ಪ್ರಕಾಶನ ಮಾಲಿಕೆ ಸಿದ್ಧಗೊಳ್ಳಲಿದೆ. ಆ ಮಾಲಿಕೆಯ ಮೊದಲ ಕುಸುಮ. ''ಶ್ರೀವಿದ್ಯಾಮಾನ್ಯ ತೀರ್ಥರ ಚರಿತಾಮೃತ'' ಅದನ್ನು ಸಂಗ್ರಹಿಸಿ ಬರೆಯುವ ಸೌಭಾಗ್ಯ ನನ್ನ ಪಾಲಿಗೆ ಬಂತು. ಆ ಸದವಕಾಶವನ್ನು ದಯಪಾಲಿಸಿದ ಶ್ರೀವಿದ್ಯಾಧೀಶತೀರ್ಥಶ್ರೀಪಾದರ ಪಾದಪದುಮಗಳಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಗುರುಗಳ ಕುರಿತು ಲೇಖನಗಳನ್ನು ಹಾಗೂ ಮಾಹಿತಿಗಳನ್ನು ನೀಡಿ ಅನುಗ್ರಹಿಸಿದ -

ಚತುರ್ಥಪರ್ಯಾಯ ಪೀಠಾಧೀಶರಾದ
ಶ್ರೀಪೇಜಾವರಮಠದ
ಶ್ರೀಶ್ರೀವಿಶ್ವೇಶ ತೀರ್ಥ ಶ್ರೀಪಾದರ,

ಶ್ರೀಅದಮಾರು ಮಠದ
ಶ್ರೀಶ್ರೀವಿಬುಧೇಶತೀರ್ಥ ಶ್ರೀಪಾದರ,

ಶ್ರೀಅದಮಾರು ಮಠದ
ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರ,

ಶ್ರೀಪುತ್ತಿಗೆ ಮಠದ
ಶ್ರೀಶ್ರೀಸುಗುಣೇಂದ್ರತೀರ್ಥಶ್ರೀಪಾದರ,

ಶ್ರೀಪಲಿಮಾರು ಮಠದ
ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ.

ಶ್ರೀಭಂಡಾರಕೇರಿ ಮಠದ
ಶ್ರೀಶ್ರೀವಿದ್ಯೇಶತೀರ್ಥ ಶ್ರೀಪಾದರ,

ಶ್ರೀಪೇಜಾವರ ಮಠದ
ಶ್ರೀಶ್ರೀವಿಶ್ವಪ್ರಸನ್ನತೀರ್ಥ ಶ್ರೀಪಾದರ,

ಚರಣಕಮಲಗಳಲ್ಲಿ ಭಕ್ತಿಪೂರ್ವಕ ಪ್ರಣಾಮಗಳನ್ನು ಅರ್ಪಿಸುವೆ.

ಜನ್ಮವಿತ್ತು ಉತ್ತಮಗುರುಗಳ ಬಳಿ ಬಿಟ್ಟು ಆನಂದಕರಶಾಸ್ತ್ರಗಳ ಅಧ್ಯಯನಕ್ಕೆ ಪ್ರೋತ್ಸಾಹಿಸಿ ಹಾಗೂ ಈ ಲೇಖನಕ್ಕೆ ಸ್ಫೂರ್ತಿಯನ್ನಿತ್ತು ಹರಸಿದ ಮಾತಾಪಿತೃಗಳಾದ ವಿದ್ವಾನ್ ಶ್ರೀಕೊರ್ಲಹಳ್ಳಿ ಜಯತೀರ್ಥಾಚಾರ್ಯ, ಮತ್ತು ಶ್ರೀಮತಿ ಹ|| ಕುಂ|| ಸೌ|| ವಿಜಯಲಕ್ಷ್ಮೀ ದಂಪತಿಗಳಿಗೆ ನನ್ನ ಹೃತ್ಪೂರ್ವಕ ಪ್ರಣಾಮಗಳು.

ಬಿಡುವಿಲ್ಲದ ವೇಳೆಯಲ್ಲೂ ತಮ್ಮ ಸುಂದರ ಬರಹದ ಮೂಲಕ ಗುರುಗಳ ಮಹತಿಯನ್ನು ಬಿತ್ತರಿಸಿದ ವಿದ್ಯಾರತ್ನಾಕರ ಶ್ರೀಬನ್ನಂಜೆ ಗೋವಿಂದಾಚಾರ್ಯರಿಗೂ ನನ್ನ ಹೃತ್ಪೂರ್ವಕ ನಮನಗಳು.

ನನ್ನ ಲೇಖನಕ್ಕೆ ಸ್ಫೂರ್ತಿ ಹಾಗೂ ಮಾಹಿತಿಗಳನ್ನಿತ್ತ ವಿದ್ವಾಂಸರುಗಳಾದ:

ಶ್ರೀ ಡಿ.ಪ್ರಹ್ಲಾದಾಚಾರ್ಯ. ತಿರುಪತಿ

ಶ್ರೀ ಮಾಳಗಿ ರಾಮಾಚಾರ್ಯ, ಮೈಸೂರು

ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯ. ಉಡುಪಿ

ಶ್ರೀಡಾ॥ ವಿ. ಪ್ರಭಂಜನಾಚಾರ್. ಬೆಂಗಳೂರು

ಶ್ರೀಶಿಬರೂರು ವೇದವ್ಯಾಸ ತಂತ್ರಿಗಳು. ಉಡುಪಿ

ಶ್ರೀಕಡಿಯಾಳಿ ವಾದಿರಾಜ ಉಪಾಧ್ಯಾಯ. ಉಡುಪಿ

ಶ್ರೀಆನಂದತೀರ್ಥನಾಗಸಂಪಿಗೆ, ಮೈಸೂರು

ಶ್ರೀ ಗುರುರಾಜಾಚಾರ್ಯ ಜೋಷಿ. ಬೆಳಗಾಂ

ಶ್ರೀಬಲರಾಮ ಭಟ್. ಉಡುಪಿ

ಶ್ರೀ ಕೆ.ರಾಘವೇಂದ್ರರಾವ್. ರಾಯಚೂರು

ಶ್ರೀ ಕೆ. ಅಪ್ಪಣ್ಣಾಚಾರ್ಯ. ತಿರುಪತಿ

ಶ್ರೀ ರಾಮಕೃಷ್ಣ ಕೆಕುಡರು ಬೆಂಗಳೂರು

ಹಾಗೂ ಇನ್ನಿತರ ವಿದ್ವಾಂಸರಿಗೂ ನನ್ನ ಹೃತ್ಪೂರ್ವಕ ನಮನಗಳು.

ಮುಖ್ಯವಾಗಿ , ನನ್ನ ಬರಹದೊಂದಿಗೆ ಜೊತೆಗೂಡಿ ಅಹರ್ನಿಶಿಯಾಗಿ ಶ್ರಮಿಸಿ ಸುಂದರ ಮುಖ ಪುಟ ಹಾಗೂ ಒಳಗಿನ ವಿನ್ಯಾಸದ ಮೂಲಕ ಪುಸ್ತಕಕ್ಕೆ ಮೆರಗು ನೀಡಿದ ಖ್ಯಾತ ಚಿತ್ರ ಕಲಾವಿದ, ವಿಶೇಷವಾಗಿ ಗುರುಗಳ ನಿಷ್ಠಾವಂತ ಭಕ್ತರಾದ ಪ್ರಿಯಮಿತ್ರ ಶ್ರೀ ಕೆ. ಎಮ್.ಶೇಷಗಿರಿ ಅವರಿಗೆ ನಾನು ಚಿರ ಋಣಿ.

ಸುಂದರ ಅಕ್ಷರವಿನ್ಯಾಸವನ್ನು ಮಾಡಿ ಗುರುಗಳ ಸೇವೆ ಸಲ್ಲಿಸಿದ -

ವಿದ್ವಾನ್ ಶ್ರೀ ಕಡ್ಡೀಬದರೀನಾರಾಯಣಾಚಾರ್ಯ

ಶ್ರೀ ಅನಂತಕೃಷ್ಣ ನಿಜಗಲ್

ಶ್ರೀಶ್ರೀಪತಿ

ಶ್ರೀಮತಿ ಡಿ.ವಿ. ರತ್ನಾ.

ಶ್ರೀ ಡಿ. ವಿ. ಪ್ರಹ್ಲಾದ್

ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಹಗಲಿರುಳೆನ್ನದೆ ಗುರುಗಳ ಫೋಟೋ ಸ್ಕ್ಯಾನ್ ಮಾಡಿದ ವಿದ್ವಾನ್ ಶೀ. ಕೆ. ಗಿರಿಧರಾಚಾರ್ಯ. ಬೆಂಗಳೂರು.

ಕುಮಾರಿ ಶ್ರೀ ಕೆ. ನಂದಿನಿ ರಾವ್ ಚೆನ್ನೈ

ಕರಡು ಪ್ರತಿಗಳನ್ನು ತಿದ್ದಿದ ಶ್ರೀ ಕೆ. ಗಿರೀಶ ಉಪಾಧ್ಯಾಯ ಇವರೆಲ್ಲರಿಗೂ ಹಾಗೂ

ಈ ಪುಸ್ತಕವನ್ನು ಹೊರತರಲು ವಿಧವಿಧವಾಗಿ ಸಹಕಾರವನ್ನಿತ್ತ ಶೀಮತಿಕುಮುದಾ ಮತ್ತು ಶ್ರೀ ಮುಕುಂದಾಚಾರ್ ದಂಪತಿಗಳಿಗೆ, ಶ್ರೀ ಕೆ. ಎ. ಚಿನಾಯ್, ಶ್ರೀರಮೇಶ್ ವಿ. ದೇಶಪಾಂಡೆ, ಶ್ರೀ ಸಿ. ಆರ್, ಮುರಳಿ ಶ್ರೀಕೆ. ಗೋಪೀನಾಥರಾವ್ ಅವರಿಗೆ ಕುಮಾರಿ ಲಲಿತಾ ಆದೋನಿ. ಹಾಗೂ ಸವಿತಾ ಧನಾಂಕರ್ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಭಾವಚಿತ್ರಗಳನ್ನು ನೀಡಿ ಸಹಕರಿಸಿದ ಸಂಸ್ಥೆಗಳು ಹಾಗೂ ಭಕ್ತರು.

ಶ್ರೀಪಲಿಮಾರು ಮಠ

ಶ್ರೀಪೇಜಾವರ ಮಠ

ಶ್ರೀ ಅದಮಾರು ಮಠ

ಶ್ರೀ ಪುತ್ತಿಗೆ ಮಠ

ಶ್ರೀ ಭಂಡಾರಕೇರಿ ಮಠ

ಟಿ.ಟಿ.ಡಿ ದೇವಸ್ಥಾನಗಳು - ದಾಸಸಾಹಿತ್ಯ ಪ್ರಾಜೆಕ್ಟ್

ಶ್ರೀಪೂರ್ಣಪ್ರಜ್ಞವಿದ್ಯಾಪೀಠ

ಶ್ರೀ ಕೊರ್ಲಹಳ್ಳಿ ಜಯತೀರ್ಥಾಚಾರ್ಯ

ಶ್ರೀ ಗುರುರಾಜಾಚಾರ್ಯ ಜೋಷಿ.

ಶ್ರೀ ಬಲರಾಮ ಭಟ್

ಶ್ರೀ ಕಡ್ಡೀಬದರೀನಾರಾಯಣಾಚಾರ್ಯ

ಶ್ರೀ ಆನಂದತೀರ್ಥ ಮಠದ

ಶ್ರೀ ರಾಮಪ್ರಸಾದ್ ಭಟ್ ಚೆನ್ನೈ

ಶ್ರೀ ಕೆ. ಎಲ್ ರಾವ್ ಚೆನ್ನೈ

ಶ್ರೀ ಕೆ. ನಾರಾಯಣ ದಾಸ್ ಚೆನ್ನೈ

ಶ್ರೀ ಎನ್ ರಾಮಕೃಷ್ಣ ಚೆನ್ನೈ

ಶ್ರೀ ರಾಘವೇಂದ್ರ ರಾವ್ ನಂದ್ಯಾಲ

ಶ್ರೀ ಮತಿ ಸರಸ್ವತಿ ತಂತ್ರಿ ಗುಲಬರ್ಗ

ಶ್ರೀ ಸುಧಾಕರರಾವ್. ಗದಗ

ಶ್ರೀ ಸೀತಾಮನೋಹರರಾವ್ ತಿರುಪತಿ.

ಶ್ರೀಪ್ರಹ್ಲಾದರಾವ್. ರಾಯಚೂರು.

ಶ್ರೀ ಸಿ. ಎಮ್ ನಾಗರಾಜ ರಾವ್ ಬೆಂಗಳೂರು

ಶ್ರೀ ಸಿ. ಎಮ್. ನಾಗೇಂದ್ರರಾವ್ ಬೆಂಗಳೂರು

ಶ್ರೀ ಬಿ. ಜಿ ರವಿಕುಮಾರ್ ಬೆಂಗಳೂರು

ಶ್ರೀಪಿ ಎಸ್ ವೇಂಕಟೇಶರಾವ್ ಉಡುಪಿ

ಶ್ರೀ ಡಾ|| ಅರವಿಂದ ಕುಲಕರ್ಣಿಗುಲಬರ್ಗ

ಶ್ರೀ ಲಕ್ಷ್ಮೀನಾರಾಯಣಶರ್ಮ ಉಡುಪಿ

ಹಾಗೂ ಪರೋಕ್ಷವಾಗಿ ಅಪರೋಕ್ಷವಾಗಿ ಸಹಕರಿಸಿದ ಗುರುಗಳ ಎಲ್ಲ ಭಕ್ತರಿಗೂ ಹಾಗೂ ಸಹೃದಯ ಓದುಗರಿಗೂ ಅನಂತ ಕೃತಜ್ಞತೆಗಳು

ಗ್ರಂಥ ಋಣ:

ಶ್ರೀ ವಿದ್ಯಾಮಾನ್ಯತೀರ್ಥರ ಪವಿತ್ರ ಚರಿತಾಮೃತ-ಗದಗ ಪ್ರಕಾಶನ,

ಆದರ್ಶ ಗುರುಶ್ರೀವಿದ್ಯಾಮಾನ್ಯತೀರ್ಥರು- ಬನ್ನಂಜೆ ಗೋವಿಂದಾಚಾರ್ಯ

ಶ್ರೀವಿದ್ಯಾಮಾನ್ಯವಿಜಯವೈಜಯಂತೀ

ಶ್ರೀ ಸತ್ಯಧ್ಯಾನಚರಿತಾಮೃತ

ಶ್ರೀಸುಧೀಂದ್ರತೀರ್ಥ ಜೀವನ ಚರಿತ್ರೆ

ಪರಮಗೌರವ

ತಾಪಸ

ತತ್ವವಾದ

ಸುಗುಣಮಾಲಾ

ಸುವರ್ಣಸಭಾ

ಸುವರ್ಣರಥ

ವಿಶ್ವಸಂದೇಶ

★★★



# ಸಮರ್ಪಣೆ





ಪರಮಪೂಜ್ಯ ಗುರುಗಳ ಪ್ರಥಮ ಆರಾಧನಾ ಮಹೋತ್ಸವದಲ್ಲಿ
ಅವರ ಅಂತರ್ಯಾಮಿಯಾದ ಮಧ್ವಾಂತರ್ಗತ
ಶ್ರೀರಾಮಚಂದ್ರದೇವರಿಗೆ

# ಆರ್ಷವಾಣಿ

**ಚತುರ್ಥಪರ್ಯಾಯಪೀಠಾರೂಢ**
**ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರು, ಶ್ರೀಪೇಜಾವರ ಮಠ**

**ಶ್ರೀಮಧ್ವಸಿದ್ಧಾಂತ-ಸಮರ್ಥನೈಕ-**
**ದೀಕ್ಷಂ ಸದೈವ ಪ್ರವಚೋಽನುರಕ್ತಮ್ ।**
**ವಿದ್ಯಾತಪಃ ಸಿಂಧುಮುದಾರ -ವಿದ್ಯಾ-**
**ಮಾನ್ಯಂ ಗುರೂಣಾಂ ಗುರುಮಾನಮಾಮಿ ॥**

ಶ್ರೀ ವಿದ್ಯಾಮಾನ್ಯ ಗುರುಗಳು ವೈಕುಂಠವಾಸಿಗಳಾದ ಏಕಾದಶೀ ದಿನದಲ್ಲಿಯೇ ಅವರ ಪಾರ್ಥಿವ ಶರೀರವನ್ನು ಫಲಿಮಾರಿಗೆ ಕಳುಹಿಸಿ ವಿಷಣ್ಣನಾಗಿ ಆಚಾರ್ಯರ ಸಿಂಹಾಸನದಲ್ಲಿ ಕುಳಿತುಕೊಂಡಾಗಸ್ಫುರಣೆಗೊಂಡ ಶ್ಲೋಕವಿದು. ಇದರಲ್ಲಿ ಗುರುಗಳ ವ್ಯಕ್ತಿತ್ವದ ಐದು ಮುಖಗಳು ನಿರೂಪಣೆಗೊಂಡಿವೆ. ಸಿದ್ಧಾಂತನಿಷ್ಠೆ, ಪ್ರವಚನದೀಕ್ಷೆ, ಅಪಾರಪಾಂಡಿತ್ಯ, ಅಖಂಡತಪಸ್ಸು, ಔದಾರ್ಯ ಇವೆ ಅವರ ವ್ಯಕ್ತಿತ್ವದ ಐದುಮುಖಗಳು.

**'' ಶ್ರೀಮಧ್ವಸಿದ್ಧಾಂತಸಮರ್ಥನೈಕ ದೀಕ್ಷಂ''**- ಆಚಾರ್ಯರ ಸಿದ್ಧಾಂತದ ಸಮರ್ಥನದಲ್ಲಿ ಅವರಿಗೆ ಯಾವಾಗಲೂ ದೀಕ್ಷೆ. ಆಚಾರ್ಯರ ಸಿದ್ಧಾಂತದಮೇಲೆ ಯಾವುದೇ ಆಕ್ಷೇಪ, ಆಹ್ವಾನಗಳು ಬಂದರೂ ಅದನ್ನು ಎದುರಿಸಲು ಅವರು ಯಾವಾಗಲೂ ಸಿದ್ಧರು. ಅದಕ್ಕಾಗಿ ಎಷ್ಟುದೂರವಾದರೂ ಹೋಗಿ ಎಂತಹ ಪಂಡಿತರಾಗಿದ್ದರೂ ಅವರನ್ನು ಎದುರಿಸಿ ಆಚಾರ್ಯರ ಸಿದ್ಧಾಂತವನ್ನುಸಮರ್ಥಿಸುತ್ತಿದ್ದರು.

**''ಸದೈವ ಪ್ರವಚೋಽನುರಕ್ತಂ''** - ಪಾಠಪ್ರವಚನದಲ್ಲಿ ಯಾವಾಗಲೂ ಅವರಿಗೆ ಆಸಕ್ತಿ. ಚಿಕ್ಕ ಹುಡುಗನೇ ಆಗಲೀ, ವೃದ್ಧರಾದ ಜಿಜ್ಞಾಸುಗಳೇ ಆಗಲೀ, ಪ್ರೌಢವಿದ್ಯಾರ್ಥಿಯಿರಲಿ, ದಡ್ಡಹುಡುಗನಾಗಿರಲೀ ತನ್ನಲ್ಲಿಗೆ ಬಂದವರಿಗೆಲ್ಲಾ ಪ್ರೀತಿ, ಸಹನೆಯಿಂದ ಅವರು ಪಾಠ ಹೇಳುತ್ತಿದ್ದರು. ಶಾಸ್ತ್ರಪ್ರವಚನವನ್ನು ಅವರು ಒಂದುದಿನವೂ ಬಿಟ್ಟವರಲ್ಲ. ತಮ್ಮಅನಾರೋಗ್ಯ ಅಶಕ್ತಿ, ವಾರ್ಧಕ್ಯದ ಸ್ಥಿತಿಯಲ್ಲಿಯೂ ಪಾಠವನ್ನು ಹೇಳುವ ಮತ್ತು ವಿದ್ಯಾರ್ಥಿಗಳಿಂದ ಅನುವಾದ ಮಾಡಿಸುವ ಜ್ಞಾನಕಾರ್ಯವನ್ನು ಕೊನೆಯವರೆಗೂ ಬಿಟ್ಟಿರಲಿಲ್ಲ.

**''ವಿದ್ಯಾ ತಪಃ ಸಿಂಧುಂ''**- ಅವರು ಸುಜ್ಞಾನ ಹಾಗೂ ತಪಸ್ಸಿನ ಸಾಗರವೇ ಆಗಿದ್ದರು. ಅಪಾರ ಪಾಂಡಿತ್ಯ ಮತ್ತು ಶಾಸ್ತ್ರಪ್ರತಿಭೆಗಳು ಅಸಾಧಾರಣವಾಗಿರುವಂತೆ ಅವರ ಸದಾಚಾರನಿಷ್ಠೆ, ಬ್ರಹ್ಮಚರ್ಯ, ಶೀಲ, ಸೌಜನ್ಯಗಳೂ ಅನುಪವಾಗಿದ್ದವು.ಅವರ ಜೀವನದಲ್ಲಿ ಒಂದೇ ಒಂದು ಕಪ್ಪುಚುಕ್ಕೆಯೂ ಕಾಣಿಸಲಾರದು.

**'' ಉದಾರ''**- ಅವರ ಔದಾರ್ಯವನ್ನು ಅನುಭವಿಸದ ಪಂಡಿತರಾಗಲೀ, ವಿದ್ಯಾರ್ಥಿಗಳಾಗಲೀ ಯಾರೂ ದೊರೆಯಲಾರರು. ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ ಅವರು ಕೊಡುಗೈ ದಾನಿಗಳು. ಅವರ ಮಹೋನ್ನತ ವ್ಯಕ್ತಿತ್ವವನ್ನು ಈ ಶ್ಲೋಕದಲ್ಲಿ ಸಂಗ್ರಹವಾಗಿ ಸೆರೆಹಿಡಿಯಲು ಪ್ರಯತ್ನಿಸಲಾಗಿದೆ. ಅವರು ''ಗುರೂಣಾಂ ಗುರು'' ಗುರುಗಳಿಗೂ ಗುರುಗಳು. ಅನೇಕ ಮಠಾಧಿಪತಿಗಳಿಗೆ ಪಾರಪ್ರವಚನವನ್ನು ಮಾಡಿ ಅವರನ್ನು ವಿದ್ವಾಂಸರನ್ನಾಗಿ ಸಿದ್ಧಪಡಿಸಿದ್ದಾರೆ. ನನ್ನಂತಹ ಅನೇಕ ಪೀಠಾಧಿಪತಿಗಳು ಇದಕ್ಕೆ ಸಾಕ್ಷಿಯಾಗಿದ್ದಾರೆ. ಗುರು ವಿದ್ಯಾಮಾನ್ಯರ ಪುಣ್ಯಸ್ಮರಣೆಯ ಸಂದರ್ಭದಲ್ಲಿ ಈ ಶ್ಲೋಕವನ್ನು ಶ್ರದ್ಧಾಂಜಲಿಯಾಗಿ ಸಕಲ ಸದ್ಭಕ್ತರ ಮುಂದಿಡುತ್ತಿದ್ದೇನೆ.

ಈ ಶ್ಲೋಕವು ದೀರ್ಘವಾದುದರಿಂದ ಇದನ್ನು ಪ್ರತಿದಿನ ಪಾರಾಯಣ ಮಾಡಲು ಕಠಿಣವಾಗಬಹುದೆಂದು ಜನರ ಅನುಕೂಲಕ್ಕಾಗಿ ಇನ್ನೊಂದು ಚಿಕ್ಕ ಶ್ಲೋಕವನ್ನೂ ಹೋದ ವರ್ಷ ಅವರ ಮೊದಲನೆಯ ಆರಾಧನೆಯ ದಿವಸದಲ್ಲಿ ಸಮರ್ಪಿಸಿದ್ದೇನೆ.

'' ಅನವದ್ಯಾತ್ಮಚಾರಿತ್ರ್ಯಂ ವಾದಿಖದ್ಯೋತಭಾಸ್ಕರಮ್।
ವಿದ್ಯಮಾನ್ಯಗುರುಂ ವಂದೇ ವಿದ್ಯಾವಿದ್ಯೋತ ಭಾಸ್ವರಮ್''

ಅವರ ಚಾರಿತ್ರ್ಯವು ಅತ್ಯಂತ ನಿರ್ಮಲ. ಶಾಸ್ತ್ರಾರ್ಥಚರ್ಚೆ ಮಾಡಲು ಬರುವ ವಾದಿಗಳು ಈ ಭಾಸ್ಕರನ ಮುಂದೆ ಮಿಣುಕುಹುಳಗಳು. ವಿದ್ಯೆಯೇ ಈ ಸೂರ್ಯನ ಪ್ರಭೆ. ಅದರಿಂದ ಇವರು ಪ್ರಕಾಶಮಾನರಾಗಿದ್ದಾರೆ. ★

# ಆರ್ಷವಾಣಿ

**ಶ್ರೀಶ್ರೀವಿಶ್ವಪ್ರಿಯತೀರ್ಥಶ್ರೀಪಾದರು,**
**ಶ್ರೀಅದಮಾರು ಮಠ**

ಮಾಡಿದಕೆಲಸವನ್ನುನೋಡಿ ಹೆಸರನ್ನೋ ಬಿರುದನ್ನೋ ಪಡೆಯುವವರೇ ಹೆಚ್ಚುಮಂದಿ. ಮೊದಲೇ ಹೆಸರನ್ನುಪಡೆದು ಅದಕ್ಕೆ ಅನುಗುಣವಾಗಿ ಕೆಲಸವನ್ನು ಮಾಡಿದವರು ಶ್ರೀವಿದ್ಯಾಮಾನ್ಯರೊಬ್ಬರೇ. ಶ್ರೀಮಧ್ವರ ಅನುಷ್ಠಾನದ ಸ್ಥಳವಾದ ಶ್ರೀ ಕೃಷ್ಣಮಠದ ಸರ್ವಜ್ಞಸಿಂಹಾಸನದಿಂದ ಪಡೆದ ಹೆಸರಿದು. ಕೊಟ್ಟವರು ಆಗಣ ಪರ್ಯಾಯ ಪೀಠಸ್ಥರಾದ ಶ್ರೀ ಅದಮಾರುಮಠದ ಶ್ರೀವಿಬುಧಪ್ರಿಯತೀರ್ಥರು. ಆದ್ದರಿಂದ ಇದು ಮಧ್ವರೇ ಕೊಟ್ಟಹೆಸರು. ಆದ್ದರಿಂದ ಇದು ಮಧ್ವನಾಮ. ಕರುವಿನಹಿಂದೆ ಆಕಳು ಹೋಗುವಂತೆ ಮಧ್ವರು ಕೊಟ್ಟಹೆಸರನ್ನು ದೇವರು ತನ್ನ ಅನುಗ್ರಹದ ಜೊತೆಸೇರಿಸಿದ. ಹೆಸರಿನಮೂಲಕ ಮಧ್ವರ ಶಕ್ತಿ ಶ್ರೀಗಳವರಲ್ಲಿ ಪ್ರವೇಶಿಸಿತು. ಆದ್ದರಿಂದಲೇ ಮಧ್ವರಂತೆ ಋಜುಮಾತು ಶ್ರೀಗಳವರಲ್ಲಿ ರಕ್ತಗತವಾಯಿತು. ತಾತ್ವಿಕ ವಿಷಯದಲ್ಲಿ ಯಾರೇ ಆಗಲಿ, ಹೊಂದಾಣಿಕೆ ಶ್ರೀಗಳವರಿಗೆ ಒಗ್ಗುತ್ತಿರಲಿಲ್ಲ. ಸಾಮಾಜಿಕ ವಿಷಯದ ಮೂಲಕ ಮಾತಾದರೂ ಅದರ ಪರ್ಯವಸಾನ ತತ್ವದಲ್ಲಿ ಆಗುತಿತ್ತು. ''ಪ್ರಲಾಪಸ್ಯ ಚ ವರ್ಜನೇ'' ಹಾಳು ಹರಟೆ ಇಲ್ಲದಲೆ ಎಂಬ ಭೀಮನ ಶೈಲಿಯುಶ್ರೀಗಳವರಲ್ಲಿ ಸೇರಿತು. ಹನುಮನ ಬ್ರಹ್ಮಚರ್ಯ , ವಿನಯ ಇವುಗಳಿಗೆ ಶ್ರೀಗಳವರು ನಿಲುಗನ್ನಡಿ. ತನ್ನ ಸ್ವಚ್ಛವಾದ,ಸ್ಪಷ್ಟವಾದ ಜೀವನದಿಂದಾಗಿ ಇವರು ಸಮಾಜಕ್ಕೊಂದು ತೆರದಿಟ್ಟ ಪುಸ್ತಕ. ಅಧ್ಯಯನ, ಅಧ್ಯಾಪನ, ಬ್ರಹ್ಮಚರ್ಯ, ತಪಸ್ಸು ಇತ್ಯಾದಿ ಗುಣಗಳ ವಿಷಯದಲ್ಲಿ ಶ್ರೀಗಳವರಿಗೆ '' ಗಗನಂ ಗಗನಾಕಾರಂ'' ಎಂಬಂತೆ ಶ್ರೀಗಳವರೇಸರಿ. ಬದರಿಯಿಂದ ಕಾಲ್ನಡಿಗೆಯಿಂದ ಹಿಂದಿರುಗುವ ಒಂದು ಸಂದರ್ಭ. ಶಿಷ್ಯನ ತಲೆಯಲ್ಲಿದ್ದ ಪೂಜಾಸಾಮಗ್ರಿಗಳು ಗಂಗೆಗೆ ಅರ್ಪಣೆ. ಶಿಷ್ಯನ ಅಜಾಗ್ರತೆ ಇದಕ್ಕೆ ಕಾರಣ. ಶಿಷ್ಯನು ಗಾಬರಿಗೊಂಡ. ವಿಷಯ ತಿಳಿದ ಶ್ರೀಗಳವರಿಂದ ಶಿಷ್ಯನಿಗೆ ಮಂದಹಾಸ ನೋಟ ''ಕೊಟ್ಟದೇವರು ಕೊಂಡುಹೋದರೆ ಕುಟ್ಟಿಕೊಂಡು ಅಳುವುದೇಕೋ'' ಎಂಬ ದಾಸರ ಹಾಡಿಗೆ ಶ್ರೀಗಳವರ ಹಾಸವು ಒಂದು ವ್ಯಾಖ್ಯಾನ. ಇದು ಶ್ರೀಗಳವರ ಶಿಷ್ಯಾನುಕಂಪ.

ಲೌಕಿಕದಿಂದ ದೈವಾನುಗ್ರಹ ಇಲ್ಲ. ದೈವಾನುಗ್ರಹದಿಂದ ಲೌಕಿಕ ಇದೆ, ಎನ್ನುವುದಕ್ಕೆ ಶ್ರೀಗಳವರಿಂದ ನಿರ್ಮಿತವಾದ ವಜ್ರಕಿರೀಟ, ಚಿನ್ನರಥಸಾಕ್ಷಿ. ಎಲ್ಲಾ ಶ್ರೀಗಳವರೂ ತಮ್ಮ ತಮ್ಮ ಪರ್ಯಾಯದಲ್ಲಿ ಶ್ರೀಕೃಷ್ಣನಿಗೆ ವಿಶಿಷ್ಟಸೇವೆ ಮಾಡಿ ತಾವೇ ಮೆರೆಯುವುದು ಸಂಪ್ರದಾಯ. ಆದರೆ ಶ್ರೀಗಳವರು ತಮ್ಮ ಶಿಷ್ಯನಾದ ನಮ್ಮ ಪರ್ಯಾಯದಲ್ಲಿ ಶ್ರೀಕೃಷ್ಣನಿಗೆ ಕೋಟಿ ರೂಗಳ ಕಿರೀಟವನ್ನು ನಮ್ಮ ಕೈಯಿಂದ ಅರ್ಪಿಸಿ ಶಿಷ್ಯ ವಾತ್ಸಲ್ಯವನ್ನು ಮೆರೆದರು. ಶ್ರೀರಾಮನಂತೆ ಮಾತುಕಡಿಮೆಮಾಡಿ ಕೃತಿಯ ಮೂಲಕ ತಮ್ಮ ಶಿಷ್ಯರುಗಳನ್ನೆಲ್ಲಾ ಆಚಾರ-ವಿಚಾರದ ಧಾರಿಯಲ್ಲಿ ಹಚ್ಚಿದರು. ಶ್ರೀಗಳವರ ಜೀವಿತದಲ್ಲಿ ಕೊನೆಯ ಅಧ್ಯಾತ್ಮಿಕ ಕಾರ್ಯಕ್ರಮ ಎಂದರೆ ನಾವು 25-3-2000 ರಂದು ಮಾಡಿದ ಸುಧಾಮಂಗಳ ಕಾರ್ಯಕ್ರಮ. ಈ ರೀತಿ ವಾಯುದೇವರ ಅವತಾರತ್ರಯದ ಪ್ರತೀಕದಂತಿದ್ದವರು ಶ್ರೀಗಳವರು. ವ್ಯಾಸರು ಅದೃಶ್ಯರಾದಾಗ ಧರೆಗೆ ಮಧ್ವರು ಬಂದಂತೆ ಅಭಿನವ ಮಧ್ವರಾದ ಶ್ರೀಗಳವರು ಅದೃಶ್ಯರಾದಾಗ ವ್ಯಾಸರು ಧರೆಗೆ ಬಂದಂತೆ ಕಾಲಕೂಡಿ ಬಂದಿತ್ತು. ಅಂದರೆ ಶ್ರೀಗಳವರು ದೇವರ ಸನ್ನಿಧಿಗೆಸೇರಿದ ಮರುದಿನ ವ್ಯಾಸ ಜಯಂತೀ ದಿನ. ಈ ಜಾಗ ಇನ್ನು ತುಂಬುವುದು ಪ್ರಾಯಶಃ ಅಸಾಧ್ಯ. ಇಂತಹ ಶ್ರೀಗಳವರ ಶಿಷ್ಯರಾಗಿ ಅವರಿಂದ ನಾಲ್ಕಕ್ಷರ ಶ್ರವಣ ಮಾಡಿದ ವ್ಯಕ್ತಿಗಳತ್ತ ದೇವರು ದೃಷ್ಟಿಬೀರುವುದರಲ್ಲಿ ಸಂದೇಹವಿಲ್ಲ. ಶ್ರೀಕೃಷ್ಣನ ಸನ್ನಿಧಿಯಿಂದ ವಿದ್ಯಾಮಾನ್ಯ ಎಂಬ ಹೆಸರನ್ನು ಪಡೆದು ಬೇರೆಕಡೆಗೆ ಹೋಗಿ ಅದನ್ನ ಸಾರ್ಥಕ ಪಡಿಸಿಕೊಂಡು ಪುನಃ ಯಥಾ ಸ್ಥಾನಂ ಉದ್ವಾಸಯಾಮಿ ಎಂದಂತೆ ಶ್ರೀಕೃಷ್ಣನ ಸನ್ನಿಧಿಗೇ ಬಂದು ಪರ್ಯಾಯಗಳನ್ನು ನೆರವೇರಿಸಿದರು. ಶ್ರೀಕೃಷ್ಣನ ಚರಣ ಸೇರಿದರು. ದೇವರ ಹೊಟ್ಟೆಯಿಂದ ಜೀವನು ''ಸಾಧಕ ''ಎಂಬ ಹೆಸರನ್ನು ಹೊತ್ತು ಬೇರೆ ಕಡೆಗೆ ಹೋಗಿ ಸಾಧನೆ ಮಾಡಿ ಪುನಃ ದೇವರ ಹೊಟ್ಟೆ ಸೇರುವಂತೆ. ಈ ವ್ಯಕ್ತಿಗೆ ಸಂನ್ಯಾಸಕೊಟ್ಟು ನಾಮಕರಣಮಾಡಿದ ಆ ವ್ಯಕ್ತಿಯ ವ್ಯಕ್ತಿತ್ವ ಏನೋ? ಯಾರು ಅಳೆಯುತ್ತಾರೆ? ಈ ಗುರು ಶಿಷ್ಯರ ನಂಟು ಎಷ್ಟು ಇತ್ತುವೆನ್ನುವುದಕ್ಕೆ ಶ್ರೀ ವಿಬುಧ ಪ್ರಿಯರು ಕಾಲವಾದಾಗ ಶ್ರೀ ವಿದ್ಯಾಮಾನ್ಯ ತೀರ್ಥರ ತುಳಸೀಮಣಿ ಸರ ಕಡಿದದ್ದೇ ಸಾಕ್ಷಿ. ಈ ಗುರು ಶಿಷ್ಯರ ಋಣ ತೀರಿತು ಎಂಬುದಕ್ಕೆ ಸಂಕೇತವೋ? ಏನೋ? ಭೀಮನಿಗೂ ಧರ್ಮಜನಿಗೂ ಇದ್ದ ಋಣ ತೀರಿದಂತೆ. ★

# ಆರ್ಷವಾಣಿ

ಶ್ರೀಶ್ರೀಸುಗುಣೇಂದ್ರತೀರ್ಥಶ್ರೀಪಾದರು
ಶ್ರೀ ಪುತ್ತಿಗೆ ಮಠ

ನೀವು ಕೇಳಿರಬಹುದು. ಉಡುಪಿಯ ಪೀಠಾಧಿಪತಿಯೊಬ್ಬರು ಶ್ರೀಕೃಷ್ಣನಿಗೆ ಚಿನ್ನದ ರಥ, ತೊಟ್ಟಿಲು, ವಜ್ರಕಿರೀಟಗಳನ್ನು ಮಾಡಿಸಿ ಅರ್ಪಿಸಿದರೆಂದು. ಅದು ಮತ್ಯಾರೂ ಅಲ್ಲ ಮಾಧ್ವಪೀಠಾಧಿಪತಿಗಳಲ್ಲಿ ಜ್ಞಾನ, ವಯಸ್ಸು, ತಪಸ್ಸುಗಳಿಂದ ವೃದ್ಧರಾದ ಹಿರಿಯ ಚೇತನ ಶ್ರೀವಿದ್ಯಾಮಾನ್ಯತೀರ್ಥರು. ಉಭಯಮಠಾಧೀಶರು. ಇದೀಗ ಅವರ ಪ್ರಥಮ ಆರಾಧನೆ ಮಹೋತ್ಸವ ನಡೆಯುತ್ತಿದೆ. ಶ್ರೀಪಾದರು 87 ವರ್ಷಗಳ ಸುದೀರ್ಘಜೀವನವನ್ನು ಪೂರ್ಣಗೊಳಿಸಿದರು.

ವಿಚಾರ ಮಾಡಿದರೆ 87 ತುಂಬುವುದೇನೂ ದೊಡ್ಡ ವಿಚಾರವಲ್ಲ. ಗಾಳಿ ಒಳ ಹೊರಗೆ ಹರಿದಾಡುವ ವ್ಯವಸ್ಥೆ ಸರಿಯಾಗಿದ್ದರೆ ಯಾರಿಗೆ ಎಷ್ಟೂ ತುಂಬಬಹುದು. ಅದೊಂದು ಗುರುತಿಸುವ ಸಂಗತಿಯೇ ಅಲ್ಲ. ಆದರೂ ಜನ ಶ್ರೀವಿದ್ಯಾಮಾನ್ಯರ 87ನ್ನು ಗುರುತಿಸಿತು. ಸನ್ಮಾನಿಸಿತು. ಜನ ಗುರುತಿಸಿದ್ದು ಎಷ್ಟು ಎಂಬುದನ್ನಲ್ಲ. ಹೇಗೆ ಎಂಬುದನ್ನು, ಹೇಗೆ ಎಂಬುದನ್ನು ಗುರುತಿಸಲು ಎಷ್ಟು ಎಂಬುದೊಂದು ಸಂದರ್ಭವಾಯಿತಷ್ಟೆ.

ವಯಸ್ಸಿನನಿಜವಾದ ಅರ್ಥ ನಿಜವಾದ ಸಾಧನೆ. ಸಾಧನೆಯಿಲ್ಲದವನಿಗೆ ವಯಸ್ಸು ನಿಂತು ಬಿಡುತ್ತೆ. ಅಥವಾ ವಯಸ್ಸೇ ಇಲ್ಲ ಎಂದೂ ಅನ್ನಬಹುದು. ಸಾಧನೆಯಿಲ್ಲದ ಅಂತವರ ಬದುಕಿನ ಒಂದು ಮುಖ್ಯ ಸಾಧನೆಯಿಂದಲೆ ವರ್ಷಾನುಗಟ್ಟಲೆ ಜಗತ್ತಿಗೆ ಅಂಗಾರಾಮ್ಲದ ದೇಣಿಗೆ ಮಾತ್ರ. ಇಂತವರ ಇಪ್ಪತ್ತೈದು. ಎಪ್ಪತ್ತೈದು ಒಂದು ವಿಷವಾದೀತು ಹೊರತು ವಿಷಯವಲ್ಲ. ಆದರೆ ಶ್ರೀವಿದ್ಯಾಮಾನ್ಯರದ್ದುಸಾಧನೆ ಈ ಕೋಮಿಗೆಸೇರಿದ್ದಲ್ಲ.

ಜೀವನವೆಂದರೆ ಹೊಟ್ಟೆ, ಹಿಟ್ಟು, ರೊಟ್ಟಿ, ಬಟ್ಟೆ ಎಂದು ವ್ಯಾಖ್ಯಾನಿಸುವವರಿಗೆ ಶ್ರೀವಿದ್ಯಾಮಾನ್ಯರ ಜೀವನದಲ್ಲಿ ಕಾಣತಕ್ಕಂತಹ ಸಾಧನೆಯೇನೂ ಇಲ್ಲ. ರೊಟ್ಟಿ ಬಟ್ಟೆಗಳಿಗಿಂತ ಅತಿರಿಕ್ತವಾದ ಒಂದು ಜೀವನವಿರ

ಬಹುದೆಂದು ಊಹಿಸುವ ಆವಶ್ಯಕತೆ ಇದೆಯೆಂದು ತಿಳಿಯಲು ಪುರುಸೊತ್ತು ಇಲ್ಲದವರಿಗೆ ಶ್ರೀವಿದ್ಯಾಮಾನ್ಯರ ಸಾಧನೆ ಏನೂ ಅರ್ಥವಾಗಲಿಕ್ಕಿಲ್ಲ.

ಒಮ್ಮೆ ನಾವು ಕೇಳಿದೆವು. ಕಾಲೇಜಿಗೆ ಹೋಗದಿದ್ದರೂ ತಾವೂ ಎಲ್ಲಾ ತಿಳಿದಿದ್ದಿರಂತೆ. ತಮಗೂ ಇಂಗ್ಲೀಷ್ ಇತ್ಯಾದಿ ಚೆನ್ನಾಗಿ ಬರುತ್ತಿತ್ತಂತೆ. ಇಂಗ್ಲೀಷ್‌ನಲ್ಲಿ ಮಾತಾಡುತ್ತಿದ್ದಿರಂತಲ್ಲಾ? ಅವರು ಹೇಳಿದರು. ಹೌದು ನಮಗೂ ಚೆನ್ನಾಗಿ ಇಂಗ್ಲೀಷ್ ಬರುತ್ತಿತ್ತು. ಇಂಗ್ಲೀಷನ್ನು ಚೆನ್ನಾಗಿ ಅಭ್ಯಾಸ ಮಾಡುತ್ತಿದ್ದೆವು. ಆವಾಗ ಅದು ಮ್ಲೇಂಛರ ಕಾಲ. ಒಂದು ದಿನ ನಾವು ಇಂಗ್ಲೀಷ್‌ನಲ್ಲಿ ಮಾತನಾಡುತ್ತಿದ್ದಾಗ ಒಬ್ಬ ದೊಡ್ಡ ಆಚಾರ್ರು ನೋಡಿ ಸಿಟ್ಟುಗೊಂಡು ಹೇಳಿದರು. ನಿಮ್ಮ ಹಾಗೆ ಸ್ವಾಮಿಗಳೆಲ್ಲಾ ಇಂಗ್ಲೀಷ್ ಕಲಿಯಲಿಕ್ಕೆ ಶುರುಮಾಡಿದ್ದರಿಂದ ಜಗತ್ತನಲ್ಲಿ ಮಹಾಯುದ್ಧ, ಎರಡನೇ ಮಹಾಯುದ್ಧ ಪ್ರಾರಂಭವಾಗಿದೆ. ಧರ್ಮವೆಲ್ಲಾ ಹಾಳಾಗಿ ಹೋಯ್ತು ಎಂದರು. ಅದನ್ನು ಕೇಳಿ ನಮಗನ್ನಿಸಿತು. ನಾನೆಂತಹ ದೊಡ್ಡ ತಪ್ಪು ಮಾಡುತ್ತಿದ್ದೇನೆ. ನನ್ನಿಂದಾಗಿ ಇಷ್ಟು ಅನಾಹುತ ಸಂಭವಿಸುವುದಾದರೆ ನಾನೇಕೆ ಈ ದರಿದ್ರ ಇಂಗ್ಲೀಷ್‌ನ್ನು ಓದಬೇಕು? ಬೇಡವೇ ಬೇಡ ಎಂದು, ಅಂದಿನಿಂದ ಇಂಗ್ಲೀಷ್ ಬಿಟ್ಟು ಬಿಟ್ಟೆ ನಾನು ಮತ್ತೆ ಇಂಗ್ಲೀಷ್ ಓದಲೇ ಇಲ್ಲ. ಮಾತಡಲೂ ಇಲ್ಲ. ಈಗೆಲ್ಲ ಅದು ಘಟ್ಟಕ್ಕೆ ಹತ್ತಿಬಿಟ್ಟಿದೆ ಎಂದು ಉತ್ತರಿಸಿದರು. ನಮಗನ್ನಿಸಿತು ನಿಜವಾಗಿವೂ ಇಂಗ್ಲೀಷ್ ಓದಿದವರು ಎಷ್ಟು ಮುಗ್ಧರು.

ನಮಗನಿಸುತ್ತದೆ ಇವತ್ತಿನ ಸಂದರ್ಭದಲ್ಲಿ ಸಮಾಜಕ್ಕೆ ಇಳಿದೇ ಸಮಾಜ ಸೇವೆ, ಸಮಾಜೋದ್ಧಾರ ಮಾಡಬೇಕೆಂಬುದರಲ್ಲಿ ಮಾತೆರೆಡಿಲ್ಲದಿದ್ದರೂ ಸಮಾಜೋದ್ಧಾರದಷ್ಟೇ ಸಮಾಜದ ಆತ್ಮೋದ್ಧಾರವೂ ಅತಿ ಮುಖ್ಯವಾದ್ದರಿಂದ ಉದ್ಧಾರದಲ್ಲಿ ಸಮತೋಲನವನ್ನು ಕಾಯ್ದುಕೊಳ್ಳಲು ಇಂತಹ ವ್ಯಕ್ತಿಗಳ ಆವಶ್ಯಕತೆಯೂ ತೀರಾ ಇದೆ. ವಿಮರ್ಶೆ ಮಾಡುತಲೆ ವಿಚಾರವಾದಿಗಳೆಂಬ ಹಣೆಪಟ್ಟಿ ಲಗತ್ತಿಸಿಕೊಂಡ ದುರ್ಬುದ್ಧಿಜೀವಿಯು ಸಮಾಜವನ್ನು ಕಲುಷಿತ ಗೊಳಿಸುವುದಕ್ಕಿಂತ ಹೆಚ್ಚು ಇಂತಹ ಹೃದಯಜೀವಿಗಳು ಸಮಾಜವನ್ನು ಹೆಚ್ಚು ಪರಿಶುದ್ಧಗೊಳಿಸಬಲ್ಲರು. ಶ್ರೀವಿದ್ಯಾಮಾನ್ಯತೀರ್ಥರು ಪೇಜಾವರ, ಅದಮಾರುಶ್ರೀಗಳೆಂಬ ತಮ್ಮ ಸಮಾಜೋದ್ಧಾರಕ ಶಿಷ್ಯರನ್ನು ಸಮಾಜಕ್ಕೆ ಕೊಟ್ಟಿರುವಾಗ ಇನ್ನು ಮಾಡಬೇಕಾದ ಇದಕ್ಕಿಂತ ದೊಡ್ಡ ಸಮಾಜೋದ್ಧಾರ ಏನಿದೆ? ಜೊತೆಗೆ ಅನೇಕ ಯತಿಗಳನ್ನೇ ಸಮಾಜಕ್ಕೆ ನೀಡಿರುವಾಗ ಅವರು ಮಾಡಿರುವ ಸಮಾಜದ ಉದ್ಧಾರಗಳನ್ನು ಉದ್ಧರಿಸುವ ಅವಶ್ಯಕತೆಯೇ ಕಾಣದು. ಶ್ರೀಪಾದರು - ಹೀಗೆ ವ್ಯಾಪಕವಾಗಿ ಸಮಾಜೋದ್ಧಾರ ಮಾತ್ರ ಮಾಡಿದ್ದಲ್ಲ. ಸಮಾಜದ ಮುಖ್ಯವಾದ ಪತ್ರಿಕೆಗಳನ್ನು ಅಷ್ಟೇ ವ್ಯಾಪಕವಾಗಿ ಉದ್ಧಾರಮಾಡಿದ್ದಾರೆ. ಅದೆಷ್ಟೋ ಪತ್ರಿಕೆಗಳು ಶ್ರೀಪಾದರ ಬದುಕು ಧೋರಣೆಗಳನ್ನು ಬಣ್ಣದಲ್ಲಿ ಬಣ್ಣಿಸಿ ತಮ್ಮ ಪ್ರಸಾರ ಸಂಖ್ಯೆಗಳನ್ನು ಜಾಸ್ತಿ ಮಾಡಿಕೊಂಡವೆಂಬುದನ್ನು ಇಲ್ಲಿ ಸ್ಮರಿಸಬಹುದು. ಅದಲ್ಲದೇ ಶ್ರೀಪಾದರು ''ಸುಗುಣ'' ಎಂಬ ಸಾಂಸ್ಕೃತಿಕ ಪತ್ರಿಕೆಗೆ ಮಹಾಪೋಷಕರೂ ಆಗಿದ್ದಾರೆ ಎಂಬುದು ಮರೆಯುವ ಅಂಶವಲ್ಲ. ಒಟ್ಟಿಗೆ

ಶ್ರೀವಿದ್ಯಾಮಾನ್ಯತೀರ್ಥರು ಸಮಸ್ತದೃಷ್ಟಿಯಿಂದ ಪರಿಪೂರ್ಣವೆನಿಸುವ ವ್ಯಕ್ತಿತ್ವದ ಬಗ್ಗೆ ಹೇಳುವುದಿದ್ದರೆ ಇಂತಹ ವ್ಯಕ್ತಿತ್ವದ, ಅಸ್ತಿತ್ವವೇ ಲೋಕಕಲ್ಯಾಣ. ವಿಶ್ವಮಂಗಳ. ಇಂತಹ ವ್ಯಕ್ತಿತ್ವದ ಅಸ್ತಿತ್ವದ ಸಮಕಾಲೀನತೆಯ ಅರಿವೇ ಜೀವವದ ಸಾರ್ಥಕ್ಯವನ್ನು ತಂದು ಕೊಡಬಲ್ಲದು. ಪರಿಶುದ್ಧಗೋಳಿಸಬಲ್ಲರು. ಇದು ಸಮದರ್ಶಿಗಳಿಗೆ ಮಾತ್ರ ಮನದಟ್ಟಗುವ ಮಾತು. ಆದ್ದರಿಂದ ಇಂತಹ ವ್ಯಕ್ತಿಗಳು ಇನ್ನೂ ಮೂಡಿಬರಬೇಕು.

ಈ ದಿಸೆಯಲ್ಲಿ ಈ ಹೃದಯಜೀವಿ ಶೀವಿದ್ಯಾಮಾನ್ಯರನ್ನು ಸ್ಮರಿಸಿ ಆರಾಧಿಸುವ ಕಾರ್ಯ ಪರಬ್ರಹ್ಮಚರ್ಯೆಗೆ. ಪಾವನ, ಜೀವನಕ್ಕೆ ಒಟ್ಟಿಗೆ ನಮ್ಮ ಸಂಸ್ಕೃತಿಗೆ ಸಲ್ಲುವ ಗೌರವ. ಅದಕ್ಕಿಂತ ಹೆಚ್ಚು ಆರಾಧನಾ ಶಬ್ದಕ್ಕೆ ಸಲ್ಲುವ ಗೌರವ.



# ಆರ್ಷವಾಣಿ

**ಶ್ರೀಶ್ರೀವಿದ್ಯಾಧೀಶಶ್ರೀಪಾದರು,**
**ಶ್ರೀ ಪಲಿಮಾರು ಮಠ**

**ಬ್ರಹ್ಮಚರ್ಯಹರಿಪ್ರೀತಿ**
**ಸುವಿದ್ಯಾವಾದಶಾಲಿನಃ ।**
**ಇಷ್ಟದಾನ್ ಕಷ್ಟಹಲತ ರ್ನ್ನಃ**
**ವಿದ್ಯಾಮಾನ್ಯಾನ್ಮುನೀನ್ನುಮಃ ॥**

ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು ಈ ಶತಮಾನ ಕಂಡ ಮುನಿಗಳು. ಮತ್ತೊಬ್ಬರಿಗೆ ಮುನಿಯುವ ಮುನಿಯಲ್ಲ.

''ಸ ಮುನಿರ್ವಿದಿತೋ ಯಸ್ತು ಕಾಮ ಕ್ರೋಧ ವಿವರ್ಜಿತಃ'' ಕಾಮ ಕ್ರೋಧಗಳನ್ನು ಗೆದ್ದವ ಮುನಿಯಂತೆ.

ಆರು ಅರಿಗಳನ್ನು ಅರಗಿಸಿಕೊಂಡವ ಮುನಿ.

ಆರು ಅರಿಗಳ ಉರಿಯನ್ನು ಆರಿಸಿಕೊಂಡವ ಮುನಿ.

ಈದೃಷ್ಟಿಯಲ್ಲಿ ಈ ಆರು ಅರಿಗಳಿಗೆ ದೂರೀಭೂತರಾದ ಮುನಿವರೇಣ್ಯರು ನಮ್ಮ ಶ್ರೀಗುರುಗಳು.

ಮೌನವುಳ್ಳವ ಮುನಿ. ಮುನಿಯ ಧರ್ಮವೇ ಮೌನ.ಮೌನ ಅಂದರೆ ಮಾತನಾಡದೇ ಇರುವುದು ಅನ್ನುವುದೂ ಒಂದು ಅರ್ಥ. ಮಾತನಾಡದೇ ಇರುವವರನ್ನೆಲ್ಲ ಮುನಿ ಅನ್ನಬಹುದೆ?

ಅದೆಷ್ಟು ಜನ ಮಾತನಾಡದೇ ಇರುವ ಏಡ ಮೂಕರು ನಮ್ಮಲ್ಲಿ ಇದ್ದಾರೆ. ಅದೂ ಒಂದುತರಹ ರೋಗವಾಗಬಾರದು.

ಗೀತೆಯಲ್ಲಿದೇವರು ಅಂದಂತೆ ''ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ'' ಎಲ್ಲರೂ ಬಾಯಿಬಿಡುವ ವಿಷಯಗಳ ಬಗ್ಗೆ ಮೂಕನಾಗಿರುವುದೇ ಮೌನ.

ಪ್ರಪಂಚದ ಸೆಳತಕ್ಕೆ ಸಿಲುಕದೆ ಸುಮ್ಮನಾಗುವುದೇ ಮೌನ. ಈ ಮೌನವನರಿತು ಆಚರಿಸುವವನೇ ಮುನಿ.

ಶ್ರೀ ವಿದ್ಯಾಮಾನ್ಯ ತೀರ್ಥರಿಗಂತೂ ಇದು ಅಕ್ಷರಶಃ ಸಮನ್ವಯವಾಗುತ್ತೆ. ಭಗವಂತನ ಬಗ್ಗೆ ಮನನ ಮಾಡುವುದೇ ನಿಜವಾದ ಮೌನ.

ಹೊರಗಣ ಮೌನ ಒಳಗಿನ ಮನನಕ್ಕಾಗಿ. ಮಾನಸ ಮಂಥನದಮನನವೇ ಮೌನದ ಮೂಲ ಉದ್ದೇಶ. ಇದೇ ಪೂಜ್ಯ ಗುರುಗಳ ಮೌನ -ಮುನಿತ್ವ. ಮಧ್ಯರಾತ್ರಿಯಲ್ಲೂ ಎಚ್ಚರವಾದರೆ ಮಗ್ಗಲುತಿರುಗಿಸಿ ಮಲಗುವವರಲ್ಲ. ಅವರು ಪುಸ್ತಕ-ಮಸ್ತಕಗಳ ಪರಸ್ಪರ ಸಂಯೋಜಕರು.

ಮತ್ತೆ ಮೌನದ-ಮನನದ ಮುನಿತನದ ತೃಪ್ತಿಯ ಜೀವನದವರು. ಸದಾ ಮನನ ಶೀಲರು.ಅಷ್ಟೇಕೆ ಮನನೀಯಗುಣವಂತರು. ಹಾಗಾಗಿ ಮುನಿಗಳು

ಈ ಋಷಿಗಳ ದೇಹದ ಸೌಷ್ಟವವೇ ಮುನಿತನದ ದರ್ಪಣ. ತೇಜಃಪುಂಜದ ದಿವ್ಯ-ದೃಷ್ಟಿಗಳು ಮುನಿತ್ವದ ಪಾರದರ್ಶಕ.

ಇಪ್ಪತ್ತು ಲಕ್ಷಣಗಳಿಗಿಂತ ಕಡಿನೆಯಲ್ಲದವ ಋಷಿಯಂತೆ. ಆತ ಸುಳ್ಳು ಹೇಳಲಾರ. ಈ ಮಹಾತ್ಮರಿಗೆ ಸುಳ್ಳುಹೇಳಿ ಗೊತ್ತಿಲ್ಲ. ಇವರ ಮಾತೆಲ್ಲ ಮುತ್ತು ರತ್ನ. ಋತ -ಸತ್ಯ.

ಅತಿಮಾನವಲಕ್ಷಣಗಳೂ ಇವರ ತನುವಿನಲ್ಲಿ ತೋರುತ್ತಿದ್ದವು. ಪಾದದ್ವಯಗಳಲ್ಲೂ ಸ್ಫುಟವಾಗಿ ತೋರುತ್ತಿದ್ದ ಪದ್ಮರೇಖೆಗಳೇ ಸಾಕ್ಷಿ. ಇದನ್ನು ಗುರುತಿಸಿ ಪಾದ ಸೇವೆ ಮಾಡುವವರಿಗೆ ಈ ಪ್ರಸಂಗ ಪರಮ ಸೌಭಾಗ್ಯದಾಯಕ ಇದರ ಸ್ಪರ್ಶಕ್ಕಾಗಿ ಎಲ್ಲರೂ ಹಾ ತೊರೆಯುತ್ತಿದ್ದರು. ಆಲಂಕಾರಕವಾಗಿ ಅಲ್ಲ. ಪೂರ್ಣ ಅರ್ಥಗಳಲ್ಲೂ ಪಾದ - ಪದ್ಮಗಳು ಕಂಗೊಳಿಸುತ್ತಿದ್ದವು. ಮುನಿತನದ ಮೂಲ ಬ್ರಹ್ಮಚರ್ಯೆ. ಸನ್ಯಾಸಕ್ಕೆ ಅಪಚಾರಗೈಯುವಸಂನ್ಯಾಸಿಗಳೇ ಸುಲಭ. ''ಧಾವಂತೋ ಅಶ್ಲೀಲಶೀಲರಾದ ಸಂನ್ಯಾಸಿಗಳೂ ಇಲ್ಲಾಂತಿಲ್ಲ. ''ಜನೋ ನಮೇನ್ನಾಽಪರಥೇತಿ ಮತ್ವಾ'' ಎಂಬ ಮಾತಿನಂತೆ ಭೋಗಕ್ಕಾಗಿ ಸಂನ್ಯಾಸಿಗಳಾದವರೂ ಹಲವರು. ಪಲಾಯನ ಗೈಯುವವರೂ ಹಲವರು. ಸಂನ್ಯಾಸಿಗಳಾದ ಮೇಲೆ ತನ್ನನ್ನು ಆಜೀವನಕ್ಕೆ ಒಗ್ಗಿಸಿಕೊಳ್ಳುವವರು ಕೆಲವರುಮಾತ್ರ.

ಹುಟ್ಟು ಸಂನ್ಯಾಸಿಗಳು ಅತಿ ವಿರಳ. ಸನ್ಯಾಸಕ್ಕೆ ಭೂಷಣರಾಗುವವರು ದುರ್ಲಭ. ಇಂಥಾ ಆದರ್ಶ ಯತಿಗಳು ಶ್ರೀ ವಿದ್ಯಾಮಾನ್ಯ ತೀರ್ಥರು.

'' ಖ್ಯಾತಃ ತೇ ಅಗ್ರ್ಯೇಽವತಾರಃ ಸಹಿತ ಇಹ ಬಹು ಬ್ರಹ್ಮಚರ್ಯಾದಿ ಧ ರ್ಮೈಃ'' ಇದು ತ್ರಿವಿಕ್ರಮರ ಆರ್ಷವಾಣಿ.

ಈ ನಲ್ನುಡಿಯನ್ನು ನುಡಿದಾಗಲೆಲ್ಲಾ ಶ್ರೀ ವಿದ್ಯಾಮಾನ್ಯ ತೀರ್ಥರು ಸ್ಮೃತಿಯಲ್ಲಿ ಸುಳಿಯುತ್ತಾರೆ.

ಊರ್ಧ್ವರೇತಸ್ಸಿನ ಅಸ್ಖಲಿತ ಬ್ರಹ್ಮಚರ್ಯಕ್ಕೆ ಹೆಸರಾದ ಮತ್ತೊಬ್ಬ ಮಹಾತ್ಮ ದ್ವಾಪರದ ಭೀಷ್ಮ ದೇವವ್ರತ. ಕಲಿಯುಗದ ಈ ಶತಮಾನ ಕಂಡ ಮಗದೊಬ್ಬ ದೇವವ್ರತ- ಭೀಷ್ಮರು ನಮ್ಮ ಮಹಾಸ್ವಾಮಿಗಳು. ಭೀಷ್ಮರಂತೆ ಗಾಂಗೆಯರು- ನಾದೇಯರು ಇವರು. ಗಂಗೆಯಲ್ಲಿ ಪ್ರತಿವರ್ಷ ಮಿಂದವರು. ಸಕಲ ನದಿಗಳಲ್ಲಿ ನಿರಂತರ ಅವಗಾಹನೆ ಮಾಡಿದವರು. ಮಿಂದಲ್ಲೇ ಗಂಗಾದಿ ದೇವತೆಗಳ ಸನ್ನಿಧಾನ. ಇಳಿ ವಯಸ್ಸಲ್ಲೂ ಇಳಿಬಾವಿಗಿಳಿದು ಮುಳುಗುವಕಡು ನಿಯಮದ ಸಂಯಮೀಂದ್ರರು. ಮೈ ಕೊರೆಯುವ ಛಳಿಯನ್ನೂ ಲೆಖ್ಖಿಸದೇ ಬ್ರಾಹ್ಮ ಮುಹೂರ್ತದಲ್ಲಿ ಅವಗಾಹನದ ನಿಯಮವನ್ನು ಜೀವನದುದ್ದಕ್ಕೂ ಸಾಧಿಸಿದ ಸಾಧಕೋತ್ತಮರು ಇವರು.

ಬ್ರಹ್ಮಚರ್ಯಕ್ಕೆ ಎರಡು ಮುಖ. ಒಂದು ತ್ಯಾಗ. ಇನ್ನೊಂದು ಯೋಗ. ಹಾಗಾಗಿ ಬ್ರಹ್ಮಚಾರಿಗಳು ತ್ಯಾಗಿಗಳೂ ಹೌದು, ಯೋಗಿಗಳೂ ಆಗಬೇಕು. '' ವೇಧಾಃ ತ್ರೇಧಾ ಭ್ರಮಂ ಚಕ್ರೇ ಕಾಂತಾ ಕಾಂಚನ ಕಾಶ್ಯಪಂ'' ಸೃಷ್ಟಿಕರ್ತನೇ ಎಂತಹವನನ್ನೂ ಕಾಂತಾ(ಹೆಣ್ಣು) ಕಾಂಚನ(ಹೊನ್ನು) ಕಾಶ್ಯಪ(ಮಣ್ಣು) ಈಮೂರರ ಭ್ರಮು ಸುಳಿಯಲ್ಲಿ ಸಿಲುಕಿಸುತ್ತಾನೆ. ಈಮೂರನ್ನು ಗೆದ್ದವ ಮಹಾತ್ಯಾಗಿ. ನಿಜವಾದ ಬ್ರಹ್ಮಚಾರಿ. ಇಂಥಾ ತ್ಯಾಗದ ಬ್ರಹ್ಮಚಾರಿ ನಮ್ಮ ಪರಮ ಪೂಜ್ಯರು.

ತನಗೆಂದೇ ಭಕ್ತರು ಅರ್ಪಿಸಿದ ಹೊನ್ನ-ರನ್ನ ಹಾರಗಳನ್ನೆಲ್ಲಾ ಶ್ರೀ ಹರಿಗೆ ಅರ್ಪಿಸಿ ಅರ್ಚಿಸಿದವರು.

ಶ್ರೀಕಾಂತನ ಏಕಾಂತತೆಯಿಂದ ಶಾಂತರಾಗಿ ಕಾಂತೆಯನ್ನು ಕಣ್ಣೆತ್ತಿಕಾಣದ ಅಪರೂಪದ ಕಾವಿಧಾರಿ ಇವರು.

ಕಾಶ್ಯಪೀಗಾಗಿ(ಮಣ್ಣು) ಪಾಶವೀವೃತ್ತಿಗಿಳಿಯದ ಪಶುಪತಿ ಇವರು. ಆಶಾ ಪಾಶಕ್ಕೊಳಗಾಗದ ಶುದ್ಧಕಾಶ್ಯಪರಿವರು.

ಬಲಿಯನ್ನು ಬಲಿಗೈದು ಮೂರು ಹೆಜ್ಜೆಯಿಂದ ಮೂರನ್ನಳೆದು ಬಂದದ್ದನ್ನೆಲ್ಲಾ ಮಹಾತ್ಮರಿಗೆ ದಾನವಿತ್ತ ಮಹೇಂದ್ರಾನುಜ ವಾಮನನೂ ಹೌದು! ಭಿಕ್ಷುವೃತ್ತಿಗೈದದ್ದು ಹೌದು. ಭಿಕ್ಷೆ ಬೇಡಿದ್ದೂ ಹೌದು. ತನಗಾಗಿ ಅಲ್ಲ. ತನ್ನವರಿಗಾಗಿ ಅಲ್ಲ. ಹರಿ - ಜನರಿಗಾಗಿ. ಹರೀಂದ್ರದಾಸರಿಗಾಗಿ.ನೂರಾರು ಬ್ರಹ್ಮಚಾರಿಗಳನ್ನು ಸಾಕುವುದಕ್ಕಾಗಿ. ಹಲವಾರು ವರಪಂಡಿತ ಮಂಡಲಿಯ ನಿರ್ಮಾಣಕ್ಕಾಗಿ.

ಬ್ರಹ್ಮಚರ್ಯದ ಇನ್ನೊಂದು ಮುಖ ಯೋಗ-ಮನೋಯೋಗ. ವೇದ-ವೇದಾಂತಗಳ ಅಧ್ಯಯನ ಅಧ್ಯಾಪನದ ಯೋಗ. ಬ್ರಹ್ಮ ಎಂದರೆ ವೇದ - ವೇದಾಂತಗಳು. ಅದರ ಅಧ್ಯಯನವೇ ಚರಣ. ನಿರಂತರ ಅಧ್ಯಯನ ಅಧ್ಯಾಪನಗಳೇ ನಿಜವಾದ ಯೋಗ. '' ಏತೇನ ಯೋಗಃ ಪ್ರತ್ಯುಕ್ತಃ'' ವ್ಯಾಸರೂ ಹಠಯೋಗಗಳನ್ನು ಹಳಿದಿದ್ದಾರೆ.

ಶ್ರೀ ಸತ್ಯಧ್ಯಾನತೀರ್ಥರ ಗರಡಿಯಲ್ಲಿ ತಯಾರಾದ ಶ್ರೀ ವಿದ್ಯಾಮಾನ್ಯ ತೀರ್ಥರು ಜ್ಞಾನಿಯೋಗಿಗಳು. ಬ್ರಹ್ಮಚಾರಿಗಳು.

ಈ ತ್ಯಾಗ ತ್ಯಾಗಕ್ಕಾಗಿ ಅಲ್ಲ. ಯೋಗ ಯೋಗಕ್ಕಾಗಿ ಲ್ಲ. ಹರಿ ಪ್ರೀತಿಗಾಗಿ- ಹರೀಂದ್ರಪ್ರೀತಿಗಾಗಿ. ಮಧ್ವರಪ್ರೀತಿಗಾಗಿ- ಮಧ್ವೇಶನ ಪ್ರೀತಿಗಾಗಿ.

ಶ್ರೀ ಹರಿಗೆ ಅಂತಃ ಕರಣದ ಹೊನಲು ಹರಿಸಿದರು. ಹರೀಂದ್ರನಿಗೆ ಭಕ್ತಿಯ ಪೂರ ಹರಿಸಿದರು.

ದ್ವಾರಕೆಯ ಕೃಷ್ಣ ಮಧ್ವರಿಗೊಲಿದ. ಮಧ್ವರು ಶ್ರೀ ವಿದ್ಯಾಮಾನ್ಯರಿಗೊಲಿದರು. ಹೃಷೀಕಗಳನ್ನು ಹೃಷೀಕೇಶನಿಗೆ ಅರ್ಪಿಸಿ ಹೃದ್ಯರಾದರುಶ್ರೀ ವಿದ್ಯಾಮಾನ್ಯರು. ಹೃಷೀಕೇಶ ಹೃಷೀಕೇಶ ಸಂಸ್ಥಾನವನ್ನು ಶ್ರೀ ವಿದ್ಯಾಮಾನ್ಯರಿಗೆ ಒಪ್ಪಿಸಿ ತುಷ್ಟನಾದ.

ಹೃಷೀಕೇಶತೀರ್ಥರು ದಾಖಲಿಸಿದ ಸರ್ವಮೂಲವನ್ನು ಶ್ರೀವಿಶ್ವೇಶರ ಸಹಕಾರದೊಂದಿಗೆ ಮುದ್ರಿಸಿ ಹೃಷೀಕೇಶ ತೀರ್ಥರನ್ನು ಆರಾಧಿಸಿದರು. ಹೃಷೀಕೇಶತೀರ್ಥರೂ ಶ್ರೀ ವಿದ್ಯಾಮಾನ್ಯರಿಗೆ ಎರಡುಬಾರಿ ಹೃಷೀಕೇಶನ ಪೂಜೆಗೈಸಿ ಜಯಭೇರಿಗಳಿಸಿಕೊಟ್ಟರು.

ಶ್ರೀಲೋಲನಿಗೆ ಚಿನ್ನದ ತೊಟ್ಟಿಲು ಒಪ್ಪಿಸಿ ತನ್ನ ಅಚ್ಚಿನ್ನ ಭಕ್ತಿಯ ತೊಟ್ಟಿಲಲ್ಲಿ ಆತನನ್ನು ತೂಗಿದರು.

ಶ್ರೀ ಹರಿಗೆ ಹೊನ್ನ ತೇರನ್ನು ಸಮರ್ಪಿಸಿ ಅವನನ್ನು ತನ್ನ ಮನೋರಥದಲ್ಲಿಟ್ಟು ಭಕ್ತಿಪಾಶದಿಂದ ಎಳೆದು ರಥೋತ್ಸವಗೈದರು. ಶ್ರೀ ಹರಿಗೆ ವಜ್ರದ ಮುಕುಟ ಧಾರಣೆ ಮಾಡಿಸಿ ಇತಿಹಾಸದ ಪುಟದಲ್ಲಿ ವಜ್ರಕಾಯರಾದರು. ಯತಿಮುಕುಟ ಮಾನ್ಯರಾದರು.

ಸ್ವರ್ಣವರ್ಣರಾದ ಶ್ರೀ ಹರೀಂದ್ರರಿಗೆ ಸ್ವರ್ಣ-ಕವಚವಿತ್ತರು. ರಜತಪೀಠದ ಆರಾಧ್ಯಮಾನ ಅನಂತಾಸನನ ಆರಾಧಕರು. ಅಲ್ಲಿರುವ ಮಧ್ವಮಂಟಪ ರಜತಮಂಟಪವಾಯಿತು ಇವರಿಂದ.

ಹರಿಪ್ರೀತಿ ಅನ್ಯಾದೃಶ- ಅಸದೃಶ. ಯತಿಗಳಿಗೆ ವಿಹಿತವಾದ ಪ್ರಣವ- ಅಷ್ಟ ಮಹಾಮಂತ್ರ, ತಂತ್ರಸಾರೋಕ್ತಮಂತ್ರಗಳ ಜಪ.

ಪ್ರತಿಯೊಂದೂ ಸಿದ್ಧಮಂತ್ರ ಇವರಿಗೆ. ಪಯೋವ್ರತದಿಂದ ಅಕ್ಷರ ಲಕ್ಷ ಜಪಿಸಿದ ಸಾಧಕರು. ಹರಿಪ್ರೀತಿ ಸಂಪಾದಕರು. ಪೂಜೆಯ ಏಕಾಗ್ರತೆ, ಶೌಚ-ಆಚಾರನಿಷ್ಠೆ, ಏಕಾದಶೀವ್ರತಾಚರಣೆಯಿಂದ ಪುನೀತರು. ಸುವಿದ್ಯಾ -ಚತುಃಶಾಸ್ತ್ರಗಳಲ್ಲೂ ಅಗಾಧ ಪಾಂಡಿತ್ಯ. ಒಂದೊಂದು ವಿದ್ಯೆಗಾಗಿ ಒಬ್ಬೊಬ್ಬರನ್ನು ಅರಸಬೇಕಾಗಿಲ್ಲ. ಸಕಲ ವಿದ್ಯೆಗಳ ಖನಿ ಶ್ರೀ ವಿದ್ಯಾಮಾನ್ಯರು . ಶ್ರೀ ವಿದ್ಯಾಮಾನ್ಯರು ವಿದ್ಯಾದೇವಿಯ ದರ್ಪಣ.

ಹತ್ತಾರು ಪೀಠಾಧಿಪತಿಗಳ, ಸನ್ಯಾಸಿಗಳ ತಂಡೋಪತಂಡಗಳ ನಿರ್ಮಾಣವೇ ಇದಕ್ಕೆ ಉಜ್ವಲ ನಿದರ್ಶನ. ಅವರು ಬರೆದ ಗ್ರಂಥಗಳೂ ಜ್ವಲಂತಸಾಕ್ಷಿ. ''ಅದ್ವೈತ ತತ್ವ ಸುಧಾಸಮೀಕ್ಷಾ'' ''ಸಹಸ್ರದೂಷಣೀ''ಯಂತ ಗ್ರಂಥ ದ್ವೈತ-ಅದ್ವೈತ ಗ್ರಂಥಗಳ ಮೇಲೆ ಅವರಿಗಿದ್ದ ಪ್ರಭುತ್ವಕ್ಕೆ ಉದಾಹರಣೆ.ತತ್ವಮಾರ್ತಾಂಡ ವಿಮರ್ಶೆ- ಅಥ ಶಬ್ದ ವಿಚಾರದಂಥ ಗ್ರಂಥಗಳು ದ್ವೈತ- ವಿಶಿಷ್ಟಾ ದ್ವೈತ ಗ್ರಂಥಗಳ ಪ್ರಭುತ್ವಕ್ಕೆ ದಿಕ್ ಸೂಚಿ. ಶ್ರೀಮನ್ನ್ಯಾಯಸುಧಾಮಂಗಳ ಸಂದರ್ಭಗಳಲ್ಲಿ ಚರ್ವಿತಚರ್ವಣ ಅನುವಾದ ಇವರು ನಡೆಸುತ್ತಿರಲಿಲ್ಲ. ಅಪೂರ್ವ ಅನುಪಮ ಅನುವಾದ. ಕೆಲವು ಅನುವಾದ ಮುದ್ರಣಗೊಂಡಿದೆ. 88ರ ಇಳಿ ವಯಸ್ಸಲ್ಲೂ ಇವರ ಚಿಂತನೆಯಲ್ಲಿ ನಿತ್ಯನೂತನೆಯಿತ್ತು. ಪಾಠ-ಪ್ರವಚನ ಪ್ರತಿಯೊಂದೂ ಏಕಮೇವ ಅದ್ವಿತೀಯಮ್- ಇಂಥ ಅದ್ಭುತ ಪ್ರತಿಭೆಯಿಂದ ಅರಳಿದ ಸುವಿದ್ಯೆಯಿಂದ ನಾಡಿನಾದ್ಯಂತ ಹೆಸರು ಮಾಡಿದವರು.

ತುಂಬಿದ ಪ್ರತಿವಾದಿಗಳ ಸಭೆಯಲ್ಲಿ ಏಕಾಕಿಯಾಗಿ ಹೋರಾಡಿದ ಅಪ್ರತಿಮವೀರರು. ವಾದದಲ್ಲೂ ಭಾಗವಹಿಸಿದ್ದಾರೆ. ಜಲ್ಪ - ವಿತಂಡಗಳಲ್ಲೂ ಭಾಗವಹಿಸಿದ್ದಾರೆ. ಮಾಯಾವಾದದ ಮಾಯೆಯಿಂದ ಜಗತ್ತನ್ನೇ ಮಾಯೆಗೊಳಿಸಿದ ಉತ್ತರದಲ್ಲೂ ತನ್ನ ವಾದದಿಂದ ಹಿಮಗಿರಿಯಂತೆ ಎತ್ತರಕ್ಕೇರಿದವರು. ಅದ್ವೈತವನ್ನು ಸಮರ್ಥಿಸಿದರೆ ಸರ್ವಸ್ವ ಸಮರ್ಪಿಸುವ ಕರಪತ್ರ ಅಂಟಿಸ ನಗಾರಿ ಬಡಿಸಿ ಘೋಷಣೆಮಾಡಿದಧೀರರು. ಕರಪಾತ್ರಿಗಳಂಥ ಪ್ರಚಂಡ ಮಾಯಿಗಳನ್ನು ಗೆದ್ದ ಅದ್ಭುತ ಸಾಹಸಿ.

ಲೋಕಕ್ಷೇಮಕ್ಕಾಗಿ ಅಷ್ಟಗ್ರಹಯೋಗಕಾಲದಲ್ಲಿ ಅಷ್ಟೂ ಉತ್ತರ ಭಾರತದ ಆಗ್ರಹವಂತರ ಮಧ್ಯೆ ಯಾಗ ನಡೆಸಿದ ಮಹಾಯೋಗಿಗಳು. ಪರಕೀಯರ ದಾಳಿಯಿಂದ ದೇಶದ ಸಂರಕ್ಷಣೆಯೂ ಅಗತ್ಯ. ಅದಕ್ಕಿಂತಲೂ ಶಾಸ್ತ್ರಗಳ ಮಧ್ವರ

ಸಂದೇಶಗಳ ಬಗ್ಗೆ ಪರಮತ ದಾಳಿಯಿಂದ ರಕ್ಷಿತರಾಗಬೇಕೆನ್ನುವುದು ಇವರ ಅಂತರಾಳದ ಕರೆ. ಸ್ವಕ್ಷೇತ್ರದ ಪ್ರಾಬಲ್ಯವಿದ್ದ ಶೃಂಗೇರಿಯಲ್ಲಿಯೇ ಇಬ್ಬರು ಪೀಠಾಧೀಶರ ಜೊತೆಗೆ, ಕಾಂಚಿಯಲ್ಲಿ ಪೀಠಾಧೀಶತ್ರಯರ ಜೊತೆಗೆ ನಡೆಸಿದ ವಾದಗಳಂತೂ ಜರಾಸಂಧನನ್ನು ಮರ್ದಿಸಿದ ಶ್ರೀ ಭೀಮಸೇನದೇವರ ಸ್ಮರಣೆ ಮಾಡಿಸುತ್ತದೆ.

88ರ ಇಳಿವಯಸ್ಸಿನಲ್ಲೂ ಅಹೋಬಲ ಶ್ರೀಗಳ ಸೌಹಾರ್ದಯುತ ಭೇಟಿಯಲ್ಲಿ ಆನಂದತಾರತಮ್ಯವನ್ನು ಸಮರ್ಥಿಸಿ ಶ್ರೀಗಳವರನ್ನು ಮೂಕವಿಸ್ಮಯರನ್ನಾಗಿಸಿದ ಶ್ರೀಗಳ ವಾದ ವಿಶಾರದತೆ ನಿರ್ವಿವಾದ.

ಪತ್ರಿಕೆಯ ಮೂಲಕ ಬಹಿರಂಗ ಘೋಷಣೆ ಮಾಡಿದ ಇವರ ವಾಕ್ಯಾರ್ಥಕೌಶಲ ಜಗಜ್ಜಾಹೀರ.

ತ್ರಿವಿಕ್ರಮಪಂಡಿತರಿಂದ ಆಶ್ಚರ್ಯಚಕಿತವಾದ ''ತೇನಮಃ ಕೌಶಲಾಯ'' ಅನ್ನುವ ವಾಕ್ಯ ಶ್ರೀಮದಾನಂದತೀರ್ಥರ- ಭಾರತೀರಮಣರ ವಿಶೇಷ ಸನ್ನಿಧಾನ ಪಾತ್ರರಾದ ಶ್ರೀ ವಿದ್ಯಾಮಾನ್ಯ ತೀರ್ಥರನ್ನು ನೆನಪಿಸುತ್ತದೆ.

ಅರಳು - ಮರಳು ವಯಸ್ಸಿನಲ್ಲೂ ಮತ್ತೆ ಜ್ಯೋತಿಷ ಅಧ್ಯಯನಮಾಡಿ ಏಕಾದಶಿ ಬಗ್ಗೆ ಮರಳಿ ಅರಳಿದ ಸರ್ವಮಾನ್ಯರು ಶ್ರೀ ವಿದ್ಯಾಮಾನ್ಯರು. ಏಕಾದಶಿಯ ವ್ರತಾಚರಣೆಯ ಏಕತೆಗಾಗಿ ಸೆಣಸಾಡಿದ ಹುತಾತ್ಮರು. ಮಾತುಬಾರದ ಮಕ್ಕಳಿಗೆ ಮಂಡಲಪರ್ಯಂತ ವ್ಯಾಸಮಂತ್ರ ಮಂತ್ರಿಸಿದ ಮಂತ್ರೋದಕವಿತ್ತು ಮಾತು ಇತ್ತ ಭಾರತೀಮಾತೆಯ ಕುಮಾರರಿವರು. ಗಂಡು ಕಾಣದೆ ಗಂಡಾಂತರಕ್ಕೊಳಗಾಗುವ ಹೆಣ್ಣುಗಳಿಗೆ ಮಂತ್ರ-ಮಂತ್ರಾಕ್ಷತೆಯಿಂದ ಮದುವೆ ಮಾಡಿಸಿ ಮಂಗಳ ಸೂತ್ರ ಕಟ್ಟಿಸಿದ ಮಂಗಳಾತ್ಮರು ಇವರು. ಸಂತಾನಶೂನ್ಯ ಮಾತೆಯರ ಮನು ಮಂತ್ರಿತ ಮಂತ್ರಾಕ್ಷತೆಯಿಂದ ಮನಸ್ಸುಪೂರೈಸಿದ ಮಹಿತಾತ್ಮರು ಇವರು.

ಸ್ತಬ್ಧ ಬುದ್ಧಿಗಳಿಗೆ ಬುದ್ಧಿಪ್ರಚೋದಕರಾದ ಅನ್ವರ್ಥಕ ಶುದ್ಧಬುದ್ಧಿ ಇವರು. ಮಂತ್ರಪೂತಮೃತ್ತಿಕೆಯಿಂದ ತೊನ್ನುರೋಗವನ್ನು ದೂರ ಸರಿಸಿದ ಭವರೋಗವೈದ್ಯರು. ಕೇಳಿದವರಿಗೆ ಕೇಳಿದ್ದನ್ನು ಕೊಟ್ಟರು. ಬೇಡಿದವರಿಗೆ ಬೇಡಿದ್ದನ್ನು ನೀಡಿದರು. ಕಾಡಿದವರಿಗೆ ಕಾಡಿದ್ದನ್ನು ಕೊಡಿಸಿದರು.

ಈ ಶತಮಾನದ ಕಾಮಧೇನು-ಕಲ್ಪವೃಕ್ಷ-ಚಿಂತಾಮಣಿ-ಶ್ರೀ ವಿದ್ಯಾಮಾನ್ಯರು. ಇಷ್ಟದರು ಅಭೀಷ್ಟಪ್ರದರು ಇವರು. ಕಷ್ಟಹರ್ತೃಗಳು-ಅನಿಷ್ಟನಿವಾರಕರು . ಇಂಥಾಮುನಿಗಳಿಗೆ ಮಣಿಯೋಣ, ಕೈ ಮುಗಿಯೋಣ. ★

# ಆರ್ಷವಾಣಿ

ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದರು
ಶ್ರೀಭಂಡಾರಕೇರು ಮಠ

## ಬಾಲಮನೋಮುಕುಟಧಾರಿಯಾದ ವೇದಾಂತ ಸಾಮ್ರಾಟ್

ದ್ವೈತವೇದಾಂತಪೀಠಕ್ಕೆ ತನ್ನ ತಪೋವಿದ್ಯಾವಿರಕ್ತಿಭಕ್ತಿ ಸಚ್ಚಾರಿತ್ರ್ಯಗಳಿಂದ ಶೋಭಾತಿಶಯವನ್ನು ತಂದು ಪೀಠದ ಗೌರವವನ್ನು ಗುರುತರ ಮಾಡಿದ ಗೌರವಾರ್ಹ ಗುರುಗಳು ನಮ್ಮ ಗುರುಗಳಾದಶ್ರೀ ವಿದ್ಯಾಮಾನ್ಯ ತೀರ್ಥರು.

ಅವರ ಹೃದಯ ಜ್ಞಾನದಕ್ಷೀರಸಾಗರ. ಆದರೆ ಅಲ್ಲಿ ಅಹಂಕಾರ ಅಲೆಗಳೊಂದೂ ಎದ್ದಿಲ್ಲ. ಆದುದರಿಂದ ಅದರ ಹೊಡೆತಕ್ಕೆ ಯಾರೂ ಒಳಗಾಗಲಿಲ್ಲ.

ಒಳಗೊಂದು ಹೊರಗೊಂದು ಅವರಿಂದ ಬಲುದೂರ. ಅವರ ಈ ಹಾರ್ದಿಕ ಆರ್ಜವಸಂಪತ್ತಿನಿಂದ ಅವರ ಬಾಲಮುಗ್ಧಶುದ್ಧ ಮನವು ಮುಕುಟಪ್ರಾಯವಾಗಿದ್ದು ಅವರ ವಜ್ರವ್ಯಕ್ತಿತ್ವಕ್ಕೆ ಹೆಚ್ಚಿನ ಹೊಳಪನ್ನು ತಂದಿದೆ ಎನ್ನಬಹುದು. ಶ್ರೀ ವಿದ್ಯಾಮಾನ್ಯ ತೀರ್ಥರು'' ಪ್ರಯಾಗತೀರ್ಥರಾಜ'' ನಂತೆ.ಪ್ರಯಾಗದಲ್ಲಿರುವ ತೀರ್ಥವು ಗಂಗಾ-ಯಮುನಾ-ಸರಸ್ವತೀ ತೀರ್ಥಗಳ ಸಂಗಮದಿಂದ ಅತ್ಯಂತ ಪಾವನ ತೀರ್ಥರಾಜ ಎನಿಸಿದರೆ, ಶ್ರೀ ವಿದ್ಯಾಮಾನ್ಯ ತೀರ್ಥರಲ್ಲೂ ತ್ರಿವೇಣಿಯಂತಿರುವ ಶ್ರೀವಿಬುಧಪ್ರಿಯತೀರ್ಥರ-ಶ್ರೀಸತ್ಯಧ್ಯಾನತೀರ್ಥರ-ಶ್ರೀಸುಧೀಂದ್ರತೀರ್ಥರ ಅನುಗ್ರಹರೂಪ ಸಂಗಮದಿಂದ ಅವರು ರೌಪ್ಯಪೀಠಕ್ಷೇತ್ರದ ಪಾವನ ತೀರ್ಥರಾಜ '' ಎನಿಸಿದ್ದಾರೆ, ಎಂದರೆ ಅತಿಶಯೋಕ್ತಿಯಾಗಲಾರದು.ಮಿಂಚಿನಂತೆ ಹೊಳೆಯುವ ಅವರ ಕಣ್ಣಿಗೆ ಗೋಚರನಾದ ಯಾವ ವ್ಯಕ್ತಿ ತಾನೆ ಪುನೀತನಾಗಲಿಲ್ಲ? ಸಮಾದಾನ- ಸಂತೃಪ್ತಿಯನ್ನು ಹೊಂದಲಿಲ್ಲ?

ಶ್ರೀ ಅದಮಾರು ಮಠಾಧೀಶರಾದ ತೇಜಸ್ವಿ ಶ್ರೀವಿಬುಧಪ್ರಿಯತೀರ್ಥರು ಸಂನ್ಯಾಸದೀಕ್ಷೆಯನ್ನು ದಯಪಾಲಿಸಿ ಅನುಗ್ರಹಿಸಿದರೆ ಶ್ರೀಕೃಷ್ಣನಪರಮ ಭಕ್ತರಾದ ಶ್ರೀಪುತ್ತಿಗೆ ಮಠಾಧೀಶರಾದ ಶತಾಯು ಶ್ರೀ

ಸುಧೀಂದ್ರತೀರ್ಥರು ಉಪನಯನ ಕಾಲದಲ್ಲಿ ಶ್ರೀಕೃಷ್ಣಮಂತ್ರೋಪದೇಶವನ್ನು ನೀಡಿ ಶ್ರೀಕೃಷ್ಣ ಪೂಜಾಕೈಂಕರ್ಯ ಯೋಗ್ಯತೆಯನ್ನು ಅಭಿವ್ಯಕ್ತೀಕರಿಸಿ ಅನುಗ್ರಹಿಸಿದರು.

ದ್ವೈತವೇದಾಂತದ ವಿದ್ವದ್ದಿಗ್ಗಜರೆನಿಸಿದ ದಿಗಂತವಿಶ್ರಾಂತ ಕೀರ್ತಿಸಂಪನ್ನರಾದ ಶ್ರೀಉತ್ತಾರಾದಿಮಠಾಧೀಶರಾದ ಶ್ರೀ ಸತ್ಯಧ್ಯಾನತೀರ್ಥರು ಪರವಿದ್ಯೋಪದೇಶವನ್ನು ನೀಡುವಮೂಲಕ ''ವಿದ್ಯಾಮಾನ್ಯ'' ರಾಗಿ ಬೆಳಗಲು ಪರಮಾನುಗ್ರಹ ಮಾಡಿದರು.

ಈ ಗುರುತ್ರಯರ ಅನುಗ್ರಹ ಬಲದಿಂದ ಶ್ರೀ ವಿದ್ಯಾಮಾನ್ಯ ಗುರುಗಳು ಶ್ರೀಭಂಡಾರಕೇರಿಯ ರಾಜಹಂಸರಾಗಿ, ರಾಷ್ಟ್ರಗುರು ಶ್ರೀವಿಶ್ವೇಶತೀರ್ಥರ ಗುರುವಾಗಿ, ಪಲಿಮಾರಿನಪರಮಾಚಾರ್ಯರಾಗಿ ರಾರಾಜಿಸಿದರು. ಅಷ್ಟಮಠಗಳಲ್ಲಿ ಜ್ಯೇಷ್ಠಶ್ರೇಷ್ಠ ಕೃಷ್ಣಾರ್ಚಕರಾಗಿ ಮೆರೆದರು.

ಸತ್ಯತೀರ್ಥಪೀಠದ ಮಹಾರಾಜರಾದ ಈ ಗುರುಗಳು ಭಕ್ತಿ-ವಿರಕ್ತಿಗಳನ್ನುಪಟ್ಟದರಸಿಯನ್ನಾಗಿ ಜೀವನದುದ್ದಕ್ಕೂ ಮಾಡಿಕೊಂಡು ಯೋಗದ ಆನಂದವನ್ನು ಅನುಭವಿಸಿದರು. ವಿದ್ವತ್‌ಸನ್ಮಾನವನ್ನೇ ಕಿರೀಟದಲ್ಲಿ ಧರಿಸಿದ ಈ ಮಹಾನುಭಾವರು ಮಧ್ವಸಿದ್ಧಾಂತಗಳನ್ನುತನ್ನ ಪ್ರಜಾಪುತ್ರ ರೂಪದಲ್ಲಿ ಭಾವಿಸಿ ಶಿಷ್ಯರನ್ನು ಸಂರಕ್ಷಿಸಿದರು.

ಅವರ ತಪೋ ಬ್ಯಾಂಕಿನ ಫಲಾನುಭವಿಗಳುಸಹಸ್ರಾರು ಮಂದಿಗಳಿದ್ದಾರೆ. ಅವರ ಮಂತ್ರದಿಂದ ಎಷ್ಟೋಜನರ ಕಾರ್ಯತಂತ್ರವು ಸುಸೂತ್ರವಾಗಿ ಫಲಿಸಿತು. ಅವರು ಅಷ್ಟಗ್ರಹಯೋಗದಿಂದ ದೇಶಕ್ಕೆ ಬರಬಹುದಾದ ವಿಪತ್ತಿನಿಂದ ದೆಹಲಿಯಲ್ಲಿ ವಿಶ್ವ ಕಲ್ಯಾಣ ಮಹಾಯಾಗದ ಪ್ರಭಾವದಿಂದ ದೂರಮಾಡಿದ ಆಪದ್ಬಾಂಧವರು.

ವೃದ್ಧಾಪ್ಯವು ಎಲ್ಲದರ ಬಗ್ಗೆಯೂ ಆಸಕ್ತಿ-ಉತ್ಸಾಹಗಳನ್ನುಕುಗ್ಗಿಸುತ್ತದೆ. ಆದರೆ ನಮ್ಮ ಗುರುಗಳಿಗೆ 87ರ ಹರೆಯದಲ್ಲೂ ಶಾಸ್ತ್ರೀಯದೀಕ್ಷೆ- ಆಸಕ್ತಿಕುಗ್ಗಲಿಲ್ಲ.

ಅವರೊಮ್ಮೆ ಬಾಗಿದಬೆನ್ನಿಂದ ಪುಸ್ತಕವನ್ನುನೋಡುತ್ತಾ ಚಂದ್ರಿಕೆಯನ್ನುಮೆಲಕುಹಾಕುತ್ತಾ ಆನಂದಪರವಶರಾಗಿ ನಮ್ಮ ಎದುರು ಉದ್ಗರಿಸಿದರು- ''ನಾನು ಇಡಿ ಚಂದ್ರಿಕೆಯನ್ನು ಕಂಠಪಾಠಮಾಡಬೇಕೆಂದು ಸಂಕಲ್ಪಿಸಿದ್ದೇನೆ, ಅದರಲ್ಲಿರುವ ವಿಚಾರಶೈಲಿ ಅಷ್ಟೋಂದು ಆನಂದವನ್ನು ನನಗೆ ನೀಡಿದೆ'' ಎಂದು. ಅವರ ಮತೀಯದೀಕ್ಷೆ ಅನನ್ಯವಾದುದು. ಒಮ್ಮೆ ಒಬ್ಬ ದಾಸರು''ಹರಿಸರ್ವೋತ್ತಮ ವಾಯುಜೀವೋತ್ತಮ'' ಘೋಷಣೆ ಮಾಡುತ್ತಾ ಇದ್ದರು. ಆಗ ಗುರುಗಳು ಆ ದಾಸರನ್ನು ಸಮೀಪಕ್ಕೆ ಕರೆದು ಹಾಸ್ಯದಿಂದ ''ನಿಮ್ಮಲ್ಲಿ ಎಲ್ಲಾ ಸರಿ ಇದೆ, ಆದರೆ ಒಂದು ತಪ್ಪಿದೆ. ನೀವು ''ಹರಿಯೇ ಸರ್ವೋತ್ತಮ ವಾಯುವೇಜೀವೋತ್ತಮ'' ಎಂದು ಪರಮತ ನಿರಾಕರಣ ಪೂರ್ವಕವಾಗಿ ಘೋಷಣೆ ಮಾಡುತ್ತಿಲ್ಲ. ಇದೇ ನಿಮ್ಮಲ್ಲಿರುವ ಕೊರತೆ'' ಎಂದು. ಹಾಸ್ಯಭಾವವನ್ನು ಭೀರಿದರು ಈ ಮಾತಿನಿಂದ ಅವರ ಸೈದ್ಧಾಂತಿಕ ದೀಕ್ಷ ಅಸಾಧಾರಣವೆಂದು ತಿಳಿಯುತ್ತದೆ.

ವಿದ್ವಾಂಸರಿಗೆ ಹೇಗೆ ಕೊಡಬೇಕೆಂದು ಶ್ರೀಸತ್ಯಧ್ಯಾನ ರಿಂದ ಕಲಿತುಕೊಂಡ ಗುರುಗಳು ಒಮ್ಮೆ ವಿದ್ವಾಂಸರಿಗೆ ಸಂಭಾವನೆಯನ್ನು ಕೊಟ್ಟು ಕೊಟ್ಟು ತಟ್ಟೆಯಲ್ಲಾ ಬರಿದಾದಾಗ ತ್ಯಾಗದ ಆನಂದ ಸಾಗರದಲ್ಲಿತೇಲುತ್ತಾ

ಇದ್ದರು. ಆಗ ಯಾರೋ ಒಬ್ಬ ಶ್ರೇಷ್ಠ ವಿದ್ವಾಂಸರು ಗುರುಗಳನ್ನು ಸಮೀಪಿಸಿದರು. ಆಗ ಗುರುಗಳು ಆನಂದಮಿಶ್ರಿತವಾದ ಹಾಸ್ಯದ ಚಟಾಕಿಯನ್ನು ಹಾರಿಸುತ್ತಾ ''ಎಲ್ಲಾ ಖಾಲಿಯಾಗಿದೆ ಖಾಲಿತಟ್ಟೆಯನ್ನು ದಾರಾಳವಾಗಿ ತೆಗೆದುಕೊಂಡು ಹೋಗಬಹುದು'' ಎಂದು ಉದ್ಗರಿಸಿದರಂತೆ. ತ್ಯಾಗದಿಂದ ಉಂಟಾದ ಶೂನ್ಯತೆಯಲ್ಲಿ ಅವರು ಆನಂದವನ್ನು ಕಂಡವರೆ ವಿನಾ ಲೋಭದಿಂದ ಉಂಟಾದ ಸಂಗ್ರಹದಿಂದ ಎಂದೂ ಆನಂದವನ್ನು ಕಂಡವರಲ್ಲ.

ಅಂಥ ಗುರುಗಳನ್ನು ಶತಾಯುಷಿಯಾಗಿ ಉಳಿಸಿಕೊಳ್ಳುವ ಭಾಗ್ಯದಿಂದ ನಾವಿಂದು ವಂಚಿತರಾಗಿದ್ದೇವೆ.

ಆದರೆ ಅವರ ಸ್ಫಟಿಕಮಣಿಯಂತೆ ಅಪ್ಪಟ ಧವಳವಾದ ಯತಿ ಜೀವನಾದರ್ಶ ಎಂದೆಂದೂ ಅಜರಾಮರ ಅದು ಎಂದೂ ಒಡೆಯುವುದಿಲ್ಲ ಅದೇ ಇಂದು ಎಲ್ಲರಿಗೂ ಮಾರ್ಗದರ್ಶಕ. ಅದನ್ನೇ ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಡೆಯುವುದೇ ಅವರ ಸರ್ವ ಶ್ರೇಷ್ಠಗುರು ಸಮಾರಾಧನೆ ಎಂದು ಭಾವಿಸಿ ಮುನ್ನಡೆಯೋಣ.

ಅಂಥ ಗುರುಸಾರ್ವಭಾಮರಿಗೆ ನನ್ನ ಅನಂತ ಪ್ರಣಾಮಗಳು. ★

# ಗುರುನಮನ

-ಬನ್ನಂಜೆ ಗೋವಿಂದಾಚಾರ್ಯ

ಮುಗಿಲಿನೆತ್ತರದ ಪಾಂಡಿತ್ಯದವರು; ಆದರೂ ಮಗುವಿನಂಥ ಹೃದಯದವರು! ಯಾರಿವರು? ಯಾರಿವರು? ಎಲ್ಲೆಡೆ ಅರಸಿದರೂ ಸಿಗುವುದು ಒಂದೇ ಉತ್ತರ: ಶ್ರೀವಿದ್ಯಾಮಾನ್ಯತೀರ್ಥರು. ಅಚ್ಯುತಪ್ರಜ್ಞರ ಸಂಸ್ಥಾನವನ್ನೂ ಪೂರ್ಣಪ್ರಜ್ಞರ ಸಂಸ್ಥಾನವನ್ನೂ ಆಳಿದ ಏಕಮಾತ್ರ ಯತಿ.

ಅವರು ವಿದ್ಯೆಯಿಂದ ಮಾನ್ಯರಾದರು; ವಿದ್ಯೆ ಅವರಿಂದ ಮಾನ್ಯವಾಯಿತು.

ಅವರನ್ನು ಕಳೆದುಕೊಂಡು ವೇದಾಂತವಿದ್ಯೆ ಅನಾಥವಾಯಿತು. ವಿದ್ವಾಂಸರು ಅನಾಥರಾದರು. ಇನ್ನೆಲ್ಲಿ ಕಾಣಲಿ ಅಂಥ, ಆ ಮಗುವಿನಂಥ ಹೃದಯ?

ಆಚಾರ್ಯಮಧ್ವರ ಶಿಷ್ಯರಲ್ಲಿ ಹೃಷೀಕೇಶತೀರ್ಥರು ಹಿರಿಯರು. ಆಶ್ರಮಜ್ಯೇಷ್ಠರು ಎಂಬ ಐತಿಹ್ಯ ಉಂಟು. ಅಂಥ ಹೃಷೀಕೇಶತೀರ್ಥರ ಸಂಸ್ಥಾನ ಪಲಿಮಾರುಮಠ. ಉಡುಪಿಯ ಪರಂಪರೆಯಲ್ಲಂತು ಪಲಿಮಾರುಮಠ ಅಷ್ಟೋತ್ಕೃಷ್ಟ ಮಠ ಎಂದೇ ಪ್ರಸಿದ್ಧ. ಅಂಥ ಎತ್ತರದ ಪೀಠವನ್ನೇರಿದವರು ವಿದ್ಯಾಮಾನ್ಯತೀರ್ಥರು.

ಎತ್ತರದ ಪೀಠವಿತ್ತು; ತನ್ನದೇ ಎಲ್ಲಕ್ಕಿಂತ ಎತ್ತರದ ಪೀಠ ಎನ್ನುವ ಪೊಳ್ಳುಭ್ರಮೆ ಇರಲಿಲ್ಲ; ಅಹಂಕಾರ ಇರಲಿಲ್ಲ. ಎತ್ತರದ ವಿದ್ಯೆ ಇತ್ತು; ತಾನೇ ಎತ್ತರದ ವಿದ್ವಾಂಸ ಎನ್ನುವ ಅಂಹಕಾರ ಇರಲಿಲ್ಲ.

ಒಂದೊಂದು ಉನ್ನತಿಕೆಯೂ ಅಹಂಕಾರವಾಗಿ ಕಾಡಿದಾಗ ವ್ಯಕ್ತಿತ್ವವನ್ನು ನಾಶಮಾಡಿ ಕೆಳಕ್ಕೆ ತಳ್ಳಿ ಬಿಡುತ್ತದೆ. ವಿದ್ಯಾಮಾನ್ಯತೀರ್ಥರಲ್ಲಿ ಎಲ್ಲ ಉನ್ನತಿಕೆಯೂ ಇತ್ತು. ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ । ಏತಾನಿ ಮಾನ್ಯಸ್ಥಾನಾನಿ.....'

ಮೊದಲ ಎರಡು ಸನ್ಯಾಸಿಗಳಿಗೆ ಹೇಳಿದ್ದಲ್ಲ: ವಿತ್ತದ ಹಿರಿಮೆ ಮತ್ತು ಬಾಂಧವ್ಯದ ಹಿರಿಮೆ. ವಯಸ್ಸಿನಲ್ಲಿ ಅವರು ಜ್ಯೇಷ್ಠಯತಿಯಾಗಿದ್ದರು; ಕರ್ಮಸಾಧನೆಯಲ್ಲಿ, ವಿದ್ಯೆಯಲ್ಲಿ ಅವರು ಶ್ರೇಷ್ಠಯತಿಯಾಗಿದ್ದರು.

ಆದರೂ ಅವರು ಅಹಂಕಾರದಿಂದ ಬೀಗಲಿಲ್ಲ, ಮಗುವಿಗಿಂತ ಮಗುವಾಗಿ ಬದುಕಿದವರು; ಯಾವ ಸಣ್ಣ ಯತಿ ಬಂದರೂ ತಾನು ನಿಂತು ಸ್ವಾಗತಿಸುವ ವಿನಯದ, ಮುಗ್ಧತೆಯ ಸಾಕಾರಮೂರ್ತಿಯಾಗಿ ಬದುಕಿದರು; 'ವಿದ್ಯಾ ದದಾತಿ ವಿನಯಮ್ ...' ಎಂಬ ಮಾತಿಗೆ ನಿದರ್ಶನವಾಗಿ ಬದುಕಿದರು.

ಇನ್ನೆಲ್ಲಿ ಕಾಣಲಿ ಅಂಥ ವಿನಯದ ವಿದ್ಯೆಯ ಕಡಲನ್ನು? ಅಂಥ ವಿನಯದ ಮಠಾಧಿಪತ್ಯವನ್ನು? ಭಗವಂತನ ತೇಜಸ್ಸಿನ ಅಂಶವನ್ನು ಹೊತ್ತು ಬಂದ ವಿಭೂತಿಪುರುಷರಲ್ಲಿ ಮಾತ್ರವೆ ಕಾಣಬಹುದಾದ ಇಂಥ ಸತ್ತ್ವವನ್ನು?

ವಿದ್ಯಾಮಾನ್ಯತೀರ್ಥರು ತಾನು ಭಗವದ್ವಿಭೂತಿಯಾಗಿ ಬದುಕಿದವರು; ಪೇಜಾವರ ಶ್ರೀಪಾದರಂಥ ಇನ್ನೊಬ್ಬ ವಿಭೂತಿಪುರುಷರನ್ನು ಸಮಾಜಕ್ಕೆ ನೀಡಿ ತೆರಳಿದರು. ಏನಾದರೇನು? ವಿದ್ಯಾಮಾನ್ಯತೀರ್ಥರ ಅಗಲಿಕೆಯಿಂದ ಉಂಟಾದ ಶೂನ್ಯವನ್ನು ಯಾರೂ ತುಂಬುವುದು ಸಾಧ್ಯವಿಲ್ಲ. ವಿದ್ಯಾಮಾನ್ಯತೀರ್ಥರಿಗೆ ಸಾಟಿ ವಿದ್ಯಾಮಾನ್ಯತೀರ್ಥರು ಮಾತ್ರವೇ: ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ। ವಿದ್ಯಾಮಾನ್ಯಯತೇಃ ಸತ್ತ್ವಂ ವಿದ್ಯಾಮಾನ್ಯಯತೇರಿವ।

ನಾನು ಸ್ವತಃ ಅವರ ವಿದ್ಯಾರ್ಥಿಯಾಗಿ ಅವರ ಶಿಷ್ಯವಾತ್ಸಲ್ಯದ ಸವಿಯನ್ನು ಕಂಡವ; ಉಂಡವ. ಅವರ ತಾವರೆಗಣ್ಣು ಅರಳಿಕೊಂಡಾಗ ಅದರಿಂದ ಹರಿದು ಬರುವ ಪ್ರೀತಿಯ ಬೆಳಕಿನಲ್ಲಿ ಮಿಂದು ಮೈಪುಳಕಗೊಂಡವ. ಹೌದು; ತಾವರೆಯಂಥ ಕಣ್ಣು ಎಂಬ ಕವಿಗಳ ವರ್ಣನೆ ನನಗೆ ಮನವರಿಕೆಯಾದದ್ದೆ ಗುರುಗಳ ಆ ಅರಳುಕಣ್ಣುಗಳನ್ನು ಕಂಡು. ಕಣ್ಣಿನ ಬೆಳಕು ಎಂಬ ಮಾತು ಮನವರಿಕೆಯಾದದ್ದೆ ಆ ಬೆಳಕಿನ ಪ್ರೀತಿಯ ಪೂರದಲ್ಲಿ ಮಿಂದು.

ನನಗೂ ಅವರಿಗೂ ಇದ್ದ ಅಂತರಂಗದ ಸಂಬಂಧ ಯಾರಿಗೂ ತಿಳಿಯಲಾಗದ್ದು. ಅದು ನನಗೂ ಅವರಿಗೂ ಮಾತ್ರವೆ ತಿಳಿದಂಥದು. ಅದು ಅಳಿವಿರದ ನಂಟು. ಅಧ್ಯಾತ್ಮದ ಗಂಟು.

ಅವರ ಪಾಠವೆಂದರೆ ಅದೊಂದು ವಿಸ್ಮಯದ ಅನುಭವ. ಆಚಾರ್ಯ ಮಧ್ವರ ಪ್ರವಚನದ ಬಗೆಗೆ ತ್ರಿವಿಕ್ರಮಪಂಡಿತರು ಹೇಳಿದ ಮಾತು ಒಂದು ಮಟ್ಟದಲ್ಲಿ ವಿದ್ಯಾಮಾನ್ಯರ ಪ್ರವಚನಗಳಿಗೂ ಅನ್ವಯವಾಗುತ್ತದೆ. 'ಯಸ್ಯ ಅಸ್ಖಲಿತಾನವರತ- ವೇದಶಾಸ್ತ್ರ-ವ್ಯಾಖ್ಯಾನ-ಶ್ರವಣ-ಸಮುತ್ಖಾತ-ದುಃಖ- ಸಂಘಾತಃ ನಿಖಿಲ-ಪಂಡಿತ-ವರ್ಗಃ ಪರಮಾಮೃತ ಸಮುದ್ರಾವಗಾಹೀವ ಬಹಳಮಾ ಹ್ಲಾದಮಾಪ್ನೋತಿ'

ಅವರ ಪ್ರವಚನವೆಂದರೆ ಪಂಡಿತರಿಗೂ ಆನಂದ; ಮುಗ್ಧ ಮಕ್ಕಳಿಗೂ ಆನಂದ; 'ಬಾಲಸಂಘಮಪಿ ಬೋಧಯದ್ ಭೃಶಂ ದುರ್ನಿರೂಪವಚನಂ ಚ ಪಂಡಿತೈಃ'

ಪ್ರವಚನಷ್ಟೆ ಅಲ್ಲ ಅವರು ಮಾತನಾಡಿದರೆಂದರೆ ಅದೊಂದು ರಸಾನುಭವ. ಆ ಸರಸಸಂಭಾಷಣೆಯ ನವಿರು ಹಾಸ್ಯದ ಹೊನಲಲ್ಲಿ ನಾವೆಲ್ಲ ಓಲಾಡಿದವರು.

ತತ್ತ್ವನಿಷ್ಠೆ ಅವರ ಜತೆಗೆಯೇ ಕಣ್ಮರೆಯಾಯಿತೇನೋ, ಆ ವಿಶಾಲದೃಷ್ಟಿ. ಆ ವಿದ್ಯಾಪ್ರೇಮ ಮುಂತಾದ ಲೋಕೋತ್ತರಗುಣಗಳಿಗೆ ಇನ್ನು ನೆಲೆಯೆಲ್ಲಿ? ಅವರು ಸಂಪ್ರದಾಯವಾದಿಗಳಾಗಿಯೂ ಮಹಾಕ್ರಾಂತಿಕಾರಿ ಗಳಾಗಿದ್ದರು. ಅವರು ಹಳೆಯದನ್ನು ಒಪ್ಪಿಯೂ ಹೊಸದನ್ನು

ಅಪ್ಪಿಕೊಳ್ಳುವ ಹೃದಯ ವೈಶಾಲ್ಯ ಉಳ್ಳವರಾಗಿದ್ದರು.

ದೃಗ್‌ಗಣಿತವನ್ನು ಒಪ್ಪಿಕೊಂಡು ಎಲ್ಲರೂ ಒಂದೇ ಏಕಾದಶಿಯನ್ನು ಸಮಸ್ತಮಾಧ್ವರೂ ಆಚರಿಸುವಂತಾಗ ಬೇಕು ಎಂದು ಅವರು ಬಯಸಿದ್ದರು. ಅದಕ್ಕಾಗಿ ಕೊನೆಯ ತನಕವೂ ಪರಿಶ್ರಮಿಸಿದರು. ಅವರ ಎತ್ತರಕ್ಕೇರುವುದು ಉಳಿದವರಿಗಾಗಲೇ ಇಲ್ಲ. ಆ ನೋವಿನಲ್ಲೆ ಅವರು ದೇಹತ್ಯಾಗ ಮಾಡಿದರು.

ಇಂಥ ಒಬ್ಬ ಮಹಾಪುರುಷನ. ಭಗವದ್ವಿಭೂತಿಯಾಗಿ ಬಂದ ಅಸಾಮಾನ್ಯವ್ಯಕ್ತಿಯ ಜೀವನಗಾಥೆಯ ಒಂದು ಪುಟ್ಟ ಸಂಗ್ರಹವನ್ನು ಮಾಡ ಹೊರಟಿರುವ ಕೊರ್ಲಹಳ್ಳಿ ವೆಂಕಟೇಶಾಚಾರ್ಯರ ಪ್ರಯತ್ನ ನನಗೆ ತುಂಬ ಸಂತಸವನ್ನು ತಂದಿದೆ. ನಾವೆಲ್ಲ ಸೇರಿ ಮಾಡ ಬೇಕಾಗಿದ್ದ ಈ ಪುಣ್ಯಕಾರ್ಯವನ್ನು ಆತ ಏಕಾಂಗಿಯಾಗಿ ಮಾಡಿದ್ದಾನೆ. ಆತನ ಮೇಲೆ ಗುರುಗಳ ಹರಕೆಯಿರಲಿ.

ಗುರುಗಳ ಬಗೆಗೆ ಹೇಳಬೇಕಾದ ನೂರು ಮಾತುಗಳು ನನ್ನ ಬಳಿ ಇದೆ. ಎಷ್ಟು ಹೇಳಿದರೂ ಹೇಳದ್ದು ಉಳಿದೇ ಬಿಡುತ್ತದೆ. ಅದೇ ದೊಡ್ಡವರ ಲಕ್ಷಣವಲ್ಲವೆ? ಅಂಥ ಗುರುಚೇತನಕ್ಕೆ ನಮೋ ಎಂದು ಮಣಿದು ಈ ಮಾತಿನ ಮಲ್ಲಿಗೆಯನ್ನು ಅವರ ಅಡಿಗೆ ಅರ್ಪಿಸುತಿದ್ದೇನೆ. ★

# ಸೊದೆಯ ಸವಿಯುವ ಮುನ್ನ

**ಕೊರ್ಲಹಳ್ಳಿ ವೇಂಕಟೇಶಾಚಾರ್ಯ**

'ಅಮೃತ'

ಅಂದರೆ ಭಗವಂತ.

ಆತನೇ ಆ ಪದದ ನಿಜವಾದ ಅರ್ಥ.

ಅಮೃತವನ್ನು ಪಾಲ್ಗಡಲಿಂದ ಮೇಲಕ್ಕೆ ತಂದವನಾದ್ದರಿಂದ ಆತ 'ಅಮೃತ'.

'ಅಂ' ಎನಿಸುವ ವೇದವ್ಯಾಸರೂಪದಿಂದ ತನ್ನನ್ನು ಚೆನ್ನಾಗಿ ತಿಳಿಯಲ್ಪಟ್ಟವನಾದ್ದರಿಂದ ಅವನು 'ಅಮೃತ'.

ಅಪರಿಮಿತಶಾಸ್ತ್ರಗಳಿಗೆ ವಿಷಯನಾದ್ದರಿಂದ 'ಅಮೃತ'

ಮರಣವಿರದ ಮುಕುತಿಗೆ ಅಧಿಪತಿಯಾದ್ದರಿಂದ ಅಮೃತ'.

ಮುಕ್ತಾತ್ಮರನ್ನು ಅಮೃತರನ್ನಾಗಿಸುವವನಾದ್ದರಿಂದ 'ಅಮೃತ'.

ಅವನು ಹಿಂದೆಂದೂ ಮರಣಕ್ಕೊಳಗಾಗದವನು. ಮುಂದೆಯೂ, ಎಂದೆಂದಿಗೂ ಕೂಡ. 'ನ ಮರಿಷ್ಯತೀತಿ ಹ್ಯಮರೋ, ನ ಮೃತೋ ಯತ್ ತತೋಽಮೃತಃ'

ಬೃಹದಾರಣ್ಯಕ ಉಪನಿಷತ್ತು.

ಆದ್ದರಿಂದ ಆತ ಅಮರ, 'ಅಮೃತ'.

ಜನನವಿರದವಗೆ ಮರಣವೆಲ್ಲಿಂದ?

ಅನಾದಿಕಾಲದಿಂದ ಅನಂತ ಕಾಲದವರೆಗೂ ಇರುವವನಾತ.

ಅವನ ಅನಾದಿ ಸಂಬಂಧದಿಂದ ಸಿರಿದೇವಿಯೂ ಅಜರಳು, ಅಮರಳು, ಅಮೃತಳು.

'ಹರೇಃ ಪ್ರಸಾದಸಾಮರ್ಥ್ಯಾದಜರಾ ಚಾಮರಾಹ್ಯಹಮ್ ।
ಅನಾದಿಕಾಲ ಸಂಬಂಧಾದಿತ್ಯುವಾಚ ಪರಾ ರಮಾ ॥'

ಶ್ರೀಮದಾಚಾರ್ಯರ ಛಾಂದೋಗ್ಯೋಪನಿಷದ್ಭಾಷ್ಯ

ಸಿರಿಹರಿಯರ ಕುವರರಾದ, ಜಗದ ಜೀವರ ಉಸಿರಾಟದ ಮೂಗುದಾರವನ್ನು ಪಿಡಿದ ವಾಯುದೇವರೂ ಅಮೃತರು.

ಯಾವ ಜೀವನೂ ಇರದ ಪ್ರಳಯದಲ್ಲೂ ಪರಾವರತತ್ವಗಳ ಅಳಿಯದ ಅರಿವುಳ್ಳವರು.

'ಅತಿರೋಹಿತವಿಜ್ಞಾನಾದ್ ವಾಯುರಪ್ಯಮೃತಃ ಸ್ಮೃತಃ'
ರಾಮಸಂಹಿತೆ.

ಜೀವೋತ್ತಮನೆನಿಸಿದ ವಾಯುದೇವನೇ 'ಅಮೃತ' ನೆಂದೆನಿಸಿದ ಮೇಲೆ ಆತನಿಗೆ ಆಶ್ರಯದಾತನಾದ ಸರ್ವೋತ್ತಮನಾದ ಶ್ರೀಹರಿಯು ಅಮೃತನೆಂದು ಬೇರೆ ಹೇಳಬೇಕೆ?

'ತದಾಶ್ರಯೋಽಪ್ಯಮೃತೋ ವಾಯುಃ ಕಿಮು ಸಾಕ್ಷಾತ್ ಹರಿಃ ಸ್ವಯಮ್' ಬೃಹದಾರಣ್ಯಕ ಉಪನಿಷತ್

ಮುಕುತಿಯನ್ನು ಪಡೆದ ಬಳಿಕ ಉತ್ತಮಜೀವರೂ 'ಅಮೃತ' ರಾಗುವರು.

'ಅಥ ಮರ್ತ್ಯೋಽಮೃತೋ ಭವತಿ' ಎಂದು ಬಣ್ಣಿಸಿತು ಬೃಹದಾರಣ್ಯಕ ಉಪನಿಷತ್ತು.

ಅದೂ ಭಗವಂತನ ಪ್ರಸಾದದಿಂದಲೇ.

'ಅನ್ಯೇಷಾಂ ಅಮೃತತ್ವಂ ತು ಭವೇದ್ ವಿಷ್ಣೋಃ ಪ್ರಸಾದತಃ'
ನಾರದೀಯ.

ಮರ್ತ್ಯರು ಅಮೃತರೆನಿಸಲು ನಿಜವಾದ 'ಅಮೃತ'ನನ್ನು ಒಲಿಸಬೇಕು.

ಒಲಿಸಲು ಮತ್ತೊಂದು ಅಮೃತ ಬೇಕು.

ಅದು ಆ ಅಮೃತಪುರುಷನ 'ನಾಮಾಮೃತ'

ಆ ಅಮೃತದ ಮಹಿಮೆ ಅಪಾರ.

ಅದನ್ನು ಸವಿದ ಪಾಪಿ ಪುಣ್ಯಾತ್ಮನಾದ.

''ಶ್ರೀಮುಕುಂದನ ನಾಮ ಪರಮ
ಮಂಗಳ ನಾಮ ನರಕಸ್ಥರನು ಸಲುಹಿತು
ಪಾಮರರ ಪಂಡಿತರೆನಿಸಿ ಪುರುಷಾರ್ಥಕೊಡುತಿಹುದು''

ಹರಿಕಥಾಮೃತಸಾರ ಶ್ರೀಜಗನ್ನಾಥದಾಸರು.

ಅಜಾಮಿಳಾದಿಯಾಗಿ ಎಷ್ಟು ದೃಷ್ಟಾಂತ ಬೇಕು? ಇದಕೆ.

ನಾಮಾಮೃತದ ಸವಿಯಿಂದ ಪಾಮರ ಪಂಡಿತನಾದ. ಸಂಸಾರದ ಸಂಕೋಲೆಯನ್ನು ಕಳೆದು ಮುಕ್ತನಾದ. 'ಯನ್ನಾಮಾಮೃತಪಾನೇನ ಕಿರಾತೋಽಪ್ಯ ಭವನ್ಮಹಾನ್' ಭಗವನ್ನಾಮಾಮೃತಪಾನದಿಂದ ಜಗತ್ತಿಗೆ ಬೇಡವಾಗಿದ್ದ ಬೇಡನೂ ಬೇಕೇ ಬೇಕಾದ ಹಿರಿಯ ಕವಿಯಾದ.

ಆ ಉತ್ತಮ ಕವಿ 'ವಾಲ್ಮೀಕಿಮುನಿಗಳು'

ನಾಮಾಮೃತವ ಸವಿಯಲಾರಂಭಿಸಿದವನಿಗೆ ಮತ್ತಾವುದೂ ಬೇಕೆನಿಸುವುದಿಲ್ಲ.

ಅವನು ಭೌತಿಕ ಪ್ರಪಂಚದಲ್ಲಿ ಏನೆಲ್ಲ ಸುಖಸಾಧನ ವಿದೆಯೋ, ಅದೆಲ್ಲದರ ಸುಖವನ್ನು ನಾಮಾಮೃತದಲ್ಲೇ ಕಾಣುವನು.ಅದಕ್ಕೆ,

'ನಿನ್ನ ನಾಮ ಹೋಳಿಗೆ ಶ್ರೀನಿವಾಸ'

'ನಿನ್ನ ನಾಮವೇ ಎನಗೆ ಅಮೃತಾನ್ನವು' ಎಂದು ನಾಮಾಮೃತವನ್ನು ಬಣ್ಣಿಸಿದರು ಹರಿದಾಸರು.

ದಿನವಿಡೀ ಆ ನಾಮಾಮೃತವನ್ನೇ ಸವಿಯುವುದೇ ಸಾಧಕರ ಸ್ವಭಾವ.

ಅದಿಲ್ಲದೇ ಅವರ ಬದುಕಿಲ್ಲ.

ಅವರ ದೃಷ್ಟಿಯಲ್ಲಿ ಅದಿಲ್ಲದ ದಿನ ದಿನವಲ್ಲ. ಬದುಕು ಬದುಕಲ್ಲ.

'ಯದ್ದಿನಂ ಹರಿಸಲ್ಲಾಪಕಥಾಪೀಯೂಷವರ್ಜಿತಮ್ ' ತದ್ದಿನಂ ದುರ್ದಿನಂ ಮನ್ಯೇ....' ಹೀಗೆ ಕ್ಷಣಬಿಡದೆ ನಾಮಾಮೃತದಿಂದ ಭಗವಂತನನ್ನು ಒಲಿಸುವರು. ಅವನು ತನ್ನ ತಾವರೆಯರಳುಗಣ್ಣುಗಳಿಂದ ತನ್ನ ಭಕ್ತರನ್ನು ಪ್ರೀತಿಯಿಂದ ತನ್ನವರನ್ನಾಗಿ ನೋಡುವನು. 'ಅಮೃತ'ರನ್ನಾಗಿ ಮಾಡುವನು.

ಅಂಥವನನ್ನು ಮರೆತು ಮೃತ್ಯುವಿನಕಡೆಗೆ ಸಾಗಿದೆ, ಮರ್ತ್ಯರಾದ ನಮ್ಮ ಪಯಣ.

ವಂಚಿಸುವ ಜನರಿಗಾಗಿ ನಮ್ಮ ಜೀವನ. ದಾಕ್ಷಿಣ್ಯದ ಜೀವನ.

ಆದರೆ ಹೇಗೆ ಜೀವಿಸಿದರೂ ಈ ಜನಗಳ ಹೀಯಾಳಿಕೆ ಮಾತ್ರ ತಪ್ಪದು.

'ಮಾಡಿ ಉಂಡರೆ ಸಹಿಸರು. ಬೇಡಿ ಉಂಡರೆ ಹೇಡಿಯೆಂಬುವರು' ಎಂಬ ಹರಿದಾಸರು ಅಂದಂತೆ.

ಜನರಿಗಾಗಿ ಬದುಕಿದರೆ ಗುರಿ ಮುಟ್ಟಲಾಗದು.

ಗುರಿಯಿಲ್ಲದವನ ಬದುಕು ಗೋರಿಯಲ್ಲಿ ಪೂರ್ಣವಾಗುವುದು.

ಹೀಗಾಗಿ ಹೊರಗಿನ ಬಣ್ಣಾಟದ ಬೆಡಗಿನ ಬಡಾಯಿ ಜನರಿಗಿಂತ ಅಖಿಲಾಂಡಕೋಟಿ ಬ್ರಹ್ಮಾಂಡದೊಡೆಯನನ್ನು ಹಾಡುವುದೇ ಲೇಸು.

ಹರಿಯನ್ನೇ ನೆರೆ ನಂಬಬೇಕು.

ನಂಬಿದವರ ಕೈ ಬಿಡುವವನು ಅವನಲ್ಲ.

ದಿನ, ತಿಂಗಳು, ವರ್ಷಗಳೆಷ್ಟು ಕಳೆದರೂ ಸರಿ. ಚಿರಕಾಲ ತನ್ನನ್ನು ಕಾದು ನೆನೆದವರನ್ನು ಚಿರಂಜೀವಿಯಾಗಿಸುವನು. ಅಲ್ಲದೇ, ತನ್ನನ್ನು ಹಾಡಿಹೊಗಳಿದವರನ್ನು ಶತಮಾನಗಳ ತನಕ ಹಾಡಿ ಹೊಗಳಿಸುವವನು.

ತನಗೆ ತಲೆ ಬಾಗಿದವರಿಗೆ ತಲೆಮಾರುಗಳು ಉರುಳಿದರೂ ಜಗತ್ತೇ ತಲೆ ಬಾಗುವಂತೆ ಮಾಡುವವನು.

ಅಮೃತರನ್ನಾಗಿಸುವವನು.

ಅವನಿಗೆ ತಲೆಬಾಗಿ, ಜಗತ್ತಿನಲ್ಲಿ ಮೆರೆದ ಮಹಿತಾತ್ಮರು ಅನೇಕರು. ಅವರು ಅಮೃತರು. ಅವರ ಪಂಕ್ತಿಯಲ್ಲಿರುವವರು ನಮ್ಮ ಪೂಜ್ಯ ಗುರುಗಳು.

ಉಡುಪಿ ಶ್ರೀಪಲಿಮಾರು ಹಾಗೂ ಶ್ರೀಭಂಡಾರಕೇರಿ ಉಭಯಮಠಾಧೀಶರಾದ ಪ್ರಾತಃ ಸ್ಮರಣೀಯ ಶ್ರೀಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು.

ಅವರೂ ಅಮೃತರು.

ಅವರನ್ನು ನಂಬಿ ಬದುಕುಳಿದವರು ಬೆಳೆದವರು ಎಣೆಯಿಲ್ಲದಷ್ಟು. ಹೌದು. ಎಲ್ಲರ ಬಾಳಿನ ಒಳಿತಿಗಾಗಿ, ಏಳಿಗೆಗಾಗಿ ಬೇಕಿತ್ತು ಅವರ ನಿಷ್ಕಪಟ ನಂಟು.

ಅವರನ್ನು ನೋಡಿದವ ದುಗುಡದಿಂದ ಪಾರಾದ. ಬದುಕಿದ.

ಅವರನ್ನು ನಂಬಿದವ ಸಾಧಕನಾದ.

ಅವರನ್ನು ಮನಸಾರೆ ದ್ವೇಷಿಸುವವ ತನಗರಿವಿರದಂತೆಯೇ ಇಲ್ಲವಾದ.

ಹಾಗೆಂದು, ಅವರು ಸ್ವಾರ್ಥಕ್ಕಾಗಿ ಜನರನ್ನು ವಂಚಿಸುವ

ಹಿಂಸಿಸುವ ಶಕ್ತಿಯನ್ನು ತೋರುವ ನೀಚ ಜನರಂತಿದ್ದವರಲ್ಲ.

ಸಾತ್ವಿಕರೀತಿಯಿಂದ ಬದುಕಿದವರು.

ಅವರ ತ್ರಿಕರಣಗಳು ಪರಿಶುದ್ಧ. ಆದ್ದರಿಂದ ಅವರು ವಿಷವಿರದ ಅಮೃತ.

ಅವರ ಬುದ್ಧಿ ನಿತ್ಯಶುದ್ಧ.

ಕಾರಣ, ಎಡೆಬಿಡದೆ, ಶುದ್ಧನಾದ ಭಗವಂತನನ್ನು ಹಾಗೂ ಅವನ ಪಾರಮ್ಯವನ್ನು ಸಾರುವ ಗ್ರಂಥಸಾಗರದಲ್ಲಿಯೇ ಲೋಲಾಡಿದವರು.

ಅಂತ್ಯದವರೆಗೂ ಅವನ ಇರವನ್ನು, ಹಿರಿಮೆಯನ್ನು ಅನುಸಂಧಾನಿಸಿದವರು. ಧರ್ಮರಕ್ಷಣೆಗಾಗಿ ಸದಾ ದೀಕ್ಷಾಬದ್ಧರಾದವರು.

ಅವರ ಮಾತು ಸತ್ಯಕ್ಕೆ ತವರು.

ವ್ಯಾಸಸಾಹಿತ್ಯ-ದಾಸಸಾಹಿತ್ಯಗಳಲ್ಲಿ ಅದ್ಭುತ ಕ್ರಾಂತಿಯನ್ನು ಮಾಡಿ ಭಾರತೀಶನನ್ನು ಅವನೀಶನನ್ನು ಕುಣಿಸಿ ತಣಿಸಿದ ದಿವ್ಯ ವಾಗ್ಗಂಗೆಯ ರಂಗವೇದಿಗೆ, ಅವರ ನಾಲಿಗೆ.

ಕಂಚಿನ ಕಂಠದ, ಮಿಂಚಿನ ಮಾತಿನ ಪ್ರವಚನ, ತಡೆಯಿರದ ಪಾಠ, ಸುಂದರವಾದ ವಾದ, ಶ್ರುತ್ಯರ್ಥದ ವಾಕ್ಯಾರ್ಥಕ್ಕಾಗಿಯೇ ಮೀಸಲಾಗಿದ್ದ ನಾಲಿಗೆ. ಹಾಳು ಹರಟೆ ಗೊತ್ತೇ ಇರಲಿಲ್ಲ. ಅದಕೆ.

ಅದ್ವೈತ ವೇದಾಂತದ ಸುಭದ್ರಕೋಟೆಯಂತಿರುವ ಶೃಂಗೇರಿ, ಕಾಶೀ, ಕಂಚಿ ಮೊದಲಾದ ಕ್ಷೇತ್ರಗಳಿಗೆ ತಾತ್ವಿಕ ವಾಗಿ ಲಗ್ಗೆ ಹಾಕಿ ದ್ವೈತ ವಿಜಯ ಕಹಳೆಯನ್ನೂದಿದ ನಾಲಿಗೆ.

ಬಾಲ್ಯದಲ್ಲಿ ಶ್ರೀಮಧ್ವವಿಜಯದ ಪ್ರತಿಯೊಂದು ಶ್ಲೋಕವನ್ನು ಪದಚ್ಛೇದ ಅರ್ಥಸಹಿತವಾಗಿ ಇನ್ನೂರಿನ್ನೂರು ಬಾರಿ ಕಂಠಪಾಠ ಮಾಡಿ ಆ ಗ್ರಂಥದ ಅಮೃತವನ್ನು ಹೀರಿದ ನಾಲಿಗೆ. ಸರ್ವಮೂಲಗ್ರಂಥಗಳ ಪ್ರವಚನ ಮಾಡಿದ ನಾಲಿಗೆ.

ಮನೆ ಮನೆಗಳಲ್ಲಿ ಸದಾಚಾರ, ಸಂಧ್ಯಾವಂದನೆ, ಏಕಾದಶೀ ಏಕಾಚರಣೆ, ಶಾಸ್ತ್ರಾಧ್ಯಯನಾದಿಗಳಲ್ಲಿ ಸಜ್ಜನರನ್ನು ಪ್ರೇರೆಪಿಸಿದ ಕೀರ್ತಿ ಅವರ ನಾಲಿಗೆಗೆ.

ಅವರ ಕಾಯ ಪಾವಿತ್ರ್ಯದ ನಿಲಯ.

ಅವರ ಶಿರ ಪುರುಷೋತ್ತಮನಿಗೇ- ಅವನ ದಾಸರಿಗೇ ಬಾಗಿದ ಶಿರ.

ಅವರ ಅರಳುದಾವರೆಯ ಕಂಗಳು ಶ್ರೀಕಾಂತನನ್ನು ಕಂಡ ಸಾಧಕರ ಶಕ್ತಿಯನ್ನು ತೋರುವ ಜ್ಯೋತಿಗಳು.

ಭಗವದ್ಭಕ್ತರ ಪಾಪ-ತಾಪಗಳನ್ನು ಸುಡುವ ಕಿಡಿಗಳನ್ನು ಸಿಡಿಸುವ ಜ್ವಾಲೆಗಳು.

ಅವರ ಹಣೆ, ಸದ್ವೈಷ್ಣವ ಚಿಹ್ನೆಯ ಮಣೆ.

ಅವರ ನಾಸಿಕ, ಹರಿನಿರ್ಮಾಲ್ಯವನ್ನು ಆಘ್ರಾಣಿಸುತಲೇ ಸಾರ್ಥಕ. ಬಾಲ್ಯದಿಂದ ಅಂತ್ಯದ ವರೆಗೂ ಗಾಯತ್ರೀ, ಕೃಷ್ಣಮಂತ್ರ, ಪ್ರಣವಾದಿ ಮಂತ್ರಜಪಗಳಿಂದ, ಶಾಸ್ತ್ರಪಾಠಗಳಿಂದ ಕೊನೆಯ 'ರಾಮ ರಾಮ' ಎಂದು ಪಿಟುಕಿಸಿ ನಿಂತು ಸಾರ್ಥಕವಾಗಿತ್ತು ಅವರ ತುಟಿ.

ಹರಿನಿರ್ಮಾಲ್ಯ ತುಳಸೀಮಾಲೆ ಶೇಷವಸ್ತ್ರಗಳನ್ನೇ ಧರಿಸಿತ್ತು ಅವರ ಸುಂದರ ಕಂಧರ.

ಹರಿಪ್ರಸಾದವನ್ನು ಹೊರತು ಬೇರಾವ ಆಹಾರವನ್ನು ಸ್ವೀಕರಿಸದಾಗಿತ್ತು ಅವರ ಉದರ.

ಪಯೋವ್ರತ,ಕಾಷ್ಠಮೌನವ್ರತಾದಿ ಅತಿಕಠಿಣ ತಪಶ್ಚರ್ಯೆಗಳಿಗೆ ಮೀಸಲಾಗಿತ್ತು ಅವರ ಕಟಿ.

ಅವರ ಹಸ್ತ, ಸುಖತೀರ್ಥರ ಗ್ರಂಥಲೇಖನಕ್ಕಾಗಿ, ಸುಖತೀರ್ಥಕರಾರ್ಚಿತ ರಾಮ-ಕೃಷ್ಣರ ಪೂಜೆಗಾಗಿಯೇ ಸೀಮಿತ.

ವಿದ್ವಾಂಸರಿಗೆ-ವಿದ್ಯಾರ್ಥಿಗಳಿಗೆ ಕುಬೇರ ನಿಕೇತ.

ದೀನ-ದಲಿತರಿಗೆ ಅಭಯಹಸ್ತ.

ಅವರ ಪಾದ, ಆ ಸೇತುಹಿಮಾಚಲ ತೀರ್ಥಕ್ಷೇತ್ರಗಳ ಸಂದರ್ಶನಕ್ಕಾಗಿ, ವಿಶೇಷವಾಗಿ ಪರಮತ ನಿರಾಕರಣ-ವೈಷ್ಣವಸಿದ್ಧಾಂತಸಮರ್ಥನೆಗಾಗಿ ಸಂಚರಿಸಲು ಸದಾ ಸಿದ್ಧ.

ಸಾಮಾನ್ಯ ಮಾನವರಲ್ಲದ, ಪದುಮನಾಭನ ಭಕ್ತರಾದ ಸುಮನಸರ ವ್ಯಕ್ತಿತ್ವವನ್ನು ಸೂಚಿಸುವ ಪದುಮರೇಖೆಯನ್ನು ಹೊಂದಿದ ಪಾದ.

ಹೀಗೆ ಪ್ರತಿಯೊಂದು ಹೆಜ್ಜೆಯಲ್ಲೂ 'ಅಮೃತವಪು'ವೆನಿಸಿದ ಭಗವಂತನನ್ನು ನೆನೆದು, ಪೂಜಿಸಿ, ಪವಿತ್ರವಾಗಿ ಜೀವನವನ್ನು ನಡೆಸಿದವರು. ಅವರು ಅಮೃತರು.

ಅಂತೆಯೇ, ಅಮೃತರಾದ ಅವತಾರತ್ರಯೋಪೇತರಾದ ವಾಯುದೇವರ ನಿತ್ಯಸನ್ನಿಧಾನಪಾತ್ರರು ಶ್ರೀವಿದ್ಯಾ ಮಾನ್ಯತೀರ್ಥರು. ಅದರಿಂದಲೂ ಅವರು 'ಅಮೃತರು'

ಭಗವಂತನ ಭಕ್ತಿಯನ್ನಲ್ಲದೇ ಬೇರಾವುದನ್ನೂ ಬಯಸದೆ ವಿರಕ್ತಿಯಿಂದ ಬದುಕಿದ, ಅವರ ಆ ಸ್ವಭಾವಕ್ಕೆ ಅವರಲ್ಲಿ ಆಂಜನೇಯ ಸನ್ನಿಧಾನವೇ ಕಾರಣ.

ವೈಷ್ಣವದೀಕ್ಷೆ, ಕೋಟಿ ಬೆಲೆ ಬಾಳುವ ಸ್ವರ್ಣತೊಟ್ಟಿಲು, ಹೊನ್ನ ತೇರು , ವಜ್ರಕಿರೀಟಗಳನ್ನು ಅರ್ಪಿಸಿದ ಶ್ರೀಕೃಷ್ಣಭಕ್ತಿ, ಆ ಸಾತ್ವಿಕ ಧೈರ್ಯ, ಕಾರ್ಯಗಳಿಗೆ ಕಾರಣ, ಭೀಮಸೇನ ಸನ್ನಿಧಾನ.

ಹಂಸನಾಮಕ ಭಗವಂತನ ಪರಂಪರೆಯಲ್ಲಿ ಬಂದು ಪರಮಹಂಸಕೂಟದಲ್ಲಿ ಉನ್ನತ ಆಚಾರ್ಯ ಸ್ಥಾನವನ್ನು ಪಡೆದು ಪರಿಶುದ್ಧ ಸಂನ್ಯಾಸಜೀವನವನ್ನು ನಡೆಸಿ ಪಾಠಪ್ರವಚನ, ಪರಮತನಿರಾಕರಣ ಸಿದ್ಧಾಂತಸಮರ್ಥನ, ಸರ್ವಮೂಲ ಗ್ರಂಥಪ್ರಕಾಶನ, ಆಚಾರ್ಯರಂತೆ ಕಾಷ್ಠಮೌನವ್ರತಾ ಚರಣೆ, ಪಾರಂತೀ ದೇವಸ್ಥಾನದ ಪೂಜೆಯ ವ್ಯವಸ್ಥಾಪನೆ, ವ್ಯಾಖ್ಯಾನ ಗ್ರಂಥರಚನಾದಿ ಕಾರ್ಯಗಳಿಂದ ಅವರಲ್ಲಿ ಶ್ರೀಮದಾಚಾರ್ಯರ ಪೂರ್ಣಸನ್ನಿಧಾನವಿದೆ ಎಂಬುದನ್ನು ಪ್ರತ್ಯೇಕ ಹೇಳಬೇಕಿಲ್ಲ.

ಈ ರೀತಿ ಅವರು ಅಮೃತರು.

ಎಂದಿಗೂ ಇಲ್ಲವಾಗದವರು.

ಭೌತಿಕವಾಗಿ ನಮ್ಮೆದುರು ಅವರು ಇಲ್ಲವಾದರೂ, ಕಾಣದಂತೆ ನಮ್ಮೊಂದಿಗಿದ್ದು ಪೊರೆಯುವವರು.

ರಾಮಾಯಣದ ಯುದ್ಧದಲ್ಲಿ ನಾವು ನೋವುಗಳನ್ನು ಅನುಭವಿಸಿದ ಕಪಿಗಳನ್ನು ಮತ್ತೆ ಬದುಕಿಸಿ ಸಾಂತ್ವನ ಮಾಡಿದ ಸಂಜೀವರಾಯನ ಸನ್ನಿಧಾನ ಪಾತ್ರರಾದ ಅವರು, ವೈಜ್ಞಾನಿಕ,ಯಾಂತ್ರಿಕಜೀವನದ ಜಂಜಾಟದಲ್ಲಿ

ಬೆಂದು ನೊಂದ ಜನಗಳನ್ನು ಸಾಂತ್ವನಪಡಿಸಿದ, ಪಡಿಸುವ ಸಂಜೀವಿನಿಮಣಿ ಅವರು.

ಇಂದಿರಾರಮಣನನ್ನು ನಂಬಿದವರಿಗೆ, ಆನಂದತೀರ್ಥರ ಶಾಸ್ತ್ರವನ್ನು ಅವಲಂಬಿಸಿದವರಿಗೆ ಕುಂದು ಕೊರತೆಗಳನ್ನು ನೀಗಿ ಆನಂದವನ್ನೀವವರು.

ಅವರು ಕೇವಲ ಒಂದು ವ್ಯಕ್ತಿಯಲ್ಲ. ಅಸಾಧಾರಣವಾದ ಅಲೌಕಿಕ ಶಕ್ತಿ, ಅವರಂತೆ ಅವರ ಚರಿತ್ರೆಯೂ ನಮ್ಮನ್ನೆಲ್ಲ ಪವಿತ್ರೀಕರಿಸುವ ಮಹಾತೀರ್ಥ. ಅದೊಂದು ಅಮೃತ.

ಅವರ ಸನ್ನಿಧಿಯಲ್ಲಿ ಹತ್ತುವರುಷಗಳ ಕಾಲವಿದ್ದು ಉಪದೇಶ ಪಡೆದು, ಆಚಾರ್ಯರ ಗ್ರಂಥಾಧ್ಯಯನ ಕಿಂಚಿತ್ತಾದರೂ ನಡೆಯಿತೆಂಬ ಧನ್ಯತೆ ನನ್ನಲ್ಲಿದೆ. ಆನಂದ ತುಂಬಿದೆ. ಆದರೆ ಇನ್ನುಂದೆ.... ಎಂಬ ಖೇದವೂ ಜೊತೆಗಿದೆ.

ಆ ಮಹಾಗುರುಗಳ ಮಾಹಿತಿಯನ್ನು ಅರಿಯಲು ಅವರ ಸನಿಹಸಾಗಿದರೆ ಅದು ಅಗಾಧ. ಅದನ್ನು ಪೂರ್ಣವಾಗಿ ಬರೆಯುವುದು ಅಸಾಧ್ಯ, ಆದರೂ ಇಲ್ಲಿ ಬರೆದಿರುವುದು ಅತ್ಯಲ್ಪ ಅಷ್ಟೇ ಅಲ್ಲ.

ಅದನ್ನು ಬರೆಯುವ ಉತ್ತಮ ಅಧಿಕಾರಿಯೂ ನಾನಲ್ಲ.

ಕಾರಣ, ಆ ಮಹಾಚೇತನದ ಅಂತರಂಗ ಶುದ್ಧಿ, ತಲಸ್ಪರ್ಶಿ ವಿದ್ವತ್ತಿನಿಂದ ಕೂಡಿದ ನಿಶಿತ ಬುದ್ಧಿಗಳನ್ನು ಅವಲೋಕಿಸುವ, ಗ್ರಹಿಸುವ ಯೋಗ್ಯತೆ ನನ್ನದಲ್ಲ.

ಅಂತೆಯೇ ಅವರ ತಪೋಮಯ ಜೀವನದ ಗರಿಮೆ-ಹಿರಿಮೆಗಳನ್ನು ಸರ್ವಜನ ಮನೋವೇದ್ಯವಾಗುವಂತೆ ಹೃದ್ಯವಾಗಿ ಬಿತ್ತರಿಸುವ ಸಾಹಿತಿಯೂ ನಾನಲ್ಲ.

ಆದರೆ ಇದೊಂದು ಮಾತ್ರ ನಿಜ. ನಾನು. ದೂರದಿಂದಲೇ ದೂರ್ವಾಂಕುರವನ್ನು ಅವರ ಅಡಿದಾವರೆಗಳಲ್ಲಿ ಅರ್ಪಿಸುವ ಓರ್ವ ಪುಟ್ಟ ಶಿಷ್ಯ ಹಾಗೂ ಭಕ್ತ.

ಇದು ನನ್ನ ಬಾಳಿನ ಬೆಳಕಾದ, ಕುಲೋದ್ಧಾರಕ, ಸ್ವರೂಪೋದ್ಧಾರಕ ಪರಮಪೂಜ್ಯ ಗುರುಗಳ ಪಾದಪದ್ಮಗಳಲ್ಲಿ ಅರ್ಪಿಸುವ ಒಂದು ಕುಸುಮ ★

# ಮಹಾಫಲಪ್ರಾಪ್ತಿ

'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ' ಎಂದೊಂದು ಪುರಾಣದ ಮಾತು. ''ಭಗವಂತನೊಲಿದರೆ ಜಗದೊಳಗೆ ಯಾವುದು ಅಲಭ್ಯ? ಎಲ್ಲವೂ ಲಭ್ಯ'' ಎಂದು ಸಾರುತಿದೆ ಆ ಮಾತು. ಜಗತ್ತಿನೊಳಗೆ ಅತ್ಯಂತ ದುರ್ಲಭವಾದ ವಸ್ತು ಎಂದರೆ ಭಗವಂತನ ಒಲವು. ಅದನ್ನೇ ಪಡೆದ ಪರಮ ಪುಣ್ಯಾತ್ಮರಿಗೆ, ಪ್ರಪಂಚದ ಯಾವ ವಸ್ತುಗಳೂ ದುರ್ಲಭವೆಂದು ಕಾಣವು. ಏಕೆಂದರೆ ಸಕಲಪುರುಷಾರ್ಥ ಗಳೆಲ್ಲವೂ ಭಗವದನುಗ್ರಹದ ಹಿಂದೆ ಎಂಬುದೇ ಅವರ ಅಂತರಂಗದ ನಿಲುವು.

ಇದು ಕೇವಲ ಹೊಗಳಿಕೆಯಾಗಿ ಉಳಿಯದ ಮಾತು. ಭಕ್ತರ ಅಂತರಾಳದಲ್ಲಿ ಅಚ್ಚಳಿಯದೇ ಉಳಿದ ಅನುಭೂತಿಯಾಗಿ ಸದಾ ಸುಳಿಯುವಂಥದು. ಈ ಮಾತಿಗೆ ಉದಾಹರಣೆಯಾಗಿ ಇತಿಹಾಸವು 'ದೇವರೊಲುಮೆಗೆ ಪಾತ್ರರಾದ ಮಹಾಭಕ್ತರ ಚರಿತ್ರೆಗಳ ಮಾಲೆಯನ್ನೇ ನೀಡಿತು. ನಾರದ, ಪ್ರಹ್ಲಾದ, ರುಗ್ಮಾಂಗದ, ಗಜೇಂದ್ರ, ಧ್ರುವ, ಅಂಬರೀಷ ಎಷ್ಟು ಸಾಕ್ಷಿಬೇಕು? ಭಗವಂತನ ಕೃಪೆಯ ಫಲವನ್ನು ತಿಳಿಯಲು ಈ ಮಹಾತ್ಮರೆಲ್ಲರ ಮಹಿಮೆಗಳ ಶ್ರವಣ - ಮನನಗಳನ್ನು ಮಾಡಿದರೆ ಸಾಕು. ಆದರೆ ಇದೂ ಪುರಾಣಿಕರ ಮಾತಲ್ಲಿಯೇ ಉಳಿಯಲಿಲ್ಲ. ಆಗೊಮ್ಮೆ, ಈಗೊಮ್ಮೆ ಆ ನುಡಿಯನ್ನು ನಂಬಿಸುವ ಘಟನೆಗಳು ನಡೆಯುತ್ತಿರುತ್ತವೆ. ಇಂದಿಗೂ ನಡೆಯುತ್ತಿವೆ. ಆದರೆ ಕಾಣುವ ಕಣ್ಣುಗಳ ಜೊತೆ ಅರ್ಥೈಸುವ ಪ್ರಜ್ಞೆಯೂ ಅಗತ್ಯವಾಗುತ್ತದೆ.

ಭಗವಂತನೊಲುಮೆಯನ್ನುಗಳಿಸಿದವರ ಸಾಲಿನಲ್ಲಿ ಸೇರಿದ ಸಾಧಕರು ಅಲ್ಲಲ್ಲಿ ಆಗಾಗ ಒಬ್ಬೊಬ್ಬರು ತೋರುವರು. ತೋರಿದರೂ ತಮ್ಮತನವನ್ನು ಮಾತ್ರ ಹೊರಗೆ ತೋರಗೊಡರು. ಅಂತಹವರನ್ನು ಅರಿತವರು ಕೆಲವೇ ಕೆಲವರು. ಅಂತಹವರನ್ನರಿಯದೆ ಅವರರಿಗಳಂತಿ ರುವವರು ಬಹಳ ಜನರು. ಆದರೂ ಅದನ್ನೆಲ್ಲ ಹಚ್ಚಿಕ್ಕೊಳ್ಳದೆ ನಿಸ್ಪೃಹ ರಾಗಿ ಭಗವಂತನನ್ನೇ ಧ್ಯಾನಿಸುವರು ಆ ಭಗವತ್ಪ್ರಸಾದ ಪಾತ್ರರು .ಆದ್ದರಿಂದಲೇ ಅವರು ಭಗವಂತನಿಗೆ ಬೇಕಾದವರು. ಮಹಾಭಾಗ್ಯಶಾಲಿ ಪುರುಷರು.

ಇಂತಹವರ ಚರಿತ್ರೆಯನ್ನು ತಿಳಿಯುವಾಗಲೇ ನಾವು ಕನಕದಾಸರಿಗೆ ಶ್ರೀಕೃಷ್ಣನೊಲಿದ ಕಥೆಯನ್ನು ಕೇಳಿದ್ದೇವೆ. ಭಕ್ತರ ನಿರ್ವ್ಯಾಜ ಭಕುತಿಗೆ ಭಗವಂತನೊಲಿಯುವ ಬಗೆ ಕನಕದಾಸರ ಸನ್ನಿವೇಶದಿಂದ ಜನರ ಮನದಲ್ಲಿ ಚೆನ್ನಾಗಿ ನೆಲೆಯೂರಿದೆ.

ಗುಡಿಯ ಹೊರಗಿನಿಂದಲೇ ಹಾಡುತ್ತಿರುವ ಕನಕದಾಸರ ಪಕ್ವವಾದ ಜ್ಞಾನ - ಪ್ರೀತಿಗಳ ಸವಿಗೆ ಉಡುಪಿ ಶ್ರೀಕೃಷ್ಣನು ವಶನಾದ. ತನ್ನೆದುರು ಅಡ್ಡವಾಗಿದ್ದ ಗುಡಿಯ ದೊಡ್ಡ ದಪ್ಪ ಗೋಡೆಯನ್ನು ಬಿರುಕುಗೊಳಿಸಿದ. ಕಿಂಡಿಯ ಮೂಲಕ ತನ್ನ ದರುಶನವನ್ನಿತ್ತ. ನಾಲ್ಕು ಶತಮಾನಗಳು ಕಳೆದರೂ ಆ ಘಟನೆ ಇಂದಿಗೂ ಭಾವುಕರ ಸ್ಮೃತಿಪಟಲದಲ್ಲಿ ಸುಳಿಯುತ್ತಿ ರುವುದು. ಇತಿಹಾಸದ ಪುಟಗಳಲ್ಲಿ ಅಚ್ಚಳಿಯದೇ ಉಳಿದಿರುವುದು. ಉಳಿಯುವುದೂ ಕೂಡ.

ಸುಮಾರು ನಾಕು ಶತಮಾನಗಳ ಹಿಂದೆ ಕನಕದಾಸರ ಕಾಲದಲ್ಲಿ ನಡೆದ ಪವಾಡದಂತೆ ಮತ್ತೊಂದು ಪವಾಡವು ಇಪ್ಪತ್ತನೆಯ ಶತಮಾನದಲ್ಲಿ ಮರುಕಳಿಸಿತು,

ಅಂದು ತನ್ನನ್ನು ಕಾಣದ ಕನಕದಾಸರ ಕಣ್ಣಿನ ಕಾತರಕ್ಕೆ ಕರಗಿ ಶ್ರೀಕೃಷ್ಣ ಕಾಣಿಸಿಕೊಂಡ. ಇಂದು ಮುಟ್ಟದ ಕೈಗಳ ಕೈಂಕರ್ಯಕ್ಕೆ ಮೆಚ್ಚಿ ಮುಟ್ಟಿಸಿಕೊಂಡ. ಆ ಕೈಯ ವ್ಯಕ್ತಿಯನ್ನು ತನ್ನ ಸನಿಹವಿಟ್ಟುಕೊಂಡ. ಆ ಭಗವಂತನ ಸನಿಹದ ಸುಖವನ್ನು ಸವಿಯುವ ಸೌಭಾಗ್ಯದ ಮಹಾಚೇತನ, ಶ್ರೀಭಂಡಾರಕೇರಿ ಹಾಗೂ ಶ್ರೀ ಪಲಿಮಾರು ಉಭಯ ಮಠಾಧೀಶ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು. ಅವರೇ ಆ ಭಗವತ್ಪ್ರಸಾದಕ್ಕೆ ಜನತೆಯ ಮುಂದಿರುವ ಜೀವಂತ ದೃಷ್ಟಾಂತ. ಇದರ ಹಿನ್ನೆಲೆಯಾಗಿರುವವನು, ಸಾಹಸಿ, ಹಾಗೂ ಮೇಧಾವಿಯಾದ ಮಾನವನ ಸಾಮರ್ಥ್ಯಕ್ಕೆ ಹಾಗೂ ಕಲ್ಪನೆಗೆ ನಿಲುಕದ ವಿಷಯವನ್ನು ಸಾಧಿಸುವ, ಅಘಟಿತ ಘಟನಾಶಕ್ತಿಯುಳ್ಳ ಭಗವಂತ.

ಹಾಗೆಂದು ನಾವು ಪ್ರವಚನಗಳಲ್ಲಿ, ಪುರಾಣಗಳಲ್ಲಿ ಹೇಳುವೆವು. ಕೇಳುವೆವು. ಆದರೆ ಅದು ಅನುಭವಕ್ಕೆ ಗೋಚರವಾಗದು' ಎಂದು ಕೆಲವರ ಭಾವನೆ. ಕೆಲವರ ಆಕ್ಷೇಪಣೆ.

ಇದಕ್ಕೆ ಭಗವಂತನೇ ಉತ್ತರ ನೀಡಬಯಸಿದ. ಪ್ರತಿಯೊಂದನ್ನೂ ಪ್ರಾಯೋಗಿಕವಾಗಿಯೇ ನೋಡುವ ಇಂದಿನ ವೈಜ್ಞಾನಿಕ ದಿನಗಳಲ್ಲಿ ಮಾನವರಿಗೆ ತನ್ನ ಶಕ್ತಿಯ ಮನವರಿಕೆ ಮಾಡಲು ತೊಡಗಿದ. ಆ ಅಘಟಿತ ಘಟನಾ ಶಕ್ತಿಯನ್ನು ಪ್ರಾಯೋಗಿಕವಾಗಿಯೇ ಪ್ರದರ್ಶಿಸಲು ಒಂದು ಪ್ರಯೋಗ ಶಾಲೆಯನ್ನು ಆರಿಸಿದ. ಆ ಪ್ರಯೋಗಶಾಲೆ ಉಡುಪಿ ಶ್ರೀಪಲಿಮಾರು ಮಠ.

ಅದೇನು ! ಹೌದು. ದೇಶವೇ ಕಂಡ ವಿಸ್ಮಯಕಾರಿ ಘಟನೆಯೊಂದು ಆ ಮಠದ ಇತಿಹಾಸದಲ್ಲಿ ನಡೆಯಿತು. ಅಷ್ಟೇ ಏಕೆ? ಉಡುಪಿಯ ಇತಿಹಾಸದಲ್ಲಿಯೇ ಅಪೂರ್ವ.

ಎಲ್ಲ ಮಠಗಳ ಮೂಲ ಪುರುಷರು ಶ್ರೀಮದಾಚಾರ್ಯರು. ಅವರ ಪೂರ್ವಾಶ್ರಮದ ಅನುಜರೂ ಅನಂತರದ ಪ್ರಿಯಶಿಷ್ಯರೂ ಎನಿಸಿದವರು ಶ್ರೀವಿಷ್ಣುತೀರ್ಥರು. ಅವರು ಶ್ರೀಸೋದೆಮಠದ ಪರಂಪರೆಯ ಮೊದಲ ಅಧಿಪತಿಗಳು. ಅಂತೆಯೇ ಶ್ರೀಸುಬ್ರಹ್ಮಣ್ಯ ಮಠದ ಅಧಿಪತಿಗಳೂ ಕೂಡ ಅಂದರೆ ಎರಡು ಮಠಗಳ ಅಧಿಪತಿಗಳಾಗಿ ಪ್ರಸಿದ್ಧರಾದವರು. ಅವರನಂತರದಲ್ಲಿ ಪ್ರಾಯಃ ಮಾಧ್ವ ಪೀಠಗಳ

ಪರಂಪರೆಯಲ್ಲಿ ಏಕಕಾಲದಲ್ಲಿ ಉಭಯ ಮಠಾಧಿಪತಿಗಳಾದ ಯತಿಗಳ ದಾಖಲೆಯಿಲ್ಲ. ಆದರೆ ಇಪ್ಪತ್ತನೆಯ ಶತಮಾನದ ಜನತೆ ಉಭಯ ಮಠಾಧಿಪತಿಗಳೊಬ್ಬರನ್ನು ಕಂಡಿತು. ಧನ್ಯವಾಯಿತು. ಒಂದೇ ಕಾಲದಲ್ಲಿ ಎರಡೂ ಮಠಗಳ ಅಧಿಪತಿಗಳೆಂದೆನಿಸಿ ಹೊಸ ಇತಿಹಾಸವನ್ನು ನಿರ್ಮಿಸಿದ ಯತೀಶ್ವರರು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು. ಅವರು ಸುಮಾರು ಮೂವತ್ತು ವರುಷಗಳ ಕಾಲ ಉಡುಪಿಯ ಶ್ರೀಪಲಿಮಾರು ಮಠ ಹಾಗೂ ಶ್ರೀಭಂಡಾರಕೇರಿ ಮಠಗಳೆರಡನ್ನೂ ಆಳಿದ ಮಹಿತಾತ್ಮರು.

ಶಾಸ್ತ್ರಪಾಠ-ಪ್ರವಚನಗಳೆಂಬ ಮಾನಸಿಕ ವಾಚಿಕ ಅಗ್ರಗಣ್ಯ ತಪಸ್ಸು, ಕಾಷ್ಠಮೌನವ್ರತಾದಿ ದೈಹಿಕ ಉಗ್ರತಮ ತಪಸ್ಸು, ಅಕ್ಷರಲಕ್ಷ ಸಕಲ ಮಂತ್ರಗಳ ಜಪದ ಸಿದ್ಧಿ, ಶುದ್ಧ ಸಂನ್ಯಾಸ ಜೀವನ, ನಿಷ್ಕಪಟ, ಮುಗ್ಧಸ್ವಭಾವ, ಅತಿಶಯಿತ ಜ್ಞಾನಪೂರ್ವಕ ಭಗವದ್ಭಕ್ತಿ, ಸರ್ವರಲ್ಲಿ ನಿರ್ವ್ಯಾಜ ಪ್ರೀತಿಗಳನ್ನೊಳಗೊಂಡ ಶ್ರೀಭಂಡಾರಕೇರಿ ಮಠಾಧೀಶ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರನ್ನು ಶ್ರೀಕೃಷ್ಣನು ತನ್ನವರನ್ನಾಗಿ ಕಂಡನು. ಕೈಕೊಂಡನು

ಕೈಕೊಂಡ ಬಗೆ ರೋಚಕ. ಅದಕ್ಕೊಂದು ಅವನ ನಾಟಕ.

ಶ್ರೀಕೃಷ್ಣನು, ತನ್ನನ್ನು ಹೊನ್ನ ತೇರಿನಲ್ಲಿ ಕುಳ್ಳಿರಿಸುವ ಸೇವೆಯನ್ನು ಶ್ರೀವಿದ್ಯಾಮಾನ್ಯತೀರ್ಥರಿಗೆ ನೀಡಲು ಬಯಸಿದ. ಆದರೆ ಅವರು ಕೇವಲ ಭಂಡಾರಕೇರಿ ಮಠಕ್ಕಷ್ಟೇ ಅಧಿಪತಿಗಳಾಗಿದ್ದರೆ, ಅವರು ತನ್ನನ್ನು ಚಿನ್ನದ ರಥದಲ್ಲಿ ಹೇಗೆ ಕುಳ್ಳಿರಿಸಿಯಾರು? ಏಕೆಂದರೆ ತಾನು ಉಡುಪಿಯ ಎಂಟು ಮಠಗಳ ಅಧಿಕಾರಕ್ಕೆ ಮಾತ್ರ ಒಳಪಟ್ಟವನು. ಎಂದೂ ಆಲೋಚಿಸಿದನು. ಅದಕ್ಕೊಂದು ಪ್ರಸಂಗವನ್ನು ಸೃಷ್ಟಿಸಿದನು. ಆ ಸೃಷ್ಟಿಯ ಫಲ ಎರಡು. ತನ್ನ ಮಹಾಭಕ್ತನಿಗೆ ತನ್ನ ಪೂಜಾ ಭಾಗ್ಯಪ್ರದಾನ ಹಾಗೂ ತನ್ನ ಅಘಟಿತ ಘಟನಾ ಶಕ್ತಿಪ್ರದರ್ಶನ.

ಶ್ರೀ ಪಲಿಮಾರು ಮಠದ ಅಂದಿನ ಅಧಿಪತಿಗಳು ಶ್ರೀರಘುವಲ್ಲಭತೀರ್ಥರು. ಅವರು ಯತಿಜೀವನದ ನಿಜ ಸಂಗತಿಯನ್ನು ತಿಳಿಯುವ ಮುಂಚೆಯೇ ಪೀಠದಲ್ಲಿ ಕೂಡಿಸಲ್ಪಟ್ಟವರು. ಬುದ್ಧಿವಿಕಾಸವಾದಾಗ ತನ್ನ ಅಂತರಂಗದ ಅಂತಸ್ತನ್ನು ಚಿಂತಿಸಿದವರು. ಸಂನ್ಯಾಸಕ್ಕೆ ಒಗ್ಗದ ಮನಸ್ಸನ್ನು ಒಳಗೆ ಗೋಪ್ಯವಾಗಿರಿಸಿ, ಹೊರಗಿನಿಂದ ಕಾಷಾಯ ವೇಷಧರಿಸಿ ಪೀಠದಲ್ಲಿ ಕುಳಿತು ಸಮಾಜವನ್ನು ಮೋಸಗೊಳಿಸಲು ಇಷ್ಟಪಡದವರು. ಸಂನ್ಯಾಸಕ್ಕೆ ಹಾಗೂ ಮಾಧ್ವಪೀಠಕ್ಕೆ ಸಮರ್ಥನಾದ ವ್ಯಕ್ತಿಯನ್ನು ಕುಳ್ಳಿರಿಸಿ ಸಂನ್ಯಾಸವನ್ನು ತ್ಯಜಿಸಲು ಬಯಸಿದವರು. ಒಂದಂಶದಲ್ಲಿ ಪ್ರಾಮಾಣಿಕರು.

ಪೀಠಕ್ಕೆ ಸಮರ್ಥನಾದ ಅಭ್ಯರ್ಥಿಯನ್ನು ಗೊತ್ತು ಮಾಡಿದರು. ಆ ಅಭ್ಯರ್ಥಿ ಶ್ರೀಶ್ರೀವಿದ್ಯಾಮಾನ್ಯ ತೀರ್ಥರು. ಇವರನ್ನು ಹೊರತು ಬೇರಾರಿಗೂ ಪೀಠವನ್ನು ಒಪ್ಪಿಸಬಾರದೆಂದು ನಿಶ್ಚಯಿಸಿದರು. ತಮ್ಮ ಮನದಿಂಗಿತವನ್ನು ಅವರ ಮುಂದರುಹಿದರು. ಶ್ರೀವಿದ್ಯಾಮಾನ್ಯತೀರ್ಥ ರಾದರೂ ಶ್ರೀಮದಾ ಚಾರ್ಯರ ಅಪ್ಪಣೆಯನ್ನು ಪಡೆದು ಪೀಠಸ್ವೀಕಾರವನ್ನು ಸಮ್ಮತಿಸಿದರು. 'ಸೌಮ್ಯ' ಸಂವತ್ಸರದ ಮಾಘ ಶುದ್ಧ ಪ್ರತಿಪತ್ 1969ರ ಫೆಬ್ರವರಿ 3 ರಂದು ಶ್ರೀರಘುವಲ್ಲಭತೀರ್ಥರು ಶಂಖಾಭಿಷೇಕದ ಮೂಲಕ ಪಲಿಮಾರು ಮಠದ ಆಧಿಪತ್ಯವನ್ನು ಶ್ರೀವಿದ್ಯಾಮಾನ್ಯ ತೀರ್ಥರಿಗೆ ಧಾರೆಯೆರೆದಿತ್ತರು ಶ್ರೀವಿದ್ಯಾಮಾನ್ಯತೀರ್ಥರು ಆನಂದ, ಆಶ್ಚರ್ಯ, ಧನ್ಯತೆಗಳಿಂದ ಸ್ವೀಕರಿಸಿದರು.

ಅವರು ಅದೆಷ್ಟು ಕಾಲದಿಂದ 'ಬಾಗಿಲನು ತೆರೆದು ಸೇವೆಯನು ಕೊಡೊ? ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಿದ್ದರೊ? ಆ ಪ್ರಾರ್ಥನಾ ಶಕ್ತಿಯಿಂದಲೇ ಸಂಪ್ರದಾಯದ ಬಾಗಿಲನ್ನು ಒಡೆದರೊ?' ಅಥವಾ ಶ್ರೀಕೃಷ್ಣನೇ ಆ ಕದವನ್ನುತೆರೆದನೊ? ಅದು ಅವರಿಬ್ಬರಿಗೇ ಗೊತ್ತು. 'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ' ಭಗವಂತನೊಲಿದರೆ ಭಕುತನಿಗೆ ಯಾವುದು ಅಲಭ್ಯ? ಎಲ್ಲವೂ ಲಭ್ಯ.

ಅಂತೂ ಶ್ರೀಭಂಡಾರಕೇರಿ ಶ್ರೀಪಾದರು, ಉಡುಪಿಯ ಅಷ್ಟಮಠಗಳಲ್ಲಿ ಮೊದಲ ಮಠವಾದ ಶ್ರೀಹೃಷೀಕೇಶ ತೀರ್ಥರ ಸಂಸ್ಥಾನವಾದ ಶ್ರೀಪಲಿಮಾರು ಮಠದ ಅಧಿಪತಿಗಳೂ ಆದರು. ಈ ಶುಭಸಂದರ್ಭದಲ್ಲಿ ಶ್ರೀಪೇಜಾವರ ಮಠದ ಶ್ರೀವಿಶ್ವೇಶತೀರ್ಥರ ಹಾಗೂ ಶ್ರೀಅದಮಾರು ಮಠದ ಶ್ರೀವಿಬುಧೇಶತೀರ್ಥರ ಉಪಸ್ಥಿತಿಯಿತ್ತು. ಈ ಪೀಠ ಸ್ವೀಕಾರಕ್ಕೆ ಅವರೀರ್ವರ ಬೆಂಬಲವೂ ಇತ್ತು.

ಶ್ರೀವಿದ್ಯಾಮಾನ್ಯತೀರ್ಥರ ಕರಗಳೆರಡೂ ರುಗ್ಮಿಣೀ ಮಧ್ವಕರಾರ್ಚಿತ ಶ್ರೀಕೃಷ್ಣನನ್ನು ಸ್ಪರ್ಶಿಸಿದವು. ಪೂಜಿಸಿದವು. ಅವರ ಹೃದಯದಲ್ಲಿ ತುಂಬಿತುಳುಕುತ್ತಿದ್ದ ಪರಮ ಪ್ರೀತಿಯ ಮಹಾಪೂರವೇ ಈ ಗೋಕುಲದ ಪುಟ್ಟ ಪೋರನ ಮೇಲೆ ಹರಿಯಿತು. ಆನಂದ ಕಂಗಳಲ್ಲಿ ನೀರಾಗಿ ಇಳಿಯಿತು. ಮನದಣಿಯೇ ಸ್ತುತಿಸಿದರು. ಆನಂದಿಸಿದರು. ಧನ್ಯತೆಯನ್ನು ಅನುಭವಿಸಿದರು.

ಇದೊಂದು ಅಘಟಿತ ಘಟನೆಯೆ? ಹೌದು. ''ಅಷ್ಟಮಠಾಧೀಶರನ್ನು ಹೊರತು ಬೇರೆ ಯಾವ ಮಠಾಧೀಶರೂ ಉಡುಪಿಯ ಶ್ರೀಕೃಷ್ಣನನ್ನು ಸ್ಪರ್ಶಿಸಿ ಪೂಜಿಸುವಂತಿಲ್ಲ'' ಇದು ಶಾಸ್ತ್ರೀಯ ನಿಯಮ ವಲ್ಲದಿದ್ದರೂ ಪ್ರಾದೇಶಿಕವ್ಯವಸ್ಥೆಯ ದೃಷ್ಟಿಯಿಂದ ರೂಪುಗೊಂಡ ನಿಯಮ. ಅಲ್ಲದೆ ಬಹಳ ನಿಷ್ಠೆಯಿಂದ ಜಾರಿಗೆ ಬಂದ ನಿಯಮ. ಈ ನಿಯಮದ ಅನುಷ್ಠಾನದಲ್ಲಿ ಮಾತ್ರ ಎಲ್ಲರೂ ನಿಷ್ಠರೇ. ಈ ನಿಟ್ಟಿನಲ್ಲಿ ಭಂಡಾರಕೇರಿ ಶ್ರೀಪಾದರಾದ ಶ್ರೀವಿದ್ಯಾಮಾನ್ಯ ತೀರ್ಥರು ಶ್ರೀಕೃಷ್ಣನನ್ನು ಪೂಜಿಸುವುದು ಅಸಂಭಾವಿತ ವೆಂದೇ ಕೆಲವು ಸಂಪ್ರದಾಯಸ್ಥರ ಅಭಿಪ್ರಾಯ. ಆದರೆ ಲೋಕಕಲ್ಯಾಣಕಾರಕನಾದ ಶ್ರೀಕೃಷ್ಣನ ಅಭಿಪ್ರಾಯ ಅದಕ್ಕೆ ವಿರುದ್ಧವಾಗಿತ್ತು. ಯಾರು ಬೇಡವೆಂದರೂ, ಶ್ರೀಕೃಷ್ಣನಿಗೆ ಇವರ ಪೂಜೆಯೇ ಬೇಕಾಗಿತ್ತು. ಅವನ ಬೇಕು-ಬೇಡಗಳನ್ನುತಡೆಯುವವರಾರು? ಲೌಕಿಕವಾಗಿ ಅಸಂಭಾವಿತವಾದ ಭಂಡಾರಕೇರಿ ಮಠಾಧೀಶರಿಗೆ ಪಲಿಮಾರುಮಠಾಧಿಪತ್ಯವನ್ನು ಶ್ರೀಕೃಷ್ಣಪೂಜೆಯ ಅಧಿಕಾರವನ್ನು ಕೊಡಿಸುವ ಮೂಲಕ ತನ್ನ ಅಘಟಿತ ಘಟನಾ ಸಾಮರ್ಥ್ಯವನ್ನು ಪ್ರಕಟಪಡಿಸಿದನು. ಅವನ ಆ ಸಾಮರ್ಥ್ಯಕ್ಕೆ ಇದಕ್ಕಿಂತ ಬೇರೆಯಾದ ದೃಷ್ಟಾಂತ ಬೇಕೆ?

ಶ್ರೀಕೃಷ್ಣನು ಸ್ವರ್ಣರಥಾದಿ ವೈಭವಗಳನ್ನು ಪಡೆಯಲು ಶ್ರೀವಿದ್ಯಾಮಾನ್ಯತೀರ್ಥರನ್ನೇ ಏಕೆ ಆಯ್ಕೆ ಮಾಡಿದನು? ಅಷ್ಟ ಮಠಾಧೀಶರಲ್ಲೇ ಒಬ್ಬರನ್ನು ಏಕೆ ನೇಮಕ ಮಾಡಲಿಲ್ಲ? ಎಂಬ ಪ್ರಶ್ನೆ ಸಹಜ. ಆದರೆ ಉತ್ತರವೂ ಅಷ್ಟೇ ಸ್ಪಷ್ಟ.

ಭಕ್ತರಿರುವಲ್ಲಿಗೇ ತಾನು ಬರುವುದು ಅಥವಾ ತಾನಿರುವಲ್ಲೇ ಭಕ್ತರನ್ನು ಸೆಳೆಯುವುದು ಭಗವಂತನ ಸ್ವಭಾವ. ಇದೆರಡನ್ನೂ ಉಡುಪಿಯ ಇತಿಹಾಸ ಪುಟಗಳಲ್ಲಿ ಕಾಣಬಹುದು. ಶ್ರೀಕೃಷ್ಣನಿಗೆ ಪ್ರಿಯತಮರಾದವರು

ಶ್ರೀಮದಾ ಚಾರ್ಯರು. ಅವರು ಅವತರಿಸಿದ, ನೆಲಿಸಿದ ಪುಣ್ಯಭೂಮಿ ಉಡುಪಿ. ಅವರನ್ನು ಕಾಣಲು, ಕೂಡಲು, ಅವರಿಂದ ಪೂಜಿಕೊಳ್ಳಲು ಸಂಪದ್ಭರಿತ ದ್ವಾರಕೆಯನ್ನು ತ್ಯಜಿಸಿ ಅವರಿರುವಲ್ಲಿಗೆ ಬಂದನು. ಭಕ್ತರಿರುವಲ್ಲಿಗೇ ತಾನು ಬರುವವನೆಂದು ಜಗತ್ತಿಗೆ ತೋರಿದನು.

ಭಕ್ತರಿಗಾಗಿ ಬಂದ ಭಗವಂತನನ್ನು ಅನೇಕ ಭಕ್ತರು ತಮ್ಮ ತಮ್ಮ ಹಾದಿಯಲ್ಲಿ ಪೂಜಿಸಿದರು. ಧ್ಯಾನಿಸಿದರು, ಒಲಿಸಿದರು. ಆ ಭಗವಂತನು ಭಕ್ತರಲ್ಲಿ ತೋರಿದ ಅನುಗ್ರಹ ಪ್ರಾಯಃ ಅವರವರಿಗೆ ಮಾತ್ರ ತಿಳಿಯಿತು. ಆದರೆ ಕೆಲವರಿಗೆ ಮಾಡಿದ ಅನುಗ್ರಹವನ್ನು ಜಗತ್ತು ಕಣ್ಣಾರೆ ನೋಡಿತು. ಅಂತಹ ಒಂದು ಉದಾಹರಣೆ ಕನಕದಾಸರು. ಅವರ ನಿಷ್ಕಲ್ಮಷ ಹೃದಯದಲ್ಲಿ ತುಂಬಿದ ಪಕ್ವವಾದ ಜ್ಞಾನ - ಭಕ್ತಿಗಳ ರಸದ ಸವಿಗೆ, ಅವರ ಪ್ರೀತಿಯ ಮೋಡಿಗೆ ಶ್ರೀಕೃಷ್ಣ ತನ್ನೆದುರಿದ್ದ ದಪ್ಪಗೋಡೆಯನ್ನೇ ಬಿರುಕುಗೊಳಿಸಿದ. ತನ್ನ ದರುಶನವನ್ನಿತ್ತ. ಅದೇ ರೀತಿಯ ಸನ್ನಿವೇಶ ಶ್ರೀವಿದ್ಯಾ ಮಾನ್ಯತೀರ್ಥರದ್ದು.

ಶ್ರೀವಿದ್ಯಾಮಾನ್ಯತೀರ್ಥರು ಉಡುಪಿ ಕೃಷ್ಣನ ಸನಿಹದಲ್ಲಿ ಜನಿಸಿ, ಬೆಳೆದು ನೆಲಿಸಿದರೂ ಅವನಿಗೆ ಮಾತ್ರ ತುಸು ದೂರವಾಗೇ ಇದ್ದರು. ಕಾರಣ, ಅವರು ಅಷ್ಟಮಠದ ಅಧಿಪತಿಗಳಾಗದವರು. ಎಲ್ಲರಂತೆ ಕೃಷ್ಣನ ದರ್ಶನವನ್ನು ಮಾಡುವವರು, ಪಾಡುವವರು, ನಮಿಸುವವರು. ಅವನಲ್ಲಿ ಅಧಿಕ ಭಕ್ತಿಯನ್ನು ಹೊಂದಿದವರು. ಅವನ ಪ್ರೀತಿಗಾಗಿ ಪ್ರಾಮಾಣಿಕವಾಗಿ ಬದುಕಿ ತಪೋರೂಪ ಪಾಠ-ಪ್ರವಚನಗಳನ್ನು ನಿರಂತರ ನಡೆಸಿದವರು. ಶ್ರೀಮದಾಚಾರ್ಯರಿಗೆ ಪ್ರಿಯರಾಗಿ ಬದುಕಿದವರು. ಶ್ರೀಮದಾಚಾರ್ಯರಿಗೆ ಪ್ರಿಯರಾದ ಬಗೆ ಹೇಗೆ? ಅದಕ್ಕೆ ಅನೇಕ ಕಾರಣಗಳಿವೆ. ಅವರ ಆ ಸದ್ಗುಣಗಳಲ್ಲಿ ಶಿಖರ ಪ್ರಾಯವಾದ ಒಂದು ಗುಣ ಮಧ್ವಸಿದ್ಧಾಂತ ದೀಕ್ಷೆ. ಅದು ಅವರಲ್ಲಿ ಅಚಲವಾಗಿತ್ತು. ಅಗಾಧವಾಗಿತ್ತು.

ಅದೇ ಅವರಿಗೆ ಮಹಾಫಲ ಪ್ರದವಾಯಿತು. ಏಕೆಂದರೆ ಸಿದ್ಧಾಂತ ದೀಕ್ಷೆಯಲ್ಲಿ ಎರಡು ಮುಖಗಳಿವೆ. ಪರಮತ ನಿರಾಕರಣೆ ಹಾಗು ಸ್ವಮತ ಸಮರ್ಥನೆ. ಇವೆರಡೂ ಪ್ರಧಾನಗಳೇ. ಆದರೆ ಸ್ವಮತ ಸಮರ್ಥನೆಗಿಂತ ಪರಮತ ನಿರಾಕರಣೆ ಸ್ವಲ್ಪ ಗರಿಷ್ಠತೆಯನ್ನು ಹೊಂದಿದೆ. ಅದೇ ಹರಿ-ವಾಯುಗಳಿಗೆ ಅತಿಪ್ರಿಯವಾದುದು. ಅದರಿಂದಲೇ ಭಗವಂತನ ಪ್ರಸಾದವಾಗುವುದು. ಈ ಮಾತನ್ನೇ ಶ್ರೀಮದ್ವಾದಿರಾಜ ಶ್ರೀಮಚ್ಚರಣರು ತಮ್ಮ ತತ್ವಪ್ರಕಾಶಿಕಾ ಗುರ್ವರ್ಥದೀಪಿಕೆಯಲ್ಲಿ 'ಪರಮತ ನಿರಾಕರಣ ಸಂಭ್ರಮ ಸಂತುಷ್ಟ ಭಗವತ್ಪ್ರಸಾದಾದೇವ ಮೋಕ್ಷಃ' ಎಂದು ಸಮರ್ಥಿಸಿದ್ದಾರೆ. ಈ ಪರಮತ ನಿರಾಕರಣ ಹಾಗೂ ಸ್ವಮತ ಸಮರ್ಥನಗಳೆರಡೂ ಶ್ರೀವಿದ್ಯಾಮಾನ್ಯತೀರ್ಥರ ಶ್ವಾಸೋಚ್ಛ್ವಾಸಗಳಂತಿದ್ದವು. ಅವರು ಅವೆರಡನ್ನು ಅದೆಷ್ಟು ಬಾರಿ ಮಾಡಿರುವರು? ನಾವು ಲೆಖ್ಖ ಮಾಡಲಿಲ್ಲ ಮಾಡಲು ಸಾಧ್ಯವಿಲ್ಲ. ಕಾರಣ ನಮಗೆ ಅದರಲ್ಲಿ ಆಸಕ್ತಿಯಿಲ್ಲ ಅವರಂತೆ. ಆದರೆ ಶ್ರೀಮದಾಚಾರ್ಯರಿಗೆ ಅದು ಅತಿಪ್ರಿಯ, ಆ ಮಧ್ವಪ್ರಿಯ ಶ್ರೀಕೃಷ್ಣನಿಗೂ ಅದೇ ಅತಿಪ್ರಿಯ. ಅವನು ಲೆಖ್ಖ ಮಾಡಿದ. ಆ ಎರಡು ಮಹಾಕಾರ್ಯದ ಪುಣ್ಯರಾಶಿಗೆ ಜೀವನಪೂರ್ಣ ಮಾಡಿದ ಸತ್ಕಾರ್ಯಗಳಿಗೆ ಪ್ರತಿಯಾಗಿ ಫಲವನ್ನಾಗಿ ಏನನ್ನು ಕೊಡುವುದು? ಯಾವಾಗ ಕೊಡುವುದು? ಎಂಬ ಯೋಚನೆ ಅವನಿಗೆ ಬಂದಿತು. ಶಾಸ್ತ್ರಗಳು ಹೇಳುತ್ತವೆ.

'ಅತ್ಯುತ್ಕಟ ಪುಣ್ಯಕ್ಕೆ ಈ ಜನುಮದಲ್ಲಿಯೇ ಫಲವೆಂದು' ಈಗ ಫಲದಾನದ ಕಾಲದ ನಿರ್ಣಯವಾಯಿತು. ಆದರೆ ಏನನ್ನು ನೀಡುವುದು? ಪ್ರಶ್ನೆ ಹಾಗೆಯೇ ಉಳಿಯಿತು. ಉತ್ಕೃಷ್ಟವಾದ ಕಾರ್ಯಕ್ಕೆ ಉತ್ಕೃಷ್ಟವಾದ ಫಲ ನೀಡುವುದು ಎಂಬುದು ಯೋಗ್ಯರ ವ್ಯವಹಾರ. ಈ ಪ್ರಪಂಚದಲ್ಲಿ ಉತ್ಕೃಷ್ಟವಾದ ಪದಾರ್ಥ ಯಾವುದು? ಅದು ಒಂದೇ. ಭಗವಾನ್ ಶ್ರೀಕೃಷ್ಣ ಮಾತ್ರ. ಅವನನ್ನೇ ನೀಡಬೇಕಾಯಿತು. ತನ್ನನ್ನೇ ಅವರಿಗೆ ನೀಡುವುದು ಹೇಗೆ? ಶ್ರೀಮದಾಚಾರ್ಯರಿದ್ದಲ್ಲಿಗೇ ಬಂದಂತೆ ಶ್ರೀವಿದ್ಯಾ ಮಾನ್ಯ ತೀರ್ಥರಿರುವಲ್ಲೇ ಹೋಗಲು ಸಾಧ್ಯವೆ? ಇಲ್ಲ. ಅದಕ್ಕಾಗಿ ಅವರನ್ನೇ ತನ್ನ ಅತಿ ಸಮೀಪ ಸೆಳೆದ. ದೂರದಲ್ಲಿಯೇ ದರ್ಶನ ಪಡೆದು ನಡೆದು ತೆರಳುತ್ತಿದ್ದ ಶ್ರೀವಿದ್ಯಾಮಾನ್ಯತೀರ್ಥರಿಗೆ ತನ್ನನ್ನೇ ಮುಟ್ಟುವ ಪೂಜಿಸುವ ಆನಂದಿಸುವ ಭಾಗ್ಯವನ್ನು ನೀಡಿದ. ತಾನು ಅವರವನಾದ. ಅವರು ನುಡಿದಂತೆ ನಡೆದ. ನಡೆಸಿದ. ಅಷ್ಟೇ ಸಾಲದೆ ಸರ್ವಜ್ಞಶಾಸ್ತ್ರಗಳ ಸೇವೆ ಮಾಡಿದ ಈ ಮಹಾಭಕ್ತನಿಗೆ ಸುವರ್ಣರಥಾದಿ ಸೇವೆಯ ಭಾಗ್ಯ ವನ್ನೀಡಿದ. ಇವರಿಗೆ ಇತಿಹಾಸ ಪುಟಗಳಲ್ಲಿ 'ಸುವರ್ಣವ್ಯಕ್ತಿ' ಎಂಬ ಶಾಶ್ವತ ಕೀರ್ತಿಯನ್ನಿತ್ತ.

ಇಂತಹ ಮಹತ್ತರ ಫಲವನ್ನು ಹೊಂದಲು ಉತ್ತಮ ಸಾಧನೆ ಮಾಡಬೇಕು. ಸಾಧನೆ ಮಾಡಲು ಭಗವಂತನ ಪ್ರೇರಣೆ ಇರಬೇಕು. ಅದಕ್ಕೆ ಜೀವನು ಆ ಯೋಗ್ಯತೆಯನ್ನು ಹೊಂದಿರಬೇಕು. ಏಕೆಂದರೆ ನಿಷ್ಪಕ್ಷಪಾತಿಯಾದ ಭಗವಂತನು ಚೇತನರ ಪೂರ್ವಜನ್ಮದ ಪ್ರಯತ್ನ ಹಾಗೂ ಸಂಸ್ಕಾರಗಳನ್ನು ನೋಡಿ ಕರ್ಮಗಳನ್ನು ಮಾಡಿಸುವನು. ಈ ತತ್ತ್ವವನ್ನು ಶ್ರೀಮದಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ 'ಪೂರ್ವಕರ್ಮ ಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯತು । ಈಶ್ವರಃ ಕಾರಯೇತ್ಸರ್ವಂ' ಎಂದು ಸ್ಪಷ್ಟಪಡಿಸಿರುವರು. ಈ ನೆಲೆಯಲ್ಲಿ ನಾವು ವಿಚಾರಿಸ ಹೊರಟರೆ ಶ್ರೀವಿದ್ಯಾಮಾನ್ಯತೀರ್ಥರ ಪೂರ್ವಜನ್ಮದ ಉತ್ತಮಕರ್ಮ ಸಂಸ್ಕಾರಗಳೇ ಈ ಜನ್ಮದ ಕರ್ಮ ಫಲಗಳಿಗೆ ಕಾರಣವೆಂದು ಅರಿಕೆಯಾಗುವುದು. ಆದರೆ ಆ ಪೂರ್ವಕರ್ಮಗಳು ಯಾವುವು? ಎಂಬುದನ್ನು ನಾವು ತಿಳಿಯಲಾರೆವು. ಏಕೆಂದರೆ ವರ್ತಮಾನವನ್ನೇ ಸರಿಯಾಗಿ ತಿಳಿಯದ ಮಂದಿಗೆ ಗತವಾದುದು ಹೇಗೆ ತಿಳಿದೀತು?

ಆದರೆ ಈ ಜನ್ಮದ ಅವರ ಸಾಧನಾತ್ಮಕ ಜೀವನದ ಕಾರ್ಯಗಳನ್ನು ತಿಳಿಯಬಲ್ಲೆವು. ಅವರು ಮಾಡಿದ ಆ ಮಹಾ ಕಾರ್ಯಗಳ ಪುಣ್ಯಫಲದಿಂದಲೇ ಶ್ರೀಕೃಷ್ಣ ಪೂಜಾಭಾಗ್ಯ ಪ್ರಾಪ್ತವಾಯಿತೆಂದು ದೃಢಪಡಿಸಿ ಕೊಳ್ಳಬಲ್ಲೆವು.

ಅದಕ್ಕಾಗಿ ಅವರ ಎಂಬತ್ತೇಳು ವರುಷಗಳ ಮಹಾಸಾಧನೆ ಯಾವುದು? ಹೇಗೆ? ಎಂದು ತಿಳಿಯೋಣ. ತಿಳಿಯುವುದಕ್ಕಾಗಿ ಅವರ ತಪೋಮಯ ಸಾರ್ಥಕ ಜೀವನದ ಸಿಂಹಾವಲೋಕನವನ್ನು ಮಾಡೋಣ. ಅವರ ಮಹಿಮೆಯನ್ನು ಅರಿಯೋಣ. ಅರಿತು ಮಧ್ವಾಂತರ್ಗತ ಶ್ರೀಕೃಷ್ಣನನ್ನು ಒಲಿಸೋಣ. ಒಲಿಸಿ ಅನಿಷ್ಟ ಸಂಕೋಲೆಯನ್ನು ಕಳಚಿಕೊಳ್ಳೋಣ. ಅಭೀಷ್ಟ ಸಂತತಿಯನ್ನು ಪಡೆಯೋಣ.



# ಮಹಾನ್ ಚೇತನಾವತರಣ

ಎರ್ಮಾಳು, ಉಡುಪಿಯಿಂದ ದಕ್ಷಿಣಕ್ಕೆ ಹದಿಮೂರು ಮೈಲು ದೂರದಲ್ಲಿರುವ ಪುಟ್ಟಗ್ರಾಮ. ಅದು ಶ್ರೀಜನಾರ್ದನ ರೂಪಿ ಭಗವಂತನ ಧಾಮ. ಶ್ರೀಮದಾಚಾರ್ಯರು ನೀಡಿದ ಜನಾರ್ದನ ನೀತನೆಂಬುದು ಪ್ರಾಚೀನ ಇತಿಹಾಸಜ್ಞರ ಅಂಬೋಣ. ಅಂತೂ ಈ ಜನಾರ್ದನನ ದಿವ್ಯಸನ್ನಿಧಿ ಅನೇಕ ಬ್ರಾಹ್ಮಣರಿಗೆ ಉತ್ತಮ ತಂಗುದಾಣ. ಕಾರಣ ಈ ಗ್ರಾಮದಲ್ಲಿ ವಾಸಕ್ಕಾಗಿ ಒಂದು ಸದ್ ಬ್ರಾಹ್ಮಣ ಕುಟುಂಬವಿತ್ತು. ಆ ಕುಟುಂಬದ ಯಜಮಾನರು ವೇದಮೂರ್ತಿ ಶ್ರೀರಾಮಕೃಷ್ಣ ತಂತ್ರಿಗಳು. ಇವರು 'ಕುಪ್ಪಣ್ಣತಂತ್ರಿ' ಗಳೆಂದು ಪ್ರಸಿದ್ಧರು. ಮಹಾಶ್ರೋತ್ರಿಯರು ಸದಾಚಾರ-ಸದ್ವಿಚಾರಗಳಿಗೆ ಸದಾಶ್ರಯರು. ಪಾವನ ಪಂಡಿತರು. ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಗಳನ್ನು ಮಾಡಿಸುವುದರಲ್ಲಿ ನಿಷ್ಣಾತರು. 'ವಿದ್ವತ್ತು' ಇರುವಷ್ಟೇ ವಿನಯಶಾಲಿಗಳು. ವಿನಯಶಾಲಿಗಳಿದ್ದಷ್ಟೇ ನಿರಭಿಮಾನಿ ಗಳು. ಅಂತೆಯೇ ಪರಮ ಭಗವದ್ಭಕ್ತರು. ಲೌಕಿಕ ಬಡವರು. ಬಡವರಾದರೂ ಯದೃಚ್ಛಾಲಾಭ ಸಂತುಷ್ಟರು. ಭಗವಂತನು ನೀಡಿದ್ದಷ್ಟನ್ನೇ ಉಪಯೋಗಿಸಿ ಅತಿಥಿ-ಅಭ್ಯಾಗತರನ್ನು ಆದರಿಸಿ ಸತ್ಕರಿಸುವವರು. ತನ್ಮೂಲಕ ಹರಿ-ವಾಯುಗಳ ಸೇವೆಯನ್ನು ಚಿಂತಿಸಿ ಸಂತೋಷ ಭರಿತರಾಗುವವರು. ಇಂತಹ ವ್ಯಕ್ತಿಗಳನ್ನು ನೋಡಿಯೇ 'ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ' ಎಂದು ಸುಭಾಷಿತ ಕಾರರು ನುಡಿದಿರಬೇಕು. ಆದ್ದರಿಂದ ತಂತ್ರಿಗಳು ದರಿದ್ರರಲ್ಲ. ಅಲೌಕಿಕ ಶ್ರೀಮಂತರು. ಇವರಿಗೆ ಅನುರೂಪಳಾದ ಧರ್ಮಪತ್ನಿಸಾಧ್ವೀಮಣಿ ಶ್ರೀಮತಿ ರಾಧಮ್ಮನವರು. ಈ ಈರ್ವರ ದಾಂಪತ್ಯ ಜೀವನ, ಪ್ರಾಚೀನ ಆರ್ಷಜೀವನದ ಸ್ಮರಣೆಗೆ ಕಾರಣ.

ಶ್ರೀಕುಪ್ಪಣ ತಂತ್ರಿಗಳು, ಕಿರಿಯ ವಯಸ್ಸಿನಲ್ಲೇ ತಿರುವಾಂಕೂರು ಕೊಚ್ಚಿಗೆ ಹೋಗಿ ಅಧ್ಯಯನವನ್ನು ಪೂರೈಸಿದರು. ತಂತ್ರಶಾಸ್ತ್ರಪ್ರವೀಣರೆನಿಸಿದರು. ಉಡುಪಿಯಲ್ಲಿ ವೇದಾಂತಾದಿ ಶಾಸ್ತ್ರಾಭ್ಯಾಸವನ್ನು ನಡೆಸಿದರು. ಪ್ರಸಿದ್ಧ ವಿದ್ವಾಂಸರಾದರು. ವಿಶೇಷವಾಗಿ ಉಡುಪಿಯ ಶ್ರೀ ಅದಮಾರು ಮಠದ ಆಸ್ಥಾನ

ವಿದ್ವಾಂಸರು ಹಾಗೂ ಪುರೋಹಿತರು. ಶ್ರೀಶ್ರೀ ವಿಬುಧಪ್ರಿಯ ತೀರ್ಥರ ವಿಶೇಷಾನುಗ್ರಹಪಾತ್ರರು. ''ಕರ್ಮ ವಿಪಾಕ ಹೋಮ'' ಎಂಬ ವಿಶಿಷ್ಟ ಹೋಮವನ್ನು ಮಾಡಿಸಿ ಸಂತಾನವಿಲ್ಲದವರಿಗೆ ಸಂತಾನ ವಾಗುವಂತೆ ಭಗವದನುಗ್ರಹಕ್ಕೆ ಮಾರ್ಗವನ್ನು ಮಾಡಿಕೊಡುತ್ತಿದ್ದರು. ಆ ಕಾಲದಲ್ಲಿ ಉಡುಪಿಯ ವಲಯದಲ್ಲಿ ಕರಾರುವಾಕ್ಕಾಗಿ ಧರ್ಮಶಾಸ್ತ್ರರಹಸ್ಯಗಳನ್ನು ತಿಳಿಸಿ ಸಮಸ್ಯೆಗಳನ್ನು ಪರಿಹರಿಸುವ ಉತ್ತಮ ವಿದ್ವಾಂಸರು. 'ಪರಾನ್ನ ವರ್ಜ್ಯ' ನಿಯಮವನ್ನು ಪಾಲಿಸುತ್ತಿದ್ದವರು. ನಿತ್ಯವೂ ದೇವತಾರ್ಚನಾದಿಗಳನ್ನು ಪೂರೈಸಿ ಇವರು ಭೋಜನಗೈಯ್ಯುತ್ತಿದ್ದ ಹೊತ್ತು, ಮಧ್ಯಾಹ್ನದ ಮೂರು ಗಂಟೆಯನ್ನು ಮೀರುತ್ತಿತ್ತು. ಕಾರಣ, 'ವೈಶ್ವದೇವ, ಬಲಿಹರಣದನಂತರ ಅತಿಥಿಗಳನ್ನು ನಿರೀಕ್ಷಿಸಬೇಕು' ಎಂದು ಶಾಸ್ತ್ರವಚನ. ಅದಕ್ಕನುಗುಣವಾಗಿ ತಂತ್ರಿಗಳ ಜೀವನ.

ಉಡುಪಿ-ಮಂಗಳೂರು ಮಾರ್ಗ ಮಧ್ಯದಲ್ಲಿ ತಂತ್ರಿಗಳ ಪುಟ್ಟ ಭವನ. ಮಾರ್ಗದಲ್ಲಿ ಕಾಲ್ನಡಿಗೆಯಿಂದ ಸಾಗುವ ಬ್ರಾಹ್ಮಣರಿಗಾಗಿ ತಂತ್ರಿಗಳ ನಿರೀಕ್ಷಣ. ಬ್ರಾಹ್ಮಣರು ಬಂದರೆ ತಮ್ಮ ಮನೆಗೆ ಬರುವುದಕ್ಕಾಗಿ ಬ್ರಾಹ್ಮಣರಲ್ಲಿ ಪ್ರಾರ್ಥನಾ ತಂತ್ರಿಗಳ ಮನೆಗೆ ಬ್ರಾಹ್ಮಣರ ಆಗಮನ. ಬಂದ ಬ್ರಾಹ್ಮಣರಿಗೆ ಬಿಸಿನೀರಿನಿಂದ ಪಾದ ಪ್ರಕ್ಷಾಲನ. ಈ ದಂಪತಿಗಳಿಂದ ವಿಪ್ರಪಾದೋದಕದ ಶಿರೋಧಾರಣ. ಶುಚಿರ್ಭೂತ, ರುಚಿವತ್ತಾದ ಭಗವತ್ಪ್ರಸಾದದ ಬ್ರಾಹ್ಮಣ ಭೋಜನ. ಜೊತೆಯಲ್ಲಿ ಯಥಾಶಕ್ತಿ ದಕ್ಷಿಣೆ-ತಾಂಬೂಲ ದಾನ. ಮಧುರ ಮಾತುಗಳಿಂದ ಬ್ರಾಹ್ಮಣರನ್ನು ಬೀಳ್ಕೊಟ್ಟ ನಂತರ ಈ ತಂತ್ರಿದಂಪತಿಗಳ ಭೋಜನ. ಕೊನೆಯಲ್ಲಿ ಇದೆಲ್ಲವೂ 'ಶ್ರೀಕೃಷ್ಣಾರ್ಪಣ'ವೆಂದು ದಂಪತಿಗಳ ಅನುಸಂಧಾನ. ಈ ರೀತಿಯ ಸತ್ಕಾರವು ಉತ್ತಮ ಹಿರಿಯ ವಿದ್ವಾಂಸರಿಗೂ, ಕಿರಿಯ ಬ್ರಹ್ಮಚಾರಿಗಳಿಗೂ ಸಮಾನ.

ಶ್ರೀತಂತ್ರಿಗಳು ಎಂದೂ ವಾಹನವನ್ನೇರಿದವರಲ್ಲ. ಪಾದಚಾರಿಗಳಾಗಿಯೇ ಕನ್ಯಾಕುಮಾರಿಯಿಂದ ಬದರಿಯ ವರೆಗೂ ತೀರ್ಥಯಾತ್ರೆಯನ್ನು ಪೂರೈಸಿದವರು. ನಿತ್ಯಪ್ರಾತಃ ಕಾಲದಲ್ಲಿ ಶ್ರೀಮದ್ವಾದಿರಾಜ ಶ್ರೀಮಚ್ಚರಣರ 'ತೀರ್ಥಪ್ರಬಂಧ'ದ ನಾಲ್ಕೂ ಪ್ರಬಂಧಗಳನ್ನು ಪಾರಾಯಣ ಮಾಡುತ್ತಿದ್ದ ತಂತ್ರಿಗಳ ಈ ಯಾತ್ರೆ, ಪ್ರಾಯಃ ಸಂಪೂರ್ಣ ಅರ್ಥಪೂರ್ಣ. ಆದ್ದರಿಂದಲೇ ರಮಾರಮಣ ನಾದ ಬದರಿನಾರಾಯಣನ ಕರುಣೆಯಿಂದ ತಂತ್ರಿದಂಪತಿ ಗಳ ತೃತೀಯ ಪುತ್ರನ ಜನನ. ಆ ದಿನ ಜಗತ್ತಿಗೆ ಮಹಾ ಸುದಿನ. ಪ್ರಮಾದಿ ಸಂವತ್ಸರದ (ಕರ್ಕಾಟಕ) ಆಷಾಢ ಮಾಸದ, ಕೃಷ್ಣ ಪಕ್ಷ, ನವಮೀ ತಿಥಿ, ರವಿವಾರದಂದು (27-7-1913), ಭರಣಿ ನಕ್ಷತ್ರದ ಸುಮುಹೂರ್ತ ದಲ್ಲಾಯಿತು, ಧರಣಿಯನ್ನಾಳುವ ಮಹಾನ್ ಚೇತನದ ಅವತರಣ. ಶುಭದಿನದಂದು, ಧರ್ಮಶಾಸ್ತ್ರಜ್ಞರೂ ಪುರೋಹಿತರಾದ ತಂತ್ರಿಗಳಿಂದ ನಡೆಯಿತು ಶಿಶುವಿನ ನಾಮಕರಣ. ಹೆಸರು 'ನಾರಾಯಣ'.

ಈ ನಾರಾಯಣನಿಗೆ ಓರ್ವ ಅಣ್ಣ ಶ್ರೀನಿವಾಸ ತಂತ್ರಿ. ಮೂವರು ಸೋದರಿಯರು. ಭಾಗೀರಥಿ ಅಕ್ಕಳಾದರೆ, ಮಹಾಲಕ್ಷ್ಮಿ, ಕಾವೇರಿಯರು ತಂಗಿಯರು. ಕುಟುಂಬದ ಸರ್ವ ಸದಸ್ಯರಿಗೆ ಅಕ್ಕರೆಯ ಕೂಸಾಗಿ ಬೆಳೆದ ನಾರಾಯಣ, ಮೊದಲಿನಿಂದಲೂ ಶಾಂತ, ಬುದ್ಧಿವಂತ, ಗಂಭೀರ. ಬಾಲ್ಯದ ಸಹಜಧರ್ಮಗಳು ದೇಹದ ಬೆಳವಣಿಗೆಯಲ್ಲಿ ಕಂಡು ಬರುತ್ತಿದ್ದಂತೆ ಮನೆಯವರಿಗೆಲ್ಲ ಸಂತಸ. ಮುದ್ದು

ಕಂದ ನಾರಾಯಣ, ತನ್ನ ಪುಟ್ಟ ವದನದಿಂದ ತನ್ನ ತಂದೆಯು ನುಡಿಯುತ್ತಿದ್ದ ಸ್ತೋತ್ರಗಳನ್ನು, ಶ್ಲೋಕಗಳನ್ನು ಮೆಲ್ಲಮೆಲ್ಲನೆ ಹೇಳಹತ್ತಿದ. ಆ ತೊದಲ್ನುಡಿಗಳಲ್ಲಿ ಮೂಡಿ ಬರುವ ಆ ಅರ್ಧ ಅರ್ಧ ಶ್ಲೋಕಗಳಿಂದಲೇ ಭಗವಂತ ತೃಪ್ತನಾದ. ಈ ಕೂಸನ್ನು ಹರಿಸಿದ.

ಶುಭ ಮುಹೂರ್ತದಲ್ಲಿ ಮೂರು ವರುಷದ ನಾರಾಯಣನಿಗೆ ಅಕ್ಷರಾಭ್ಯಾಸ ನಡೆಯಿತು. ನಾರಾಯಣನು, ಹಿರಿಯರು ಹೇಳಿಕೊಟ್ಟ ಅಕ್ಷರಗಳನ್ನು ಬಹಳ ಶ್ರದ್ಧೆಯಿಂದ ತಿದ್ದಿ ಅವುಗಳನ್ನು ತನ್ನ ಅಂಕೆಯಲ್ಲಿಟ್ಟುಕೊಂಡ. ತಂದೆಯಿಂದ ಎಲ್ಲ ಸ್ತೋತ್ರಗಳನ್ನೂ ಕಲಿತ. ಹೀಗೆ ಉತ್ತಮ ಸಂಸ್ಕಾರಗಳನ್ನು ತನ್ನಲ್ಲಿ ಒಗ್ಗೂಡಿಸಿಕೊಂಡು ಬೆಳೆಯುತ್ತಿದ್ದ ನಾರಾಯಣನಿಗೆ ಏಳು ಕಳೆದಿತ್ತು. ಎಂಟು ಹಿಡಿದಿತ್ತು. ಒಂದು ದಿನ.....

ಅಂದಿನ ಉಡುಪಿ ಶ್ರೀಪುತ್ತಿಗೆ ಮಠದ ಅಧಿಪತಿಗಳು ಹಿರಿಯ ತಪಸ್ವಿ, ಶತಾಯುಷಿ, ಶ್ರೀಶ್ರೀ ಸುಧೀಂದ್ರ ತೀರ್ಥ ಶ್ರೀಪಾದರು. ಅವರು ತಮ್ಮ ಜನ್ಮಭೂಮಿಯಾದ 'ಹೆಜಮಾಡಿ' ಗ್ರಾಮದಿಂದ ಉಡುಪಿಗೆ ಆಗಮಿಸುತ್ತಿದ್ದರು. ಮಾರ್ಗ ಮಧ್ಯದಲ್ಲಿ 'ಎರ್ಮಾಳು' ಗ್ರಾಮವನ್ನು ಪ್ರವೇಶಿಸಿದರು. ಗ್ರಾಮವನ್ನು ದಾಟಿ ಸಾಗುವ ಶ್ರೀಗಳವರನ್ನು, ತಂತ್ರಿಗಳು ಕಂಡರು. ದಂಡ ಪ್ರಣಾಮಗಳನ್ನರ್ಪಿಸಿದರು. ತನ್ನ ಮನೆಯಲ್ಲಿ ಒಂದು ದಿನದ ವಾಸ್ತವ್ಯಕ್ಕಾಗಿ ಪ್ರಾರ್ಥಿಸಿದರು. ತಂತ್ರಿಗಳ ಪ್ರಾಮಾಣಿಕ ಪ್ರಾರ್ಥನೆ ಶ್ರೀಗಳವರನ್ನು ನಿಲ್ಲಿಸಿತು. ಶ್ರೀಮದಾಚಾರ್ಯ ಕರಾರ್ಚಿತ ಪಾಂಡುರಂಗವಿಠ್ಠಲ ಈ ಭಕ್ತನ ಪೂಜೆಗಾಗಿ ನಿಂತ. ಪೂಜಾ ವ್ಯವಸ್ಥೆಯು ಸಡಗರದಿಂದೇರ್ಪಟ್ಟಿತು.

ಇತ್ತ ತಂತ್ರಿಗಳ ಚಿತ್ತ ಆಲೋಚಿಸಲಾರಂಭಿಸಿತು. 'ಹಿರಿಯ ತಪಸ್ವಿಗಳು ಆಗಮಿಸಿದ ಈ ಮುಹೂರ್ತವೇ ಸಮುಚಿತ. ಈ ದಿನವೇ ಶುಭದಿನವು. ಇಂದೇ ತೃತೀಯ ಪುತ್ರ ನಾರಾಯಣನಿಗೆ ಉಪನಯನವನ್ನು ಮಾಡಬೇಕು.' ಎಂಬ ಈ ಆಲೋಚನೆಯನ್ನು ಹೊಂದಿದ ತಂತ್ರಿಗಳು ತಮ್ಮ ಅರ್ಧಾಂಗಿನಿಗೆ ಅರುಹಿದರು. ಆ ಸಾಧ್ವೀ ಮಣಿ 'ಇಲ್ಲ' ವೆಂದೆನಲಿಲ್ಲ ಬದಲಾಗಿ ಆನಂದದಿಂದ 'ಆಗಲಿ' ಎಂದರು. ಮಾರನೆಯ ದಿನ ಶ್ರೀಗಳ ಆಜ್ಞೆಯನ್ನು ಪಡೆದ ತಂತ್ರಿಗಳು, ವಟು ನಾರಾಯಣನಿಗೆ ವಿಧಿವತ್ತಾಗಿ ಬ್ರಹ್ಮೋಪ ದೇಶವನ್ನು ಮಾಡಿದರು. ಶ್ರೀಶ್ರೀ ಸುಧೀಂದ್ರತೀರ್ಥ ಶ್ರೀಪಾದರು ವಟುವಿಗೆ ಸರ್ವಸಿದ್ಧಿ ಪ್ರದವಾದ ಶ್ರೀಕೃಷ್ಣಷಡಕ್ಷರ ಮಂತ್ರದ ಉಪದೇಶವನ್ನಿತ್ತು ಅನುಗ್ರಹಿಸಿದರು. ಈ ಮಂತ್ರೋಪದೇಶ ನಾರಾಯಣನ ವಿಶ್ವತೋಮುಖ ಅಭಿವೃದ್ಧಿಗೆ ಬೀಜವಾಯಿತು.

ನಾವು ಗಮನಿಸಬೇಕಾದ ಅಂಶ, ಶ್ರೀಕುಪ್ಪಣ್ಣ ತಂತ್ರಿಗಳು ನಾರಾಯಣನ ಉಪನಯನಕ್ಕಾಗಿ ಎರಡು-ಮೂರು ಉತ್ತಮ ಮುಹೂರ್ತಗಳನ್ನು ನೋಡಿಟ್ಟಿದ್ದರು. ಅದರಲ್ಲಿ ಒಂದು ಮುಹೂರ್ತವು, ಶ್ರೀಶ್ರೀಸುಧೀಂದ್ರ ತೀರ್ಥರ ಆಗಮನದ ದಿನದಂದೇ ಇತ್ತು. ಉಪನಯನವನ್ನು ನಿರ್ಧರಿಸಿ, ನಡೆಸಿದ ತಂತ್ರಿಗಳು ಬಂಧು-ಮಿತ್ರರಿಗಾಗಿ ಕಾಯಲಿಲ್ಲ. ಸಕಲ ಲೌಕಿಕ ವ್ಯವಸ್ಥೆಯನ್ನು ನಿರೀಕ್ಷಿಸಲಿಲ್ಲ. ಆಚಾರ್ಯ ಕರಾರ್ಚಿತ ದೇವರು ಹಾಗೂ ಗುರುಗಳು ಬಂದ ಸಮಯವೇ ಸುಮುಹೂರ್ತವೆಂಬ ಅವರ ವಿಶ್ವಾಸ ಚಂಚಲವಾಗಿರಲಿಲ್ಲ. ಇಂತಹ ವಿಶ್ವಾಸಿಗಳಿಗೆ 'ಜಯ'ವು ಎಲ್ಲಿ ಇಲ್ಲ? ಅಷ್ಟೇ ಅಲ್ಲ ಇವರು ನಿಜವಾದ ಆಧ್ಯಾತ್ಮಿಕ ಸಾಧಕರು ಎಂಬುದಕ್ಕೆ ಬೇರೊಂದು ಪುರಾವೆ ಬೇಕಿಲ್ಲ.

ತಂತ್ರಿಗಳು ತಮ್ಮ ಪುತ್ರ ನಾರಾಯಣನಿಗೆ ತಾವೇ ಪ್ರಾಥಮಿಕ ಕಾವ್ಯ ಪಾಠಗಳನ್ನು, ವೇದ ಪಾಠಗಳನ್ನು ನಡೆಸಿದರು. ಬ್ರಾಹ್ಮಣರಿಗೆ ಅಗತ್ಯವಾದ ವೇದಾಧ್ಯಯನ ವನ್ನು ಬಹು ಶ್ರದ್ಧೆಯಿಂದ ಪೂರೈಸಿದ ನಾರಾಯಣನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಉಡುಪಿಯ 'ಶ್ರೀಮನ್ಮಧ್ವ ಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲೆ' ಯನ್ನು ಸೇರಿದನು. ಆಗ ಆ ಶಾಲೆಗೆ ಆಶ್ರಯ ಶ್ರೀ ಅನಂತೇಶ್ವರ ದೇವಾಲಯ. ಶ್ರೀ ಅದಮಾರು ಮಠದಲ್ಲಿ ನಾರಾಯಣನ ವಾಸ, ಶಯನ, ಶ್ರೀಕೃಷ್ಣಮಠದಲ್ಲಿ ಅಶನ. ಪಾಠಶಾಲೆಯಲ್ಲಿ ಅಧ್ಯಯನ. ನಾರಾಯಣನಿಗೆ ಈ ಮೂರನ್ನು ಹೊರತು ಬೇರೇನೂ ಗೊತ್ತಿರಲಿಲ್ಲ. ಅವನಿಗೆ ಯಾವುದೇ ಶಾಲಾ-ಕಾಲೇಜುಗಳ ಆಧುನಿಕತೆಯ ಸಂಸರ್ಗವಾಗಲೇ ಇಲ್ಲ. ಅವನು ಪ್ರಾಚೀನತೆಯ ಮಧ್ಯದಲ್ಲಿಯೇ ಬೆಳೆದ. ಇದು ಅವನ ಮುಗ್ಧತೆಗೆ ಮೆರುಗು ನೀಡಿತು.

ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀಶ್ರೀ ವಿದ್ಯಾರ್ಣವ ತೀರ್ಥ ಶ್ರೀಪಾದರು ಒಂದೊಮ್ಮೆ ಉಡುಪಿಗೆ ಆಗಮಿಸಿದ್ದರು. ಆಗ ಅವರನ್ನು ಒಂದು ವ್ಯಾಧಿಯು ಬಾಧಿಸಿತು. ಗುಣಮುಖವಾಗದೆ ಉಲ್ಬಣವಾದ ವ್ಯಾಧಿಯನ್ನು ಕಂಡ ಭಂಡಾರಕೇರಿ ಶ್ರೀಪಾದರು, ಆಗಿನ ಪರ್ಯಾಯ ಪೀಠಸ್ಥರಾದ ಶ್ರೀ ಅದಮಾರು ಮಠದ ಶ್ರೀಶ್ರೀ ವಿಬುಧಪ್ರಿಯ ತೀರ್ಥಶ್ರೀಪಾದರಿಗೆ, ತಮ್ಮ ಉತ್ತರಾಧಿಕಾರಿಯ ಸ್ವೀಕಾರದ ಜವಾಬ್ದಾರಿಯನ್ನಿತ್ತರು. ಶ್ರೀಶ್ರೀ ವಿಬುಧಪ್ರಿಯ ತೀರ್ಥರು ಉತ್ತರಾಧಿಕಾರಿ ಯಾಗುವ ಯೋಗ್ಯ ವಟುವಿಗೋಸ್ಕರ ತೀವ್ರವಾಗಿ ವಿಚಾರಿಸಿದರು. ಅವರ ಕಣ್ಣಿಗೆ ಯೋಗ್ಯವಾಗಿ ಕಂಡ ವಟು ' ನಾರಾಯಣ ತಂತ್ರಿ '. ಶ್ರೀಪಾದರು ನಾರಾಯಣನನ್ನು ತಮ್ಮ ಬಳಿ ಕರೆದರು. ಕರೆದು 'ನಿನ್ನನ್ನು ಭಂಡಾರಕೇರಿ ಮಠದ ಸ್ವಾಮಿಗಳನ್ನಾಗಿ ಮಾಡುತ್ತೇವೆ. ನಿನಗೆ ಒಪ್ಪಿಗೆಯೆ?' ಎಂದು ಕೇಳಿದರು. ಹನ್ನೆರಡರ ಹರೆಯದ ನಾರಾಯಣ ನಗುತ್ತ ' ಆಗಲಿ' ಎಂದ. ಅನಂತರದಲ್ಲಿ ಅವನಿಗೆ ಭಂಡಾರಕೇರಿ ಮಠದ ಶ್ರೀಶ್ರೀವಿದ್ಯಾರ್ಣವ ತೀರ್ಥರಿಂದ ಫಲಮಂತ್ರಾಕ್ಷತೆ ಯನ್ನು ಕೊಡಿಸಲಾಯಿತು. ಇದಾವುದೂ ಎರ್ಮಾಳಿ ನಲ್ಲಿರುವ ತಂತ್ರಿ ದಂಪತಿಗಳಿಗೆ ತಿಳಿದಿರಲಿಲ್ಲ. ಶ್ರೀಶ್ರೀ ವಿಬುಧಪ್ರಿಯ ತೀರ್ಥರು ಆ ದಂಪತಿಗಳಿಗೆ ಉಡುಪಿಗೆ ಆಗಮಿಸುವಂತೆ ಆಜ್ಞಾಪತ್ರವನ್ನು ಕಳುಹಿಸಿದರು. ತಂತ್ರಿ ತಂತ್ರಿಗಳು ಸಪತ್ನೀಕರಾಗಿ ಶ್ರೀಪಾದರ ಮುಂದೆ ನಿಂತರು. ಅವರಿಗೆ ಶ್ರೀಪಾದರು ' ಅವರ ಮಗನ ಸಂನ್ಯಾಸದ ವಿಷಯವನ್ನು ' ತಿಳಿಸಿದರು. ವಿಷಯವನ್ನು ಶ್ರವಣಮಾಡಿದ ದಂಪತಿಗಳು ಸಹಜವಾಗಿ ಒಂದು ಕ್ಷಣ ದಿಗ್ಭ್ರಮೆ ಗೊಂಡರು. ಹೆತ್ತಕರುಳು ಇದನ್ನು ಸಮ್ಮತಿಸಲಿಲ್ಲ. ಮರುಗಿತು. ತಮ್ಮ ವಂಶಾಭಿವೃದ್ಧಿಕಾರಕ ನಾಗಬೇಕಾದ ಕುವರ ಸುಖಮಯ ಜೀವನವನ್ನು ತೊರೆದು ವಿರಕ್ತ ಯತಿ ಜೀವನವನ್ನು ನಡೆಸುವ ಸ್ಥಿತಿಯನ್ನು ಕಲ್ಪಿಸಿ ದಂಪತಿಗಳ ಹೃದಯಗಳು ಮಿಡಿದವು. ಇದು ಹೆತ್ತಕರುಳಿನ ಸಹಜ ಗುಣ. ಆದರೆ ಶಾಸ್ತ್ರಜ್ಞರಾದ ತಂತ್ರಿಗಳು ತತ್ ಕ್ಷಣದಲ್ಲಿ ಎಚ್ಚೆತ್ತರು. ತಮ್ಮ ಕುಮಾರನು ದ್ವೈತವೇದಾಂತ ಸಾಮ್ರಾಜ್ಯಾಧಿಪತಿ ಪಟ್ಟವನ್ನೇರುವುದ ನ್ನರಿತು ಹರ್ಷಚಿತ್ತರಾದರು. ನಿಸ್ಪೃಹ ಸ್ವಭಾವದ ತಂತ್ರಿಗಳು ತಮ್ಮ ಸುಪುತ್ರನನ್ನು ಸರ್ವಜ್ಞಾಚಾರ್ಯರ ಸಂಸ್ಥಾನಕ್ಕೆ ಸಮರ್ಪಿಸಿದರು. ಶಾಸ್ತ್ರೋಕ್ತಕ್ರಮದಿಂದ ವಟುವಿನ ಆತ್ಮಶ್ರಾದ್ಧ, ವಿರಜಾಹೋಮಾದಿ ಕಾರ್ಯಕ್ರಮಗಳು ಜರುಗಿದವು. ಆದರೆ, ತಮ್ಮ ಉತ್ತರಾಧಿಕಾರಿಯು ದಂಡ ಧಾರಿಯಾಗುವುದಕ್ಕೆ ಮುಂಚೆಯೇ ಶ್ರೀ ಭಂಡಾರಕೇರಿ

ಮಠದ ಶ್ರೀಶ್ರೀ ವಿದ್ಯಾರ್ಣವ ತೀರ್ಥಶ್ರೀಪಾದರು ಶ್ರೀಹರಿಯ ಪದವನ್ನು ಸೇರಿದರು. ಆಗ ಶ್ರೀಶ್ರೀ ವಿಬುಧ ಪ್ರಿಯ ತೀರ್ಥಶ್ರೀಪಾದರೇ ಆಶ್ರಮವನ್ನು ನೀಡುವುದು ಅನಿವಾರ್ಯವಾಯಿತು. ಇದು ಭಗವಂತನ ಸಂಕಲ್ಪ. ಈ ಆಶ್ರಮದ ಸಾರ್ಥಕ್ಯವನ್ನು ಜಗತ್ತಿಗೆ ತೋರಿದ ಸಂಕಲ್ಪ.

ಕ್ರೋಧನ ನಾಮ ಸಂವತ್ಸರದ ಕಾರ್ತೀಕ ಕೃಷ್ಣ ಪಂಚಮಿ (5-11-1925) ದಿನದಂದು ಶ್ರೀಕೃಷ್ಣಪೂಜಾ ಪರ್ಯಾಯ ಪೀಠಸ್ಥರಾದ ಶ್ರೀಶ್ರೀ ವಿಬುಧಪ್ರಿಯ ತೀರ್ಥಶ್ರೀಪಾದರು ಶ್ರೀ ಸರ್ವಜ್ಞಾಚಾರ್ಯರ ಸಿಂಹಾಸನದಲ್ಲಿ ಕುಳಿತು, ವಟು ನಾರಾಯಣ ತಂತ್ರಿಗೆ ಪ್ರಣವೋಪದೇಶವಿತ್ತು ಅನುಗ್ರಹಿಸಿದರು. ವೇದಾಂತ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ಮಾಡಿ ' ಶ್ರೀವಿದ್ಯಾ ಮಾನ್ಯತೀರ್ಥ' ಎಂದು ನಾಮಕರಣಮಾಡಿದರು. ಈ ನಾಮದ ಆಯ್ಕೆ ಸಂಪೂರ್ಣ ಅರ್ಥಪೂರ್ಣವಾಯಿತು. ಅಷ್ಟೇ ಅಲ್ಲ, ಮಹಾಗುರುಗಳಾದ ಶ್ರೀಶ್ರೀ ವಿಬುಧಪ್ರಿಯ ತೀರ್ಥರ ಉನ್ನತ ವ್ಯಕ್ತಿತ್ವವನ್ನು ಸೂಚಿಸಿತು.

ಒಟ್ಟಿನಲ್ಲಿ ಮೋಕ್ಷಸಾಧನಗಳಲ್ಲಿ ಶ್ರೇಷ್ಠವಾದ ಯತ್ಯಾಶ್ರಮದ ಪಥದಲ್ಲಿ ಸಾಗಲು ದಂಡ, ಕಮಂಡಲುಗಳನ್ನು ಪಿಡಿದು, ಕೌಪೀನ ಕಾಷಾಯವಸ್ತ್ರ ತುಳಸೀಮಣಿ ಮಾಲೆಗಳಿಂದ ಭೂಷಿತರಾಗಿ ಬಂದ ನಾರಾಯಣ ತಂತ್ರಿಗಳು ಶ್ರೀಮದಾಚಾರ್ಯರ ಅಚ್ಚುಮೆಚ್ಚಿನ ಶಿಷ್ಯರಾದ ಶ್ರೀಸತ್ಯತೀರ್ಥರ ಪರಂಪರೆಯ ಮೂವತ್ತೆರಡನೆಯ ಯತಿಯಾಗಿ ಶ್ರೀವಿದ್ಯಾಮಾನ್ಯ ತೀರ್ಥರೆನಿಸಿದರು. ವಿದ್ಯೆಗಾಗಿ ಉಡುಪಿಗೆ ಆಗಮಿಸಿದ ನಾರಾಯಣ ತಂತ್ರಿಗಳು ವಿದ್ಯಾಮಾನ್ಯತೀರ್ಥ ರಾದರು.ಗುರುಗಳಾದ ಶ್ರೀಶ್ರೀವಿಬುಧಪ್ರಿಯ ತೀರ್ಥರಿಂದ ಪ್ರಣವೋಪದೇಶ ದೊಂದಿಗೆ ''ವಿಷ್ಣು ಸರ್ವೋತ್ತಮತ್ವವನ್ನು ಸರ್ವದಾ ಪ್ರತಿಪಾದಿಸು'' ಎಂಬ ಶ್ರೀಮದಾಚಾರ್ಯರ ಆದೇಶವನ್ನು ಸ್ವೀಕರಿಸಿದರು. ತಮ್ಮ ಪೀಠಗುರುಗಳಾದ ಶ್ರೀಶ್ರೀ ವಿದ್ಯಾರ್ಣವತೀರ್ಥರ ವೃಂದಾವನವನ್ನು ಉಡುಪಿಯ ಶ್ರೀಭಂಡಾರಕೇರಿ ಮಠದಲ್ಲಿಯೇ ಸ್ಥಾಪಿಸಿ ಆರಾಧನೆಯನ್ನು ಆಚರಿಸಿದರು.

ಭಂಡಾರಕೇರಿ ಮಠದ ನೂತನ ಪುಟ್ಟಯತಿ ಶ್ರೀವಿದ್ಯಾ ಮಾನ್ಯತೀರ್ಥರು ಶ್ರೀವಿಬುಧಪ್ರಿಯ ತೀರ್ಥರ ಪರ್ಯಾಯದ ಕೊನೆಯವರೆಗೂ ಉಡುಪಿಯಲ್ಲಿಯೇ ನೆಲೆಸಿದರು. ಆ ಮಹಾಗುರುಗಳನ್ನೇ ಆಶ್ರಯಿಸಿದರು. ಪರ್ಯಾಯದ ನಂತರ ಶ್ರೀವಿಬುಧಪ್ರಿಯತೀರ್ಥರು ಘಟಿಕಾಚಲ ಕ್ಷೇತ್ರಕ್ಕೆ ತೆರಳಿದರು. ಕರುವು ಹಸುವನ್ನು ಹಿಂಬಾಲಿಸುವಂತೆ ಈ ಬಾಲಯತಿ ಶ್ರೀವಿಬುಧಪ್ರಿಯ ತೀರ್ಥರ ಬೆನ್ನು ಹಿಡಿದರು. ಆ ಗುರುಗಳಿಂದ ಶುದ್ಧವಾದ ಶ್ರೀಮದಾಚಾರ್ಯರ ಕ್ರಮದ ಅನುಷ್ಠಾನ ಪದ್ಧತಿಯನ್ನು ರೂಢಿಸಿಕೊಂಡರು. ಅವರ ಬಳಿಯಲ್ಲಿಯೇ ಅನೇಕ ಪ್ರಾಥಮಿಕ ಗ್ರಂಥಗಳ ಅಧ್ಯಯನವನ್ನು ನಡೆಸಿದರು. ಅಧ್ಯಯನ, ಅರ್ಚನ, ಅನುಷ್ಠಾನಗಳೇ ಅವರ ಧ್ಯೇಯವಾಗಿತ್ತು. ಹೀಗೆ ಮೂರು ವರ್ಷಗಳ ಕಾಲ ಯೋಗ ನರಸಿಂಹ-ಯೋಗಾಂಜನೇಯರ ಸನ್ನಿಧಿಯಲ್ಲಿದ್ದರು. ಅಂದಿನಿಂದಲೇ ಅವರಿಗೆ ಘಟಿಕಾಚಲವು ಅತ್ಯಂತ ಆಪ್ಯಾಯಮಾನವಾದ ಕ್ಷೇತ್ರವಾಯಿತು. ಶ್ರೀವಿದ್ಯಾ ಮಾನ್ಯತೀರ್ಥರಿಗೆ ಹೆತ್ತವರಂತೆ ರಕ್ಷಕರಾಗಿದ್ದ ಶ್ರೀಶ್ರೀವಿಬುಧಪ್ರಿಯತೀರ್ಥರು ಚೈತ್ರ ಬಹುಳ ತ್ರಯೋದಶೀ ತಿರುಪತಿಯಯಂದು ಶ್ರೀನಿವಾಸನ ಸನ್ನಿಧಿಯಲ್ಲಿ ಅವನ ಪದವನ್ನು ಸೇರಿದರು. ಆ ಮುಂಚೆಯೇ

ಅವರು ತಮ್ಮ ಅದಮಾರು ಮಠಕ್ಕೆ ಉತ್ತರಾಧಿಕಾರಿಗಳನ್ನಾಗಿ ಶ್ರೀಶ್ರೀ ವಿಬುಧಮಾನ್ಯತೀರ್ಥರನ್ನು ನೇಮಕ ಮಾಡಿದ್ದರು. ತಮ್ಮ ಅದ್ಭುತ ಶಕ್ತಿಯನ್ನು ಶ್ರೀವಿದ್ಯಾಮಾನ್ಯ ತೀರ್ಥರಲ್ಲಿ ತುಂಬಿದ್ದರು. ಪೂರ್ಣ ಅನುಗ್ರಹಿಸಿದ್ದರು. ಈ ಅನುಗ್ರಹವೇ ಶ್ರೀಶ್ರೀವಿದ್ಯಾಮಾನ್ಯ ತೀರ್ಥರ ಭವಿಷ್ಯತ್ತಿನ ಬೆಳವಣಿಗೆಗೆ ಬೆನ್ನೆಲುಬಾಯಿತು.



# ವಿದ್ಯೋಪಾಸನೆ

ಶ್ರೀವಿದ್ಯಾಮಾನ್ಯತೀರ್ಥರ ವಿದ್ಯಾಲಾಲಸೆ ಅಧಿಕವಾದಂತೆ ವಿಘ್ನಗಳೂ ಅಧಿಕವಾಗುತ್ತಿದ್ದವು. ಆದರೂ ಅವರು ಅವುಗಳನ್ನು ಲೆಕ್ಕಿಸಲಿಲ್ಲ. ಅವರು ತಮ್ಮ ಭಂಡಾರಕೇರಿ ಗ್ರಾಮದ ಮೂಲ ಮಠಕ್ಕೆ ಆಗಮಿಸಿದರು. ಅಲ್ಲಿಯೇ ನೆಲೆಸಿದರು. ಅವರ ಪಾಠಕ್ಕಾಗಿ ಅಂದಿನ ಉಡುಪಿಯ ಪ್ರಾಂತ್ಯದಲ್ಲಿ ಹಿರಿಯ ವಿದ್ವಾಂಸರಾದ ಶ್ರೀ ಇನ್ನ ವಾಸುದೇವಾಚಾರ್ಯರು ಬಂದರು. ಅವರು ಸದಾಚಾರಿಗಳು. ನೈಷ್ಠಿಕ ಬ್ರಹ್ಮಚಾರಿಗಳು. ನ್ಯಾಯ-ವೇದಾಂತಾದಿ ಶಾಸ್ತ್ರಗಳಲ್ಲಿ ಪ್ರವೀಣರು. ಇವರು ಶ್ರೀಶ್ರೀ ವಿದ್ಯಾಮಾನ್ಯತೀರ್ಥರಿಗೆ ಹಂತಹಂತವಾಗಿ ದಶಪ್ರಕರಣ, ದಶೋಪನಿಷದ್ಭಾಷ್ಯ ಪಾಠಗಳನ್ನು ಮಾಡಿದರು. ತತ್ವಪ್ರಕಾಶಿಕಾ ಪಾಠವೂ ಜರುಗಿತು. ಅದರ ಮಂಗಲ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯಿತು.

ನಂತರ ಶ್ರೀಶ್ರೀ ವಿದ್ಯಾಮಾನ್ಯತೀರ್ಥರ ಮನಸ್ಸು ದೀರ್ಘವಾಗಿ ಆಲೋಚಿಸಿತು. ದ್ವೈತ ವೇದಾಂತ ಪ್ರಪಂಚದ ಉಚ್ಚತಮಗ್ರಂಥಗಳ ಅಧ್ಯಯನಕ್ಕಾಗಿ ಕಾತರಪಟ್ಟಿತು. ಆ ಗ್ರಂಥಗಳ ಅಧ್ಯಾಪನಕ್ಕೆ ತಕ್ಕ ಯೋಗ್ಯ ಗುರುವನ್ನು ಹುಡುಕುತ್ತಿತ್ತು. ಅದಕ್ಕೆ ಸರಿಯಾಗಿ, ಶಕಪುರುಷರಾದ ಶ್ರೀಉತ್ತರಾದಿ ಮಠದ ಶ್ರೀಶ್ರೀ ಸತ್ಯಧ್ಯಾನ ತೀರ್ಥರ ಪ್ರಗಲ್ಭ ಪಾಂಡಿತ್ಯವು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರನ್ನು ಆತ್ತ ಸೆಳೆಯಿತು.

ಆಗಲೇ ಅನೇಕ ಮಠಾಧೀಶರ ಹಾಗೂ ನೂರಾರು ವಿದ್ಯಾರ್ಥಿಗಳ ವೃಂದವೇ ಶ್ರೀಶ್ರೀ ಸತ್ಯಧ್ಯಾನತೀರ್ಥರ ಬಳಿ ಅಧ್ಯಯನಕ್ಕಾಗಿತ್ತು. ಈಗ ಶ್ರೀ ವಿದ್ಯಾಮಾನ್ಯ ತೀರ್ಥರ ಹೊಸ ಸೇರ್ಪಡೆಯಾಯಿತು. ಈ ಎರಡು ಮಹಾನ್ ಚೇತನಗಳು ಮೊದಲ ಬಾರಿಗೆ ಬೆರೆತ ಕ್ಷೇತ್ರ ತಿರುಚಾನೂರು (ಪದ್ಮಸರೋವರ). ಒಂದು ಸುಮುಹೂರ್ತದಲ್ಲಿ, ಆನಂದತೀರ್ಥವರದನಾದ ಶ್ರೀಶ್ರೀನಿವಾಸನ ಹಾಗೂ ಶ್ರೀಪದ್ಮಾವತೀ ದೇವಿಯರ ಸನ್ನಿಧಿಯಲ್ಲಿ ಶ್ರೀಸತ್ಯಧ್ಯಾನ ತೀರ್ಥರು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಶ್ರೀಮನ್ನ್ಯಾಯ ಸುಧಾ ಪಾಠವನ್ನು ಆರಂಭಿಸಿದರು. ಸ್ವಾಭಾವಿಕ ಅದ್ಭುತ ವಿದ್ವತ್ತಿನಿಂದ ಪೂರ್ಣರಾದ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಶ್ರೀ ಸತ್ಯಧ್ಯಾನ ತೀರ್ಥರ ಪಾಠವು ರತ್ನಕ್ಕೆ ಚಿನ್ನವನ್ನು ತೊಡಿಸಿದಂತಾಯಿತು.

ಶಿಷ್ಯರು ಮಾಡಲೇಬೇಕಾದ ಗುರುಸೇವೆ ಇಬ್ಬಗೆಯದು. ಒಂದು ಗುರುಶುಶ್ರೂಷೆ. ಎರಡನೆಯದು ಯೋಗ್ಯ ಪ್ರಶ್ನೆಗಳನ್ನು ಕೇಳುವುದು. ಇವೆರಡರಲ್ಲಿ ಮೊದಲನೆಯ ಗುರು ಶುಶ್ರೂಷೆಯನ್ನು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು ಮಾಡುವಂತಿರಲಿಲ್ಲ. ಕಾರಣ, ಇದಕ್ಕೆ ಗುರು ಶ್ರೀ ಸತ್ಯಧ್ಯಾನತೀರ್ಥರ ಒಪ್ಪಿಗೆಯಿರಲಿಲ್ಲ. ಅನೇಕ ಪೀಠಾಧಿಪತಿಗಳಿಗೆ ವಿದ್ಯಾಗುರುವೆನಿಸಿದ ಶ್ರೀಶ್ರೀ ಸತ್ಯಧ್ಯಾನ ತೀರ್ಥರು, ತಮ್ಮ ವಿದ್ಯಾ ಶಿಷ್ಯರಾದ ಯತಿಗಳಿಂದ ನಮಸ್ಕಾರವನ್ನೂ ಸಹ ಸ್ವೀಕರಿಸುತ್ತಿರಲಿಲ್ಲ. ಕಾರಣ ಈ ಯತಿಗಳು ಕೇವಲ ಯತಿಗಳಾಗಿರದೆ ಶ್ರೀಮದಾಚಾರ್ಯರ ಸಂಸ್ಥಾನಾಧೀಶ್ವರರೆಂಬ ಗೌರವ ಭಾವನೆ ಆ ಮಹಾಗುರುಗಳಿಗಿತ್ತು. ಪೀಠಾಧಿಪತಿಗಳಿಂದ ನಮಸ್ಕಾರವೇ ಇಲ್ಲವೆಂದ ಮೇಲೆ ಶುಶ್ರೂಷೆಯ ಮಾತೆಲ್ಲಿ? ಅಂತೂ ಶ್ರೀ ವಿದ್ಯಾಮಾನ್ಯ ತೀರ್ಥರಪಾಲಿಗೆ ಎರಡನೆಯ ಪ್ರಶ್ನೆಯ ಸೇವೆಯ ಭಾಗ್ಯವಿತ್ತು. ಯೋಗ್ಯ ಪ್ರಶ್ನೆಗಳನ್ನುಕೇಳುವುದು ಅವರಸ್ವಭಾವವೇ ಆಗಿತ್ತು. ಇದು ಗುರು ಶ್ರೀ ಸತ್ಯಧ್ಯಾನ ತೀರ್ಥರಿಗೆ ಬಹು ಮುದವನ್ನೀಡುತ್ತಿತ್ತು. ಈ ಶಿಷ್ಯ ಶ್ರೇಷ್ಠರು ಸಮರ್ಪಕ ಪ್ರಶ್ನೆಗಳನ್ನು ಕೇಳುತ್ತಿದ್ದರು. ಗುರುಗಳು ಉತ್ತಮ ಉತ್ತರಗಳನ್ನು ನೀಡುತ್ತಿದ್ದರು. ಹಗಲಿರುಳೂ ಪಾಠ-ಚಿಂತನೆಗಳಲ್ಲಿಯೇ ಕಳೆದು, ಕೇಳಿದ ಪಾಠವನ್ನು ಮರಳಿ ಗುರುಗಳಿಗೆ ಒಪ್ಪಿಸುವುದು, ವಿಶೇಷ ವಿಷಯಗಳನ್ನು ವಿಮರ್ಶಿಸುವುದು ಶ್ರೀ ವಿದ್ಯಾಮಾನ್ಯ ತೀರ್ಥರ ಜೀವಾಳವಾಯಿತು. ಅವರು ಅದನ್ನು ಸಾಧಿಸಿದರು. ಗುರುಗಳನ್ನು ಸೆರೆಹಿಡಿದರು. ಗುರು ಶ್ರೀ ಸತ್ಯಧ್ಯಾನ ತೀರ್ಥರು ತಮ್ಮಲ್ಲಿ ಅಡಗಿರುವ ಅನೇಕ ಅತ್ಯುತ್ತಮ ವಿಚಾರ ಧಾರೆಗಳನ್ನು ಈ ಶಿಷ್ಯರಿಗೆ ಧಾರೆಯೆರೆದರು. ತಮ್ಮ ಪ್ರಮುಖ ಶಿಷ್ಯ ಮಂಡಲಿಯಲ್ಲಿ ಮೊದಲನೆಯ ಸ್ಥಾನವನ್ನು ಶ್ರೀ ವಿದ್ಯಾಮಾನ್ಯ ತೀರ್ಥರಿಗೆಯಿತ್ತರು.

ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮ ಅಧ್ಯಯನದ ಅವಧಿಯಲ್ಲೇ ತಮ್ಮ ಪ್ರಿಯ ವಿದ್ಯಾರ್ಥಿಯಾಗಿದ್ದ ಶ್ರೀ ಪಿ.ಕೆ. ಹರಿದಾಸಾಚಾರ್ಯರಿಗೆ ತತ್ವ ಪ್ರಕಾಶಿಕಾ ಪಾಠವನ್ನು ಮಾಡುತ್ತಿದ್ದರು. ಒಂದೆಡೆ ಪಾಠವನ್ನು ಕೇಳುವುದು ಮತ್ತೊಂದೆಡೆ ಪಾಠವನ್ನುಹೇಳುವುದು. ಪ್ರಶ್ನೆ ಕೇಳುವುದು. ಉತ್ತರಗಳನ್ನು ಪಡೆಯುವುದು. ಸ್ನೇಹಿತ ಶಿಷ್ಯರೊಡನೆ ವಿಚಾರ ವಿನಿಮಯವನ್ನು ಮಾಡುವುದು ಹೀಗೆ ಶ್ರೀ ವಿದ್ಯಾಮಾನ್ಯ ತೀರ್ಥರು ಒಂದರಘಳಿಗೆ ಯಲ್ಲೂ ಗ್ರಂಥಗಳನ್ನು ಅಗಲಲಿಲ್ಲ. ಇದು ಇವರ ಸಾಧನೆಯ ಉಚ್ಚತ್ವವನ್ನು ಸೂಚಿಸುವುದು. ಈ ತೆರನಾದ ಚಟುವಟಿಕೆಗಳಿಂದ ಗುರು ಶ್ರೀ ಸತ್ಯಧ್ಯಾನತೀರ್ಥರ ಪ್ರೀತಿಯ ಪ್ರವಾಹ ಶ್ರೀ ವಿದ್ಯಾಮಾನ್ಯ ತೀರ್ಥರ ಮೇಲೆ ಹರಿದು ಬಂದಿತು. 'ತನ್ನಲ್ಲಿರುವ ತತ್ವನಿಧಿಯನ್ನು ಜೋಪಾನವಾಗಿ ಕಾಯಬಲ್ಲ ಶಿಷ್ಯನು ದೊರಕಿದಾಗ ಆಗುರುವಿಗೆ ಆಗುವ ಆನಂದಕ್ಕೆ ಪಾರವೇ ಇರುವುದಿಲ್ಲ.' ಎಂದು ಉಪನಿಷತ್ತಿನ ಮಾತು. ಅದಕ್ಕೆ ದೃಷ್ಟಾಂತ ಶ್ರೀ ಸತ್ಯಧ್ಯಾನತೀರ್ಥರಿಗಾದ ಅಮಿತಾನಂದ. ಆನಂದ ಭರಿತರಾದ ಗುರುಗಳು ಆನಂದತೀರ್ಥರ ಅನುವ್ಯಾಖ್ಯಾನ ವನ್ನು ನ್ಯಾಯಸುಧೆಯ ಜೊತೆಯಲ್ಲಿ ಈ ಶಿಷ್ಯವರನಿಗೆ ಬೋಧಿಸಿದರು. ಕೇವಲ ಒಂದು ವರುಷದಲ್ಲಿ ಆರು ನೂರು ಪತ್ರಗಳ ಬೃಹದ್‌ಗ್ರಂಥವಾದ ನ್ಯಾಯ ಸುಧೆಯ ಪಾಠ ಪೂರ್ಣಗೊಂಡಿತು. ತಿರುಪತಿಯಲ್ಲಿಯೇ ಮಂಗಲ ಮಹೋತ್ಸವವು ನೆರವೇರಿತು.

ನ್ಯಾಯಸುಧೆಯ ನಂತರದ ವಾರ ನ್ಯಾಯಾಮೃತ. ಇದು ಶ್ರೀ ಮಧ್ವ್ಯಾಸರಾಜ ಗುರುಸಾರ್ವಭೌಮರಿಂದ ಪ್ರಣೀತ. ಇದರಲ್ಲಿ ತುಂಬಿರುವುದು ಅದ್ವೈತಮತದ ಖಂಡನೆ ಹಾಗೂ ಆಚಾರ್ಯರ ಸಿದ್ಧಾಂತದ ಸಮರ್ಥನೆ. ಗುರುಗಳೊಂದಿಗೆ ಸಂಚರಿಸುತ್ತಿದ್ದ ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮ ವಿಶೇಷ ಅಧ್ಯಯನದ ಜೊತೆಯಲ್ಲಿ ಮಾಡುತ್ತಿದ್ದ ತತ್ವ ಪ್ರಕಾಶಿಕಾ ಪಾಠದ ಮಂಗಲವನ್ನು ಬಿಜಾಪುರದ (ಚಾತುರ್ಮಾಸ್ಯದಲ್ಲಿ) ಶ್ರೀ ಪರ್ವತೀಕರರ ಮನೆಯಲ್ಲಿ ನೆರವೇರಿಸಿದರು. ತಮ್ಮ ಶಿಷ್ಯರಿಗೆ ನ್ಯಾಯಸುಧೆಯ ಪಾಠವನ್ನಾರಂಭಿಸಿದರು. ಒಂದೆಡೆ ನ್ಯಾಯಾಮೃತವನ್ನು ಕೇಳುವುದು. ಇನ್ನೊಂದೆಡೆ ನ್ಯಾಯಸುಧೆಯನ್ನು ಹೇಳುವುದು. ಈ ನ್ಯಾಯಸುಧೆಯ ಪಾಠವನ್ನು ಮೊದಲ ಬಾರಿ ಹೇಳುತ್ತಿದ್ದ ಶ್ರೀ ವಿದ್ಯಾಮಾನ್ಯ ತೀರ್ಥರ ವಿದ್ಯಾರ್ಥಿಗಳು ಐವರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಅಧ್ಯಯನ ಮಾಡಿದ ಶ್ರೀ ಕೊರ್ಲಹಳ್ಳಿ ರಾಘವೇಂದ್ರಾಚಾರ್ಯರು ಹಾಗೂ ಶ್ರೀ ಜಕ್ಕಲಿ ಬೋಧ ರಾಯಾಚಾರ್ಯರು, ಶ್ರೀ ಪಿ.ಕೆ. ಹರಿದಾಸಾ ಚಾರ್ಯರು, ಶ್ರೀ ಬಿ. ವಾದಿರಾಜಾ ಚಾರ್ಯರು ಹಾಗೂ ಶ್ರೀ ಲಕ್ಷ್ಮೀನಾರಾಯಣ ಕೊಡಂಚರು.

ಹೀಗೆ ಶ್ರೀ ವಿದ್ಯಾಮಾನ್ಯ ತೀರ್ಥರ ಅಧ್ಯಯನ - ಅಧ್ಯಾಪನಗಳು ಜೊತೆಯಲ್ಲೇ ಸಾಗುತ್ತಿದ್ದವು. ಹಗಲು-ರಾತ್ರಿಗಳೆನ್ನದೆ ಗುರು-ಶಿಷ್ಯರ ವಿಚಾರ ವಿಮರ್ಶೆಗಳು ನಡೆಯುತ್ತಿದ್ದವು. ಶ್ರೀ ವಿದ್ಯಾಮಾನ್ಯತೀರ್ಥರು ನ್ಯಾಯಾಮೃತದ ನಂತರ ತರ್ಕತಾಂಡವ, ಚಂದ್ರಿಕಾದಿ ಉದ್ಗ್ರಂಥಗಳನ್ನು, ಬಾಧಾಂತನ್ಯಾಯಶಾಸ್ತ್ರವನ್ನು, ವ್ಯಾಕರಣ ಮೀಮಾಂಸಾ ಶಾಸ್ತ್ರಗಳನ್ನು ಅಭ್ಯಸಿಸಿದರು. ಅವರ ಅಭ್ಯಾಸದ ಅವಧಿ ಕೇವಲ ನಾಲ್ಕು ವರ್ಷ. ಅಲ್ಪ ಅವಧಿಯಲ್ಲಿ ಅತ್ಯಧಿಕ ಪ್ರೌಢ ಗ್ರಂಥಗಳ ಅಧ್ಯಯನ ಹಾಗೂ ತಳಸ್ಪರ್ಶಿ ಪಾಂಡಿತ್ಯವನ್ನು ಸಂಪಾದಿಸಿದ ಶ್ರೀ ವಿದ್ಯಾಮಾನ್ಯ ತೀರ್ಥರ ಮೇಧಾ ಶಕ್ತಿ, ಪ್ರಯತ್ನ ಹಾಗೂ ಶ್ರದ್ಧೆಗಳು ಎಷ್ಟು ಉನ್ನತ ಮಟ್ಟದಲ್ಲಿವೆ ಎಂದು ನಾವು ತಿಳಿಯಬಹುದು. ಅವರು ಈ ಉದ್ಗ್ರಂಥಗಳ ಅಧ್ಯಯನದ ಮಧ್ಯದಲ್ಲಿ, ತಾವು ತಮ್ಮ ಶಿಷ್ಯರಿಗೆ ಹೇಳಿದ ನ್ಯಾಯಸುಧೆಯ ಮಂಗಲೋತ್ಸವವನ್ನು ತಿರುಪತಿ ಯಲ್ಲಿಯೇ ಗುರುಗಳ ಸಮಕ್ಷಮದಲ್ಲಿ ನೆರವೇರಿಸಿ ಅವರಿಗೆ ಅರ್ಪಿಸಿದರು. ಆ ವೇಳೆಯಲ್ಲಿ, ಹೇರಳ ಬೆಳ್ಳಿ ಪಾತ್ರೆಗಳು ತುಂಬಿದ ಗೋಣಿ ಚೀಲಗಳು ಬಂದವು. ಜೊತೆಯಲ್ಲಿ ನಾಣ್ಯಗಳ ಚೀಲಗಳೂ ಕೂಡ. ಕೊಡುಗೈ ದಾನಿಯಾಗಿದ್ದ ಶ್ರೀ ಸತ್ಯಧ್ಯಾನತೀರ್ಥರು ತಮ್ಮ ಹಸ್ತದಿಂದ ಆ ರಜತ ಪಾತ್ರೆ-ನಾಣ್ಯಗಳನ್ನು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ನೀಡುತ್ತಿದ್ದರು. ಶ್ರೀ ವಿದ್ಯಾಮಾನ್ಯತೀರ್ಥರು ಎಲ್ಲ ವಿದ್ವಾಂಸರಿಗೆ - ವಿದ್ಯಾರ್ಥಿಗಳಿಗೆ ವಿತರಿಸುತ್ತಿದ್ದರು. ಈ ರಜತ ಪಾತ್ರೆಗಳ ದಾನ - ಬೊಗಸೆಯಷ್ಟು ನಾಣ್ಯಗಳ ದಾನ ಶ್ರೀ ಸತ್ಯಧ್ಯಾನ ತೀರ್ಥರಿಗೆ ಸಾಮಾನ್ಯವಾಗಿತ್ತು. ಆದರೆ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಆಶ್ಚರ್ಯವಾಗಿತ್ತು. ಅದಕ್ಕಿಂತ ಮುಖ್ಯವಾಗಿ ಅವರಿಗೆ ಆದರ್ಶವಾಯಿತು. ಅವರ ಭವಿಷ್ಯತ್ತಿನ ದಾನೌದಾರ್ಯಗಳಿಗೆ ನಾಂದಿ ಯಾಯಿತು.

ಶ್ರೀ ವಿದ್ಯಾಮಾನ್ಯತೀರ್ಥರು, ತಮ್ಮ ಗುರುಗಳು ಏರ್ಪಡಿಸಿದ ಸಭೆಗಾಗಿ ಆಗಮಿಸಿದ ನೂರಾರು ದ್ವೈತ ಹಾಗೂ ಪರವಾದಿ ಪಂಡಿತರೆದುರು ಅಸದೃಶ ವಾಕ್ಯಾರ್ಥ ಕೌಶಲವನ್ನು ಪ್ರಕಟಿಸಿದರು. ಭಂಡಾರಕೇರಿ ಶ್ರೀಪಾದರ ಅದ್ಭುತ ಪಾಂಡಿತ್ಯಕ್ಕೆ ಅಸ್ಖಲಿತ ವಾಕ್ಸರಣಿಗೆ ಪಂಡಿತ ಮಂಡಲಿ

ಮಂಡೆ ಬಾಗಿತು. ಶಿಷ್ಯನ ಸಾಮರ್ಥ್ಯ ಕಂಡ ಗುರು ಶ್ರೀ ಸತ್ಯಧ್ಯಾನತೀರ್ಥರು ಈ ಯತಿಶಿಷ್ಯರನ್ನು ಹೃದಯ ತುಂಬಿ ಹರಸಿದರು. ಅವರು ಅವರಿಗೆ ಏಕಾಂತದಲ್ಲಿ ವೇದಾಂತ ಪ್ರಪಂಚದಲ್ಲಿರುವ ಸೂಕ್ಷ್ಮತತ್ವಸಂತತಿಯನ್ನೇ ನೀಡಿದರು. ಜೊತೆಯಲ್ಲಿ ಅದ್ವೈತ ಗ್ರಂಥಗಳನ್ನೂ ಪಾಠ ಮಾಡಿದರು. ಅವುಗಳ ಲೋಪ ದೋಷಗಳನ್ನು ತೋರಿಸಿಕೊಟ್ಟರು. ಇದು ಶ್ರೀ ವಿದ್ಯಾಮಾನ್ಯ ತೀರ್ಥರ ಪರಮತ ನಿರಾಕರಣೆಗೆ ಬಹಳ ಸಹಕಾರಿಯಾಯಿತು. ಈ ಗುರುಶಿಷ್ಯರ ಏಕಾಂತೋಪದೇಶದ ಸಮಯದಲ್ಲಿ ಜಗತ್ತು ಮಲಗಿತ್ತು. ಇವರೀರ್ವರ ಸಂವಾದಕ್ಕೆ ಸಹವರ್ತಿಗಳಾದವರು ಪಂಡಿತ ಶ್ರೇಷ್ಠರಾದ ಶ್ರೀ ವರಖೇಡಿ ನರಸಿಂಹಾಚಾರ್ಯರು.

ವಿಶಿಷ್ಟವಾದ ರೀತಿಯಲ್ಲಿ ಅಧ್ಯಯನವನ್ನು ಪೂರೈಸಿ ಸ್ವಕ್ಷೇತ್ರಕ್ಕೆ ಹೊರಡಲುನುವಾದ ಶ್ರೀ ವಿದ್ಯಾಮಾನ್ಯ ತೀರ್ಥರು ಗುರುಗಳಲ್ಲಿಗೆ ಬಂದರು. 'ನನಗೆ ಹೊರಡಲು ಅನುಜ್ಞೆಯನ್ನು ನೀಡಬೇಕು. ಸದಾ ಅನುಗ್ರಹವಿರಬೇಕು' ಎಂದರು. ಈ ಮಾತನ್ನು ಕೇಳಿದ ಗುರು ಶ್ರೀ ಸತ್ಯಧ್ಯಾನ ತೀರ್ಥರಿಗೆ ಸಿಡಿಲು ಬಡಿದಂತಾಯಿತು. ಕಾರಣ ಅವರು ತಮ್ಮ ಪ್ರಾಣಸಮರಾದ ಈ ಶಿಷ್ಯ ಶ್ರೇಷ್ಠ ಯತಿಗಳು ತಮ್ಮಿಂದ ದೂರವಾಗಿರುವುದನ್ನು ನಿರೀಕ್ಷಿಸಿರಲಿಲ್ಲ. ಅವರು ತಮ್ಮ ಅಪೇಕ್ಷೆಯನ್ನು ಸೂಚಿಸಿದರು. 'ಸ್ವಾಮೀ! ನೀವು ನನ್ನಿಂದ ದೂರವಾಗದಿರಿ. ನನ್ನ ಬಳಿಯೇ ಇರಬೇಕು. ನಿರಂತರ ಪಾಠ ಪ್ರವಚನಗಳನ್ನು ಮಾಡಬೇಕು. ಮುದಿತನವು ನನ್ನನ್ನು ಬಾಧಿಸುತ್ತಿದೆ. ನಮ್ಮ ಮಠಕ್ಕೆ ವಿಪುಲವಾದ ಭೂಸಂಪತ್ತು ಇದೆ. ಅದರಲ್ಲಿ ಆಂಧ್ರದಲ್ಲಿರುವ ರಾಜಗೋಪಾಲಪುರ ಹಾಗೂ ತೇಂಬ್ರಿಗಳಲ್ಲಿನ ಜಹಗೀರುಗಳೂ ಸೇರಿವೆ. ಅಲ್ಲಿನ ಗದ್ದೆಗಳಿಂದ ವರುಷಕ್ಕೆ ಒಂದು ಸಾವಿರ ಚೀಲದಷ್ಟು ಅಕ್ಕಿ ಬರುತ್ತದೆ. ಅದೆಲ್ಲವೂ ಪಾಠ-ಪ್ರವಚನಗಳನ್ನು ನಡೆಸುವ ವಿದ್ವಾಂಸರ - ವಿದ್ಯಾರ್ಥಿಗಳ ಪೋಷಣೆಗಾಗಿ. ಅದೆಲ್ಲ ವನ್ನೂ ನಿಮಗೇ ನೀಡುತ್ತೇವೆ. ನನ್ನ ನಂತರದ ಪಾಠ- ಮಠ ರಕ್ಷಣ ಜವಾಬ್ದಾರಿ ನಿಮಗೆ ನೀಡಿದರೆ ಅದನ್ನು ನಿಭಾಯಿಸುವ ಸಾಮರ್ಥ್ಯ ನಿಮ್ಮಲ್ಲಿದೆ ಎಂದು ಸಂಪೂರ್ಣ ವಿಶ್ವಾಸವಿದೆ. ಹೀಗಾಗಿ ನೀವು ಇಲ್ಲಿಯೇ ಇದ್ದು ಬಿಡಿರಿ.' ಎಂದು, ಗುರುಗಳು ಶ್ರೀ ವಿದ್ಯಾಮಾನ್ಯತೀರ್ಥರಿಗೆ ತಮ್ಮ ಬಯಕೆಯನ್ನು ತೋರಿದರು. ಇದಕ್ಕೆ ಉತ್ತರವಾಗಿ ಶ್ರೀ ವಿದ್ಯಾಮಾನ್ಯತೀರ್ಥರು 'ತಾವು ನನ್ನಮೇಲೆ ವರಮಾ ನುಗ್ರಹ ಮಾಡಿದ್ದೀರಿ. ವಿಶಿಷ್ಟವಾದ ತತ್ವಜ್ಞಾನವನ್ನು ನೀಡಿದ್ದೀರಿ. ಅದನ್ನು ಹೊರತು ಇನ್ನಾವುದೂ ನನಗೆ ಬೇಡ . ತಮ್ಮ ಅನುಗ್ರಹ ಒಂದಿದ್ದರೆ ಸಾಕು. ನಿರಂತರ ಪಾಠ-ಪ್ರವಚನಗಳನ್ನು ಮಾಡುತ್ತಿರುತ್ತೇನೆ'ಎಂದರು. ಈನುಡಿಗಳನ್ನು ಆಲಿಸಿದ ಗುರು ಶ್ರೀಸತ್ಯಧ್ಯಾನತೀರ್ಥರಿಗೆ ಏನನ್ನೂ ಮಾತನಾಡದಂತಾಯಿತು. ಏನನ್ನೂ ಕಾಣದಂತಾಯಿತು. ಕಾರಣ, ಅವರ ಕಂಠ ಗದ್ಗದಿತ ವಾಗಿತ್ತು. ಅವರ ಕಂಗಳಲ್ಲಿ ನೀರು ಮಡುಗಟ್ಟಿತ್ತು. ಕೆಲಕ್ಷಣಗಳ ನಂತರ ಶ್ರೀಸತ್ಯಧ್ಯಾನತೀರ್ಥರು ''ಖಂಡಿತವಾಗಿಯೂ ನೀವು ನಿಜವಾದ ಜ್ಞಾನಭಾಂಡಾರ ರಾಗಿರುವಿರಿ. ಅದಕ್ಕಾಗಿ ಈ ಮಾತುಗಳು ಬಂದವು. ನೀವು ಜ್ಞಾನಕ್ಕಾಗಿ ನಮ್ಮಲ್ಲಿಗೆ ಬಂದವರು. ಹೊರತು ಧನಕ್ಕಾಗಿ ಅಲ್ಲ. ಬಹಳ ಸಂತೋಷವಾಯಿತು. ಇರಲಿ! ನೀವೂ ಒಂದು ಸಭೆಯನ್ನು ಸ್ಥಾಪಿಸಿರಿ. ತನ್ಮೂಲಕ ಸಿದ್ಧಾಂತದ ಪ್ರಚಾರವನ್ನು ಮಾಡಿರಿ''ಎಂದು ಅಭಿಮಾನಾತಿ ಶಯದಿಂದ ನುಡಿದರು. ಶಿಷ್ಯ ಶ್ರೀ ಭಂಡಾರಕೇರಿ ಶ್ರೀಗಳವರನ್ನು ಆಲಂಗಿಸಿದರು. ಹೃದಯಪೂರ್ವಕವಾಗಿ ಹರಸಿದರು. ಈ ಆಲಿಂಗನವು ಶ್ರೀ ವಿದ್ಯಾಮಾನ್ಯ

ತೀರ್ಥರಿಗೆ ಆಶ್ಚರ್ಯ, ಆನಂದ, ಧನ್ಯತೆ ಎಲ್ಲವನ್ನೂ ನೀಡಿತು.

ಆತ್ಮೀಯ ಶಿಷ್ಯರನ್ನು ಬೀಳ್ಕೊಡುತ್ತಿರುವ ಶ್ರೀಸತ್ಯಧ್ಯಾನ ತೀರ್ಥರ ಕಂಗಳಿಂದ ಧಾರಾಕಾರವಾಗಿ ನೀರಿಳಿಯುತ್ತಿತ್ತು. ಅದಕ್ಕೆ ಕಾರಣ ಎರಡು. ಒಂದು ದ್ವೈತ ಮತದ ರಕ್ಷಣೆಗೆ ಹಾಗೂ ಪ್ರಸಾರಕ್ಕೆ, ಉತ್ತಮ ಪಂಡಿತಯತಿಯ ತರಬೇತಿಯ ಸಾಫಲ್ಯದ ತೃಪ್ತಿ ಹಾಗೂ ಆನಂದ ಸಂದೋಹ. ಇನ್ನೊಂದು ಶಿಷ್ಯಶ್ರೇಷ್ಠನಾದ ಈ ಯತಿವರನ ವಿರಹ. ಅಂತೂ ಶ್ರೀ ವಿದ್ಯಾಮಾನ್ಯತೀರ್ಥರು, ಗುರುಗಳನ್ನು ಬಿಟ್ಟುಬರಲು ಮನಸ್ಸಿರದಿದ್ದರೂ ಅನಿವಾರ್ಯವಾಗಿ ಹೊರಟರು . ಹೊರಟಾಗ ಅವರು ತುಂಬಿದ ಕೊಡವಾಗಿದ್ದರು. ಕೊನೆಯವರೆಗೂ ಹಾಗೆಯೇ ಇದ್ದರು.

ಪ್ರಯಾಣಿಸುತ್ತಿರುವ ವಿದ್ಯಾಶಿಷ್ಯರಾದ ಶ್ರೀಭಂಡಾರಕೇರಿ ಶ್ರೀಪಾದರಿಗೆ, ಶ್ರೀಸತ್ಯಧ್ಯಾನತೀರ್ಥರು ಒಂದುಕಾರನ್ನು ಹಾಗೂ ಚಾಲಕನನ್ನುನೀಡಿದರು. ಭಂಡಾರಕೇರಿ ಶ್ರೀಪಾದರ ಪಯಣ ರಾಮೇಶ್ವರದಕಡೆಗೆನಾಗಿತು.

★★★

ಈ ಶತಮಾನದ ಪಂಡಿತ ಪ್ರಕಾಂಡರ ಮಂಡಲಿಯಲ್ಲಿಯೇ ಅಗ್ರಗಣ್ಯರೆಂದು ಪ್ರಖ್ಯಾತರು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು. ಅವರು ಹೆಸರಿಗಾಗಿ ಇರುವ ವಿದ್ವಾಂಸರಲ್ಲ. ಪರರ ವಿದ್ವತ್ತನ್ನು, ಉತ್ಕರ್ಷವನ್ನು ಕಾಣಲಾರದೆ ಮಾತ್ಸರ್ಯದಿಂದ ಕೇವಲ ದೋಷಗಳನ್ನೇ ಎಣಿಸುವ ವಿದ್ವಾಂಸರಲ್ಲ. ಬದಲಾಗಿ ಪರರ ವಿದ್ಯೆಯನ್ನು ಮಾನ್ಯಮಾಡಿದವರು. ವಿದ್ಯೆಗಾಗಿ, ವಿದ್ಯಾವಂತರಿಗಾಗಿ ಎಲ್ಲವನ್ನೂತ್ಯಾಗಮಾಡಿದವರು. ಅದರಿಂದ ಆನಂದವನ್ನು ಹೊಂದಿದವರು. ಸ್ವತಃ ಅಪಾರವಾದ, ಅದ್ಭುತವಾದ ಪಾರಮಾರ್ಥಿಕ ವಿದ್ಯೆಯಿಂದ ಮಾನ್ಯರಾದವರು. ಸಾಮಾನ್ಯ ಜನರಿಂದಲೂ ಅಸಾಮಾನ್ಯ ಜ್ಞಾನಿಗಳಿಂದಲೂ ಮಾನ್ಯರಾದವರು. ''ವಿದ್ಯಾ ಮಾನ್ಯಾ ಯೇನ ಸಃ ವಿದ್ಯಾಮಾನ್ಯಃ ವಿದ್ಯಯಾ ಮಾನ್ಯಃ ವಿದ್ಯಾಮಾನ್ಯಃ'' ವಿದ್ಯೆ ಇವರಿಂದ ಮಾನ್ಯವಾಯಿತು. ವಿದ್ಯೆಯಿಂದ ಇವರು ಮಾನ್ಯರಾದರು. ಈ ಎರಡೂ ಅರ್ಥದಲ್ಲೂ ಸಾರ್ಥಕನಾಮದ ವಿದ್ವಾಂಸರು ಶ್ರೀ ಶ್ರೀವಿದ್ಯಾಮಾನ್ಯ ತೀರ್ಥರು.

''ವಿದ್ಯಾವಂತನು ತಪ್ಪನ್ನು ತಪ್ಪೆನ್ನಬೇಕು. ತಪ್ಪಾಗಿ ನಡೆವವರನ್ನು ಸರಿಮಾಡಬೇಕು. ಇಲ್ಲವಾದಲ್ಲಿ ಶಿಕ್ಷೆಯನ್ನು ಅನುಭವಿಸಬೇಕು'' ಇದು ಉಪನಿಷನ್ಮಾತೆಯ ಮಾತು. ಇದನ್ನು ತಮ್ಮ ಜೀವನದುದ್ದಕ್ಕೂ ತಪ್ಪದೆ ನಡೆಸಿದ ಘನ ವಿದ್ವಾಂಸರು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು,

ಪಂಡಿತನೆಂದೆನಿಸಿದವನು ಸದ್ಗುಣಗಣಿಯಾಗಿರಬೇಕು. ಅದರಲ್ಲೂ ಮುಖ್ಯವಾಗಿಸಮಾನತಾ ಮನೋಭಾವವಿರಬೇಕು. ಎಲ್ಲ ವಸ್ತುಗಳಲ್ಲೂ- ಎಲ್ಲವ್ಯಕ್ತಿಗಳಲ್ಲೂ ಎಲ್ಲಪ್ರಾಣಿಗಳಲ್ಲೂ ಭಗವಂತನಿರುವನೆಂಬ ಸಮದರ್ಶಿ ಭಾವವಿರಬೇಕು. ವಿದ್ಯೆಯ ಪೂರ್ಣತೆಯ ಫಲ ಸಮದರ್ಶಿತ್ವ. ಅದಕ್ಕೆ ಸ್ಪಷ್ಟ ದೃಷ್ಟಾಂತ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು. ಅವರು ಆ ಎಂಬತ್ತೇಳು ವರ್ಷಗಳ ಸುದೀರ್ಘಜೀವಿತದಲ್ಲಿ ಒಬ್ಬರನ್ನೂ ದ್ವೇಷಿಸಲಿಲ್ಲ. ಬದಲಾಗಿ ಎಲ್ಲರನ್ನೂ ಪ್ರೀತಿಯಿಂದ ಕಂಡರು. ಪ್ರೀತಿಯನ್ನು ಹರಿಸಿದರು. ವಿಶೇಷವೆಂದರೆ ತಮ್ಮನ್ನು ದ್ವೇಷಿಸುವವರನ್ನೂ ದ್ವೇಷಿಸಲಿಲ್ಲ. ಅಭಿಮಾನವನ್ನು ತೋರಿದರು. ಅವರು ತೋರಿದ ಪ್ರೀತಿಯ ಅನುಭೂತಿ, ಅವರನ್ನೋಡಿದ, ಅವರೊಡನೆ

ವ್ಯವಹರಿಸಿದ ವ್ಯಕ್ತಿಗಳ ಸ್ಮೃತಿಪಟಲದಲ್ಲಿ ಇಂದಿಗೂ ಅಳಿಯದೇ ಉಳಿದಿರುವುದು.

ನ್ಯಾಯಾನ್ಯಾಯಗಳನ್ನು ವಿಮರ್ಶಿಸಿ ನ್ಯಾಯವನ್ನು ಸಿದ್ಧಿಗೊಳಿಸುವುದು, ಅನುಷ್ಠಾನದಲ್ಲಿ ತರುವುದು ವಿದ್ಯಾವಂತನ ಕರ್ತವ್ಯ. ಎಲ್ಲರಲ್ಲಿಯೂ ಕಾಣದ ಅಪರೂಪದ ಈ ವ್ಯಕ್ತಿತ್ವವು ಶ್ರೀ ವಿದ್ಯಾಮಾನ್ಯ ತೀರ್ಥರದ್ದಾಗಿತ್ತು. ಅದು ಅವರ ಗುರುಗಳಿಂದ ಬಂದ ಬಳುವಳಿಯಾಗಿತ್ತು. ಈ ದಿಸೆಯಲ್ಲಿ ವಾಸ್ತವತೆಗೆ ಹೋರಾಡಿದವರು ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು. ಕಾರಣ, ಅವರು ವಾಸ್ತವ ಸಿದ್ಧಾಂತದ ಸ್ಥಾಪನೆಗಾಗಿ ಅವತರಿಸಿದ ಶ್ರೀಮದಾಚಾರ್ಯರ ಪೂರ್ಣ ಸನ್ನಿಧಾನ ಪಾತ್ರರು. ಅವರ ಹೋರಾಟಕ್ಕೆ ಎರಡು ಮಹತ್ತಾದ ದೃಷ್ಟಾಂತ, ಒಂದು ದ್ವೈತ ಸಿದ್ಧಾಂತದ ಸಮರ್ಥನೆ. ಮತ್ತೊಂದು ಏಕಾದಶೀವ್ರತದ ಏಕಾಚರಣೆ.

''ಗುರುವಿನಿಂದ ಪಡೆದ ವಿದ್ಯೆಯನ್ನು ಪರರಿಗೆ ಬೋಧಿಸದೆ ಇರುವವನಿಗೆ ಉಪದೇಶಿಸಬಾರದು'' ಎಂಬುದು ವೇದವಾಣಿ. ಹೀಗಾಗಿ ಶಾಸ್ತ್ರೋಪದೇಶವನ್ನು ಪಡೆದ ವಿದ್ವಾಂಸರು ಎಂದಿಗೂ ಜ್ಞಾನಪರಂಪರೆಯನ್ನು ವಿಚ್ಛಿನ್ನಗೊಳಿಸಬಾರದು. ''ಸ್ವಾಧ್ಯಾಯ-ಪರಾಧ್ಯಾಪನ ಗಳನ್ನು ಎಂದಿಗೂ ಮರೆಯಬಾರದು'' ಎಂದು ಉಪನಿಷತ್ತೂ ಆದೇಶಿಸುತ್ತದೆ ಇದು ಎಲ್ಲ ಗುರುಗಳೂ ತಮ್ಮ ಅಂತೇವಾಸಿಗಳನ್ನು ಬೀಳ್ಕೊಡುವ ಸಂದರ್ಭದಲ್ಲಿ ನೀಡುವ ಆದೇಶವೂ ಹೌದು.

ಆದರೆ, ಇದರ ಅನುಷ್ಠಾನಕ್ಕೆ ಯೋಗ್ಯತೆ ಹಾಗೂ ಅವಕಾಶ ಎರಡೂ ಅತ್ಯಾವಶ್ಯಕ. ಕೆಲವರಿಗೆ ಅವಕಾಶವಿದ್ದರೂ ಬೋಧಿಸುವ ಯೋಗ್ಯತೆಯಿರದು. ಮತ್ತೆ ಕೆಲವರಿಗೆ ಯೋಗ್ಯತೆಯಿದ್ದರೂ ಅವಕಾಶವಿರದು. ಇದು ಇಂದು ನಾವು ಕಾಣುವ ಸಾಮಾನ್ಯ ಸ್ಥಿತಿ. ಆದರೆ ಈ ಯೋಗ್ಯತೆ - ಅವಕಾಶಗಳೆರಡೂ ಶ್ರೀವಿದ್ಯಾಮಾನ್ಯತೀರ್ಥರಿಗೆ ಇದ್ದವು. ಅದಕ್ಕೆ ಕಾರಣ ಅವರು ನಂಬಿದ ಗುರು ಅನುಗ್ರಹ. ಅವರು ಆಗಾಗ ಸ್ಮರಿಸುತ್ತಿದ್ದರು. 'ನನ್ನ ಸುಧಾಮಂಗಲೋತ್ಸವದ ಸಮಯದಲ್ಲಿ ಶ್ರೀ ಸತ್ಯಧ್ಯಾನ ತೀರ್ಥರು 'ನೀವು ನಿತ್ಯ ಸುಧಾ ಪಾಠವನ್ನು ಹೇಳಬೇಕು. ನಿಮ್ಮ ಪಾಠ ಪ್ರವಚನಗಳು ನಿರಂತರಾಗಿರಬೇಕು' ಎಂದು ನನಗೆ ಆದೇಶಿಸಿದರು. ಅಂದು ಅವರು ಆಡಿದ ನುಡಿ ಇಂದಿಗೂ ನಿಜವಾಗಿದೆ. ಅಂದಿನಿಂದ ಪ್ರಾರಂಭವಾದ ಸುಧಾಪಾಠ ಇಂದಿಗೂ ನಡೆಯುತ್ತಿದೆ. ನ್ಯಾಯಸುಧಾ, ಚಂದ್ರಿಕಾದಿ ವ್ಯಾಸತ್ರಯಗಳ ಪಾಠ ನಿರಂತರವಾಗಿದೆ. ಒಟ್ಟಿನಲ್ಲಿ ಆ ಗ್ರಂಥಗಳ ಪಾಠವಿಲ್ಲದೆ ನಾನಿಲ್ಲ. ಇದೆಲ್ಲವೂ ಅವರ ಹೃತ್ಪೂರ್ವಕ ಅನುಗ್ರಹ' ಎಂದು ಧನ್ಯತಾಭಾವದಿಂದ ಸ್ಮರಿಸುತ್ತಿದ್ದರು. ಗುರು ಅನುಗ್ರಹದ ಜೊತೆಯಲ್ಲೇ ಅವರ ಅಸದೃಶ ಪ್ರಯತ್ನ, ಶ್ರದ್ಧೆಗಳೂ ಇದ್ದವು.

ಜಪ, ಪೂಜೆ, ಪಾಠ-ಪ್ರವಚನಗಳಲ್ಲಿಯೇ ಅಹರ್ನಿಶಿ ಮುಳುಗಿರುತ್ತಿದ್ದ ಶ್ರೀಗಳವರು ಹಾಳು-ಹರಟೆಗಾಗಿ ಒಂದು ಕ್ಷಣವನ್ನೂ ವ್ಯರ್ಥಮಾಡಿದವರಲ್ಲ. ಮಧ್ಯರಾತ್ರಿ ಹನ್ನೆರಡು ಗಂಟೆಗೆ ಎಚ್ಚರವಾದರೂ ಸರಿ, ಮಗ್ಗಲು ಬದಲಿಸಿ ನಿದ್ದೆಗೆ ಶರಣಾದವರಲ್ಲ. ಎದ್ದು ದೀಪ ಉರಿಸಿ ಲೇಖನಿ ಪುಸ್ತಕ ಹಾಳೆಗಳನ್ನು ಹಿಡಿದು ಗ್ರಂಥಲೇಖನದಲ್ಲಿಯೇ ತೊಡಗಿದವರು.

ಪಾಠ-ಪ್ರವಚನವೆಂದರೆ ಶ್ರೀಪಾದರಿಗೆ ಎಲ್ಲಿಲ್ಲದ ಉತ್ಸಾಹ. ಚಿಕ್ಕ ಗ್ರಂಥವಾಗಲಿ, ದೊಡ್ಡ ಗ್ರಂಥವಾಗಲಿ. ತರ್ಕ, ವ್ಯಾಕರಣ, ವೇದಾಂತ ಮೀಮಾಂಸಾದಿ ಯಾವುದೇ ವಿಷಯವಿರಲಿ, ಜಟಿಲವಾದ ವಿಷಯವನ್ನು ಸುಲಲಿತವಾಗಿ

ವಿಶ್ಲೇಷಿಸುವ ಅವರ ಅಸ್ಖಲಿತ ಪ್ರವಚನದ ಶೈಲಿಗೆ ಶಿರಬಾಗದವನಿಲ್ಲ. ಬಾಲಕನಾಗಲಿ, ಯುವಕನಾಗಲಿ, ಮುದುಕನಾಗಲಿ ಪಾಠಕ್ಕಾಗಿ ಕೇಳಿದರೆ, ಅವರಿಗೆ ಅದರಿಂದಾಗುವ ಆನಂದಕ್ಕೆ ಅಂತವೇ ಇಲ್ಲ. ಶ್ರೀಗಳ ದೃಷ್ಟಿಯಲ್ಲಿ ಅಧ್ಯಯನ ಶೀಲನಾದ ವಿದ್ಯಾರ್ಥಿ ಹಾಗೂ ವಿದ್ವಾಂಸರುಗಳ ಮುಂದೆ ಕೋಟ್ಯಂತರ ರೂಪಾಯಿಗಳೊಡೆಯನಾದ ಶ್ರೀಮಂತನೂ ಸರಿದೂಗಲಾರ.

ಶ್ರೀಗಳವರಿಗೆ ಸಂತೋಷವಾಗುವ ಕೆಲಸವೆಂದರೆ ಅಧ್ಯಯನ-ಅಧ್ಯಾಪನ. ಅವುಗಳನ್ನು ಅವರು ನಿರಂತರ ಮಾಡುವರು. ಇತರರು ಯಾರಾದರೂ ಮಾಡುವುದನ್ನು ತಿಳಿದರೆ ಬಹಳ ಆನಂದ ಪಡುವರು. ಅರ್ಥವಾಗದೇ ಇದ್ದ ವಿಷಯವನ್ನು ಎಷ್ಟು ಸಲ ಕೇಳಿದರೂ ತಾಳ್ಮೆಯಿಂದಲೇ ಉತ್ತರಿಸಿ ಶಿಷ್ಯನಿಂದ ಪುನಃ ಹೇಳಿಸುವರು. ಪಾಠ ನಡೆಯುವ ಸಂದರ್ಭದಲ್ಲಿ ಯಾರಾದರೂ ಭೇಟಿಗೆ ಬಂದರೆ ಅವರ ಯೋಗಕ್ಷೇಮವನ್ನಷ್ಟೇ ವಿಚಾರಿಸಿ ಪುನಃ ಪಾಠವನ್ನು ಮುಂದುವರೆಸುತ್ತಿದ್ದರು. 'ಸ್ವಾಧ್ಯಾಯ ಪ್ರವಚನ ಏವೇತಿನಾಕೋ ಮೌದ್ಗಲ್ಯಃ । ತದ್ಧಿ ತಪಃ ತದ್ಧಿ ತಪಃ' ಎಂಬ ಉಪದೇಶದ ಪ್ರತ್ಯಕ್ಷ ನಿದರ್ಶನವೇ ಅವರಾಗಿದ್ದರು. ಅದೇ ಅವರ ಜೀವನದ ಧ್ಯೇಯ ವಾಕ್ಯವಾಗಿತ್ತು. ಅಖಂಡ ಪಾಠ-ಪ್ರವಚನಗಳ ದೀಕ್ಷೆಯನ್ನು ತೊಟ್ಟ ಜ್ಞಾನ ತಪಸ್ವಿಗಳು ಶ್ರೀ ವಿದ್ಯಾಮಾನ್ಯ ತೀರ್ಥರು.

ಮೇಲಿನ ಮಾತುಗಳಲ್ಲಿ ಯಾವುದೂ ಉತ್ಪ್ರೇಕ್ಷೆಯಿಲ್ಲ. ಕಾರಣ, ಶ್ರೀಗಳವರು ನಡೆಸಿದ ನಿರಂತರದ ಪಾಠ-ಪ್ರವಚನಗಳನ್ನು ಸಮಾಜ ಬಹು ಚೆನ್ನಾಗಿ ಕಂಡಿತು. ಅವರ ಆ ಪಾಠ-ಪ್ರವಚನಗಳು ಇನ್ನೂ ಅನೇಕ ಶತಮಾನಗಳವರೆಗೆ ಶ್ರೀಮದಾಚಾರ್ಯರ ಶಾಸ್ತ್ರಪಾಠ ಪ್ರವಚನ ಪರಂಪರೆ ಉಳಿಯುವಂತೆ ಮಾಡಿದವು. ಅದಕ್ಕೆ ನಿದರ್ಶನಗಳು ಹಲವು.

ಶ್ರೀಮದಾಚಾರ್ಯರನ್ನು 'ಯತಯೋ ಗೃಹಿಣೋಽಥ ವರ್ಣಿಮುಖ್ಯಾಃ' ಎಂದು ಸುಮಧ್ವವಿಜಯದಲ್ಲಿ ವರ್ಣಿಸಿದಂತೆ ಅನೇಕ ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ ಅಖಂಡ ಪಾಠ ಪ್ರವಚನಗಳನ್ನು ನಡೆಸಿ, ಅವರನ್ನೆಲ್ಲರನ್ನೂ ಜ್ಞಾನಮೂರ್ತಿಗಳನ್ನಾಗಿ ನಿರ್ಮಿಸಿ ಸಿದ್ಧಪಡಿಸಿದ ಜ್ಞಾನಶಿಲ್ಪಿಗಳು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು.

ಇವರ ಈ ಮಹಾಕಾರ್ಯದ ಫಲವಾಗಿ ಸಮಾಜದ ಮುಂದೆ ನಿಂತ ವಿಧ್ವಾಂಸರ, ಸಾಧಕರ ಸಂಖ್ಯೆ ಅಪಾರ. ಅದರಲ್ಲಿ ಕೆಲವು ತುಣುಕುಗಳನ್ನು ನಾವು ಅವಲೋಕಿಸ ಹೊರಟಾಗ ..........

★★★

ಭಾರತದ, ಕರ್ನಾಟಕದ ಅದರಲ್ಲೂ ವಿಶೇಷವಾಗಿ ಮಾಧ್ವ ಸಮಾಜದ ಕಣ್ಮಣಿಯಾಗಿರುವ ಶ್ರೀ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥರಿಗೆ ಶಾಸ್ತ್ರತರಬೇತಿ :-

ಸುಮಾರು ಐದು ದಶಕಗಳ ಹಿಂದೆ ನಾವು ಸರಿದಾಗ,

ಶ್ರೀ ಭಂಡಾರ ಕೇರಿ ಶ್ರೀಪಾದರ ಮೊದಲ ಸಭೆಗಾಗಿ ಆಗಮಿಸಿದ್ದ ಶ್ರೀ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥರು, ಆಗಿನ ಅಷ್ಟ ಮಠಗಳ ಯತಿ ಕೂಟದಲ್ಲಿ ಪುಟ್ಟ ಯತಿ. ಮಿನುಗುತ್ತಿತ್ತು ಅವರ ಮುಖದಲ್ಲಿ ಅನುಪಮ ಕಾಂತಿ. ಜೊತೆಯಲ್ಲಿ ಅಮಿತವಾದ ನಿಶಿತಮತಿ. ಸಭೆಗಾಗಿ ಬಂದವರು ವಿದ್ಯೆಗಾಗಿ ನಿಂತರು. ಸುಮುಹೂರ್ತದಲ್ಲಿ ಶ್ರೀ ಪೇಜಾವರ ಶ್ರೀಪಾದರಿಗೆ ಪ್ರಾರಂಭವಾಯಿತು

ಶಾಸ್ತ್ರಪಾಠ. ಸ್ಥಳ ಶ್ರೀ ಮಧ್ವಾಚಾರ್ಯ ಕರಾರ್ಚಿತ ಶ್ರೀಕೇಶವ ದೇವರ ಸನ್ನಿಧಿಯ ಎರಕಿ ಮಠ. ಉತ್ತಮ ಕಾವ್ಯ- ಸಾಹಿತ್ಯ ಜ್ಞಾನವಂತರಾದ ಶ್ರೀ ವಿಶ್ವೇಶ ತೀರ್ಥರಿಗೆ ಆರಂಭದ ಪಾಠ ವೇದಾಂತ ಶಾಸ್ತ್ರದಲ್ಲಿ ತತ್ತ್ವ ಸಂಖ್ಯಾನ, ನ್ಯಾಯಶಾಸ್ತ್ರದಲ್ಲಿ ತರ್ಕಸಂಗ್ರಹ. ಈ ಸುಂದರ ಗುರು-ಶಿಷ್ಯರ ಜೋಡಿ ಪಾಠಕ್ಕಾಗಿ ಭಂಡಾರಕೇರಿಯ ಮಠದಲ್ಲಿಯೇ ನೆಲೆಸಿತು.

ಉಡುಪಿಯಿಂದ ತುಸು ದೂರಕ್ಕೆ ಬಡಗು ದಿಕ್ಕಿಗೆ ಸಾಗಿದಾಗ ಸಿಗುವುದು ಬ್ರಹ್ಮಾವರ. ಬ್ರಹ್ಮಾವರದಿಂದ ಬಾರಕೂರು. ಅಲ್ಲಿಂದ ಭಂಡಾರಕೇರಿ ಎಂಬ ಗ್ರಾಮ. ಆ ಗ್ರಾಮದಲೊಂದು ಭವ್ಯವಾದ ವಿಶಾಲಮಠ. ಅದೇ ಶ್ರೀ ಸತ್ಯತೀರ್ಥರ ಪರಂಪರೆಯ ಮಠ. ಶ್ರೀಗದಾಧರತೀರ್ಥ ರಿಂದ ನಿರ್ಮಿತ ಭಾರ್ಯಾವಿಗ್ರಹದ್ವಯ ಸಮೇತ ಗೋಪೀನಾಥ ದೇವನಿರುವ ಮಠ. ಪ್ರಾಚೀನ ಋಷಿಗಳ ಆಶ್ರಮದಂತಿ ರುವ ಮಠ. ಅದರ ಸುತ್ತಲೂ ಭತ್ತದ ಗದ್ದೆ, ತೆಂಗು, ಕಂಗು, ಬಾಳೆಯ ತೋಟ. ಅದರಲ್ಲೊಂದು ಕಣ್ಸೆಳೆಯುವ ನೀರು ತುಂಬಿದ ಶುಭ್ರ ಪುಷ್ಕರಣಿಯ ಮಾಟ. ಇಂತಹ ಮಠಕ್ಕಿಲ್ಲ ಜನ ಜಂಗುಳಿಯ ಕಾಟ. ಹೀಗಾಗಿ ನಿರಂತರ ಸಾಗಿತು ಆ ಪುಟ್ಟ ಯತಿಗೆ ಶಾಸ್ತ್ರಪಾಠ. ಜೊತೆಗೆ ಮಠದಲ್ಲಿ ನೂರಾರು ವಿದ್ಯಾರ್ಥಿಗಳ ಕೂಟ.

ಒಂದೆಡೆ ಋಗ್ವೇದಾದಿ ಚತುರ್ವೇದಗಳ ಅಧ್ಯಯನದ ಮಂಜು ನಿನಾದ. ಇನ್ನೊಂದೆಡೆ 'ಅವಚ್ಛೇದಕಾವಚ್ಛಿನ್ನ' ವೆಂಬ ನ್ಯಾಯ ಶಾಸ್ತ್ರದ ಪಾರಿಭಾಷಿಕ ಶಬ್ದ. ಮತ್ತೊಂದೆಡೆ ವ್ಯಾಕರಣದ ವೈಭವ. ಮಗದೊಂದೆಡೆ ಜ್ಯೋತಿಶ್ಶಾಸ್ತ್ರದ ಪ್ರಕಾಶ. ಮುಖ್ಯವಾಗಿ ಕಂಚಿನ ಕಂಠದ ಶ್ರೀ ವಿದ್ಯಾಮಾನ್ಯ ತೀರ್ಥರ ಚಂದ್ರಿಕಾ, ನ್ಯಾಯಾಮೃತ, ನ್ಯಾಯ ಸುಧಾದಿ ಪ್ರೌಢಗ್ರಂಥಗಳ ಪಾಠದ ಧ್ವನಿ. ಹೀಗೆ ಮಠದ ಆಸು ಪಾಸು ಶಾಸ್ತ್ರಸ್ವರಗಳಿಂದ ವಿಜೃಂಭಿಸುತ್ತಿತ್ತು.

ಆ ಸಮಯದಲ್ಲಿ ಶ್ರೀಪಾದರಿಂದ ನ್ಯಾಯಸುಧಾ ಪಾಠವನ್ನು ಕೇಳುತ್ತಿದ್ದ ವಿದ್ವಾಂಸರು ಶ್ರೀ ಬಿ.ಡಿ. ಶ್ರೀನಿವಾಸಾಚಾರ್ಯರು. ಈ ಸುಂದರ ಗುರುಕುಲದ ಕುಲಪತಿಗಳು ಶ್ರೀವಿದ್ಯಾಮಾನ್ಯತೀರ್ಥರು. ಗುರು ಕುಲದ ಮುಖ್ಯ ಆಕರ್ಷಣೆ ಶ್ರೀ ವಿಶ್ವೇಶ ತೀರ್ಥರು.

ಔದಾರ್ಯ-ದಯಾದಿಗಳಿಂದ ಕೂಡಿದ ಶ್ರೀ ವಿದ್ಯಾಮಾನ್ಯತೀರ್ಥರ ವಸತಿವ್ಯವಸ್ಥೆ ವಿದ್ವಾಂಸರಿಗೆ - ವಿದ್ಯಾರ್ಥಿಗಳಿಗೆ ಸುಖ ಪ್ರಾರಬ್ಧ. ಮಠದಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಹದಿನೈದು ದಿನಗಳಿಗೊಮ್ಮೆ ಎಣ್ಣೆ, ಬಿಸಿ ನೀರಿನ ಸ್ನಾನ ಕಾಲಕಾಲಕ್ಕೆ ಸರಿಯಾಗಿ ಉಪಹಾರ, ಸಾತ್ವಿಕ ಭೋಜನ, ಮುಖ್ಯವಾಗಿ ಉತ್ಕೃಷ್ಟ ವಾದ ವಿದ್ಯಾಪ್ರದಾನ. ಹೀಗೆ ವಿದ್ಯಾರ್ಥಿಗಳಿಗೆ ಅನ್ನ-ವಸನಗಳನ್ನಿತ್ತು, ವಿದ್ಯಾದಾನ ಮಾಡಿದ ಮಹಾನುಭಾವರು ಶ್ರೀ ವಿದ್ಯಾಮಾನ್ಯ ತೀರ್ಥರು.

ಶ್ರೀ ವಿಶ್ವೇಶತೀರ್ಥರ ಬಾಲ್ಯ ಹಾಗೂ ಕುಶಾಗ್ರ ಬುದ್ಧಿಗಳು ಶ್ರೀ ವಿದ್ಯಾಮಾನ್ಯ ತೀರ್ಥರನ್ನು ಬಂಧಿಸಿದ್ದವು. ಆ ಬಾಲಯತಿ ಸದಾ ಅವರ ಕಣ್ಮುಂದೆಯೇ ಇರುವಂತೆ ಮಾಡಿದ್ದವು. ಗುರು ಶ್ರೀ ವಿದ್ಯಾಮಾನ್ಯ ತೀರ್ಥರು ಪುಟ್ಟ ಯತಿಗೆ ತಾಯಿಯಾಗಿ ಪ್ರೇಮ-ವಾತ್ಸಲ್ಯಗಳನ್ನು ಬೀರಿ ಪೋಷಿಸಿದರು. ತಂದೆಯಾಗಿ ಉತ್ತಮ ಸದಾಚಾರ - ಸಂಸ್ಕಾರಗಳನ್ನು ನೀಡಿದರು. ಗುರುವಾಗಿ ಉತ್ತಮ ಪಾಠವನ್ನು ಹೇಳಿದರು. ಅನುಗ್ರಹಿಸಿದರು. ಈ ಅನುಗ್ರಹ ಎಲ್ಲ ವಿದ್ಯಾರ್ಥಿಗಳಿಗೂ ಸಮಾನವಾಗಿತ್ತು. ಅದರಲ್ಲೂ ಶ್ರೀ ವಿಶ್ವೇಶ ತೀರ್ಥರಿಗೆ ವಿಶೇಷವಾಗಿತ್ತು. ಶ್ರೀ ವಿಶ್ವೇಶ

ತೀರ್ಥರ ಜೊತೆಯಲ್ಲಿ ಅಧ್ಯಯನ ನಡೆಸಿದ ಉತ್ತಮ ಸಾಧಕ ವಿದ್ವಾಂಸರು ಶ್ರೀ ಕಾಪು ಹಯಗ್ರೀವಾಚಾರ್ಯರು, ಶ್ರೀ ಗುರುರಾಜ ಬಲ್ಲಾಳರು, ಶ್ರೀ ವೆಂಕಟ ರಮಣ ಐತಾಳರು, ಶ್ರೀ ಗಂಗೂರು ರಾಘವೇಂದ್ರಾಚಾರ್ಯರು.

ಬೆಳಗಿನ ಝಾವ ನಾಲ್ಕು ಗಂಟೆಯಿಂದ ರಾತ್ರಿ ಹತ್ತರವರೆಗೆ ಪಾಠ-ಪ್ರವಚನಗಳು, ಸ್ನಾನ, ಆಹ್ನೀಕ, ಪೂಜೆ, ಭೋಜನಾದಿಗಳನ್ನು ಹೊರತು ಉಳಿದ ವೇಳೆಯಲ್ಲಿ ಪಾಠಗಳ ಚಿಂತನಗಳು ಕಡ್ಡಾಯವಾಗಿ ನಡೆಯುತ್ತಿದ್ದವು. ದ್ವಾದಶೀ ಅನಧ್ಯಯನದ ದಿನಗಳಲ್ಲಿ ಚರ್ಚಾಗೋಷ್ಠಿ, ಉಪನ್ಯಾಸಗಳು ಜರುಗುತ್ತಿದ್ದವು. ಇದರಲ್ಲಿ ಎಲ್ಲರೂ ಭಾಗವಹಿಸಲೇಬೇಕು. ಈ ವಿದ್ಯಾರ್ಥಿ ವೃಂದದ ಗೋಷ್ಠಿಗೆ ಶ್ರೀ ವಿಶ್ವೇಶ ತೀರ್ಥರೇ ನೇತಾರರು.

ಹೀಗೆ ಸುಂದರ ಪರಿಸರದಲ್ಲಿದ್ದು ಆನಂದವನ್ನು ಅನುಭವಿಸಿದ ಅಂದಿನ ವಿದ್ಯಾರ್ಥಿಗಳು ಇಂದಿನ ಉತ್ತಮ ವಿದ್ವಾಂಸರೆನಿಸಿದ್ದಾರೆ. ಈ ವಿದ್ಯಾರ್ಥಿಗಳೊಂದಿಗೆ ಈ ಮಠದಲ್ಲಿ ನೆಲೆಸಿದ ಹೊರಗಿನ ಶಾಲಾ-ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳ ಸಂಖ್ಯೆಯೂ ಅಪಾರವಾಗಿತ್ತು. ಆ ವಿದ್ಯಾರ್ಥಿಗಳೆಲ್ಲರೂ ಇಂದು ಅನೇಕ ಸರ್ಕಾರಿ - ಖಾಸಗಿ ಸಂಸ್ಥೆಗಳಲ್ಲಿ ಉನ್ನತ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿರುವರು. ಈ ಈರ್ಬಗೆಯ ವಿದ್ಯಾರ್ಥಿಗಳು ಇಂದಿನ ಗಣ್ಯವ್ಯಕ್ತಿಗಳು. ಅವರು 'ಅಂದಿನ ಭಂಡಾರಕೇರಿಯ ಮಠದ ಜೀವನ ಸುವರ್ಣಯುಗ' ಎಂದು ಇಂದು ಉದ್ಗಾರ ತೆಗೆಯುತ್ತಾರೆ.

ವ್ಯಾಸತ್ರಯ, ನ್ಯಾಯ ಸುಧಾದಿ ಉದ್ಗ್ರಂಥಗಳನ್ನು ಸಕಲ ಶಾಸ್ತ್ರಗಳನ್ನು ಅಭ್ಯಸಿಸಿದ ಶ್ರೀ ವಿಶ್ವೇಶ ತೀರ್ಥರಿಗೆ ಉಡುಪಿಯ ಶ್ರೀ ಪೇಜಾವರ ಮಠದಲ್ಲಿಯೇ ಬಹು ವಿಜೃಂಭಣೆಯಿಂದ ಸುಧಾ ಮಂಗಲವಾಯಿತು. ಈ ಸಂದರ್ಭದಲ್ಲಿ ಶತಾಯುಷಿಗಳಾದ ಶ್ರೀ ಶ್ರೀ ಸುಧೀಂದ್ರ ತೀರ್ಥರು ಹಾಗೂ ಅಷ್ಟಮಠಾಧೀಶರು ಉಪಸ್ಥಿತರಿದ್ದರು. ಶಿಷ್ಯರ ಅಸ್ಖಲಿತ ವಾಣಿಯ ಸುಧಾನು ವಾದದ ನಂತರ ಗುರು ಶ್ರೀ ವಿದ್ಯಾಮಾನ್ಯತೀರ್ಥರು ನಿರರ್ಗಳವಾಗಿ ಅದ್ಭುತ ಅನುವಾದವನ್ನು ಮಾಡಿದರು. ಕೊನೆಯಲ್ಲಿ ಶ್ರೀ ವಿಶ್ವೇಶ ತೀರ್ಥರನ್ನು ಕುರಿತು, 'ನೀವು ಉತ್ತಮ ಪಂಡಿತರಾಗಿದ್ದೀರಿ. ಇನ್ನು ದಿಗ್ವಿಜಯಕ್ಕೆ ಹೊರಡಬಹುದು. ನಿರಂತರ ಪಾಠಪ್ರವಚನದಿಂದ ಶ್ರೀಮದಾಚಾರ್ಯರ ಸಿದ್ಧಾಂತದ ಪ್ರಸಾರ ಮಾಡಿರಿ. ತನ್ಮೂಲಕ ಲೋಕ ಕಲ್ಯಾಣ ಕಾರ್ಯಗಳನ್ನು ನಡೆಸಿರಿ. ಹರಿ-ವಾಯುಗಳ ಅನುಗ್ರಹಕ್ಕೆ ಪಾತ್ರರಾಗಿರಿ.' ಎಂದು ಅನುಗ್ರಹಿಸಿದರು. ನಂತರ ವೇದವ್ಯಾಸ ಪೂಜೆ, ಗುರುಪೂಜೆ, ಬ್ರಾಹ್ಮಣ-ಸುವಾಸಿನಿ ಭಕ್ತಾದಿಗಳಿಗೆ ಅನ್ನಸಂತರ್ಪಣೆ, ದಕ್ಷಿಣೆ, ವಿದ್ವಾಂಸರಿಗೆ - ವಿದ್ಯಾರ್ಥಿಗಳಿಗೆ ಸಂಭಾವನೆ ವಿತರಣೆಗಳು ಎಣೆಯಿಲ್ಲದಂತೆ ನಡೆದವು. ಇದು ಶ್ರೀ ವಿದ್ಯಾಮಾನ್ಯ ತೀರ್ಥರ ಆರನೆಯ ನ್ಯಾಯ ಸುಧಾ ಮಂಗಲ ಮಹೋತ್ಸವ. ಹೀಗೆ ಹತ್ತು ವರುಷಗಳ ಕಾಲ ಶ್ರೀ ವಿಶ್ವೇಶ ತೀರ್ಥರಿಗೆ ಜ್ಞಾನ, ಭಕ್ತಿ, ವಿರಕ್ತಿ, ಶಕ್ತಿಗಳನ್ನು ಎರಕ ಹೊಯ್ದು ದ್ವೈತ ಸಿದ್ಧಾಂತ ಪರಂಪರೆಯ ಕೋಟೆಯನ್ನು ಭದ್ರಪಡಿಸಿದವರು ಶ್ರೀ ವಿದ್ಯಾಮಾನ್ಯತೀರ್ಥರು. ಇವರ ಛಾಯೆಯೇ ಶ್ರೀ ವಿಶ್ವೇಶ ತೀರ್ಥರ ಎಲ್ಲ ಕಾರ್ಯಗಳಲ್ಲಿ ವ್ಯಕ್ತವಾಗುವುದು. ಈ ಗುರುಗಳ ಮಾತನ್ನು ಅನುದಿನದಿ ನಡೆಸುತ್ತಿರುವ ಶ್ರೀವಿಶ್ವೇಶತೀರ್ಥರಿಂದ ಶ್ರೀ ಪೂರ್ಣಪ್ರಜ್ಞ

ವಿದ್ಯಾಪೀಠವು ಸ್ಥಾಪಿತವಾಯಿತು. ಅದರ ಮೂಲಕ ನೂರಾರು ಪಂಡಿತರ ಸಂತತಿಯು ಸೃಷ್ಟಿಗೊಳ್ಳುತ್ತಿರುವುದನ್ನು ನಮ್ಮೆಲ್ಲರ ಕಣ್ಣುಗಳು ಇಂದಿಗೂ ಕಾಣುತ್ತಿರುವುವು.

ಶ್ರೀ ವಿದ್ಯಾಮಾನ್ಯತೀರ್ಥರ ಅಧ್ಯಾಪನ ಸರಣಿಯಲ್ಲಿ ಸ್ಫುಟವಾಗಿ ಕಾಣುವ ಇನ್ನೊಂದು ಮಹತ್ವದ ಘಟ್ಟ,

**ಯುವಯತಿ ಚತುಷ್ಟಯದ ನಿರ್ಮಾಣ:-** ಉಡುಪಿಯಿಂದ ಬಡಗು ದಿಕ್ಕಿಗೆ ಹೊರಡುವ ರಾಷ್ಟ್ರೀಯ ಹೆದ್ದಾರಿ ನಂ. ಹದಿನೇಳು. ಅದರಲ್ಲಿ 21ಕಿ.ಮೀ. ದೂರಸಾಗಿದಂತೆ ಸಿಗುವುದು ಶ್ರೀ ವಿದ್ಯಾಮಾನ್ಯ ತೀರ್ಥರ ಜನ್ಮಸ್ಥಳ. ಎರ್ಮಾಳು. ಅಲ್ಲಿಂದ ಮೂಡಣಕ್ಕೆ ಹೋದರೆ ಅಲ್ಲೊಂದು ಪುಟ್ಟ ಗ್ರಾಮ ಅದಮಾರು. ಅಲ್ಲಿ ಒಂದು ಮಠ. ಶ್ರೀ ಅದಮಾರು ಮಠ. ಅದು ಬಹಳ ವಿಶಾಲವಾದುದು. ಅದರ ಸುತ್ತಲೂ ಹಚ್ಚ ಹಸಿರಿನ ದಿಬ್ಬ. ನೋಡುಗರ ಕಣ್ಣಿಗೆ ಹಬ್ಬ. ಮಠದ ಹಿಂಭಾಗದಲ್ಲೊಂದು ಮುಂಭಾಗದಲ್ಲೊಂದು ಪುಷ್ಕರಣಿಗಳು. ಮಠದ ಗರ್ಭಗುಡಿಯಲ್ಲಿ ಶ್ರೀವಾಸುದೇವ ಭಗವಂತನಿರುವನು. ಈತನು ಅನೇಕ ಮಹಾತ್ಮರಿಗೂ, ವಿದ್ಯಾರ್ಥಿಗಳಿಗೂ ಆಶ್ರಯದಾತನು, ಅನ್ನದಾತನು.

ಅಂದು 1974ರ ಜನವರಿ ತಿಂಗಳ ದಿನಾಂಕ ಹತ್ತೊಂಬತ್ತು. ಆಗ ಶ್ರೀ ಅದಮಾರು ಮಠದ ಶ್ರೀಕೃಷ್ಣ ಪೂಜಾ ಪರ್ಯಾಯವು ಮುಗಿದು ಒಂದು ದಿನವಾಗಿತ್ತು. ಶ್ರೀ ಅದಮಾರು ಮಠಾಧೀಶ ಶ್ರೀ ವಿಬುಧೇಶ ತೀರ್ಥರ ಸಮರ್ಥ ವ್ಯಕ್ತಿತ್ವವು, ತಮ್ಮ ಉತ್ತರಾಧಿಕಾರಿಗಳಾದ ಶ್ರೀ ವಿಶ್ವಪ್ರಿಯ ತೀರ್ಥ ಶ್ರೀಪಾದರ ಅಧ್ಯಯನಕ್ಕಾಗಿ ಶ್ರೇಷ್ಠ ಗುರುಗಳೊಬ್ಬರನ್ನು ಗೊತ್ತು ಮಾಡಿತ್ತು. ಆ ವಿಶ್ವಪ್ರಿಯ ಗುರುತ್ವವು ಶ್ರೀ ವಿದ್ಯಾಮಾನ್ಯ ತೀರ್ಥರದ್ದಾಗಿತ್ತು.

ಬಾಲಯತಿ ಶ್ರೀ ವಿಶ್ವಪ್ರಿಯತೀರ್ಥರನ್ನು ಶಾಸ್ತ್ರಪ್ರವೀಣರನ್ನಾಗಿಸಲು ಪಲಿಮಾರು-ಭಂಡಾರಕೇರಿ ಶ್ರೀಪಾದರ ಸಂಚಾರ ಸ್ಥಗಿತಗೊಂಡಿತ್ತು. ಕಾರಣ ,ಅವರ ಮನಸ್ಸು ದೇಶ ಸಂಚಾರಕ್ಕಿಂತ ಶಾಸ್ತ್ರ ಕೋಶಗಳಿಂದಲೇ ಸಂತಸಪಟ್ಟಿತ್ತು. ಸುಮುಹೂರ್ತದಲ್ಲಿ ಗುರು ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಶ್ರೀವಿಶ್ವಪ್ರಿಯತೀರ್ಥರಿಗೆ ಪಾಠ ಪ್ರಾರಂಭಗೊಂಡಿತು. ಅಂದಿನಿಂದ ಆ ಮಠದಲ್ಲಿ ಶ್ರೀವಾಸುದೇವನೊಂದಿಗೆ, ಅದಮಾರು ಮಠದ ಉಪಾಸ್ಯಮೂರ್ತಿ ಚತುರ್ಭುಜ ಕಾಲೀಯ ಮರ್ದನ ಕೃಷ್ಣ ಹಾಗೂ ಪಲಿಮಾರು ಭಂಡಾರಕೇರಿ ಮಠಗಳ ಸಪರಿವಾರ ರಾಮದ್ವಯರ ಸನ್ನಿಧಾನವೂ ಸೇರಿತು. ಕೆಲವು ವರ್ಷಗಳ ನಂತರ ಉಡುಪಿ ಶ್ರೀ ಪುತ್ತಿಗೆಮಠದ ಶ್ರೀ ಸುಗುಣೇಂದ್ರ ತೀರ್ಥರ ಸೇರ್ಪಡೆಯೂ ಆಯಿತು. ಮಧ್ಯ ವಯಸ್ಸಿನ ಸಂನ್ಯಾಸಿಶ್ರೇಷ್ಠರು ಬಾಲ ಸಂನ್ಯಾಸಿದ್ವಯಕ್ಕೆ ಪಾಠ ಮಾಡುತ್ತಿದ್ದರು. ಅಂತೆಯೇ ಅಲ್ಲೊಂದು 'ಗುರುಕುಲ' ವೊಂದು ಸ್ಥಾಪಿತವಾಯಿತು. ಅದು 'ಆದರ್ಶ ಗುರುಕುಲ'. ನಿಜವಾಗಿಯೂ ಅದು ಆದರ್ಶವೇ ಆಗಿತ್ತು. ಅದರ ಕುಲಪತಿಗಳು ಶ್ರೀ ವಿದ್ಯಾಮಾನ್ಯ ತೀರ್ಥರು. ಪಾಲಕರು ಶ್ರೀ ವಿಬುಧೇಶ ತೀರ್ಥರು. ಗುರುಕುಲದ ಅಂತೇವಾಸಿಗಳಾಗಿ ಶ್ರೀ ವಿಶ್ವಪ್ರಿಯತೀರ್ಥರು ಹಾಗೂ ಸುಗುಣೇಂದ್ರ ತೀರ್ಥರೊಂದಿಗೆ ಅನೇಕ ಗೃಹಸ್ಥರ, ಬ್ರಹ್ಮಚಾರಿಗಳ ವೃಂದವೂ ಸೇರಿತ್ತು. ಹೀಗೆ ಈ ಮಠದಲ್ಲಿದ್ದು ಓದಲು ಬಂದವರ ಸಂಖ್ಯೆ ನೂರನ್ನೂ ಮೀರಿತ್ತು.

ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದ ಶ್ರೀ ವಿದ್ಯಾಧೀಶ ತೀರ್ಥರು, ಹಾಗೂ ಶ್ರೀ ವಿದ್ಯೇಶತೀರ್ಥರು (ಈ ಮಹಾಗುರುಗಳ ಉಭಯ ಮಠಗಳ ಉತ್ತರಾಧಿಕಾರಿಗಳು) ಈ ಗುರುಕುಲದಲ್ಲಿ

ಅಧ್ಯಯನಕ್ಕಾಗಿ ನೆಲೆಸಿದ್ದರು. ಹೀಗೆ ನಾಲ್ಕು ಯುವ ಯತಿಗಳಿಗೆ ಏಕಕಾಲದಲ್ಲಿ ಪಾಠ ನಡೆಯುತ್ತಿತ್ತು.

ಅಂದಿನ ಅದಮಾರು ಅಂದದ ತವರು. ಮುಂಜಾವಿನ ಮುಂಚೆಯೇ ಮೊಳಗುವ ದೇವರ ಮುಂಭಾಗದ ಗಂಟೆಯ ನಾದ ಜೋರು. ಆ ನಾದನಿಲ್ಲುವುದರೊಳಗಾಗಿ ದೇವರ ಎದುರಲ್ಲಿ ಎಲ್ಲ ವಿದ್ಯಾರ್ಥಿಗಳೂ ಹಾಜರು. ಅಷ್ಟರೊಳಗೆ ನಾಲ್ವರು ಯತಿಗಳೊಂದಿಗೆ ಹಿರಿಯ ಗುರುಗಳು ಬರುವರು. ಆಗ 'ಲಕ್ಷ್ಮೀರ್ಯಸ್ಯ ಪರಿಗ್ರಹಃ....' ಇತ್ಯಾದಿಯಾಗಿ ಮಂಗಲಾಷ್ಟಕ ಶುರು. ಸ್ನಾನಕ್ಕಾಗಿ ತೀರ್ಥಗಳಲ್ಲಿ ತೀರ್ಥರು. ವಿದ್ಯಾರ್ಥಿಗಳಿಗೆ ಬಿಸಿನೀರು. ಮಠದ ಒಳಾವರಣದಲ್ಲಿ ಎಲ್ಲಿ ನೋಡಿದರೂ ಶಿಸ್ತುಬದ್ಧ ವಿದ್ಯಾರ್ಥಿಗಳ ಸಾಲುಗಳಲ್ಲಿ ಸಂಧ್ಯಾವಂದನೆ, ಅಗ್ನಿಕಾರ್ಯಗಳದ್ದೇ ಕಾರಭಾರು. ನಾಲ್ವರು ಯತಿಗಳ ಮಧ್ಯೆ ಮಹಾ ಮೇರುಗುರು. ಐವರೂ ಪ್ರಣವಾದಿ ಮಂತ್ರ ಜಪಗಳಲ್ಲಿ ನಿರತರು. ಈ ನಾಲ್ಕು ಯತಿ ಪುಂಗವರು ಕ್ರಮವಾಗಿ ದೇವರ ಪೂಜೆಯನ್ನು ಗೈಯ್ಯುವರು. ಪೂಜೆಯ ವೇಳೆಯಲ್ಲಿ ಹಿರಿಯ ವಿದ್ಯಾರ್ಥಿಗಳು ಋಗ್ವೇದಾದಿ ವೇದ ಪಾರಾಯಣದಿಂದ ವಿಜೃಂಭಿಸುತ್ತಿದ್ದರು. ಮಹಾ ಪೂಜೆಯನ್ನು ಮಾಡುವವರು ಶ್ರೀ ವಿದ್ಯಾಮಾನ್ಯತೀರ್ಥರು. ಮಹಾಪೂಜೆಯ ಬಳಿಕ ಮಕ್ಕಳಿಗೆ ಗಂಜಿಯ ಊಟ ತಯಾರು. ತುಪ್ಪ/ತೆಂಗಿನೆಣ್ಣೆ ರುಚಿಯ ಉಪ್ಪಿನ ಕಾಯಿಯ ಆ ಊಟದ ಸವಿಯನ್ನು ಅಂದು ಉಂಡುವರು ಎಂದೂ ಮರೆಯರು. ಗಂಜಿ ಭೋಜನದ ಬಳಿಕ ಸಕಲ ಶಾಸ್ತ್ರಗಳ ಪಾಠಗಳು ಶುರು. ಕಿರಿಯ ಯತಿಗಳೆಲ್ಲರೂ ಒಂದೊಂದು ವರ್ಗಕ್ಕೆ ಪಾಠ ಮಾಡುತ್ತಿದ್ದರು.

ಭಾನು ಬಾನಿನ ಮಧ್ಯಕ್ಕೆ ಬಂದಾಗ ಎಲ್ಲರಿಗೂ ಶ್ರೀ ವಾಸುದೇವನ ಸುಗ್ರಾಸ ಪ್ರಸಾದ. ಪ್ರಸಾದ ಸ್ವೀಕಾರದ ಬಳಿಕ ಕೇಳಿಬರುತ್ತಿತ್ತು ಈ ಐದೂ ಯತಿಗಳ ವದನಗಳಿಂದ ಸುಸ್ವರ ವೇದ. ಅಲ್ಪ ವಿಶ್ರಾಂತಿಯ ನಂತರ ವಿಜೃಂಭಿಸುತ್ತಿತ್ತು ನ್ಯಾಯ, ವ್ಯಾಕರಣಾದಿ ಶಾಸ್ತ್ರಗಳ ಜೊತೆ ದ್ವೈತ ವೇದಾಂತದ ಉದ್ಗ್ರಂಥಗಳ ಪಾಠ ನಿನಾದ. ಪಾಠಗಳ ಸಮಾಪ್ತಿಯ ಸಮಯದಲ್ಲಿ ಸೂರ್ಯ ಪಡು ದಿಕ್ಕನ್ನು ಸೇರುತ್ತಿದ್ದ. ಆಗ ಅವನು ವೃದ್ಧ. ಅಷ್ಟು ಹೊತ್ತಿಗೆ ಸಂಧ್ಯಾವಂದನೆ, ಅಗ್ನಿಕಾರ್ಯಗಳಿಗೆ ವಿದ್ಯಾರ್ಥಿವೃಂದಸಿದ್ಧ.

ಮತ್ತೆ ಯತಿಗಳೈವರ ಸ್ನಾನ ಪ್ರಣವಾದಿ ಜಪತರ್ಪಣ. ಪಟ್ಟದ ದೇವರುಗಳಿಗೆ ಅರ್ಚನ. ನಂತರ ಕುಲಪತಿಗಳಿಂದ ಭಾಗವತಾದಿ ಗ್ರಂಥಗಳ ತತ್ವ, ನೀತಿ ಬೋಧನ. ವಿದ್ಯಾರ್ಥಿಗಳಿಗೆ. ರಾತ್ರಿ ಹಿತವಾದ ಭೋಜನ. ಬಳಿಕ ಬೆಳಗಿನ ಪಾಠಗಳ ಮರು ಚಿಂತನ. ನಂತರ ಶಯನ.

ಹೀಗೆ ಕೆಲವು ವರ್ಷಗಳು ಕಳೆದವು. ಹಂತ ಹಂತವಾಗಿ ವೇದಾಂತಾದಿ ಶಾಸ್ತ್ರಗಳ ಪಾಠಗಳು ಎಡೆಬಿಡದೆ ನಡೆಯುತ್ತಿದ್ದವು. ಗುರು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಹಗಲಿರುಳೂ ಪಾಠ, ಪಾಠ. ಅವರು ತಮ್ಮ ನಾಲ್ಕು ಶಿಷ್ಯರಿಗೆ ಹೇಳಿದ ಚಂದ್ರಿಕಾ ಪಾಠದ ಮಂಗಲವನ್ನು ಬಾಣತೀರ್ಥ ಮಠದಲ್ಲಿ ಆಚರಿಸಿದರು. 1984ರ ಜನವರಿ 12 ರಂದು ಅದಮಾರು ಗ್ರಾಮದಲ್ಲಿಯೇ ಈ ನಾಲ್ಕು ಶಿಷ್ಯರ ಸುಧಾ ಮಂಗಲ ಮಹೋತ್ಸವವನ್ನು ಆಚರಿಸಿದರು. ಕ್ರಮವಾಗಿ, ಶ್ರೀ ವಿದ್ಯೇಶತೀರ್ಥರು, ಶ್ರೀ ವಿದ್ಯಾಧೀಶ ತೀರ್ಥರು, ಶ್ರೀ ಸುಗುಣೇಂದ್ರ ತೀರ್ಥರು, ಶ್ರೀ ವಿಶ್ವಪ್ರಿಯ ತೀರ್ಥರುಗಳ ಸುಧಾನುವಾದಗಳು ನಡೆದವು. ಒಬ್ಬೊಬ್ಬ ಶಿಷ್ಯರ ಅನುವಾದವೂ ಅತ್ಯದ್ಭುತವಾಗಿತ್ತು. ಗುರು ಶ್ರೀ ವಿದ್ಯಾಮಾನ್ಯ ತೀರ್ಥರ ಅನುವಾದ ಕೊನೆಯಲ್ಲಿತ್ತು. ವಿಶಿಷ್ಟವಾಗಿತ್ತು. ಅದು ಶ್ರೀಕೃಷ್ಣನಿಗೂ ಅನುವ್ಯಾಖ್ಯಾನಕ್ಕೂ

ಸಾಮ್ಯವನ್ನು ಸಾರುತ್ತಿತ್ತು. ಈ ಐದು ಅನುವಾದಗಳಿಗೆ ಪಂಡಿತಮಂಡಲಿ ತಲೆದೂಗಿತ್ತು. ವೇದವ್ಯಾಸ ಪೂಜೆಯ ನಂತರ ಗುರು ಪೂಜೆಯಾಯಿತು. ಅದೂ ಅತ್ಯಂತ ವೈಶಿಷ್ಟ್ಯ ಪೂರ್ಣವಾಗಿತ್ತು. 'ಗುರುಗಳ ಅನುಗ್ರಹಕ್ಕಾಗಿ, ಅವರಿಂದ ಪಡೆದ ಪಾಠಕ್ಕಾಗಿ, ಜ್ಞಾನದ ಸಿದ್ಧಿಗಾಗಿ ದಕ್ಷಿಣೆಯನ್ನು ನೀಡಬೇಕೆನ್ನುವುದು' ಶಾಸ್ತ್ರಮಾತು. ಏನೀ ದಕ್ಷಿಣೆ? ಧನ, ಕನಕ, ಭೂ, ಗೋವು ಮೊದಲಾದ ವುಗಳನ್ನು ನೀಡುವುದು ಒಂದು ವಿಧವಾದರೆ ಗುರುಗಳಿಂದ ಪಡೆದ ಜ್ಞಾನವನ್ನು ತಾನು ಪರರಿಗೆ ಉಪದೇಶಿಸಿ ಜ್ಞಾನ ಪ್ರಸಾರ ಮಾಡುವುದು ಮತ್ತೊಂದು ವಿಧ. ಇದರಲ್ಲಿ ಪಾಠ-ಪ್ರವಚನ ರೂಪದ ದಕ್ಷಿಣೆಯೇ ಶ್ರೇಷ್ಠ. ಅದು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಬಲು ಇಷ್ಟ. ತಮ್ಮ ಸುಧಾನುವಾದದಲ್ಲಿ ನಿರಂತರ ಪಾಠ-ಪ್ರವಚನದ ದೀಕ್ಷೆಯನ್ನು ತೊಡುವ ಸಂಕಲ್ಪವನ್ನು ಸೂಚಿಸಿದ ಈ ನಾಲ್ವರು ಯುವಯತಿವರರು ಭೌತಿಕ ಗುರು ದಕ್ಷಿಣೆಯನ್ನೂ ನೀಡಿದರು. ಶ್ರೀ ವಿಶ್ವಪ್ರಿಯ ತೀರ್ಥರು ಸುವರ್ಣಕಲಶವನ್ನು ಸಮರ್ಪಿಸಿದರೆ ಶ್ರೀ ಸುಗುಣೇಂದ್ರ ತೀರ್ಥರು ಸುವರ್ಣ ಹರಿವಾಣವನ್ನು ಅರ್ಪಿಸಿದರು. ಶ್ರೀ ವಿದ್ಯಾಮಾನ್ಯ ತೀರ್ಥರ ಪರಕುಮಾರರಾದ ಶ್ರೀ ವಿದ್ಯಾಧೀಶ ತೀರ್ಥರು ಹಾಗೂ ಶ್ರೀ ವಿದ್ಯೇಶ ತೀರ್ಥರು ಗುರುಗಳಿಗೆ ಸುವರ್ಣ ಕಮಲಾಕ್ಷಿಮಣಿ ಸರವನ್ನು ಅರ್ಪಿಸಿದರು. ಈ ಸಂದರ್ಭದಲ್ಲಿ ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥರು, ಶ್ರೀ ವಿಶ್ವವಿಜಯ ತೀರ್ಥರು, ಶ್ರೀ ಸುಬ್ರಹ್ಮಣ್ಯ ಮಠದ ಶ್ರೀ ವಿದ್ಯಾಭೂಷಣ ತೀರ್ಥರು ಉಪಸ್ಥಿತರಿದ್ದರು. ಈ ಮಂಗಲ ಮಹೋತ್ಸವವು ಇತಿಹಾಸ ದಾಖಲೆಯನ್ನು ನಿರ್ಮಿಸಿತು. ಈ ಮಹೋತ್ಸವದ ಹಿನ್ನೆಲೆಯಲ್ಲಿ ಶ್ರೀ ವಿಬುಧೇಶ ತೀರ್ಥರ ಮಹತ್ತರ ಸಂಕಲ್ಪವಿತ್ತು. ಅದು ಸಿದ್ಧವಾಯಿತು. ಇದು ಶ್ರೀ ವಿದ್ಯಾಮಾನ್ಯ ತೀರ್ಥರ ಹನ್ನೆರಡನೆಯ ಸುಧಾ ಮಂಗಲ ಮಹೋತ್ಸವವಾಗಿತ್ತು. ಈ ಉತ್ಸವವನ್ನು ವೀಕ್ಷಿಸಲು ಕಿಕ್ಕಿರಿದ ಭಕ್ತಸ್ತೋಮ ಆನಂದದ ಹೊಳೆಯಲ್ಲಿ ಮಿಂದಿತು.

ಈ ರೀತಿ ಹತ್ತು ವರುಷಗಳ ಕಾಲ ಪಾಠಕ್ಕಾಗಿಯೇ ನಿಂತ ಶ್ರೀ ವಿದ್ಯಾಮಾನ್ಯ ತೀರ್ಥರ ಮನದಲ್ಲಿ ಯಾವ ಚಿಂತೆಯೂ ಇರಲಿಲ್ಲ. ಇಂತಹ ನಿಶ್ಚಿಂತ ಗುರುಗಳನ್ನು ಈ ನಾಲ್ಕು ಯುವ ಯತಿಗಳು ಬಿಡಲಿಲ್ಲ ಹಿಡಿದರು. ಸೇವಿಸಿದರು. ಒಲಿಸಿದರು. ಅವರ ಅನುಗ್ರಹವನ್ನು ಸಂಪಾದಿಸಿದರು. ಚಂದ್ರಿಕಾ, ಸುಧಾಂತ ವೇದಾಂತ , ಬಾಧಾಂತ ನ್ಯಾಯ ಮುಂತಾದ ಎಲ್ಲ ಶಾಸ್ತ್ರಗಳನ್ನು ಅವರಿಂದ ಕಲಿತರು. ತಮ್ಮ ನಡೆ ನುಡಿಗಳಲ್ಲಿ ಪ್ರೌಢಿಮೆಯನ್ನು ಮೂಡಿಸಿಕೊಂಡು ಗುರುಗಳ ಪಡಿಯಚ್ಚಿನಂತಾದರು. ದ್ವೈತ ವೇದಾಂತ ಸಾಮ್ರಾಜ್ಯದ ರಕ್ಷಣೆಯ ಸುಭದ್ರ ಕೋಟೆಯ ನಾಲ್ಕು ದಿಕ್ಕಿನ ನಾಲ್ಕು ದ್ವಾರಗಳಂತಾದರು.

ಈ ಶಿಷ್ಯ ಶ್ರೇಷ್ಠ ಯತಿ ಪುಂಗವರಲ್ಲಿ ಧರ್ಮ ದೀಕ್ಷೆ, ವಿಚಾರವಂತಿಕೆ, ಔದಾರ್ಯ, ಧೈರ್ಯ ಹಾಗೂ ಉತ್ಸಾಹಗಳನ್ನು ತುಂಬಿ ಹರಸಿ ಸಮಾಜಕ್ಕೆ ಅತ್ಯಮೂಲ್ಯ ಕೊಡುಗೆಗಳನ್ನಾಗಿ ನೀಡಿದ ಮಹನೀಯರು ಶ್ರೀ ವಿದ್ಯಾಮಾನ್ಯ ತೀರ್ಥರು.



# ಗುರುವಚನಾನುಷ್ಠಾನ ಪರಮತಖಂಡನ, ಸಿದ್ಧಾಂತಸಮರ್ಥನ

''ನನ್ನ ಇಡೀ ಕರ್ನಾಟಕ ಪ್ರವಾಸದ ಗುರುಗಳ ಸಂದರ್ಶನದಲ್ಲಿ ಕಾವೀಧ್ವಜದ ಬದಲು ಕೆಂಬಾವುಟ ಹಾರಿದ್ದು ಪಲಿಮಾರು ಹಾಗೂ ಭಂಡಾರಕೇರಿ ಮಠದ್ವಯದ ಯಜಮಾನ ಪಟ್ಟದಲ್ಲಿರುವ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಸಮ್ಮುಖದಲ್ಲಿ. ಎಲ್ಲ ಆಚಾರ್ಯರುಗಳೂ ಸಮರೇ, ಯಾವ ಸಿದ್ಧಾಂತವೂ ಮತ್ತಾವ ಸಿದ್ಧಾಂತಕ್ಕೂ ಕಿರಿದಲ್ಲ. ಬ್ರಾಹ್ಮಣರೆಲ್ಲರೂ ಒಂದೇ ಎಂಬ ನಮ್ಮ ನಿಲುವಿಗೆ ತೀವ್ರ ವಿರುದ್ಧ ಧೋರಣೆಯ ಶ್ರೀಪಾದರಾದ್ದರಿಂದ, ನಮಗೆ ಅವರ ಚಿಂತನೆ ಹಿಡಿಸದು.''

ಇದು, ಕೆಲವು ದಶಕಗಳ ಹಿಂದೆ ದ್ವೈತಾದ್ವೈತ ವಿಶಿಷ್ಟಾದ್ವೈತ ಮಠಗಳನ್ನು ಪರಿಚಯಿಸುವ ಪುಸ್ತಕವೊಂದರ ಸಂಪಾದಕರ ಬಿರು ನುಡಿ. ಈ ನುಡಿಯನ್ನು ಆ ಸಂಪಾದಕರು ಏಕೆ ಬರೆದರು? ಹೀಗೆ ಬರೆಯಬಹುದೆ? ಎಂದೆಲ್ಲ ಪ್ರಶ್ನೆಗಳು ತೋರಬಹುದು. ಆದರೆ ಈ ರೀತಿಯ ಬರೆಯೋಣವು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ದೋಷವಾಗದ ದೊಡ್ಡ ಗುಣ. ಕಾರಣ,

ಶ್ರೀಪಾದರ ಮತ್ತೊಂದು ಮುಖ, ಅವರು ನಂಬಿದ ಮಧ್ವ ಸಿದ್ಧಾಂತದ ಬಗ್ಗೆ ಅಚಲವಾದ ಅನನ್ಯ ನಿಷ್ಠೆ. ತಾತ್ವಿಕ ನಂಬಿಕೆಗಳ ಬಗ್ಗೆ ಅವರು ಎಂದಿಗೂ ಅನ್ಯರಿಂದ ಸಂಧಾನ ಮಾಡಿಕೊಂಡವರಲ್ಲ. ಕೇವಲ ಕೆಲವರ ದಾಕ್ಷಿಣ್ಯಕ್ಕೆ ಒಳಗಾಗಿ ರಾಮಾಯ ಸ್ವಸ್ತಿ ,ರಾವಣಾಯ ಸ್ವಸ್ತಿ ಎನ್ನುವವರಲ್ಲ. ಕಣ್ಣೆದುರು ನಡೆದ ತಪ್ಪನ್ನು ನೋಡಿಯೂ ತೆಪ್ಪಗೆ ಇರುವ ಮಹಾಪರಾಧವನ್ನೆಸಗುವವರಲ್ಲ. ರಾಜಸಭೆಯಲ್ಲಿ ನಡೆಯುತ್ತಿದ್ದ ಕುಲವಧೂ ದ್ರೌಪದೀದೇವಿಯವರ ಅವಮಾನದ ಸಮಯದಲ್ಲಿ ಮೌನವಹಿಸಿದ್ದ ಭೀಷ್ಮದ್ರೋಣಾದಿಗಳ ಸ್ವಭಾವದವರಲ್ಲ. ಏಕೆಂದರೆ ಅವರು ಅವಮಾನದ ಅವಧಿಯಲ್ಲಿ ಏಕಾಕಿಯಾಗಿ ಪ್ರತಿಭಟಿಸಿದ ಶ್ರೇಷ್ಠಜ್ಞಾನಿವರಿಷ್ಠರಾದ ವಿದುರರ ನಿಷ್ಠೆಯುಳ್ಳವರು. ಶುದ್ಧ ಭಾಗವತಧರ್ಮಿಗಳು. ಭೀಮಸೇನ ಮಾರ್ಗಾನುಯಾಯಿಗಳು. ತನಗೆ 'ಶಾಸ್ತ್ರೀಯವಾಗಿ ತಪ್ಪು' ಎಂದೆನಿಸಿದ್ದನ್ನು ಗಟ್ಟಿ ದನಿಯಲ್ಲಿ ಪ್ರತಿಭಟಿಸುವವರು. ಉಗ್ರವಾಗಿ ಪ್ರತಿಕ್ರಿಯಿಸುವವರು. ಆದರೆ ತಾತ್ವಿಕ ನಿರೂಪಣೆಯ ಸಂದರ್ಭದಲ್ಲಿ ಅವರ

ಮನದೊಳಗೆ ಪರದ್ವೇಷಭಾವದ ಸೋಂಕೂ ಸುಳಿಯುತ್ತಿರಲಿಲ್ಲ. ಅದು ಅವರನ್ನುಎಂದಿಗೂ ಬಾಧಿಸಿಲ್ಲ.

ಅವರನ್ನು ಅರಿಯದ ಕೆಲ ಮಂದಿ ವಿಪರೀತವಾಗಿ ತಿಳಿದರು. ಅವರ ನಿಷ್ಠೆಯನ್ನು ನಿಷ್ಠುರತೆಯನ್ನಾಗಿ ಬಗೆದರು. ಅವರ ನುಡಿಗಳ ಹಿಂದಿರುವ ಕಳಕಳಿಯನ್ನು ಕಾಣದಾದರು. ಏಕೆಂದರೆ ಸತ್ಯಾಂಶದಿಂದ ದೂರದಲ್ಲಿರುವ ಜನರವರು. ಇಂತಹ ಅಪೂರ್ವ ವ್ಯಕ್ತಿತ್ವವನ್ನು ಸಮಾಜ ಗುರುತಿಸ ಬೇಕಾದಷ್ಟು ರೀತಿಯಲ್ಲಿ ಗುರುತಿಸಲಿಲ್ಲ. ಗುರುತಿಸಿದ ಬೆರಳೆಣಿಕೆಯ ಜನರು ಚೆನ್ನಾಗಿ ಗುರುತಿಸಿದರೆ, ಚೆನ್ನಾಗಿ ಗುರುತಿಸದೇ ಇರುವವರೇ ಅನೇಕರು. ಕೆಲವರಂತೂ 'ವ್ಯಕ್ತಿತ್ವಕ್ಕಿಂತ ಹಿರಿದಾದ ಸಂಪ್ರದಾಯವಿಲ್ಲ' ಎಂಬುದನ್ನೂ ಮರೆತು ವಿರೋಧಿಸಿದರು. ಆದರೆ,

ಬಂಗಾರವನ್ನು ಜನರು ಗುರುತಿಸಿಲ್ಲವೆಂದಾಕ್ಷಣ ಅದು ತನ್ನ ಬಂಗಾರತನವನ್ನೇನು ಕಳೆದುಕೊಳ್ಳುವುದಿಲ್ಲ. ಅದೇನು ಬೆಳ್ಳಿ, ತಾಮ್ರಗಳ ಸಾಲಿನಲ್ಲಿ ಸೇರುವುದಿಲ್ಲ. ಆ ಬಂಗಾರವನ್ನು ಗುರುತಿಸದೇ, ಉಪಯೋಗಿಸದ ಜನರೇ ನತದೃಷ್ಟರು. ಅಂತೆಯೇ ಶ್ರೀಪಾದರ ವ್ಯಕ್ತಿತ್ವವು ಪುತ್ಥಳಿ ಚಿನ್ನದಂತೆ ಇರುವಂತದ್ದು. ಅವರನ್ನುನೋಡದ, ಅವರಿಂದ ನೋಡಿಸಿಕೊಳ್ಳದ, ಅವರ ಕೃಪೆಗೊಳಗಾಗದ ಜನರೇ ನತದೃಷ್ಟರು.

''ಶ್ರೀಮದಾಚಾರ್ಯರ ತತ್ವವಾದದ ಹೆಬ್ಬಾಗಿಲು ಎಲ್ಲರಿಗೂ ತೆರೆದಿರುವುದು. ಆದರೆ ಅದು ಎಲ್ಲರಿಗೂ ತಿಳಿಯದು. ಆಧುನಿಕ ವಿಜ್ಞಾನ ಯುಗದಲ್ಲಿ ಈ ದ್ವೈತ ತತ್ವವು ಎಷ್ಟು ಸಾಮಯಿಕವೆನಿಸಿದೆ ಎಂದು ಉಳಿದವರಿಗೆ ಹೇಗೆ ತಿಳಿಸುವುದು? 'ಇದೇ ಗುಂಗಿನಲ್ಲಿದ್ದವರು ಶ್ರೀ ವಿದ್ಯಾಮಾನ್ಯ ತೀರ್ಥರು. ಅವರು, ತತ್ವಗಳ ಸಾರವನ್ನು ಅನುಭವದ ಒರೆಗಲ್ಲಿನಲ್ಲಿ ತಿಕ್ಕಿ ಒರೆದು ನೋಡಿದವರು. ಎಲ್ಲ ಮತ ಧರ್ಮಗಳ ತಿರುಳನ್ನೂ ತಳಮುಟ್ಟಿ ಹೀರಿದವರು. ಕೊನೆಯಲ್ಲಿ 'ದ್ವೈತ' ಎಂಬುದೇ ಎಲ್ಲ ಶಾಸ್ತ್ರಗಳ ಸಾರವೆಂಬ ಸತ್ಯವನ್ನು ಕಂಡವರು. ಆ ಸತ್ಯವೇ ನಮಗೆಲ್ಲ ತಾರಕವೆಂದು ಬೋಧಿಸುವವರು.

'ಎಂದಿಗಾದರೂ 'ಸತ್ಯ' ಒಂದೇ. ಅದೇನು ನಂತೆಕಟ್ಟೆಯಲ್ಲಿ ಸಿಗುವುದೇ? 'ಸತ್ಯ' ಶೋಧನೆಗಾಗಿ ಶ್ರಮವಹಿಸಬೇಕು. ವಿಮರ್ಶಿಸಬೇಕು. ಸ್ವಾರ್ಥ ಸಾಧನೆಗಾಗಿ, ಸತ್ಯವಾದ ತತ್ವವನ್ನು ಬೋಧಿಸುವ ನೆವದಲ್ಲಿ ಅಸತ್ಯ ಸಂಗತಿಯನ್ನು ಬಣ್ಣ ಕಟ್ಟಿ ಹೇಳಿ ಜನರ ಪ್ರೀತಿಯನ್ನು ಅವರನ್ನು ವಶೀಕರಿಸಿದರೆ, ಅದು ಅವರಿಗೆ ಮಾಡಿದ ಮೋಸವೇ ಹೊರತು. ಅವರ ಉದ್ಧಾರವಲ್ಲ. ನಿಷ್ಠುರವಾದರೂ ತತ್ವವನ್ನು ಮುಚ್ಚಿಡಬಾರದು. ರೋಗಿಯ ರೋಗ ಕಾಣದಂತಾಗಿ ಅವನು ಆರೋಗ್ಯವಂತನಾಗಲು ನಾಲಿಗೆಗೆ ಕಹಿ ಎನಿಸಿದರೂ ಔಷಧದ ಸ್ವೀಕಾರವು ಅನಿವಾರ್ಯ. ಅದರಂತೆ ತತ್ವದ ದರ್ಶನವಾಗಲು ಪೂರ್ವಗ್ರಹವನ್ನು ತ್ಯಜಿಸಿ ತಾನು ನಂಬಿದ ಸಿದ್ಧಾಂತದಲ್ಲಿರುವ ಗುಣದೋಷ ಗಳನ್ನು ವಿಮರ್ಶಿಸಬೇಕು. ಈ ದೃಷ್ಟಿಯಲ್ಲಿ ಪರಮತ ದಲ್ಲಿರುವ ದೋಷಗಳನ್ನು ತಿಳಿಸುವುದೂ ತಿಳಿದವನ ಕರ್ತವ್ಯ. ಈ ಹೆಜ್ಜೆಯಲ್ಲಿಯೇ ಎಲ್ಲ ದಾರ್ಶನಿಕರು ನಡೆದು ಬಂದರು. ಆದರೆ ಈ ವಿಮರ್ಶೆಯ ಉದ್ದೇಶ ವ್ಯಕ್ತಿ ದ್ವೇಷವಲ್ಲ. ಶುದ್ಧವಾದ ತತ್ವ ಪ್ರಕಾಶ' ಇದು ನಿಷ್ಕಪಟ, ನಿಸ್ವಾರ್ಥ ಸ್ವಭಾವದ ಶ್ರೀ ವಿದ್ಯಾಮಾನ್ಯ ತೀರ್ಥರ ಅಚಲವಾದ ನಿಲುವು. ಆ ನಿಲುವು ಹಾಗೂ ಪ್ರಾಮಾಣಿಕ ಪರಮ ಪಾಂಡಿತ್ಯ ಸತ್ಯ ನಿಷ್ಠೆಗಳಿಂದ ಅವರಲ್ಲಿ ಹರಿದು ಬಂದಿತು ಹರಿವಾಯುಗಳ ಒಲುವು. ಅದರಿಂದ ಅವರನ್ನಾಶ್ರಯಿಸಿತು ನಿರಂತರದ ಗೆಲುವು. ಇದೇ ಮಾಧ್ವ ಪೀಠಾಧಿಪತಿಗಳ ಮೊಗದ ನಿಜವಾದ ಚೆಲುವು.

ಹೀಗೆ 'ಆಚಾರ್ಯರೆಂದರೆ ಶ್ರೀಮದಾನಂದ ತೀರ್ಥ ಭಗವತ್ಪದಾಚಾರ್ಯರು. ಮತವೆಂದರೆ ಶ್ರೀಮನ್ಮಧ್ವ ಮತವೇ' ಎಂಬ ಸಿದ್ಧಾಂತವನ್ನು ಯಾರ ಸಂಕೋಚ ದಿಂದಲೂ, ಯಾವ ಸಂದರ್ಭದಲ್ಲಿಯೂ ಮುಚ್ಚಿಡುವ ಸ್ವಭಾವ ಶ್ರೀ ವಿದ್ಯಾಮಾನ್ಯ ತೀರ್ಥರದಲ್ಲ. ಆದರೆ ಅವರನ್ನು ಮಾನವೀಯತೆ, ಸಹಿಷ್ಣುತೆ ಮೊದಲಾದ ಭಾವನೆಗಳಿಲ್ಲದ ಕಠೋರ ವ್ಯಕ್ತಿಗಳಿವರು ಎಂದು ತಿಳಿಯುವುದೂ ತಪ್ಪಾಗುತ್ತದೆ. ಏಕೆಂದರೆ ಮತೀಯ ತತ್ವವಿಷಯಗಳಲ್ಲಿ ಭಿನ್ನಾಭಿಪ್ರಾಯಗಳನ್ನು ತೋರಿಸಿ ಅವುಗಳನ್ನು ಖಂಡತುಂಡವಾಗಿ ಖಂಡಿಸಿದರೂ, ಅನಂತರದಲ್ಲಿ ಆ ಅನ್ಯಮತೀಯ ವಿದ್ವಾಂಸರನ್ನೇ ಬಹು ಚೆನ್ನಾಗಿ ಸತ್ಕರಿಸುವವರೂ ಶ್ರೀ ವಿದ್ಯಾಮಾನ್ಯ ತೀರ್ಥರು. ಆ ಸತ್ಕಾರದ ಉದ್ದೇಶ, ಆ ಪಂಡಿತರ ಬಾಯಿ ಮುಚ್ಚಿಸುವುದಕ್ಕಾಗಿ ಅಲ್ಲ. ಆ ಪಂಡಿತರಲ್ಲಿ ಹಾಗೂ ಅವರ ಶ್ರೇಷ್ಠ ಪಾಂಡಿತ್ಯದಲ್ಲಿರುವ ಪ್ರೀತಿಯನ್ನು ಸೂಸು ವುದುಕ್ಕಾಗಿ. ಪಂಡಿತ ಪೋಷಣೆಗಾಗಿ. ಶಾಸ್ತ್ರಪರಂಪರೆಯ ರಕ್ಷಣೆಗಾಗಿ. ಪರಮತೀಯ ಪಂಡಿತರೆಂದರೆ ಪಲಿಮಾರು ಹಿರಿಯ ಶ್ರೀಪಾದರಿಗೆ ಪರಮ ಪ್ರೀತಿ. ಅಂತೆಯೇ ಆ ಪಂಡಿತರಿಗೂ ಶ್ರೀಪಾದರಲ್ಲಿ ವಿಶೇಷ ಗೌರವ, ಭಕ್ತಿ. ಆ ಗೌರವ, ಭಕ್ತಿಗಳು ಶ್ರೀಪಾದರು ನೀಡುವ ಸಂಭಾವನೆಗಾಗಿ ಅಲ್ಲ. ಅವರು ತೋರುವ ನಿಷ್ಕಲ್ಮಷ ಹೃದಯದ ಪ್ರೀತಿಗಾಗಿ, ಅವರ ತಪಶ್ಶಕ್ತಿಗಾಗಿ, ಅವರ ವಿದ್ವತ್ತಿಗಾಗಿ. ಶ್ರೀಪಾದರೊಡನೆ ವಾಕ್ಯಾರ್ಥನಡೆಸಿ ಸಾವಿರಾರು ರೂಗಳ ಸಂಭಾವನೆಯನ್ನು ಪಡೆಯದ ಪರಮತೀಯ ಓರ್ವ ವಿದ್ವಾಂಸನೂ ಇಲ್ಲ ಎಂದು ಖಚಿತವಾಗಿ ಹೇಳಬಹುದು.

ಅವರು ಎಷ್ಟೆಂದರೂ, ಪ್ರತಿವಾದಿ ಭಯಂಕರರಾದ ಹಾಗೂ ಪ್ರತಿವಾದಿ ಸನ್ಮಾನ ದಾತೃಗಳಾದ ಶ್ರೀಮತ್ ಸತ್ಯಧ್ಯಾನ ತೀರ್ಥರ ಅಪ್ಪಟ ಶಿಷ್ಯರಲ್ಲವೆ! ಆ ಗುರು ವರರ ಹಾರೈಕೆ, ಹಾಗೂ ಶ್ರೀ ಮಧ್ವ ಕೃಷ್ಣರ ಪೂರ್ಣ ಕೃಪೆ ಅವರಲ್ಲಿ ನಿರಂತರವಾಗಿತ್ತು. ಅದರಿಂದ ದ್ವೈತಮತ ರಕ್ಷಣ ಕಾರ್ಯವು ಅನೇಕ ರೀತಿಯಲ್ಲಿ ನಡೆಯಿತು.

ಶ್ರೀಪಾದರೇ ಪರವಾದಿಗಳಲ್ಲಿಗೇ ಹೋಗಿ ಅವರನ್ನು ವಾಕ್ಯಾರ್ಥದಲ್ಲಿ ಪರಾಜಯಗೊಳಿಸಿ ಸಿದ್ಧಾಂತದ ವಿಜಯವನ್ನು ಪ್ರಕಾಶ ಪಡಿಸಿದ್ದು ಅನೇಕ ಬಾರಿ. ಶ್ರೀಪಾದರಿರುವಲ್ಲಿಗೇ ಪರವಾದಿಗಳು ಬಂದರೂ ಸರಿ. ಆಗಲೂ ಶ್ರೀಪಾದರ ವದನದಲ್ಲಿ ಶೋಭಿಸುತ್ತಿತ್ತು ವಿಜಯದ ಐಸಿರಿ. ಕೆಲವೊಂದು ಬಾರಿ ಕೆಲವು ದುರಾಗ್ರಹಿಗಳು ದುರುದ್ದೇಶದಿಂದಲೇ ಆಕಸ್ಮಿಕವಾಗಿ ವಾಕ್ಯಾರ್ಥಕ್ಕೆ ಕರೆದರೆ, ಆಗಲೂ ಸಿದ್ಧ ಈ ಪಂಡಿತ ಕೇಸರಿ. ಆ ವಾಕ್ಯಾರ್ಥದ ಫಲಶ್ರುತಿಯಾಗಿ ಮೊಳಗುತ್ತಿತ್ತು ದ್ವೈತ ಸಿದ್ಧಾಂತದ ವಿಜಯೋತ್ಸವದ ಭೇರಿ.

ಅಂತೂ ಎಲ್ಲಿ ಹೋದರೂ, ಯಾವಾಗಲಾದರೂ, ವಾಸ್ತವ ಸಿದ್ಧಾಂತಕ್ಕೆಯೇ ವಿಜಯ ಪ್ರಾಪ್ತಿಯಾಗಬೇಕಲ್ಲವೆ? ಅಂತಹ ವಾಸ್ತವತೆಯ ಅಪರಾವತಾರವಾದ ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ಸದಾ ಸಿದ್ಧವಾದ ವಿಜಯವನ್ನು ಜಗತ್ತಿಗೆ ಪರಿಚಯಿಸುವ ಸುಯೋಗ ಹಾಗೂ ಉತ್ತಮ ಯೋಗ್ಯತೆ ಶ್ರೀ ವಿದ್ಯಾಮಾನ್ಯ ತೀರ್ಥರ ಪಾಲಿಗಿತ್ತು. ಇಂತಹ ಯೋಗವನ್ನು ಹಾಗೂ ಯೋಗ್ಯತೆಯನ್ನು ಸದುಪಯೋಗ ಪಡಿಸಿ ಸಿರಿಯರಸನ ಸೇವೆಗೈದ ಫಲವೇ ಅವರು ಶ್ರೀಕೃಷ್ಣನನ್ನು ಪೂಜಿಸುವ ಸೌಭಾಗ್ಯದ ಪ್ರಾಪ್ತಿ.

ಏಳು ನೂರು ವರುಷಗಳ ಹಿಂದೆ ಶ್ರೀಮದಾಚಾರ್ಯರು ಕಾಲ್ನಡಿಗೆಯಿಂದಲೇ ಭಾರತದ ಉದ್ದಗಲವನ್ನುಸುತ್ತಿದರು. ವೈದಿಕ ತತ್ವವಾದವನ್ನು ಜನಮನಕೆ ಬೋಧಿಸಿದರು. ದ್ವೈತ ವಿಜಯ ಪತಾಕೆಯನ್ನು ಹಾರಿಸಿದರು. ಅವರ ಶಿಷ್ಯರು ಅವರ ನಂತರ ಆ ತತ್ವವಾದವನ್ನು ಬೋಧಿಸುತ ಮುಂಡಿಸಿದರು. ಆ ಬಳಿಕ ಶ್ರೀಮಟ್ಟೀಕಾಕೃತ್ಪಾದರು, ಶ್ರೀ ಚಂದ್ರಿಕಾ ಚಾರ್ಯರು, ಶ್ರೀಸೋದೆಯ ಗುರುರಾಜರು, ಶ್ರೀ ಮಂತ್ರಾಲಯ ಪ್ರಭುಗಳು ಮೊದಲಾಗಿ ಎಲ್ಲ ಮಹಾತ್ಮರು ಆ ಸೇತು ಹಿಮಗಿರಿ ಪರಿಯಂತ ದಿಗ್ವಿಜಯ ಮಾಡಿದರು. ದ್ವೈತ ಡಿಂಡಿಮವನ್ನು ಬಾರಿಸಿದರು. ಆನಂತರದ ಸಮಯದಲ್ಲಿ ಅನೇಕ ಮಹಾತ್ಮರು ಉದಯಿಸಿದರು. ಆದರೆ ಇತ್ತೀಚಿನ ಜನರ ಸ್ಮೃತಿ ಪಟಲದಲ್ಲಿ ಅಚ್ಚಳಿಯದೆ ದ್ವೈತಮತ ರಕ್ಷಕರೆಂದೇ ನೆನಪಾಗಿ ಉಳಿದ ಮಹಾನುಭಾವರು ಶ್ರೀಮತ್ ಸತ್ಯಧ್ಯಾನ ತೀರ್ಥರು. ಅವರ ನಂತರ? ಅವರ ಪ್ರಿಯ ಶಿಷ್ಯರಾದ ಶ್ರೀ ವಿದ್ಯಾಮಾನ್ಯ ತೀರ್ಥರು.

ಪ್ರಾಯಃ, ಇಪ್ಪತ್ತನೆಯ ಶತಮಾನದಲ್ಲಿ ಉಡುಪಿಯ ಪ್ರಾಂತ್ಯದಲ್ಲಿ ಜನಿಸಿ ಪರಮತ ನಿರಾಕರಣೆ ಹಾಗೂ ಸ್ವಮತ ಸಮರ್ಥನೆಗಳನ್ನು ಸಮರ್ಥವಾಗಿ, ವ್ಯಾಪಕವಾಗಿ ದೇಶದಾದ್ಯಂತ ನಡೆಸಿದ ಏಕೈಕ ''ದ್ವೈತ ವೇದಾಂತ ಸಾಮ್ರಾಟ್'' ಶ್ರೀ ಪಲಿಮಾರು ಹಾಗೂ ಶ್ರೀ ಭಂಡಾರಕೇರಿ ಉಭಯ ಮಠಾಧಿಶರಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು.

ದ್ವೈತ ಸಾಮ್ರಾಜ್ಯದ ಮೇಲೆ ಎರಗಿ ಬಂದ ಆ ಕಾಲದ ಅನಂತ ಕೃಷ್ಣ ಶಾಸ್ತ್ರಿ ಸುಬ್ರಹ್ಮಣ್ಯ ಶಾಸ್ತ್ರಿ ಸುಂದರಶಾಸ್ತ್ರಿ ಸೋಮಯಾಜಿಗಳು ಮೊದಲಾದ ಅದ್ವೈತ ಪಂಡಿತ ದಿಗ್ಗಜಗಳ ದಾಳಿಯನ್ನು ಭಗ್ನ ಗೊಳಿಸಿ ತಮ್ಮ ಸಾಮ್ರಾಜ್ಯವನ್ನು ಜೋಪಾನವಾಗಿ ಕಾಯ್ದುಕೊಂಡ 'ವಿದ್ಯಾವಿಕ್ರಮರಾಜ- ಸಿಂಹ'ರು ಶ್ರೀಪಾದರು.

ಶ್ರೀಹರಿಯ ಸರ್ವೋತ್ತಮತ್ವ, ಜೀವೇಶ್ವರ ಭೇದ, ಜಗತ್ಸತ್ಯತ್ವ, ವೇದ ಪ್ರಾಮಾಣ್ಯ, ಏಕಾದಶೀ ಏಕಾಚರಣೆ ಮುಂತಾದ ತಾತ್ವಿಕ ಚರ್ಚೆಗಳಲ್ಲಿ ಸಿಂಹದಂತೆ ಕೆಚ್ಚೆದೆಯಿಂದ ಪ್ರತಿವಾದಿ ಪ್ರಕರಕ್ಕೆ ಭಯಂಕರವಾದ ಬುದ್ಧಿಯ ಪರಾಕ್ರಮವನ್ನು ಪ್ರದರ್ಶಿಸಿದ 'ತತ್ವವಾದ ಪಂಚಾನನರು' ಅವರು.

ಶ್ರೀಸತ್ಯಧ್ಯಾನ ತೀರ್ಥರ ಬಳಿ ಅಧ್ಯಯನವನ್ನು ಪೂರೈಸಿದ ತರುವಾಯ ಹನ್ನೆರಡು ವರ್ಷಗಳವರೆಗೆ ತಮ್ಮ ಭಂಡಾರಕೇರಿಯಲ್ಲಿದ್ದು ಅವಿಚ್ಛಿನ್ನ ಪಾಠಗಳ ಮುಖಾಂತರ ಜ್ಞಾನದಾನ ಮಹಾಯಜ್ಞವನ್ನಾಚರಿಸಿದರು. ಅದರ ನಂತರ ದಿಗ್ವಿಜಯಕ್ಕೆ ಹೊರಟರು. ಭಾರತದ ಉತ್ತರದಿಂದ ದಕ್ಷಿಣದವರೆಗೆ ಸಂಚರಿಸಿ ಅದ್ವೈತಾದಿ ಸಿದ್ಧಾಂತಿಗಳನ್ನು ಸೋಲಿಸಿದರು. ದ್ವೈತ ಸಿದ್ಧಾಂತದ ಪರಮೋನ್ನತಿಯ ಕಹಳೆಯನ್ನೂದಿದರು. ಎಲ್ಲೆಡೆ ವಿಜಯದುಂದುಭಿಯನ್ನು ಮೊಳಗಿಸಿದರು. ಅದ್ವೈತಾದಿ ಪರಭಾಷ್ಯಗಳನ್ನು, ತತ್ವಗಳನ್ನು ಖಂಡಿಸಿ ಅವುಗಳಲ್ಲಿರುವ ಅಶುದ್ಧತೆಯನ್ನು, ಅಸ್ಥಿರತೆಯನ್ನು ಹಾಗೂ ಅವಕ್ವತೆಯನ್ನು ಸಿದ್ಧಮಾಡಿ ತೋರಿಸಿದರು.

ಎಲ್ಲ ವಾದಗಳನ್ನು ಖಂಡಿಸಿ 'ದ್ವೈತ ಸಿದ್ಧಾಂತವೇ ಸಿದ್ಧಾಂತ' ವೆಂದು ಅವರು ಅಂದು ಒತ್ತಿ ಹೇಳಿದರು. ಈಗ ಹೇಳುವವರು ಯಾರು? ಇನ್ನು ಅವರ ಛಾಯೆಯಲ್ಲೇ ಅವರ ಸಾಲಿನಲ್ಲೇ ಬರುವವರು ಯಾರು? ಶ್ರೀಮದಾಚಾರ್ಯರ ಸಿದ್ಧಾಂತದ ರಕ್ಷಣೆಗಾಗಿ, ಪ್ರಸಾರಕ್ಕಾಗಿ ಬದುಕನ್ನೇ ಮೀಸಲಿಟ್ಟು ಊರೆಲ್ಲ ಸುತ್ತುವವರು ಯಾರು? ಅವರ ಶಿಷ್ಯರು.

ಅಧ್ಯಯನ, ಅಧ್ಯಾಪನ, ಬಿಡುವಿನಲ್ಲಿ ಧ್ಯಾನ, ಅರ್ಚನ, ಪುನಃ ಕಿಕ್ಕಿರಿದ ಜನಸಭೆಯಲ್ಲಿ ಧಾರ್ಮಿಕ ಪ್ರವಚನ, ಹೀಗೆ ಎಡೆಬಿಡದೆ ತಾತ್ವಿಕವಾಗಿ ಬದುಕಿದ ಇಂತಹ ಸಾತ್ವಿಕ ಸಂನ್ಯಾಸಿಗಳನ್ನು ಕಾಣುವುದು ಈ ಕಾಲದಲ್ಲಿ ಅಷ್ಟು ಸುಲಭವಲ್ಲ. ಸಾವಿರದಲ್ಲೊಬ್ಬರೊ? ಲಕ್ಷದಲ್ಲೊಬ್ಬರೊ? ಅಥವಾ..... ?

ಅಂತಹ ಶ್ರೀಪಾದರನ್ನು, ಅವರು ನಡೆಸಿದ ವಾಕ್ಯಾರ್ಥಗಳನ್ನು, ಆ ವಿಜಯೋತ್ಸವಗಳನ್ನು ಕಂಡವರೇ ಧನ್ಯರು. ಪುಣ್ಯಾತ್ಮರು. ಆದರೆ ಅದನ್ನೆಲ್ಲ ಕಾಣದ, ತಿಳಿಯದ ಭಕ್ತರಿಗಾಗಿ, ಅವರ ಧನ್ಯತೆಗಾಗಿ ಶ್ರೀಪಾದರು ನಡೆಸಿದ ಅನೇಕ ದಿಗ್ವಿಜಯದ ಘಟನೆಗಳಲ್ಲಿ ಕೆಲವೊಂದರ ಸಂಕ್ಷಿಪ್ತ ಮಾಹಿತಿಯನ್ನು ಇಲ್ಲಿ ಬಿತ್ತರಿಸಲಾಗಿದೆ.

1)ಶ್ರೀ ವಿದ್ಯಾಮಾನ್ಯತೀರ್ಥರ 1940ರ ಚಾತುರ್ಮಾಸ್ಯದ ಸಂಕಲ್ಪ ಗಯಾ ಕ್ಷೇತ್ರದಲ್ಲಿ ನಡೆದಿತ್ತು. ಚಾತುರ್ಮಾಸ್ಯದ ನಂತರ ಶ್ರೀಪಾದರ ಸಂಚಾರ ಜಗನ್ನಾಥಪುರಿಯ ಕಡೆಗೆ ಸಾಗಿತು. ಜಗನ್ನಾಥನ ದಿವ್ಯ ದರ್ಶನದ ಬಳಿಕ ಶ್ರೀಗಳು ಶ್ರೀಕಾಕುಳಂಗೆ ಬಂದರು. ಅಲ್ಲಿಯೇ ನವರಾತ್ರಿಯ ಉತ್ಸವವನ್ನು ಆಚರಿಸಿದರು.

ಶ್ರೀಕಾಕುಳಂನಿಂದ ತುಸು ದೂರದಲ್ಲಿತ್ತು, ವಿಜಯನಗರ ಸಂಸ್ಥಾನ. ಅದು ಅನೇಕ ಮಹಾ ವಿದ್ವಾಂಸರ ವಾಸಸ್ಥಾನ. ಆ ವಿದ್ವಾಂಸರ ಸಮೂಹದಲ್ಲಿ ಮಹಾಮಹೋಪಾಧ್ಯಾಯ ಶ್ರೀ ತಾತಾ- ಸುಬ್ಬರಾಯ ಶಾಸ್ತ್ರಿಗಳಿಗೇ ಅಗ್ರಸ್ಥಾನ. ಏಕೆಂದರೆ, ಅವರೋರ್ವ ಅದ್ವೈತಾದಿ ಸಕಲ ಶಾಸ್ತ್ರ ಪ್ರವೀಣ. ಅವರಲ್ಲಿ ನಿರಂತರವಾಗಿತ್ತು ನೂರಾರು ಶಿಷ್ಯರ ಅಧ್ಯಯನ. ಇಂತಹ ಶ್ರೇಷ್ಠ ಅದ್ವೈತ ವಿದ್ವಾಂಸರೊಬ್ಬರು ಸನಿಹದಲ್ಲಿರುವುದು ಭಂಡಾರಕೇರಿ ಶ್ರೀಗಳಿಗೆ ತಿಳಿಯಿತು. ಆ ವಿದ್ವಾಂಸರ ಘನವಾದ ವಿದ್ವತ್ತು ಶ್ರೀ ವಿದ್ಯಾಮಾನ್ಯ ತೀರ್ಥರನ್ನು ತನ್ನೆಡೆಗೆ ಸೆಳೆಯಿತು. ಶ್ರೀಭಂಡಾರಕೇರಿ ಮಠದ ಸಂಸ್ಥಾನ ವಿಜಯದಶಮಿಯ ತರುವಾಯ ವಿಜಯನಗರ ಸಂಸ್ಥಾನಕ್ಕೆ ಆಗಮಿಸಿತು. ವಿದ್ವತ್ಪೂರ್ಣ ವ್ಯಕ್ತಿಗಳ ಪರಸ್ಪರ ಪರಿಚಯ ಅತಿಸುಲಭವಾಗಿಯೇ ಆಯಿತು. ಪ್ರಥಮ ಪರಿಚಯದ ಮಾತು, ಕುಶಲ ಪ್ರಶ್ನೋತ್ತರಗಳ ಬಳಿಕ ಶ್ರೀಗಳವರು ಶಾಸ್ತ್ರಿಗಳನ್ನು ಶಾಸ್ತ್ರಾರ್ಥ ವಿಚಾರದಲ್ಲಿ ತೊಡಗಿಸಿದರು. ಇದು ಅವರ ಸಹಜ ಗುಣ ಹಾಗೂ ಕರ್ತವ್ಯವೂ ಆಗಿತ್ತು. ಅನೇಕ ದಿನಗಳವರೆಗೆ ನ್ಯಾಯ ಶಾಸ್ತ್ರಾದಿಗಳಲ್ಲಿ ವಿಶೇಷ ವಾಕ್ಯಾರ್ಥ ಗೋಷ್ಠಿಗಳು ನಡೆದವು. ಅನೇಕ ಘನ ಪಂಡಿತರ ಜೊತೆಗಿರುವ ತಾತಾ ಸುಬ್ಬರಾಯ ಶಾಸ್ತ್ರಿಗಳ ಕೂಟ ದೊಡ್ಡವ್ಯೂಹದಂತೆಯೇ ಇತ್ತು. ಅದರ ಮಧ್ಯದಲ್ಲಿ ದೃಢಮನಸ್ಕರಾದ ಯುವಯತಿಗಳಾದ ಶ್ರೀ ವಿದ್ಯಾಮಾನ್ಯ ತೀರ್ಥರು ಏಕಾಕಿಯಾಗಿದ್ದರೂ ಪ್ರಕಾಶಿಸುತ್ತಿದ್ದರು. ಪ್ರತಿಯೊಬ್ಬ ಪಂಡಿತನ ಪ್ರಶ್ನೆಗೂ ಸರಿಯಾದ ಉತ್ತರವನ್ನೀಯುತ್ತಿದ್ದರು ಮರು ಪ್ರಶ್ನೆಗಳಿಂದ ಪರವಾದಿಗಳನ್ನು ನಿರುತ್ತರರನ್ನಾಗಿಸುತ್ತಿದ್ದರು. ಪ್ರತಿವಾದಿ ಭಯಂಕರರೂ ಹಾಗೂ ಪ್ರತಿವಾದಿ ಸನ್ಮಾನ ಧಾತೃಗಳೂ ಆದ ಶ್ರೀ ಸತ್ಯಧ್ಯಾನತೀರ್ಥರ ಪಡಿಯಚ್ಚಿನಂತಿರುವ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಇದೊಂದು ಅದ್ಭುತ ರಸದೌತಣದಂತಿತ್ತು. ಶ್ರೀ ವಿದ್ಯಾಮಾನ್ಯ ತೀರ್ಥರ ಈ ಪ್ರಥಮ ಪರಮತ ಖಂಡನೆ ಹಾಗೂ ಸ್ವಮತ ಸಮರ್ಥನೆಯ ಅನೇಕ ಗೋಷ್ಠಿಗಳಲ್ಲಿ ಒಂದು ಭಾಗದ ಸಾರಾಂಶವನ್ನು ಮಾತ್ರ ಇಲ್ಲಿ ನೀಡಲಾಗಿದೆ.

ಶ್ರೀಗಳು :- ಶಂಕರಾಚಾರ್ಯಕೃತ ''ಉಪದೇಶ ಸಹಸ್ರೀ''ಎಂಬ ಗ್ರಂಥದಲ್ಲಿ ''ಅಹಂ ಬ್ರಹ್ಮಾಸ್ಮಿ ಕರ್ತಾ

ಚ ಭೋಕ್ತಾಚಾಸ್ಮೀತಿಯೇವಿದುಃ । ತೇ ನಷ್ಟಾಃ ಜ್ಞಾನಕರ್ಮಭ್ಯಾಂ ನಾಸ್ತಿಕಾಃ ಸ್ಯುಃ ನ ಸಂಶಯಃ ।'' ಎಂದು ''ಅಹಂ ಬ್ರಹ್ಮಾಸ್ಮಿ'' ಎಂಬ ಜ್ಞಾನವುಳ್ಳವರು ನಾಸ್ತಿಕರು ಎಂದು ಇದೆ.

ಶಾಸ್ತ್ರಿಗಳು :- ಈ ಶ್ಲೋಕದಲ್ಲಿ 'ಅಹಂ ಬ್ರಹ್ಮಾಸ್ಮಿ ಕರ್ತಾ ಚ ' ಎಂದು 'ಚ' ಶಬ್ದ ಪ್ರಯೋಗಮಾಡಿದ್ದರಿಂದ ಕರ್ತೃತ್ವಜ್ಞಾನ ಸಹಿತವಾದ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವನ್ನೇ ನಿಂದೆಮಾಡಿದ್ದಾರೆ ಹೊರತು ಕೇವಲ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವನ್ನು ನಿಂದಿಸಲಿಲ್ಲ.

ಶ್ರೀಗಳು :- ಈ ಶ್ಲೋಕದಲ್ಲಿರತಕ್ಕ 'ಅಹಂ' ಶಬ್ದಕ್ಕೆ ಲಕ್ಷಣಾವೃತ್ತಿಯಿಂದ ಶುದ್ಧವಾದ ಆತ್ಮನೆಂದು ಅರ್ಥವೊ ಅಥವಾ ಮುಖ್ಯ ವೃತ್ತಿಯಿಂದ ವಿಶಿಷ್ಟವಾದ ಆತ್ಮಾ ಎಂದು ಅರ್ಥವೊ? ಶುದ್ಧವಾದ ಆತ್ಮನೆಂದು ಅರ್ಥವೆಂದರೆ ಅಪ್ರಸಕ್ತ ನಿಷೇಧ ಎಂಬ ದೋಷ ಪ್ರಾಪ್ತವಾಗುತ್ತದೆ. ಲೋಕದಲ್ಲಿ ಯಾರೂ ಅಹಂ ಎಂಬ ಶಬ್ದದ ಅರ್ಥ ಮುಖ್ಯವಾದ ಶುದ್ಧಾತ್ಮನಲ್ಲಿ ಕರ್ತೃತ್ವವನ್ನು ತಿಳಿಯಲೇ ಇಲ್ಲ. ಯಾರಿಗೂ ಹಾಗೆ ಭ್ರಾಂತಿ ಇಲ್ಲ. ಆದ್ದರಿಂದ ಅದರ ನಿಷೇಧವು ಯುಕ್ತವಾಗುವುದಿಲ್ಲ. ವಿಶಿಷ್ಟವಾದ ಆತ್ಮನೇ ಅಹಂ ಶಬ್ದಾರ್ಥವೆಂದರೆ ಆ ವಿಶಿಷ್ಟಾತ್ಮನು ಬ್ರಹ್ಮನೆಂದು ತಿಳಿಯುವುದು ಅದ್ವೈತಮತಕ್ಕೆ ವಿರುದ್ಧವಾದರಿಂದ ಕೇವಲ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವೇ ನಿಷೇಧ ಮಾಡಲಿಕ್ಕೆ ಯೋಗ್ಯವಾದ ಕಾರಣ ಕರ್ತೃತ್ವಜ್ಞಾನ ಸಹಿತವಾದ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವನ್ನೂ ಈ ಶ್ಲೋಕದಲ್ಲಿ ನಿಷೇಧ ಮಾಡುವುದಕ್ಕೆ ಶಕ್ಯವಿಲ್ಲ. ಮತ್ತು ಅಹಂ ಬ್ರಹ್ಮಾಸ್ಮಿ ಇತಿ ಉಪದೇಶ ಕರ್ತಾ ಅಹಂ ಎಂಬ ಜ್ಞಾನವು ಶಂಕರಾಚಾರ್ಯರಿಗೆ ಉಂಟೊ. ಇಲ್ಲವೊ? ಇದ್ದರೆ ಶಂಕರಾಚಾರ್ಯರು ತನಗೆ ಇರುವ ಕರ್ತೃತ್ವಜ್ಞಾನ ಸಹಿತವಾದ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವನ್ನು ತಾನೇ ನಿಂದಿಸಿದ ಹಾಗಾಯಿತು. ''ಅಹಂ ಬ್ರಹ್ಮಾಸ್ಮಿ ಇತಿ ಉಪದೇಶ ಕರ್ತಾ'' ಎಂಬ ಜ್ಞಾನವಿಲ್ಲವಾದರೆ ಅಂದರೆ ಕರ್ತೃತ್ವವು ಮಿಥ್ಯಾ ಎಂದು ತಿಳಿದಿದ್ದರೆ ಶಂಕರಾಚಾರ್ಯರೇ ಸ್ವತಃ ಅಹಂ ಬ್ರಹ್ಮಾಸ್ಮಿ ಎಂಬ ಉಪದೇಶ ಮಾಡಲಿಲ್ಲ ಎಂದು ತಿಳಿದಾಗ ನಾವುಗಳು ಅವರು ಹಾಗೆ ಉಪದೇಶ ಮಾಡಿದ್ದಾರೆಂದು ಹೇಳಿದರೆ ತಪ್ಪಾಗುವುದಿಲ್ಲವೆ?

ಶಾಸ್ತ್ರಿಗಳು :- ಅದು ಹಾಗೆ ಇರಲಿ, ತಾವು ಗೀತೆಯ 15ನೆಯ ಅಧ್ಯಾಯದಲ್ಲಿ ಕೊನೆಗೆ 'ಇತಿ ಗುಹ್ಯತಮಂ ಶಾಸ್ತ್ರಂ' ಎಂಬಲ್ಲಿ ನಾರಾಯಣನ ಸರ್ವೋತ್ತಮತ್ವದಲ್ಲಿ ಸಕಲ ಶಾಸ್ತ್ರಗಳಿಗೆ ತಾತ್ಪರ್ಯ ಇದೆ ಎಂಬ ಅರ್ಥವನ್ನು ಶಂಕರಾಚಾರ್ಯರು ಬರೆದಿದ್ದಾರೆಂದು ಹೇಳಿದ್ದು ಸರಿಯಲ್ಲ. ಶಾಂಕರೀಯ ಗೀತಾ ಭಾಷ್ಯದಲ್ಲಿ ''ನಿರ್ಗುಣದಲ್ಲಿ ಸಕಲ ಶಾಸ್ತ್ರಗಳ ತಾತ್ಪರ್ಯ'' ಎಂದು ಬರೆದಿದ್ದಾರೆ.

ಶ್ರೀಗಳು :- 'ಯೋ ಲೋಕತ್ರಯಮಾವಿಶ್ಯ ಬಿಭರ್ತಿ ಅವ್ಯಯ ಈಶ್ವರಃ' ಎಂಬ ವಾಕ್ಯವು ಲೋಕತ್ರಯಧಾರಕ ಕರ್ತೃತ್ವವಿಶಿಷ್ಟನಾದ ನಾರಾಯಣನನ್ನು ಹೇಳುವುದರಿಂದ ನಿರ್ಗುಣವನ್ನು ಅದು ಹೇಳುವುದು ಹೇಗೆ? ಆದ್ದರಿಂದ ಶಂಕರಾಚಾರ್ಯರ ಭಾಷ್ಯದಲ್ಲಿ ನಿರ್ಗುಣ ಪದಕ್ಕೆ ಪ್ರಾಕೃತ ಗುಣರಹಿತ ಎಂಬ ಅರ್ಥ ಮಾಡುವದೇ ಉಚಿತವಾದ್ದರಿಂದ ನಾರಾಯಣನ ಪುರುಷೋತ್ತಮತ್ವ ದಲ್ಲಿ ಸಕಲ ಶಾಸ್ತ್ರಗಳಿಗೆ ತಾತ್ಪರ್ಯ ಎಂದು ಶಂಕರ ಭಾಷ್ಯದ ಅಭಿಪ್ರಾಯವನ್ನು ತಿಳಿಯಬೇಕು.

'ದುರ್ಘಟತ್ವಂ ಅವಿದ್ಯಾಯಾಃ ಭೂಷಣಂ ನ ತು ದೂಷಣಂ' ಎಂಬುದಾಗಿ ಅದ್ವೈತಾಚಾರ್ಯರು ಹೇಳಿದಂತೆ ತಾವು ಮಾಯಾವಾದಿಗಳು ಎಂದು ಹೇಳುವುದು ದೂಷಣವಲ್ಲ ಬದಲಾಗಿ ಅದು ಭೂಷಣವು ಎಂದು ವಿಷಯಾಂತರದ ಮಾತನ್ನಾಡುತ್ತಾ ಶಾಸ್ತ್ರಿಗಳು ಚರ್ಚೆಯಿಂದ ಹೊರಗುಳಿದರು. ಏಕೆಂದರೆ ಶ್ರೀಪಾದರ ಉತ್ತರಕ್ಕೆ ಪ್ರತ್ಯುತ್ತರವನ್ನು ನೀಡಲು ಅವರ ನಿಶಿತಮತಿ ಮತ್ತು ಅದ್ವೈತ ಪ್ರಾಚೀನಗ್ರಂಥಗಳ ಸಲಕರಣೆ ಸಹಕಾರಿಯಾಗಲಿಲ್ಲ. ಅವರು ನಿರುತ್ತರರಾಗಿದ್ದರು. ಗರುಡನ ಎದುರು ಸೆರೆಸಿಕ್ಕಿದ ಸರ್ಪದಂತಾಗಿದ್ದರು. ತಮ್ಮ ಪರಾಜಯವನ್ನು ವ್ಯಂಗ್ಯ ಮರ್ಯಾದೆಯಿಂದ ಒಪ್ಪಿಕೊಂಡರು. ಶ್ರೀ ವಿದ್ಯಾಮಾನ್ಯ ತೀರ್ಥರನ್ನು ತಮ್ಮ ಮನೆಗೆ ಬರಮಾಡಿಕೊಂಡು ಪಾದಪೂಜೆಯನ್ನು ಮಾಡಿ ಧನ್ಯತಾಭಾವವನ್ನು ಹೊಂದಿದರು. ಶ್ರೀ ವಿದ್ಯಾಮಾನ್ಯ ತೀರ್ಥರಾದರೂ ಶಿಷ್ಯ ಸಮೇತರಾದ ಶ್ರೀ ತಾತಾ ಸುಬ್ಬರಾಯ ಶಾಸ್ತ್ರಿಗಳನ್ನು ವಿಶೇಷ ಸಂಭಾವನೆ ನೀಡುವ ಮೂಲಕ ಸತ್ಕರಿಸಿದರು.

ಇದು ಶ್ರೀ ವಿದ್ಯಾಮಾನ್ಯ ತೀರ್ಥರ ಅದ್ವೈತಿಗಳ ಮೇಲಿನ ಮೊದಲ ಆಕ್ರಮಣ ಮತ್ತು ವಿಜಯ ಸಂಪಾದನವಾಗಿತ್ತು. ಶ್ರೀಪಾದರ ಮನಸ್ಸು ಆನಂದ ಸಾಗರದಲ್ಲಿ ಮುಳುಗಿತ್ತು. ಆ ಆನಂದದ ಹಿನ್ನಲೆಯಲ್ಲಿ ತಮ್ಮ ವಿಜಯದ ಬೀಗು ಅವರಿಗಿಲ್ಲವಾಗಿತ್ತು. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮಾತುಗಳ ಪ್ರಾಮಾಣ್ಯದ ಅನುಭವದ ಹಾಗೂ ಆ ಸಿದ್ಧಾಂತದ ವಿಜಯದ ಹೆಮ್ಮೆ ಇತ್ತು. ಆ ವಿಜಯವನ್ನು ತಮ್ಮ ಗುರುಗಳ ಮುಖಾಂತರ ಮಧ್ವಾಂತರ್ಗತ ಭಗವಂತನಿಗೆ ಅರ್ಪಿಸಿದರು.

2) ಕಾಂಚಿಯಲ್ಲಿ ಅಪೂರ್ವ ವಾಕ್ಯಾರ್ಥ :- 1956ನೇ ಮಾರ್ಚ್ 27, 28,29 ಈ ಮೂರು ದಿನಗಳು ಮಾಧ್ವರ ಇತಿಹಾಸದಲ್ಲಿ ದಾಖಲಾರ್ಹವಾದ ದಿನಗಳು, ಅಂತಹ ಸಂಗತಿಯೊಂದು ಆ ಮೂರು ದಿನಗಳಲ್ಲಿ ನಡೆದಿತ್ತು. ಅದು,

ಭಂಡಾರಕೇರಿ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸುತ್ತಾ ಕಾಂಚಿ ಕ್ಷೇತ್ರಕ್ಕೆ ಆಗಮಿಸಿದರು. ಅದೇ ಸಂದರ್ಭದಲ್ಲಿ ಕಾಂಚಿ ಪೀಠದ ಪರಮಾಚಾರ್ಯರಾದ ಶ್ರೀ ಶ್ರೀ ಚಂದ್ರಶೇಖರೇಂದ್ರ ಸರಸ್ವತಿ ಸ್ವಾಮಿಗಳವರು ಅದ್ವೈತ ವೇದಾಂತ ಪ್ರತಿಷ್ಠಾ ಗೋಷ್ಠಿಯೊಂದನ್ನು ಏರ್ಪಡಿಸಿದ್ದರು. ಅದಕ್ಕಾಗಿ ಮಹಾಮಹೋಪಾಧ್ಯಾಯ ಅನಂತ ಕೃಷ್ಣ ಶಾಸ್ತ್ರಿಗಳು, ಸುಂದರ ಶಾಸ್ತ್ರಿಗಳು, ಸುಬ್ರಹ್ಮಣ್ಯ ಶಾಸ್ತ್ರಿಗಳೇ ಮೊದಲಾದ ಅದ್ವೈತ ದಿಗ್ದಂತಿ ಪಂಡಿತರು ಆಗಮಿಸಿದ್ದರು.

ಶ್ರೀ ಸತ್ಯಧ್ಯಾನತೀರ್ಥರ ಸಹವಾಸದಿಂದ ಶ್ರೀ ವಿದ್ಯಾಮಾನ್ಯ ತೀರ್ಥರ ಪರಿಚಯವನ್ನು ಹೊಂದಿದ ಶ್ರೀ ಅನಂತಕೃಷ್ಣ ಶಾಸ್ತ್ರಿಗಳು ಶ್ರೀ ವಿದ್ಯಾಮಾನ್ಯ ತೀರ್ಥರು ಕಂಚಿಗೆ ಬಂದಿರುವ ವಿಷಯವನ್ನು ತಿಳಿದರು. ಕಾಮಕೋಟಿ ಶಂಕರಾಚಾರ್ಯರಿಗೆ ಅವರ ಪಾಂಡಿತ್ಯ, ವಿದ್ಯಾಪಕ್ಷಪಾತ, ಔದಾರ್ಯಾದಿ ಗುಣಗಳ ಪರಿಚಯವನ್ನು ಮಾಡಿ ಕೊಟ್ಟಿದ್ದರು. ಶ್ರೀ ಶಂಕರಾಚಾರ್ಯ ಸ್ವಾಮಿಗಳು ಶ್ರೀಭಂಡಾರಕೇರಿ ಶ್ರೀಪಾದರನ್ನು ತಮ್ಮಲ್ಲಿ ನಡೆಯುವ ಅದ್ವೈತ ಸಭೆಗೆ ಆಹ್ವಾನಿಸಿದರು.

ಅವರ ಆಹ್ವಾನದಂತೆ ಶ್ರೀ ವಿದ್ಯಾಮಾನ್ಯ ತೀರ್ಥರು ಮನ್ಮಥ ಸಂವತ್ಸರದ ಫಾಲ್ಗುಣ ಶುದ್ಧ ಚತುರ್ದಶಿ ದಿನದ ಪ್ರಾತಃ ಕಾಲ 8 ಗಂಟೆಗೆ ಸರಿಯಾಗಿ ಕಾಂಚಿ ಶ್ರೀಪಾದರ ಅದ್ವೈತ ಸಭೆಗೆ ಆಗಮಿಸಿದರು. ಪಂಡಿತರೆಲ್ಲರೂ ಸಭೆಯ

ಪರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಅಭೂತಪೂರ್ವ ಸ್ವಾಗತನ್ನಿತ್ತು ಸಭಾಸ್ಥಾನಕ್ಕೆ ಕರೆದೊಯ್ದರು. ಉಭಯ ಶ್ರೀಪಾದರು ಪರಸ್ಪರ ಕುಶಲ ಪ್ರಶ್ನೆಯನ್ನು ನಡೆಸಿದರು. ಕಾಂಚಿ ಶ್ರೀಪಾದರು ಶ್ರೇಷ್ಠ ಅದ್ವೈತ ವಿದ್ವಾಂಸರು, ವಿರಕ್ತರು, ವಿನಯಶಾಲಿಗಳು, ವಿಚಾರವಾದಿಗಳೂ ಕೂಡ ಆಗಿದ್ದರು. ಭಂಡಾರಕೇರಿ ಶ್ರೀಪಾದರ ಬಗ್ಗೆ ಮತ್ತೆ ಹೇಳುವುದು ಬೇಕಿಲ್ಲ ಅಂತೂ ಈ ಉಭಯ ದ್ವೈತಾದ್ವೈತ ವಿದ್ವಾಂಸರಾದ ಪೀಠಾಧಿಪತಿಗಳ ಸಮ್ಮಿಲನವು ಹಾಲಿಗೆ ಸಕ್ಕರೆ ಬೆರೆಸಿದಂತಾಯಿತು. ಇಂತಹ ಸುಯೋಗಗಳಲ್ಲಿಯೇ ಆಗಬೇಕು ತತ್ವನಿರ್ಣಯ. ಆದಕ್ಕಾಗಿ ಕಾಂಚಿ ಪರಮಾಚಾರ್ಯರು ವಿಷಯವನ್ನು ಪ್ರಸ್ತಾಪಿಸಿದರು.

ಶಂಕರಾಚಾರ್ಯರು :- ಶ್ರೀಗಳವರೇ! ತಾವು ದ್ವೈತ ಶಾಸ್ತ್ರವನ್ನು ಚೆನ್ನಾಗಿ ವಿಮರ್ಶೆಮಾಡಿದ್ದೀರೆಂದು ಕೇಳಿದ್ದೇವೆ ಅದು ನಿಜವಾಗಿಯೂ ನಿಮ್ಮ ದರ್ಶನದಿಂದ ಮನಸ್ಸಿಗೆ ಮನದಟ್ಟಾಗಿದೆ. ನಮಗೆ ನಿಮ್ಮ ಮುಖದಿಂದ ಒಂದು ವಿಷಯವನ್ನು ತಿಳಿಯಬೇಕೆಂದಿದೆ. ಅದನ್ನು ಪ್ರಸ್ತಾಪಿಸಿದರೆ ತಮಗೆ ಅನ್ಯಥಾ ಗ್ರಹಣವಾಗಲಾರದಷ್ಟೇ?

ಭಂ. ಶ್ರೀಗಳವರು :- ಎಲ್ಲಾದರೂ ಉಂಟೆ! ಆತ್ಮಾವಾರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ' ಹೀಗೆ ಉಪನಿಷತ್ತುಗಳು ಸಾರುತ್ತಿರುವಾಗ ಸರ್ವದಾ ತತ್ವ ವಿಚಾರವನ್ನೇ ಮನುಷ್ಯನು ಮಾಡುತ್ತಿರಬೇಕು. ಅಂದ ಮೇಲೆ ನಮ್ಮಂತಹ ಸನ್ಯಾಸಿಗಳಿಗೆ 'ತದ್ಧಿತಪಃ ತದ್ಧಿತಪಃ' ತಾವಂದದು ಸೂಕ್ತವೇ. ಅವಶ್ಯವಾಗಿ ತಮ್ಮ ಮನೋಗತವನ್ನು ಮುಂದಿಡೋಣವಾಗಲಿ! ಅಂದರೆ ತಾವು ಅಂದಷ್ಟು ಅಲ್ಲದಿದ್ದರೂ ಯಥೋಚಿತ ನಮ್ಮ ಬುದ್ಧಿಗೆ ತೋರಿದಷ್ಟು ವಿಚಾರ ಮಾಡುತ್ತೇವೆ. ಅದೆಲ್ಲ ಇಂತಹ ಪಂಡಿತರ ಸನ್ನಿವೇಶದಲ್ಲಿ ಆಗದೆ ಇನ್ನೆಲ್ಲಿ ಆಗಬೇಕು? 'ಕಾವ್ಯ ಶಾಸ್ತ್ರವಿನೋದೇನ ಕಾಲೋಗಚ್ಛತಿ ಧೀಮತಾಂ'.

ಭಂಡಾರಕೇರಿ ಶ್ರೀಪಾದರ ಧೈರ್ಯಪೂರ್ಣ ಮಾತನ್ನು ಕೇಳಿದ ಕಂಚಿ ಶ್ರೀಪಾದರು ಬಹಳ ಮುದಪಟ್ಟರು. ತಮ್ಮ ಸಿದ್ಧಾಂತದ ಸಮರ್ಥನೆಗಾಗಿ ಅನಂತ ಕೃಷ್ಣ ಶಾಸ್ತ್ರಿಗಳು ಮೊದಲಾದ ವಿದ್ವಾಂಸರನ್ನು ಜೊತೆಗೂಡಿದ್ದರು. ಸುಮಾರು ಎಡಬಿಡದೆ ನಾಲ್ಕಾರು ಗಂಟೆಗಳವರೆಗೆ ಅಖಂಡವಾಗಿ ವಾಕ್ಯಾರ್ಥವು ನಡೆಯಿತು. ವಾಕ್ಯಾರ್ಥದ ವಿಷಯ 'ದ್ವೈತದ ಅಪೂರ್ವತೆ'. ದ್ವೈತ ಸಿದ್ಧಾಂತವು ಅಪೂರ್ವವಲ್ಲ ಎಂದು ಕಾಂಚಿ ಪರಮಾಚಾರ್ಯಾದಿಗಳ ವಾದ. ಅದಕ್ಕೆ ಸರಿಯಾಗಿ ಸಮರ್ಥವಾದ ಉತ್ತರ ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಬರುತ್ತಿತ್ತು. ಶ್ರೀ ವಿದ್ಯಾಮಾನ್ಯ ತೀರ್ಥರು ಪೂರ್ವಪಕ್ಷಗಳನ್ನು ಖಂಡಿಸಿ 'ದ್ವೈತಕ್ಕೆ ಅಪೂರ್ವತಾ' ಎಂಬ ಲಿಂಗ ಉಂಟು ಎಂದು ಸಮಂಜಸವಾಗಿ ಸಿದ್ಧಾಂತವನ್ನು ಸ್ಥಾಪಿಸಿದರು. ಆಗ

ಶಂಕರಾಚಾರ್ಯರು 'ನಿಜ, ನಿಜ. ಅನಂತ ಕೃಷ್ಣ ಶಾಸ್ತ್ರಿಗಳೇ, ಭಂಡಾರಕೇರಿ ಶ್ರೀಪಾದರು 'ಅಪೂರ್ವತಾ' ಎಂಬ ತಾತ್ಪರ್ಯ ಲಿಂಗವನ್ನು ಬಲು ಚೆನ್ನಾಗಿ ಸಮರ್ಥಿಸಿದ್ದಾರೆ ಉಪಕ್ರಮಾದಿ ತಾತ್ಪರ್ಯ ಲಿಂಗಗಳ ಬಗ್ಗೆ ಅವರ ಗ್ರಂಥಗಳಲ್ಲಿ ಬಹಳ ಸಮರ್ಥಿಸಿದ್ದಾರೆ. ಆದ್ದರಿಂದ ಈಗ ಈ ವಿಚಾರವನ್ನು ಇಲ್ಲಿಗೆ ಸಾಕು ಮಾಡೋಣ. ಈ ವಿಷಯವನ್ನು ಸಭೆಯಲ್ಲಿ ನೆರೆದ ಸಭ್ಯರಿಗೆ ತಿಳಿಯುವಂತೆ ತಮಿಳು ಭಾಷೆಯಿಂದ ಅನುವಾದಿಸುತ್ತೇವೆ. ಅಲ್ಲದೇ ಈ ಸಭೆಗೆ ಉಡುಪಿ ಶ್ರೀಪಾದರು ಆಗಮಿಸಿರುವುದು ಒಂದು ಅಪೂರ್ವ ಸಂಗತಿ. ಇವರು ಮಹಾ ಪಂಡಿತರೆಂದು ನಾವು

ಕಿವಿಯಿಂದಲೇ ಕೇಳಿದ್ದೆವು. ಆದರೆ ಈಗ ಅವರ ಜೊತೆಯಲ್ಲೇ ಆ ಪಾಂಡಿತ್ಯದ ಸತ್ಯತೆಯನ್ನು ಅನುಭವಿಸಿದ್ದೇವೆ ಅವರನ್ನು ಯಥಾ ಶಕ್ತಿಯಾಗಿ ಸತ್ಕರಿಸಲು ಸಂಕಲ್ಪಿಸಿದ್ದೇವೆ.' ಎಂದು ನುಡಿದು ನಡೆದ ವಾಕ್ಯಾರ್ಥ ವಿಚಾರವನ್ನು ಎಲ್ಲರೂ ತಿಳಿಯುವಂತೆ ಸ್ವತಃ ಕಂಚೀ ಶ್ರೀಪಾದರೇ ತಮಿಳು ಭಾಷೆಯಲ್ಲಿ ಉಪನ್ಯಾಸಗೈದು ವಿಚಾರವನ್ನು ಅರುಹಿದರು, ನಂತರ ಪೀತಾಂಬರ, ಸಹಸ್ರಾರು ರೂಗಳ ಕಾಣಿಕೆ ಮತ್ತು ಫಲಗಳೊಂದಿಗೆ ಶ್ರೀ ವಿದ್ಯಾಮಾನ್ಯತೀರ್ಥರನ್ನು ಬಹು ಆದರದಿಂದ, ಪ್ರೇಮದಿಂದ ಸತ್ಕರಿಸಿದರು.

ಈ ಎಲ್ಲ ವೃತ್ತಾಂತಗಳು 1956 ನೇ ಇಸವಿಯ ಮಾರ್ಚ ತಿಂಗಳ 27,28,29 'ದಿ ಹಿಂದೂ' ಇಂಗ್ಲೀಷ್ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡವು ಮತ್ತು ಕಾಂಚಿ ಮಠದ ಮಾಸಿಕ ಪತ್ರಿಕೆಯಾದ 'ಶಂಕರ' ಎಂಬ ಪತ್ರಿಕೆಯಲ್ಲೂ ವಿಶದವಾಗಿ ಯಥಾವತ್ತಾಗಿ ಪ್ರಕಟಗೊಂಡವು.

ಈ ರೀತಿ ಶ್ರೀಮದಾಚಾರ್ಯರ ಸಿದ್ಧಾಂತದ ವಿಜಯ ಧ್ವಜವನ್ನು ದಕ್ಷಿಣ ಭಾರತದಲ್ಲಿ ಮೆರೆಯಿಸಿದ ಮಹಾನುಭಾವರು ಶ್ರೀ ವಿದ್ಯಾಮಾನ್ಯ ತೀರ್ಥರು.

## 3) ಕಾಶಿಯಲ್ಲಿ ದಿಗ್ವಿಜಯ :-

ಭಾರತದಲ್ಲಿ ಸರಸ್ವತಿಯ ಆವಾಸ ಸ್ಥಾನವೆಂದು ಪ್ರಸಿದ್ಧವಾದ ಕ್ಷೇತ್ರ ಕಾಶಿ. ಅಲ್ಲಿರುವ ಗಂಗೆಯಲ್ಲಿ ಮೀಯಲು ಬಂದರು, ದಕ್ಷಿಣ ಭಾರತದ ಋಷಿ. ಅವರು ಶ್ರೀ ವಿದ್ಯಾಮಾನ್ಯ ತೀರ್ಥರೆಂಬ ಮನೀಷಿ. ಅವರಿಗೆ ತಿಳಿದಿತ್ತು ಕಾಶಿ ಪಂಡಿತರ ಶಾಸ್ತ್ರಾಗರದ ಕೃಷಿ. ಆ ಪಂಡಿತರೊಡನೆ ವಾಕ್ಯಾರ್ಥ ಮಾಡುವುದೆಂದರೆ ಶ್ರೀಪಾದರಿಗೆ ಎಲ್ಲಿಲ್ಲದ ಖುಷಿ.

ಆ ಖುಷಿಯಿಂದ ಶ್ರೀಪಾದರು ಒಂದು ವಿದ್ವತ್ಸಭೆಯನ್ನು ಯೋಜಿಸಿದರು. ಆ ವಿದ್ವತ್ ಸಭೆಯಲ್ಲಿ ಭಾಗವಹಿಸಿದ ನ್ಯಾಯ ವೇದಾಂತಾದಿ ಶಾಸ್ತ್ರ ವಿಚಕ್ಷಣರಾದ ದಿಗ್ಗಜ ಪಂಡಿತರು ಅನೇಕರು. ಮಹಾಮಹೋಪಾಧ್ಯಾಯ ಗಿರಿಧರ ಶರ್ಮ, ಗೊಯಂಕಾ ಸಂಸ್ಕೃತ ಪಾಠಶಾಲೆಯ ಮುಖ್ಯಾಧ್ಯಕ್ಷ ಕಮಲಾಕಾಂತ ಮಿಶ್ರಾ, ಮುಮುಕ್ಷು ಭವನದ ಪ್ರಧಾನಾಚಾರ್ಯ ಯಜ್ಞೇಶ್ವರರೂ, ಹಿಂದೂ ವಿಶ್ವವಿದ್ಯಾಲಯದ ಕುಲಪತಿ ನಿರೀಕ್ಷಪತಿ ಮಿಶ್ರಾ, ದ್ರಾವಿಡ ರಾಜರಾಜೇಶ್ವರ ಶಾಸ್ತ್ರಿ, ಜಯರಾಮಶುಕ್ಲ, ಹರೇ ರಾಮ ಶುಕ್ಲ, ರಾಮಚಂದ್ರ ಶಾಸ್ತ್ರಿ ಷಡಂಗ ಹಾಗೂ ಬದರಿನಾಥ ಶಾಸ್ತ್ರಿ ಮೊದಲಾದವರು ಭಾಗವಹಿಸಿದ್ದರು.

ಈ ಸಭೆಯಲ್ಲೂ 'ದ್ವೈತಸ್ಯ ಅಪೂರ್ವತಾ' ಎಂಬ ವಿಷಯದಲ್ಲೇ ಉಚ್ಚಮಟ್ಟದ ವಾಕ್ಯಾರ್ಥ ಗೋಷ್ಠಿಯು ನಡೆಯಿತು. ಕಾಶಿಯ ಈ ವಿದ್ವಾಂಸರೆಲ್ಲರೂ ಶ್ರೀಪಾದರ ಪ್ರಕರ ಪಾಂಡಿತ್ಯ ಪ್ರತಿಭೆಗಳಿಂದ ಮುಗ್ಧರಾಗಿ ಅವರ ಮರು ಪ್ರಶ್ನೆಗೆ ಉತ್ತರವಿಲ್ಲದೆ ಮೌನಿಗಳಾದರು. ಮುಕ್ತ ಮನಸ್ಸಿನಿಂದ ಶ್ರೀಪಾದರಿಗೆ ಮಾನ ಪತ್ರವನ್ನು ಅರ್ಪಿಸಿ ಸನ್ಮಾನಿಸಿದರು. ಶ್ರೀಪಾದರ ಕೋಟಿಕ್ರಮಘಟಿತವಾದ ಅಸ್ಖಲಿತ ಅನುವಾದ, ದಾತೃತ್ವಶಕ್ತಿ, ತಪಸ್ಸಿದ್ಧಿಗಳನ್ನು ಅನುಭವಿಸಿದ ಆ ಪಂಡಿತರು ಆ ಸನ್ಮಾನ ಪತ್ರದಲ್ಲಿ ಆ ಗುಣಗಳನ್ನೆಲ್ಲವನ್ನು ದಾಖಲಿಸಿದ್ದಾರೆ. ಆಗ ಕಾಶಿಯ ವಾರ್ತಾ ಪತ್ರಿಕೆಗಳು ಶ್ರೀ ವಿದ್ಯಾಮಾನ್ಯ ತೀರ್ಥರ ವಿದ್ಯಾ ವೈಭವವನ್ನು ಕಾಶಿಯ ಪ್ರಕಾಂಡ ಪಂಡಿತರಿಂದ ಪಡೆದ ಸನ್ಮಾನದ ವಿವರವನ್ನು ಸುಂದರವಾಗಿ ಬಣ್ಣಿಸಿದವು.

(ಪತ್ರಿಕಾ ವರದಿ ಮಾನ ಪತ್ರಗಳ ವಿವರ ಪರಿಶಿಷ್ಟದಲ್ಲಿ ನೀಡಲಾಗಿದೆ.)

## 4) ದಿಲ್ಲಿಯ ಯಾಗದಲ್ಲಿ ಜಯಭೇರಿ :-

ಅಂದು ಭಾರತದ ರಾಜಧಾನಿ ದೆಹಲಿಯಲ್ಲಿ ವಿಶ್ವಕಲ್ಯಾಣ ಯಾಗದ ಸಡಗರ. ಶ್ರೀ ಭಂಡಾರಕೇರಿ ಶ್ರೀಪದಾರೇ ಅದರ ನೇತಾರ. ಆ ಸಂದರ್ಭದಲ್ಲಿ ಶ್ರೀಪಾದರು ದೇಶದ ನಾನಾ ಕಡೆಗಳಿಂದ ಅನೇಕ ಪಂಡಿತರನ್ನು ಆಹ್ವಾನಿಸಿದ್ದರು. ಅದಕ್ಕಾಗಿ ಕಲ್ಕತ್ತಾ, ರಾಜಸ್ಥಾನ ಮುಂತಾದ ಕಡೆಗಳಿಂದ ಬಂದ ಅದ್ವೈತ ಪಂಡಿತರಲ್ಲದೇ ಕಾಶಿಯಿಂದ ಅರವತ್ತು ಜನ ಪಂಡಿತರೊಂದಿಗೆ ಶ್ರೀರಾಮಚಂದ್ರಶಾಸ್ತ್ರಿ ಷಡಂಗರು ಆಗಮಿಸಿದ್ದರು. ಅವರು ಮಹಾಮಹೋಪಾಧ್ಯಾಯ ರಾಜೇಶ್ವರ ಶಾಸ್ತ್ರಿಗಳ ಪ್ರಿಯ ಶಿಷ್ಯರೂ ಮತ್ತು ನ್ಯಾಯ ವೇದಾಂತಗಳಲ್ಲಿ ಅಪ್ರತಿಮ ಪಂಡಿತರೂ ಆಗಿದ್ದರು. ಇಂತಹ ಅದ್ವೈತ ಪಂಡಿತ ಮಂಡಳಿಯೊಂದಿಗೆ ಶ್ರೀ ಭಂಡಾರಕೇರಿ ಶ್ರೀಪಾದರು ತಮ್ಮ ಪ್ರಿಯ ಶಿಷ್ಯ ಶ್ರೀ ಪೇಜಾವರ ಶ್ರೀಗಳನ್ನೊಳಗೊಂಡು ದ್ವೈತಾದ್ವೈತ ಚರ್ಚೆಯನ್ನು ಆರಂಭಿಸಿದರು. ಕಂಡುಬರುತ್ತಿತ್ತು ಒಂದೆಡೆ ವೇದ ಮಂತ್ರಗಳ ಘೋಷಣೆಯ ಮೂಲಕ ವಿಶ್ವ ಕಲ್ಯಾಣಯಾಗದ ಸಂಭ್ರಮ. ಮತ್ತೊಂದೆಡೆ ಕೇಳಿ ಬರುತ್ತಿತ್ತು ವೇದಾಂತ ವಾಕ್ಯಗಳ ಕುರಿತು ವಿಚಾರ ನಡೆಸುತ್ತಿದ್ದ ಪಂಡಿತರ ಪರಾಕ್ರಮ.

ಪ್ಲವ ಸಂವತ್ಸರದ ಮಾರ್ಗಶೀರ್ಷ ಕೃಷ್ಣ ದ್ವಿತೀಯಾ ದಿನದಂದು ದ್ವೈತಾದ್ವೈತ ಚರ್ಚೆಯು ಆರಂಭಗೊಂಡಿತು. ಆರಂಭಿಸಿದವರು ಶ್ರೀ ವಿದ್ಯಾಮಾನ್ಯ ತೀರ್ಥರು.

ಭಂಡಾರಕೇರಿ ಶ್ರೀಪಾದಃ- ತತ್ವಮಸ್ಯಾದಿ ವಾಕ್ಯಾನಿ ಬಾಧಿತ ಮುಖ್ಯಾರ್ಥಕಾನಿ ಲಕ್ಷಣಯಾ ಅನ್ಯಾರ್ಥಂ ವದಂತಿ ಇತಿ ಉಭಯ ಸಮ್ಮತಂ । ಲಕ್ಷಣಯಾ ಕಮರ್ಥಂ ಪ್ರತಿಪಾದಯಂತೀತಿ ತು ವಿಪ್ರತಿಪತ್ತಿಃ । ಅದ್ವೈತಿನಃ ಚಿನ್ಮಾತ್ರಂ ಪ್ರತಿಪಾದಯಂತೀತಿ । ದ್ವೈತಿನಃ ತತ್ಸದೃಶಂ ಜೀವಂ ಪ್ರತಿಪಾದಯಂತೀತಿ ವಿವದಂತೇ । ಅದ್ವೈತಿನಸ್ತು ವಿಪ್ರತಿಪತ್ತಿ ನಿರಾಸಾರ್ಥಂ ಉಪಕ್ರಮಾದಿಕಂ ಅನುಸರಂತಿ । ಉಪಕ್ರಮಾದಿ ವಾಕ್ಯಾನ್ಯಪಿ ತೇಷಾಂ ಮತೇ ಲಕ್ಷಣಯೈವ ಚಿನ್ಮಾತ್ರಂ ಪ್ರತಿಪಾದಯಂತಿ । ತತ್ರ ಚಿನ್ಮಾತ್ರೇ ಲಕ್ಷಣಾ ಕುತಃ? ಅನ್ಯಾರ್ಥಃ ಲಕ್ಷಣಯಾ ಕುತೋ ನ ಸ್ಯಾತ್ ? ಇತಿ ಪೃಷ್ಟೇ ಅಹಂ ಬ್ರಹ್ಮಾಸ್ಮಿ ಇತ್ಯಾದಿ ವಾಕ್ಯಂ ಆಧಾರತಯಾ ವರ್ಣನೀಯಂ । ತತ್ರಾಪಿ ತೇಷಾಂ ಮತೇ ಚಿನ್ಮಾತ್ರ ರೂಪಾದ್ವೈತೇ ಲಕ್ಷಣೈವ । ಅತಃ ತತ್ರ ಲಕ್ಷಣಯಾ ಚಿನ್ಮಾತ್ರಮೇವ ಕುತಃ ಪ್ರತಿಪಾದ್ಯತೇ? ಸಾದೃಶ್ಯಾದಿರಪರಃ ಅರ್ಥಃ ಲಕ್ಷಣಯಾ ಕುತೋ ನ ಸ್ಯಾತ್? ಇತಿ ಪೃಷ್ಟೇ ಪುನಃ ಅನ್ಯದ್ವಾಕ್ಯಂ ಲಾಕ್ಷಣಿಕಮೇವ ಉಚ್ಯತೇ । ತೇಷಾಂ ಮತೇ ಸರ್ವಾಣಿ ಅದ್ವೈತ ವಾಕ್ಯಾನಿ ಲಕ್ಷಣಯೈವ ಅದ್ವೈತಂ ಬೋಧಯಂತೀತಿ ಅನವಸ್ಥೈವ। ದ್ವೈತಿನಸ್ತು 'ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಃ ಮುಖ್ಯವೃತ್ತ್ಯೇವ ದ್ವೈತಂ ಪ್ರತಿಪಾದಯಾತೀತಿ, ತದನುಸಾರೇಣ ಸಂದಿಗ್ಧ ತತ್ವಮಸ್ಯಾದಿ ವಾಕ್ಯಾನಿ ಸಾದೃಶ್ಯಾದಿಕಂ ಆಶ್ರಿತ್ಯ ಪ್ರವರ್ತಂತೇ ಇತಿ ವಕ್ತುಂ ಶಕ್ಯತೇ ಅತಃ ಅದ್ವೈತೇ ಪ್ರಮಾಣಂ ನಾಸ್ತಿ।

ಶಾಸ್ತ್ರಿ:- ಸುಷುಪ್ತೌ ಚಿನ್ಮಾತ್ರಸ್ಯ ಭಾಸಮಾನತ್ವಾತ್ ತತ್ವಮಸ್ಯಾದೀನಾಂ ಅಪಿ ಲಕ್ಷಣಯಾ ತದೇವ ಪ್ರತಿಪಾದ್ಯಂ ಇತಿ ನಿರ್ಣೀಯತೇ ।

ಸ್ವಾಮಿನಃ:- ತರ್ಹಿ ಸೌಷುಪ್ತಿಕಾನುಭವಸಿದ್ಧ

ಬೋಧಕತ್ವೇನ ತತ್ವಮನ್ಯಾದೀನಾಂ ಅಪೂರ್ವತಾ ರೂಪ ತಾತ್ಪರ್ಯ ಲಿಂಗಾಭಾವ ಪ್ರಸಂಗಃ।

ಶಾಸ್ತ್ರಿಣಃ :- 'ಪ್ರಕೃಷ್ಟ ಪ್ರಕಾಶಃ ಚಂದ್ರಃ' ಇತ್ಯಾದಿ ಸ್ಥಲೇಷು ಲಕ್ಷಣಯಾ ಚಂದ್ರ ಸ್ವರೂಪ ಮಾತ್ರಸ್ಯ ಬೋಧನಾತ್ ಅತ್ರಾಪಿ ಲಕ್ಷಣಯಾ ಚಿನ್ಮಾತ್ರಂ ಪ್ರತಿಪಾದ್ಯತೇ।

ಸ್ವಾಮಿನಃ :- 'ಪ್ರಕೃಷ್ಟ ಪ್ರಕಾಶಃ ಚಂದ್ರಃ' ಇತ್ಯತ್ರ ಚಂದ್ರ ಸ್ವರೂಪ ಮಾತ್ರ ಪ್ರಶ್ನೋತ್ತರತ್ವಂ ಅಸ್ತಿ ಚೇತ್ ಚಂದ್ರ ಸ್ವರೂಪೇ ಲಕ್ಷಣಾ ವಕ್ತವ್ಯಾ । ತದೇವ ನಾಸ್ತಿ। ಚಂದ್ರ ಸ್ವರೂಪಸ್ಯ ಸಿದ್ಧತ್ವಾತ್ । ಸಾಮಾನ್ಯತಃ ಸಿದ್ಧೇ ಸತ್ಯೇವ ಪ್ರಶ್ನೋ ಘಟತೇ । ಅತಃ ತತ್ರ ವಿಶಿಷ್ಟಾರ್ಥ ಬೋಧಕತ್ವಮೇವ ॥ ಭಂಡಾರಕೇರಿ ಶ್ರೀಪಾದರ ಈ ತೆರನಾದ ಮರುತ್ತರಕ್ಕೆ ಅದ್ವೈತ ಪಂಡಿತರಲ್ಲಿ ಉತ್ತರವಿರಲಿಲ್ಲ. ವೇದಾಂತ ವಾಕ್ಯಾರ್ಥದ ನಂತರ ತರ್ಕ ಶಾಸ್ತ್ರದಲ್ಲಿ ವಾಕ್ಯಾರ್ಥ ಗೋಷ್ಠಿಯು ನಡೆಯಿತು. ಷಡಂಗ ಶಾಸ್ತ್ರಿಗಳು ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ಮಾಥುರಿ ಪಂಚಲಕ್ಷಣಿಯ ಕುರಿತು ವಿಚಾರ ನಡೆಸಿದರು. ಉಡುಪಿಯ ಸುಪ್ರಸಿದ್ಧ ಪಂಡಿತರಾದ ಶ್ರೀನಗ್ರೀ ಹಯಗ್ರೀವಾ ಚಾರ್ಯರು ಶಾಸ್ತ್ರಿಗಳ ಮಾತಿಗೆ ಉತ್ತರವನ್ನಿತ್ತರು. ಅನೇಕ ಪಾರಿಭಾಷಿಕ ಶಬ್ದಗಳಿಂದ ಕೂಡಿದ ಆ ವಾಕ್ಯಾರ್ಥ. ಗೋಷ್ಠಿಯಲ್ಲಿ ಷಡಂಗ ಶಾಸ್ತ್ರಿಗಳು 'ಘಟಭಿನ್ನಂ ತಾದಾತ್ಮ್ಯೇನ ಘಟತ್ವಾತ್' ಎನ್ನುವಲ್ಲಿ ಅವ್ಯಾಪ್ತಿಯ ಪರಿಹಾರಕ್ಕಾಗಿ ಪ್ರತಿಯೋಗಿತೆಯಲ್ಲಿ ಸ್ವನಿಷ್ಠತ್ವ ನಿವೇಶನವೇ ಸಾಕು. ತಾದಾತ್ಮ್ಯ ಸಂಬಂಧಾನವಚ್ಛಿನ್ನತ್ವ ನಿವೇಶನದ ಅಗತ್ಯವಿಲ್ಲ ಎಂದು ಪೂರ್ವಪಕ್ಷವನ್ನು ಮಾಡಿದರು. ಅಲ್ಲಿ ನೆರೆದ ಅನೇಕ ಹಿರಿಯ ವಿದ್ವಾಂಸರಿಗೂ ಆ ಪೂರ್ವಪಕ್ಷವೇ ಅರ್ಥವಾಗಲಿಲ್ಲ. ಉತ್ತರ ನೀಡುವುದಂತೂ ಸಾಧ್ಯವೇ ಇಲ್ಲ. ಇಂತಹ ಪ್ರಸಂಗದಲ್ಲಿ ತಮ್ಮ ಗುರುಗಳಾದ ಶ್ರೀ ವಿದ್ಯಾಮಾನ್ಯ ತೀರ್ಥರೊಡನೆ ಸಮಾಲೋಚಿಸಿದ ಶ್ರೀ ವಿಶ್ವೇಶ ತೀರ್ಥರು 'ಅಭಾವಾದಿಕರಣಕ ಅಭಾವ ಪ್ರತಿಯೋಗಿಕ ಅಭಾವಃ ಅಧಿಕರಣ ಸ್ವರೂಪಃ' ಎಂಬ ನಿಯಮಕ್ಕೆ ಅನುಗುಣವಾಗಿ ಅನುಮಾನವೊಂದನ್ನು ಪ್ರತಿಪಾದಿಸಿದರು. ಆ ಅನುಮಾನದಲ್ಲಿ ಸ್ವನಿಷ್ಠತ್ವ ನಿವೇಶನದಿಂದ ಅವ್ಯಾಪ್ತಿ ಪರಿಹಾರವು ಆಗದಿರುವುದರಿಂದ ಪ್ರತಿಯೋಗಿತೆಯಲ್ಲಿ ತಾದಾತ್ಮ್ಯ ಸಂಬಂಧಾನವಚ್ಛಿನ್ನತ್ವವನ್ನು ನೀಡಲೇಬೇಕು ಎಂದು ಸಮರ್ಥಿಸಿದರು. ಪೇಜಾವರ ಶ್ರೀಪಾದರ ಸಮಯ ಸ್ಫೂರ್ತಿ ಪಾಂಡಿತ್ಯಗಳಿಂದ ಆಕರ್ಷಿತರಾದ ಷಡಂಗ ಶಾಸ್ತ್ರಿಗಳು ಹಾಗೂ ಉಳಿದ ವಿದ್ವಾಂಸರು ಈ ಗುರುಶಿಷ್ಯ ಜೋಡಿಯನ್ನು ಮುಕ್ತ ಮನಸ್ಸಿನಿಂದ ಪ್ರಶಂಸಿಸಿದರು.

ವಾಕ್ಯಾರ್ಥದ ಕೊನೆಯಲ್ಲಿ ಭಂಡಾರಕೇರಿ ಶ್ರೀಪಾದರು ಎಲ್ಲ ವಿದ್ವಾಂಸರಿಗೂ ಸಹಸ್ರಾರು ರೂಪಾಯಿಗಳ ಸಂಭಾವನೆಯನ್ನು ನೀಡಿದರು.

## 5) ಕರಪಾತ್ರಿ ಮಹಾರಾಜರ ಪರಾಜಯ.

1964 ರಲ್ಲಿ ಹರಿದ್ವಾರದ ಖನಕಲ್ ಪರಿವ್ರಾಜಕ ಮಂಡಲವು ಒಂದು ದ್ವೈತಾದ್ವೈತ ಚರ್ಚೆಯನ್ನು ಏರ್ಪಡಿಸಿತ್ತು. ಆ ಚರ್ಚೆಯಲ್ಲಿ ಭಾಗವಹಿಸಿದ ಅದ್ವೈತ ಪಂಡಿತರು ನೂರಾರು. ರಾಮರಾಜ್ಯ ಪರಿಷತ್ ಸಂಸ್ಥಾಪಕರಾಗಿದ್ದ ಅದ್ವೈತ ವಿದ್ವಾಂಸರಾದ ಕರಪಾತ್ರಿಜೀ ಮಹರಾಜ್ ಅವರು ಅದ್ವೈತ ಪಂಡಿತ ಮಂಡಳಿಯ ನಾಯಕರು. ಅವರೊಂದಿಗೆ ಧೀರೋದಾತ್ತವಾಗಿ ಚರ್ಚೆ

ನಡೆಸಿದ ಏಕಾಕಿಯಾಗಿದ್ದ ಯತಿವೀರರು ಶ್ರೀ ವಿದ್ಯಾಮಾನ್ಯ ತೀರ್ಥರು. ಈ ಈರ್ವರ ಚರ್ಚೆ ಅದ್ವೈತ ಸಿದ್ಧಾಂತದ ಕುರಿತಾಗಿತ್ತು. ಚರ್ಚೆಯ ಕೊನೆಯ ಹಂತ ಗೀತೆಯ 13ನೇ ಅಧ್ಯಾಯದ ಅಂತಿಮ ಶ್ಲೋಕದ ಅರ್ಥಪರವಾಗಿತ್ತು.

'ಕ್ಷೇತ್ರಕ್ಷೇತ್ರಜ್ಞಯೋರೇವಂ
ಅಂತರಂ ಜ್ಞಾನ ಚಕ್ಷುಷಾ ।
ಭೂತಪ್ರಕೃತಿ ಮೋಕ್ಷಂ ಚ
ಯೇ ವಿದುರ್ಯಾಂತಿ ತೇ ಪರಂ॥'

ಈ ಶ್ಲೋಕದಲ್ಲಿರುವ ಕ್ಷೇತ್ರಜ್ಞ ಶಬ್ದವು ಜೀವನನ್ನು ಹೇಳುತ್ತದೆ. ಈ ಜೀವನನ್ನೇ ಶ್ರೀಕೃಷ್ಣನು ತನಗಿಂತ ಅಭಿನ್ನನನ್ನಾಗಿ ಹೇಳಿ ಅಧ್ಯಾಯದ ಅಂತಿಮ ಶ್ಲೋಕದಲ್ಲಿ ''ಹೀಗೆ ಜೀವೇಶ್ವರ ಐಕ್ಯವನ್ನು ತಿಳಿದರೆ ಭೂತ ಪ್ರಕೃತಿ ಮೋಕ್ಷವಾಗುವುದು'' ಎಂದು ಹೇಳಿರುವನು. ಇಲ್ಲಿಯೂ ಭೂತ ಎಂದರೆ ಜೀವರು, ಪ್ರಕೃತಿ ಎಂದರೆ ಅವಿದ್ಯೆ. ಅದರಿಂದ ಮೋಕ್ಷ ಎಂದರೆ ಅದೂ ಮಿಥ್ಯಾ ಎಂದು ತಿಳಿಯುವುದು. ಹೀಗೆ ಜೀವೇಶ್ವರ ಅಭೇದಜ್ಞಾನದಿಂದ ಈ ಪ್ರಪಂಚ ಸುಳ್ಳು ಎಂಬ ಬಾಧಕ ಜ್ಞಾನವು ಉಂಟಾಗುತ್ತದೆ.' ಎಂದು ಕರಪಾತ್ರಿಗಳ ಪ್ರತಿಪಾದನೆಯಾಗಿತ್ತು. ಅದಕ್ಕುತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು 'ಭೂತ ಪ್ರಕೃತಿ ಮೋಕ್ಷ' ಎಂಬ ಪದಕ್ಕೆ ಪಂಚಭೂತಗಳಿಂದ ಹಾಗೂ ಪ್ರಕೃತಿಯಿಂದ ಬಿಡುಗಡೆ ಎಂದರ್ಥ.' ಎಂದು ಪ್ರತಿಪಾದಿಸಿದರು ತಕ್ಷಣದಲ್ಲಿ ಕರಪಾತ್ರಸ್ವಾಮಿಯವರು ಶ್ರೀಮದಾಚಾರ್ಯರ ಗೀತಾ ತಾತ್ಪರ್ಯವನ್ನು ತೋರಿಸಿ 'ನೀವು ಹೇಳಿದ ಅರ್ಥ ನಿಮ್ಮ ಆಚಾರ್ಯ ಗ್ರಂಥದಲ್ಲಿಲ್ಲ ಅವರಿಗೆ ವಿರುದ್ಧವಾಗಿ ನೀವು ಅರ್ಥವನ್ನು ಹೇಳಿದ್ದೀರಿ ಆದ್ದರಿಂದ ನಿಮಗೆ ಅಪಸಿದ್ಧಾಂತ ಎಂಬ ದೋಷವು ಬಂದಿತು' ಎಂದು ಘೋಷಿಸಿದರು ಆದರೆ ಶ್ರೀ ವಿದ್ಯಾಮಾನ್ಯ ತೀರ್ಥರು 'ಗೀತಾ ತಾತ್ಪರ್ಯದಲ್ಲಿ ನಾವು ಹೇಳಿದ ಅರ್ಥವು ಇರದಿದ್ದರೂ ಅದೇ ಆಚಾರ್ಯರಿಂದಲೇ ರಚಿತವಾದ ಗೀತಾ ಭಾಷ್ಯದಲ್ಲಿ ನಾವು ಹೇಳಿದ ಅರ್ಥವನ್ನೇ ಹೇಳಲಾಗಿದೆ 'ಭೂತೇಭ್ಯಃ ಪ್ರಕೃತೇಶ್ಚ ಮೋಕ್ಷಸಾಧನಂ ಅಮಾನಿತ್ವಾದಿಕಂ' ಎಂಬ ವಾಕ್ಯವಿದೆ' ಎಂದು ಶ್ರೀ ವಿದ್ಯಾಮಾನ್ಯ ತೀರ್ಥರು ಉತ್ತರಿಸಿದಾಗ ಕರಪಾತ್ರಿಗಳಲ್ಲಿ ಪ್ರತ್ಯುತ್ತರ ನೀಡುವ ಸಲಕರಣೆ ಇರಲಿಲ್ಲ ಬದಲಾಗಿ ಶ್ರೀ ವಿದ್ಯಾಮಾನ್ಯ ತೀರ್ಥರ ಮೇಲೆ ಸೇಡಿನ ಹಠವಿತ್ತು ಅದರ ಬಲದಿಂದ 'ಆ ವಾಕ್ಯವಿರುವುದನ್ನು ಬಾಯಿಯಲ್ಲಿ ಹೇಳಿದರೆ ಸಾಲದು ಗ್ರಂಥದಲ್ಲಿರುವುದನ್ನೂ ತೋರಿಸಬೇಕು' ಎಂದು ಖಾರವಾಗಿ ನುಡಿದರು. ದುರ್ದೈವಾತ್ ಗೀತಾಭಾಷ್ಯ ಪುಸ್ತಕವು ಶ್ರೀ ವಿದ್ಯಾಮಾನ್ಯ ತೀರ್ಥರ ಬಳಿ ಇರಲಿಲ್ಲ. ಆದರೂ ಶ್ರೀ ವಿದ್ಯಾಮಾನ್ಯ ತೀರ್ಥರು ಬಹಳ ಸೌಜನ್ಯದಿಂದ ಗ್ರಂಥದಲ್ಲಿರುವುದನ್ನು ಸ್ಪಷ್ಟ ಪಡಿಸಿದರೂ ಅದಕ್ಕೆ ಕಿವಿಗೊಡಲಿಲ್ಲ. ಆ ಶಾಠ್ಯ ತುಂಬಿದ ಜನರು ವಾದನಿಯಮವನ್ನು ಉಲ್ಲಂಘಿಸಿ ಶ್ರೀ ವಿದ್ಯಾಮಾನ್ಯ ತೀರ್ಥರ ಎದುರಲ್ಲಿದ್ದ ಮೈಕಿನ ವಿದ್ಯುತ್ ಸಂಬಂಧವನ್ನು ಕಡಿತಗೊಳಿಸಿ ಅವರ ಮಾತು ಯಾರಿಗೂ ಕೇಳದಂತೆ ಮಾಡಿದರು. ನೂರಾರು ಜನ ಅದ್ವೈತಿಗಳು ಸೇರಿ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಪರಾಜಯವಾಯಿತು ಕರಪಾತ್ರಿಯವರಿಗೆ ಜಯವಾಯಿತೆಂದು ಘೋಷಿಸುತ್ತಲೇ ಇದ್ದರು. ಅವರೆಲ್ಲರ ಬಾಲಬಡಿದ ಮಧ್ಯಸ್ಥರೂ ಉಪಸಂಹಾರ ಭಾಷಣಗೈದರು.

ವಾಸ್ತವಿಕವಾಗಿ ಈ ವಾದದಲ್ಲಿ ಕೊನೆಯ ಮಾತು ಶ್ರೀ ವಿದ್ಯಾಮಾನ್ಯ ತೀರ್ಥರದಾಗಿತ್ತು. ಅದಕ್ಕೆ ಉತ್ತರವನ್ನು ನೀಡುವ ಸಾಮರ್ಥ್ಯ ಕರಪಾತ್ರಿಯವರಲ್ಲಿ ಇಲ್ಲವಾಗಿತ್ತು ಜಯ ಶ್ರೀ ವಿದ್ಯಾಮಾನ್ಯ ತೀರ್ಥರದೇ ಆಗಿತ್ತು.

ಭೂತ ಪ್ರಕೃತಿ ಮೋಕ್ಷ ಎಂಬಲ್ಲಿರುವ ಭೂತ ಶಬ್ದಕ್ಕೆ ಪಂಚಭೂತಗಳೂ ಎಂಬ ಅರ್ಥವಾಗಲಿ ಜೀವ ಎಂಬ ಅರ್ಥವಾಗಲಿ ಅದ್ವೈತ ಸಿದ್ಧಾಂತಕ್ಕೆ ಯಾವ ಲಾಭವನ್ನೂ ನೀಡುವುದಿಲ್ಲ. ಅಷ್ಟೇ ಅಲ್ಲ ಈ ಎರಡೂ ಅರ್ಥಗಳನ್ನು ಶ್ರೀಮದಾಚಾರ್ಯರು ತಮ್ಮ ಎರಡು ಗ್ರಂಥಗಳಲ್ಲಿಯೂ ಮಾಡಿದ್ದಾರೆ. ಇದನ್ನು ತಿಳಿಯದ ಕರಪಾತ್ರಿಯವರು ವಾಸ್ತವಿಕವಾಗಿ ನಡೆಯಬೇಕಾಗಿದ್ದ 'ಭೂತ ಪ್ರಕೃತಿ ಮೋಕ್ಷಂ' ಎಂಬಲ್ಲಿರುವ ಮೋಕ್ಷ ಶಬ್ದದ ಕುರಿತಾದ ಚರ್ಚೆಯನ್ನು ಬಿಟ್ಟು ವಿಷಯಾಂತರಕ್ಕೆ ತಿರುಗಿ ಪರಾಜಯವನ್ನು ಘೋಷಿಸಿದರು. ಇದು ಮುಖ್ಯಾಂಶದಲ್ಲಿ ತಮ್ಮ ಮತ ದುರ್ಬಲವಾದಾಗ ಹೇಗಾದರೂ ಪ್ರತಿವಾದಿಯ ಬಾಯಿ ಕಟ್ಟುವಂತೆ ಮಾಡಬೇಕು ಎಂಬ ದುರುದ್ದೇಶ ದುರಾಗ್ರಹ ಕರಪಾತ್ರಿಯವರಲ್ಲಿತ್ತು. ಎನ್ನುವುದನ್ನು ಸ್ಪಷ್ಟಪಡಿಸುವುದು.

ಈ ಸನ್ನಿವೇಶದಿಂದ ಮನದಲ್ಲಿ ಕುಗ್ಗದ ಶ್ರೀ ವಿದ್ಯಾಮಾನ್ಯ ತೀರ್ಥರು ಆ ಚರ್ಚೆಯ ವಿವರವನ್ನು ಇತರ ಅದ್ವೈತ ವಿಶಿಷ್ಟಾದ್ವೈತ ಪೀಠಾಧೀಶರಿಗೆ ನೀಡಿದರು. ಕೂಡಲಿ ಶೃಂಗೇರಿ ಮಠದ ಸಚ್ಚಿದಾನಂದ ಶಂಕರ ಭಾರತಿ ಸ್ವಾಮಿಗಳು, ಪರಕಾಲ ಮಠಾಧೀಶರೂ, ಕಂಚಿಕಾಮ ಕೋಟಿ ಮಠದ ಚಂದ್ರಶೇಖರೇಂದ್ರ ಸರಸ್ವತಿ ಸ್ವಾಮಿಯವರು ಮೊದಲಾದ ಪೀಠಾಧೀಶರೂ ಹಾಗೂ ಅನೇಕ ಪರಮತೀಯ ಪ್ರಸಿದ್ಧ ವಿದ್ವಾಂಸರು ಆ ಚರ್ಚೆಯನ್ನು ಪರಿಶೀಲಿಸಿ 'ಶ್ರೀ ವಿದ್ಯಾಮಾನ್ಯ ತೀರ್ಥರು ಪ್ರತಿವಾದಿಸಿದ ವಿಷಯ ಶ್ರೀಮಧ್ವಾಚಾರ್ಯರಿಗೆ ಸಮ್ಮತವಾಗಿದೆ ಆದ್ದರಿಂದ ಅವರ ಮೇಲೆ ಅಪಸಿದ್ಧಾಂತವನ್ನು ಆರೋಪಿಸುವುದು ತಪ್ಪು' ಎಂದು ಬರೆದು ಸಹಿನೀಡಿ ಪ್ರಕಾಶ ಪಡಿಸಿದ್ದಾರೆ. ಇದನ್ನು ನಾವು ಪರಿಶೀಲಿಸಿದಾಗ ವಾಸ್ತವಿಕ ವಿಜಯ ಶ್ರೀ ವಿದ್ಯಾಮಾನ್ಯ ತೀರ್ಥರದ್ದೇ ಎಂದು ಖಚಿತವಾಗುವುದು.

(ಕರಪಾತ್ರಿಜೀ ಮೊದಲಾದವರು 'ದುರ್ವಾದ ವಿದ್ರಾವಣಂ' ಎಂಬ ಪುಸ್ತಕವನ್ನು ಹೊರಡಿಸಿ ಅದರಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥರ ಪರಾಜಯ ಎಂದು ವರದಿ ನೀಡಿದ್ದರು. ಅದಕ್ಕುತ್ತರವಾಗಿ ಇತರ ಮಠಾಧೀಶರ ಪತ್ರದಲ್ಲಿ ವಿಜಯವು ಶ್ರೀ ವಿದ್ಯಾಮಾನ್ಯ ತೀರ್ಥರದು ಎಂದಿತ್ತು.)

(ಕರಪಾತ್ರಜೀಯವರೊಡನೆ ಶ್ರೀ ವಿದ್ಯಾಮಾನ್ಯ ತೀರ್ಥರು ನಡೆಸಿದ ಚರ್ಚೆಯ ಸಾರಾಂಶ, ಕರಪಾತ್ರಿಯವರ ದೌರ್ಜನ್ಯಕ್ಕೆ ಖಂಡನಾರೂಪವಾಗಿ ಇತರ ಮಠಾಧೀಶರು ನೀಡಿದ ಪತ್ರಲೇಖಗಳೂ ಹಾಗೂ ಶ್ರೀ ವಿದ್ಯಾಮಾನ್ಯ ತೀರ್ಥರು ನೀಡಿದ ಪಂಥಾಹ್ವಾನಗಳ ವಿವರವನ್ನು ಪರಿಶಿಷ್ಟದಲ್ಲಿ ನೋಡಿರಿ.)

6) 1989ರಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥರು ಅದ್ವೈತ ಮತದ ಮೇಲೆ 'ಅಚ್ಛೇದ್ಯ ಅಭೇದ್ಯ ಪ್ರಶ್ನೆಗಳು' ಎಂಬ ಶೀರ್ಷಿಕೆಯಲ್ಲಿ ಹತ್ತು ಪ್ರಶ್ನೆಗಳನ್ನು ಬರೆದರು. ಈ ಪ್ರಶ್ನೆಗಳಿಗೆ ಅದ್ವೈತಿಗಳಿಂದ ಉತ್ತರವನ್ನು ಪಡೆಯಲು ಬಯಸಿದರು. ಅದಕ್ಕಾಗಿ ಒಂದು ದಿನ ಶ್ರೀವಾದರು ಇದ್ದಕ್ಕಿಂದಂತೆಯೇ ಶೃಂಗೇರಿಗೆ ಹೊರಟರು. ಅವರೊಂದಿಗೆ ಮಠದ ಪರಿವಾರವೂ ಹೊರಟಿತು. ಆದರೆ

ಎಲ್ಲಿಗೆ ಹೋಗುವುದೆಂದು ಪರಿವಾರಕ್ಕೆ ತಿಳಿದಿರಲಿಲ್ಲ. ಏಕೆಂದರೆ ಶ್ರೀಪಾದರ ಮನಸ್ಸಲ್ಲಿ ಅಡಗಿದ ಶೃಂಗೇರಿ ಭೇಟಿ ಪ್ರಕಟವಾಗಿರಲಿಲ್ಲ. ಉಡುಪಿಯಿಂದ ಶಿವಮೊಗ್ಗಕ್ಕೆ ಹೋಗುವ ಆಗುಂಬೆ ಘಾಟಿನ ಮಾರ್ಗದಲ್ಲಿ ಚಲಿಸಲು ವಾಹನ ಚಾಲಕನಿಗೆ ಆದೇಶಿಸಿದರು. ದಾರಿ ಮಧ್ಯದಲ್ಲಿ ಶೃಂಗೇರಿಯ ಮಾರ್ಗ ತಿರುಗಿದಾಗ ಆ ಮಾರ್ಗದಲ್ಲಿ ಮುನ್ನಡೆಯುವಂತೆ ನುಡಿದರು. ಎಲ್ಲರಿಗೂ ಅಚ್ಚರಿ. ಏಕೆಂದರೆ ಅವರು ಹೋಗುತ್ತಿರುವ ಊರು ಶೃಂಗೇರಿ. ವಾಹನ ನಿಂತಿತು ಶೃಂಗೇರಿ ಮಠದ ಎದುರಿನಲ್ಲಿ ಶ್ರೀಪಾದರ ಅಪ್ಪಣೆಯ ಮೇರೆಗೆ ಮಠದ ದಿವಾನರು ಶೃಂಗೇರಿ ಶ್ರೀಗಳವರನ್ನು ವಿಚಾರಿಸಿದರು ಆ ಮಠದಲ್ಲಿ. ಶೃಂಗೇರಿ ಮಠದ ಶ್ರೀಗಳು ಇರುವುದನ್ನು ತಿಳಿದು ಭಂಡಾರಕೇರಿ ಶ್ರೀಪಾದರು ಮಠವನ್ನು ಪ್ರವೇಶಿಸಿದರು. ಪ್ರವೇಶಸುತ್ತಿದಂತೆಯೇ ಆ ಮಠದ ಶಿಷ್ಯರೊಬ್ಬರು ಬಂದು ಶ್ರೀಪಾದರನ್ನು ಬರಮಾಡಿಕೊಂಡರು. ಭಂಡಾರಕೇರಿ ಮಠದ ಉತ್ತರಾಧಿಕಾರಿಗಳಾದ ಶ್ರೀ ವಿದ್ಯೇಶತೀರ್ಥರೊಡನೆ ಬಂದ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಒಂದು ಸಾಮಾನ್ಯವಾದ ಮಣೆಯನ್ನು ಹಾಕಲಾಗಿತ್ತು. ಅದರೊಂದಿಗೆ ಇನ್ನೊಂದು ಮಣೆಯನ್ನು ಹಾಕಲಾಗಿತ್ತು. ದೊಡ್ಡ ಸಿಂಹಾಸನದಲ್ಲಿ ಕುಳಿತುಕೊಂಡೇ ಇದ್ದ ಶ್ರೀ ಅಭಿನವ ವಿದ್ಯಾ ತೀರ್ಥ ಸ್ವಾಮಿಗಳು ಭಂಡಾರಿಕೇರಿ ಪೀಠಾಧೀಶರು ಬಂದಾಗ ಎದ್ದು ನಿಲ್ಲುವ ಸೌಜನ್ಯವನ್ನೂ ತೋರಲಿಲ್ಲ. ಇದು ಒಂದು ಸಂಸ್ಥಾನವು ಮತ್ತೊಂದು ಸಂಸ್ಥಾನಕ್ಕೆ ತೋರುವ ಗೌರವವಲ್ಲ. ಇಷ್ಟಾದರೂ ಶ್ರೀ ವಿದ್ಯಾಮಾನ್ಯ ತೀರ್ಥರು ಅದನ್ನೆಣಿಸಲಿಲ್ಲ. ಏಕೆಂದರೆ ಮಠದ ದೀಕ್ಷೆಯ ಮುಂದೆ ಮಠದ ದೀಕ್ಷೆ ಗೌರವಗಳು ಹಿರಿದಲ್ಲ ಎಂಬುದು ಅವರಲ್ಲಿ ದೃಢವಾಗಿತ್ತು.

ಗುರುಶಿಷ್ಯರಿಬ್ಬರೂ ಸಾಮಾನ್ಯವಾದ ಆಸನದಲ್ಲಿಯೇ ಆಸೀನರಾದರು. ತಮ್ಮ ಎದುರು ಕೆಳಗಿನ ಆಸನದಲ್ಲಿ ಕುಳಿತ ಶ್ರೀಗಳವರನ್ನು ಕುರಿತು ಶೃಂಗೇರಿ ಶ್ರೀಗಳು 'ಎಲ್ಲಿಂದ ಬರೋಣವಾಯಿತು' ಎಂದು ಕೇಳಿದರು. ಅದಕ್ಕುತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು 'ಉಡುಪಿಯಿಂದ' ಎಂದರು. 'ಉಡುಪಿಯ 8 ಮಠಗಳಲ್ಲಿ ತಮ್ಮದು ಯಾವ ಮಠ' ಎಂದು ಶೃಂಗೇರಿ ಶ್ರೀಗಳು ಪ್ರಶ್ನಿಸಿದರು. ಶ್ರೀ ವಿದ್ಯಾಮಾನ್ಯ ತೀರ್ಥರು 'ಪಲಿಮಾರು ಮಠ' ಎಂದು ಉತ್ತರಿಸಿದರು. ಶೃಂಗೇರಿ ಶ್ರೀಪಾದರು ಕಿರಿಯ ಸ್ವಾಮಿಗಳನ್ನು ತೋರಿಸಿ 'ಇವರು ಯಾರು?' ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು 'ಇವರು ನಮ್ಮ ಭಂಡಾರಕೇರಿ ಮಠದ ಕಿರಿಯ ಶ್ರೀಪಾದರು' ಎಂದು ಉತ್ತರಿಸಿದರು. ಆಗ ಶೃಂಗೇರಿ ಶ್ರೀಗಳು 'ಹಾಗಾದರೇ ಭಂಡಾರಕೇರಿ ಹಿರಿಯ ಶ್ರೀಪಾದರು ಎಲ್ಲಿ ಇದ್ದಾರೆ?' ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು 'ನಾವೇ ಭಂಡಾರಕೇರಿ ಮಠದ ಹಿರಿಯ ಶ್ರೀಪಾದರು' ಎಂದು ನುಡಿದಾಗ ಶೃಂಗೇರಿ ಶ್ರೀಗಳವರ ಮುಖದಲ್ಲಿ ಆಶ್ಚರ್ಯದ ಜೊತೆ ಉದ್ವಿಗ್ನತೆಯು ತುಂಬಿತ್ತು. ಏಕೆಂದರೆ ಸುಮಾರು ಮೂರು ದಶಕಗಳ ಹಿಂದೆ ಭೇಟಿಯಾದಾಗ ವಾಕ್ಯಾರ್ಥ ಗೋಷ್ಠಿಯಲ್ಲಿ ತಮ್ಮನ್ನು ನಿರುತ್ತರರನ್ನಾಗಿ ಮಾಡಿದ ವ್ಯಕ್ತಿ ಇವರೇ ಎಂದು ಅವರಿಗೆ ನೆನಪಿಗೆ ಬಂತು. ಆ ನೆನಪು ಬಂದಾಗ ನಗುವು ಮಾಯವಾಗಿ ಮುಖದಲ್ಲಿ ಬಿಗುಗೊಂಡಿತು. 'ತಥೈವ ಉಚ್ಯತಾಂ' (ಹಾಗೆ ಹೇಳಿ) ಎಂದು ಸಂಸ್ಕೃತದಲ್ಲಿ ಮಾತನಾಡಲು ಪ್ರಾರಂಭಿಸಿದರು. 'ಇದಾನೀಂ ಆಗಮನೋದ್ದೇಶಃ ಕೋ ವಾ?' (ಈಗ ಬರುವುದರ ಉದ್ದೇಶವೇನೋ) ಎಂದು ಪ್ರಶ್ನಿಸಿದರು.

ಶ್ರೀ ವಿದ್ಯಾಮಾನ್ಯ ತೀರ್ಥರು 'ಅದ್ವೈತಮತೇ ಜೀಜ್ಞಾಸಾ ರೂಪೇಣ ಪ್ರಶ್ನಾಃ ವರ್ತಂತೇ ತದುತ್ತರ ಸಂವಾದನಾರ್ಥ ಮಿಹಾಗತಾಃ' (ಅದ್ವೈತಮತದಲ್ಲಿ ಜಿಜ್ಞಾಸೆಯ ರೂಪದಲ್ಲಿ ಕೆಲವು ಪ್ರಶ್ನೆಗಳಿವೆ ಅದರ ಉತ್ತರವನ್ನು ಪಡೆಯುವದಕ್ಕಾಗಿ ಇಲ್ಲಿಗೆ ಬಂದಿರುವೆವು ಎಂದರು.) ತಮ್ಮ ಹತ್ತು ಪ್ರಶ್ನೆಗಳ ಪತ್ರಿಕೆಯನ್ನು ನೀಡಿದರು. ಅದನ್ನು ನೋಡಿದ ಶೃಂಗೇರಿ ಶ್ರೀಪಾದರ ಮುಖ ಮತ್ತಷ್ಟು ಬಿಗಿ ಗೊಂಡಿತು. ಕೆಂಪೇರಿತು. 'ಏನು ಪ್ರಶ್ನೆ?' ಎಂಬ ಅವರ ಮಾತಿನಲ್ಲಿ ಸಿಡುಕುತನ ಕುಣಿಯುತ್ತಿತ್ತು. ಅದಕ್ಕುತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು ಅತ್ಯಂತ ಸಮಾಧಾನದಿಂದ ಉತ್ತರಿಸಿದರು. ಆ ಉತ್ತರ ಅದ್ವೈತಿಗಳಿಗೆ ಬಲವಾದ ಪ್ರಶ್ನೆಯಾಗಿತ್ತು. ಆ ಪ್ರಶ್ನೆ,

'ಅಹಂ ಬ್ರಹ್ಮಾಸ್ಮಿ' - ಎಂಬ ಮಾತು ಅಹಂ ಶಬ್ದ ವಾಚ್ಯನಾದ ಜೀವಾತ್ಮನಿಗೂ ಬ್ರಹ್ಮ ಶಬ್ದ ವಾಚ್ಯ ಪರಬ್ರಹ್ಮನಿಗೂ ಐಕ್ಯವನ್ನು ಬೋಧಿಸುವುದೆಂದು ಅದ್ವೈತ ಮತದಲ್ಲಿ ಹೇಳಲಾಗುವುದು.

ಆದರೆ ಬೃಹದಾರಣ್ಯಕದಲ್ಲಿ (3-4-5) 'ತದಾತ್ಮಾನ ಮೇವಾವೇದಾಹಂ ಬ್ರಹ್ಮಾಸ್ಮಿ'- ಎಂಬುದಾಗಿ ಭಗವಂತನು ತಾನು ಬ್ರಹ್ಮ-ಪರಿಪೂರ್ಣ ಎಂದು ತಿಳಿದಿರುವನೆಂದು, ಅವನ ಮಾತಾಗಿ ಈ ವಾಕ್ಯವು ಬಂದಿದ್ದು, ಅದರಲ್ಲಿಯ 'ಅಹಂ' ಶಬ್ದದಿಂದ ವಾಚ್ಯ ಭಗವಂತನಾಗಬೇಕೇ ಹೊರತು 'ಜೀವಾತ್ಮ' ಅಲ್ಲ - ಆದ್ದರಿಂದ ಈ ಮಾತು ಜೀವಾತ್ಮ ಪರಮಾತ್ಮರ ಅಭೇದವನ್ನು ಬೋಧಿಸುವುದಾದರೂ ಹೇಗೆ?

ಶ್ರೀಪಾದರ ಈ ಪ್ರಶ್ನೆಗೆ ಉತ್ತರಿಸದೆ ಶೃಂಗೇರಿ ಶ್ರೀಗಳವರು, ಬೃಹದಾರಣ್ಯಕೋಪನಿಷತ್ತಿನ ಮತ್ತೊಂದು ಮಾತನ್ನು ಉಲ್ಲೇಖಿಸಿ, ಅದರಲ್ಲಿ ಭೇದಜ್ಞಾನವನ್ನು ನಿಂದಿಸಲಾಗಿದೆ ಎಂದು ತೋರಿಸಿದರು.

ಆ ವಾಕ್ಯ - 'ಅಥಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾಪಶುಃ' (ಬೃ.ಉ. 3-5-3) ತಾನು ಬೇರೆ, ದೇವರು ಬೇರೆ ಎಂದು ಉಪಾಸನೆ ಮಾಡುವವನು ಪಶುವಿನಂತೆ ಯಥಾರ್ಥ ಜ್ಞಾನವುಳ್ಳವನಲ್ಲ - ಎಂದು.

ಜೀವಾತ್ಮ ಪರಮಾತ್ಮ ಭೇದ ಜ್ಞಾನವನ್ನು ಆಪಾತತಃ ಇಲ್ಲಿ ನಿಂದಿಸಿರುವಂತೆ ಕಾಣಿಸುವುದೇನೋ ನಿಜ, ಆದರೆ ಅದುವರೆಗೆ ಒಟ್ಟಾಗಿದ್ದ ಅಣ್ಣತಮ್ಮಂದಿರು ಬೇರೆ ಬೇರೆಯಾದರೆಂದರೆ, 'ಈಗ ಅವನು ಬೇರೆ ನಾನು ಬೇರೆಯಾಗಿಯೇ ಇರುವುದು' - ಎಂಬುದಾಗಿ ಅನ್ಯೋನ್ಯವಾಗಿ ಅವಲಂಬಿಸದೆ ತಾವು ತಾವಾಗಿಯೇ ಇರುವುದೆಂಬ ಅಭಿಪ್ರಾಯದಲ್ಲಿ ಹೇಗೆ ವ್ಯವಹರಿಸಲಾಗುವುದೋ ಹಾಗೆಯೇ ಉಪಾಸಕನು ತಾನು ಬೇರೆ, ಭಗವಂತನು ಬೇರೆ ಅಂದರೆ ಭಗವಂತನನ್ನು ಅವಲಂಬಿಸದೆ ತಾನು ಸ್ವತಂತ್ರನಾಗಿಯೇ ಇರುವವನೆಂಬ ಅಭಿಪ್ರಾಯದಲ್ಲಿ ಭಗವಂತನ ಅಪೇಕ್ಷೆಯೇ ತನಗೆ ಇಲ್ಲ - ಎಂದು ಯಾರು ಉಪಾಸನೆ ಮಾಡುವನೋ ಅಂತಹ ಉಪಾಸಕನನ್ನಷ್ಟೇ ಅಲ್ಲಿ ನಿಂದಿಸಿರುವುದು ಹೊರತು, ಭಗವಂತನಿಗಿಂತ ತಾನು ಸ್ವರೂಪತಃ ಭಿನ್ನನಾಗಿರುವೆನೆಂದು ತಿಳಿದ ಉಪಾಸಕನನ್ನಲ್ಲ.' - ಎಂದು ಶ್ರೀ ವಿದ್ಯಾಮಾನ್ಯ ತೀರ್ಥರು ಆ ವಾಕ್ಯದ ಅರ್ಥವನ್ನು ಸ್ಪಷ್ಟೀಕರಿಸಿದರು.

ಶೃಂಗೇರಿ ಶ್ರೀಗಳವರು ಅದ್ವೈತದ ಬಗ್ಗೆ ಬರಬಹುದಾದ ಆಕ್ಷೇಪಗಳಿಗೆಲ್ಲ, ಕಾಲಡಿ ಪಾಠಶಾಲೆಯಲ್ಲಿ ಇರುವ ರಾಮಚಂದ್ರ ಶಾಸ್ತ್ರಿ ಎಂಬುವರು ಉತ್ತರಿಸುವರೆಂದರು.

'ಅವರಿಗೆ ನಮ್ಮ ಜೊತೆಗೆ ಸಂಪರ್ಕವನ್ನು ಕಲ್ಪಿಸಿ ಕೊಡುವಿರೊ' - ಎಂದು ಶ್ರೀಪಾದರು ಕೇಳಲು, ಸುಮ್ಮನೆ ಅದೆಲ್ಲ ಬೇಡ, ಜಗಳದಲ್ಲಿ ಪರ್ಯವಸಾನವಾಗುತ್ತದೆ - ಎಂದರು ಶೃಂಗೇರಿ ಶ್ರೀಪಾದರು. 'ಏನೂ ಜಗಳ ವಾಗದಂತೆ, ವೈಮನಸ್ಯಬಾರದಂತೆ ಚರ್ಚೆ ನಡೆಸೋಣ' - ಎಂದು ಶ್ರೀಪಾದರ ಮಾತಿಗೆ ಶೃಂಗೇರಿ ಶ್ರೀಪಾದರದ್ದು ಮೌನವೇ ಉತ್ತರ. ಆ ಮೌನದ ವಾಸ್ತವ ಅರ್ಥ ಪರಾಜಯದ ಸ್ವೀಕಾರ. ಶ್ರೀವಿದ್ಯಾಮಾನ್ಯ ತೀರ್ಥ ರಾದರೂ ವಿಜಯದ ಆಗರ.

ಈ ರೀತಿ ಪ್ರತಿವಾದಿಗಳು ಇರುವಲ್ಲಿಗೇ ಹೋಗಿ ದ್ವೈತ ಸಿದ್ಧಾಂತವೇ ಸರಿಯಾದ ಸಿದ್ಧಾಂತವೆಂದು ತಿಳಿಸಿ ಸಿದ್ಧಾಂತ ವಿಜಯವನ್ನು ಸೂಸುವ ಅವರ ಸಾತ್ವಿಕ ಸಾಹಸದಿಂದ ಸಂತಸಗೊಂಡನು ಆ ಶ್ರೀಮಧ್ವಪ್ರಿಯಕರ.

7) ಮತ್ತೊಂದು ಬಾರಿ ಕಂಚಿಯ ಕಾಮಕೋಟಿ ಪೀಠಾಧೀಶರ ಮೇಲೆ ಶಾಸ್ತ್ರೀಯ ದಾಳಿ :-1988- ರ ಸಂದರ್ಭದಲ್ಲಿ ಮದ್ರಾಸಿಗೆ ತೆರಳಿದ್ದ ಶ್ರೀಪಾದರು ಕಂಚಿಗೆ ಬಂದರು. ಅಂದು ಏಕಾದಶಿಯಾಗಿತ್ತು. ಶ್ರೀಪಾದರು ಪ್ರಾತಃಕಾಲದಲ್ಲಿ ಕಾಂಚಿ ಕಾಮಕೋಟಿ ಪೀಠದ ಹಿರಿಯ ಶ್ರೀಪಾದರಾದ ಶ್ರೀ ಚಂದ್ರಶೇಖರೇಂದ್ರ ಸರಸ್ವತಿ ಶ್ರೀಪಾದರನ್ನು ನೋಡಲು ಬಂದರು. ಆ ಮಠದಲ್ಲಿ ಮುಕ್ತ ಪ್ರವೇಶವಿತ್ತು. ಏಕೆಂದರೆ ಶ್ರೀಚಂದ್ರಶೇಖರೇಂದ್ರ ಸರಸ್ವತಿಯರಿಗೂ ಶ್ರೀ ವಿದ್ಯಾಮಾನ್ಯತೀರ್ಥರಿಗೂ ಪರಸ್ಪರ ಪ್ರೀತಿಯನಂಟಿತ್ತು. 94 ರ ಇಳಿವಯಸ್ಸಿನ ಶ್ರೀಚಂದ್ರಶೇಖರಸರಸ್ವತಿಗಳು 75ರ ಹರೆಯದ ಶ್ರೀ ವಿದ್ಯಾಮಾನ್ಯತೀರ್ಥರು ಸುಮಾರು 32 ವರ್ಷಗಳ ಹಿಂದಿನ ತಮ್ಮ ಭೇಟಿ ಅಂದಿನ ವಾಕ್ಯಾರ್ಥಗೋಷ್ಠಿ ಎಲ್ಲವನ್ನೂ ಹಂತ ಹಂತವಾಗಿ ನೆನಪಿಸಿಕೊಂಡರು. ಆ ಅಪೂರ್ವ ಸಂದರ್ಭ ವನ್ನು ಈ ಈರ್ವರೂ ಸ್ವಲ್ಪವೂ ಮರೆತಿರಲಿಲ್ಲ. ಅತ್ಯಂತ ಹಸನ್ಮುಖಿಗಳಾಗಿ ಆತ್ಮೀಯತೆಯಿಂದ ಅವರು ಸಂಭಾಷಿಸುತ್ತಿದ್ದರು. ಅವರೀರ್ವರ ಪ್ರೀತಿಯ ಗಾಢತೆ ಎಷ್ಟಿತ್ತೆಂದರೆ ಬಂದ ತಕ್ಷಣ ನೀಡಿದ ಹಸ್ತಲಾಘವದ ಬಿಗಿ ಗಂಟೆಗಳು ಕಳೆದರೂ ಸಡಿಲಗೊಂಡಿರಲಿಲ್ಲ. ಮತ ಭಿನ್ನವಾಗಿದ್ದರೂ ಮತಿ ಏಕವಾಗಿತ್ತು. ಹೃದಯಗಳು ಪರಸ್ಪರ ಸ್ಪಂದಿಸುತ್ತಿದ್ದವು. ಅದೊಂದು ಅಪರೂಪದ ಪವಿತ್ರ ನೋಟವಾಗಿತ್ತು.

ಮೂರು ದಶಕಗಳ ನಂತರ ಭೇಟಿ ನೀಡಿದ ಭಂಡಾರಕೇರಿ ಪಲಿಮಾರು ಉಭಯ ಮಠಾಧೀಶರನ್ನು ಕುಶಲದ ಬಗ್ಗೆ ವಿಚಾರಿಸಿದ ಕಾಂಚಿ ಪರಮಾಚಾರ್ಯರು 'ತಮ್ಮ ಆಗಮನದ ಉದ್ದೇಶವೇನು?' ಎಂದು ಪ್ರಶ್ನಿಸಿದರು. ಆ ಪ್ರಶ್ನೆಯಲ್ಲಿ ತತ್ವ ವಿಚಾರದ ಜಾಯಮಾನದ ಶ್ರೀ ವಿದ್ಯಾಮಾನ್ಯ ತೀರ್ಥರ ಆಗಮನದ ಆಂತರ್ಯದ ಅರಿವು ಅಡಗಿತ್ತು. ಅವರ ಪ್ರಶ್ನೆಗೆ ಉತ್ತರವಾಗಿ ಶ್ರೀ ವಿದ್ಯಾಮಾನ್ಯ ತೀರ್ಥರು 'ವಿರಕ್ತ ಪೀಠಾಧಿಪತಿಗಳ ಪರಸ್ಪರ ಭೇಟಿ ಗೃಹಸ್ಥರ ಭೇಟಿಯಂತೆ ಅಲ್ಲವಲ್ಲ?' ಎಂದು ಮರು ಪ್ರಶ್ನಿಸಿದರು. ಆಗ ಕಾಂಚಿ ಶ್ರೀಪಾದರು 'ಹಾಗಾದರೆ ತತ್ವ ವಿಚಾರ ಪ್ರಾರಂಭವಾಗಲಿ' ಎಂದು ವಿನೋದದಿಂದಲೂ, ಆದರದಿಂದಲೂ ನುಡಿದರು. ಅಲ್ಲಿಯವರೆಗೂ ಈ ಇಬ್ಬರು ಪೀಠಾಧಿಪತಿಗಳ ಸಂಭಾಷಣೆ ಕನ್ನಡ ಭಾಷೆಯಲ್ಲಿಯೇ ನಡೆದಿತ್ತು. ಬಹಳ ಮಾರ್ಮಿಕವಾಗಿತ್ತು. ಕಾಂಚಿ ಶ್ರೀಪಾದರ ಮಾತಿನಂತೆ ಹಾಗೂ ತಮ್ಮ ಸ್ವಾಭಾವಿಕ ಇಚ್ಛೆಯಂತೆ ಶ್ರೀವಿದ್ಯಾಮಾನ್ಯತೀರ್ಥರು ತತ್ವ ವಿಚಾರವನ್ನು ಆರಂಭಿಸಿದರು.

ಶ್ರೀಮದಾಚಾರ್ಯರ ಮಾಯಾವಾದಖಂಡನ ಗ್ರಂಥ ದಲ್ಲಿರುವ ಅದ್ವೈತಿಗಳ ಮೇಲಿನ ಪ್ರಶ್ನೆಯನ್ನೇ ಅವರ ಮುಂದಿಟ್ಟರು. ಆ ಪ್ರಶ್ನೆಗೆ ಉತ್ತರವನ್ನು ಆಲೋಚಿಸುತ್ತಾ ಕಾಂಚಿ ಪರಮಾಚಾರ್ಯರು ತಮ್ಮ ಕೈಯನ್ನು ತಲೆಯ ಮೇಲಿಟ್ಟುಕೊಂಡರು. ಕಣ್ಮುಚ್ಚಿದರು. ದೀರ್ಘವಾದ ವಿಷಯ ಮನನದಲ್ಲಿ ಮುಳುಗಿದರು. ಸುಮಾರು ಮುಕ್ಕಾಲು ಗಂಟೆ ಕಳೆದರೂ ಮೌನವಾಗಿಯೇ ಇದ್ದರು. ಆಗ ಶ್ರೀ ವಿದ್ಯಾಮಾನ್ಯ ತೀರ್ಥರು ನಗುತ್ತಾ 'ಸ್ವಾಮೀ! ಈ ಪ್ರಶ್ನೆಗೆ ನಿಮ್ಮ ಗ್ರಂಥಗಳಲ್ಲಿ ಉತ್ತರವಿದೆಯೋ? ಇಲ್ಲವೋ? ಈ ಪ್ರಶ್ನೆ ನನ್ನದಲ್ಲ ನಮ್ಮ ಆಚಾರ್ಯರದ್ದು' ಎಂದು ನುಡಿದರು. ಆಗಲೂ ಕಾಂಚಿ ಪರಮಾ ಚಾರ್ಯರಿಂದ ಮೌನವೇ ಉತ್ತರ. ಶ್ರೀ ವಿದ್ಯಾಮಾನ್ಯ ತೀರ್ಥರು ''ಮತದ ಬಗ್ಗೆ ವಿಚಾರಬೇಡ ತಮ್ಮ ಅನುಭವದಲ್ಲಿ ಯಾವುದು ಸತ್ಯ ಎಂದು ತೋರುವುದು? ತಮ್ಮ ವೈಯಕ್ತಿಕ ಉಪಾಸನೆಯ ಮಾರ್ಗ ಯಾವುದು? ಎಂದು ಅಷ್ಟು ಹೇಳಿದರೆ ಸಾಕು''. ಎಂದರು. ಆಗ ಕಂಚಿ ಶ್ರೀಪಾದರು ನಿಧಾನವಾಗಿ 'ನಾರಾಯಣ ಏವ ಶರಣಂ' ಎಂದು ಎರಡು ಶಬ್ದಗಳ ಮಾರ್ಮಿಕ ಉತ್ತರವನ್ನು ನೀಡಿದರು. ಆಗ ನಮ್ಮ ಶ್ರೀಪಾದರು 'ಸಃ ನಾರಾಯಣಃ ಕೀದೃಶಃ? ಸಗುಣೋ ವಾ ನಿರ್ಗುಣೋ ವಾ?' ಎಂದು ಪ್ರಶ್ನಿಸಿದರು. ಆಗ ಕಂಚಿ ಪರಮಾಚಾರ್ಯರಿಂದ ಬಂದ ಉತ್ತರ 'ಭವದಭಿಮತನಾರಾಯಣ ಏವ.'

ಈ ವೃದ್ಧರಿಬ್ಬರ ವಿದ್ವಾಂಸರ ಸಂಭಾಷಣೆಯ ಸಮಾಪ್ತಿಯ ಹಂತದಲ್ಲಿ ಕಂಚಿ ಪೀಠದ ಮೂರನೆಯ ಕಿರಿಯ ಶ್ರೀಪಾದರಾದ ಶ್ರೀವಿಜಯೇಂದ್ರ ಸರಸ್ವತಿಗಳು ಆಗಮಿಸಿದರು. ಅವರ ಪರಿಚಯವನ್ನು ಪರಮಾ ಚಾರ್ಯರು ಪಲಿಮಾರು ಶ್ರೀಪಾದರಿಗೆ ನೀಡಿದರು. ವಿಜಯೇಂದ್ರ ಸರಸ್ವತಿಗಳೂ ಉತ್ತಮ ಪ್ರತಿಭಾನ್ವಿತ ಯುವ ಪಂಡಿತರು. ಅವರೊಡನೆ ಪಲಿಮಾರು ಶ್ರೀಪಾದರು ಕುಶಲ ಪ್ರಶ್ನೆಯನ್ನು ಮಾಡಿದರು. ಅವರ ಅಧ್ಯಯನ ಅಧ್ಯಾಪನಗಳ ಕುರಿತಾಗಿಯೂ ವಿಚಾರಿಸಿದರು. ವಿಜಯೇಂದ್ರ ಸರಸ್ವತಿಗಳು ವಿನೀತ ರಾಗಿಯೇ ಉತ್ತರಿಸಿದರು. ಆ ಸಂದರ್ಭದಲ್ಲಿ ನಮ್ಮ ಶ್ರೀಪಾದರು ಪರಮಾಚಾರ್ಯರಲ್ಲಿ ಮಾಡಿದ ಪ್ರಶ್ನೆಯನ್ನು ಈ ಕಿರಿಯ ಶ್ರೀಪಾದರ ಮುಂದೆಯೂ ಇಟ್ಟರು. ಕಂಚಿ ಕಿರಿಯ ಶ್ರೀಪಾದರು ಬಹಳ ಹೊತ್ತು ವಿಚಾರಕ್ಕಾಗಿ, ಉತ್ತರಕ್ಕಾಗಿ ತಲೆಕೆಡಿಸಿಕೊಂಡರು. ಒಂದು ಬಾರಿ ತಬ್ಬಿಬ್ಬಾದರು. ಕಾರಣ ಅವರಿಗೆ ಈ ಪ್ರಶ್ನೆ ಬಹಳ ಹೊಸತಾಗಿತ್ತು ತಮ್ಮಲ್ಲಿ ಉತ್ತರವಿಲ್ಲದ ಪ್ರಶ್ನೆಯಾಗಿತ್ತು. ಅಲ್ಲದೇ ಈ ಪ್ರಶ್ನೆ ಸಹಜವೂ ಎಂದೆನಿಸಿತ್ತು. ನಗುತ್ತಾ 'ವಿಚಾರ ಮಾಡಿ ಉತ್ತರವನ್ನು ನೀಡಬೇಕಾಗಿದೆ ಕಾಲಾವಕಾಶ ಬೇಕು' ಎಂದರು. ಆಗ ನಮ್ಮ ಶ್ರೀಪಾದರು ನಗುತ್ತಲೇ 'ಎಷ್ಟು ಬೇಕಾದರೂ ಸಮಯಾವಕಾಶವನ್ನು ಸ್ವೀಕರಿಸಬಹುದು, ಕಾಲದ ಗಡುವು ಇಲ್ಲ.' ಎಂದು ನುಡಿದರು. ಇವರೀರ್ವರ ಸಂಭಾಷಣೆ ಸಂಸ್ಕೃತ ಭಾಷೆಯಲ್ಲಿಯೇ ನಡೆಯಿತು. ಅದು ಮುಗಿದಾಗ ಮಧ್ಯಾಹ್ನದ ಗೆರೆಯನ್ನೂ ಆ ರವಿಯು ದಾಟಿದ್ದ. ಆಗ ಶ್ರೀಪಾದರು 'ನಾವು ಬಂದು ಬಹಳ ಹೊತ್ತಾಯಿತು ನಾವು ಇನ್ನು ಬರುತ್ತೇವೆ' ಎಂದರು. ಆಗ ಕಂಚಿಯ ಮೊದಲ ಹಾಗೂ ಕೊನೆಯ ಶ್ರೀಪಾದರು ಈರ್ವರು ಪುನಃ ಮರುದಿನವೂ ಮಠಕ್ಕೆ ಬರಲು ಆಹ್ವಾನಿಸಿದರು. ಅದಕ್ಕೊಪ್ಪಿದ ಪಲಿಮಾರು ಭಂಡಾರಕೇರಿ ಶ್ರೀಪಾದರು ವಾಸ್ತವ್ಯಕ್ಕಾಗಿ ವಿಷ್ಣು ಕಂಚಿಯ ಉತ್ತರಾದಿ ಮಠಕ್ಕೆ ತೆರಳಿದರು. ಬರುವಾಗ ವಾಹನದಲ್ಲಿ 'ಎಂತಹ ಪ್ರಶ್ನೆ! ಆಚಾರ್ಯರ ಆ ಪ್ರಶ್ನೆಗೆ ಯಾರೂ ಸಮರ್ಪಕ

ಉತ್ತರವನ್ನು ನೀಡಲು ಸಾಧ್ಯವಿಲ್ಲವಲ್ಲ. ಸ್ವತಃ ಶಂಕರಾಚಾರ್ಯರೇ ಬಂದರೂ ಅವರಿಗೂ ಸಾಧ್ಯವಿಲ್ಲ. ಅಂತಹ ಪ್ರಬಲವಾಗಿ ಪ್ರಶ್ನಿಸುವ ನಮ್ಮ ಗುರುಗಳು ನಿಜವಾಗಿಯೂ ಪೂರ್ಣಪ್ರಮತಿಗಳು ಎಂದು ಇದರಿಂದ ಸಾಬೀತಾಗುವುದು' ಎಂದು ಹರ್ಷೋದ್ಗಾರ ಮಾಡಿದರು.

ಮರುದಿನದ ದ್ವಾದಶೀ ದಿನ ರಾಮದ್ವಯರ ಪೂಜೆಯನ್ನು ಪೂರೈಸಿ ಭಿಕ್ಷೆಯನ್ನು ಸ್ವೀಕರಿಸಿ ಕಂಚೀವರದರಾಜನನ್ನು ಸಂದರ್ಶಿಸಿ ಪ್ರಸ್ಥಾನ ಕ್ರಮದಲ್ಲಿಯೇ ಕಾಂಚಿಯ ಮಠಕ್ಕೆ ಬಂದರು. ಅಂದೂ ನಮ್ಮ ಶ್ರೀಪಾದರಿಗೆ ಸ್ವಾಗತವಿತ್ತು. ಆದಿನ ಕಂಚಿ ಪರಮಾಚಾರ್ಯರ 94ನೆಯ ಜನ್ಮ ದಿನೋತ್ಸವ ಸಂಭ್ರಮವಿತ್ತು ಆ ಸಂದರ್ಭದಲ್ಲಿ ನಮ್ಮ ಶ್ರೀಪಾದರ ಉಪಸ್ಥಿತಿ ಕಾಂಚೀ ಪೀಠಾಧೀಶದ್ವಯರಿಗೆ ಬಹಳ ಮುದವನ್ನೀಡಿತು. ಈ ಯತಿತ್ರಯರ ಸಮಾಗಮದಲ್ಲಿ ಮಠದ ಓರ್ವ ವಿದ್ವಾಂಸರಾದ ಶ್ರೀಕೃಷ್ಣಮೂರ್ತಿ ಶಾಸ್ತ್ರಿಗಳು ಆಗಮಿಸಿದರು ಬಂದು ಶ್ರೀ ವಿದ್ಯಾಮಾನ್ಯತೀರ್ಥರಿಗೆ ನಮಸ್ಕರಿಸಿದರು. ಶ್ರೀವಿಜಯೇಂದ್ರಸರಸ್ವತಿಗಳು ಅವರನ್ನು ಪರಿಚಯಿಸಿದರು. ಆಗ ಪಂಡಿತ ಪ್ರೇಮಿಗಳಾದ ಪಲಿಮಾರು ಶ್ರೀಪಾದರು ಶಾಸ್ತ್ರಿಗಳನ್ನು ಬಲು ಪ್ರೀತಿಯಿಂದಲೇ ಮಾತನಾಡಿಸಿದರು. ಸ್ವಾಭಾವಿಕ ಸೌಂದರ್ಯವುಳ್ಳ ಸಂಸ್ಕೃತ ಭಾಷೆಯಲ್ಲೇ ಪ್ರಗಲ್ಭ ಪಾಂಡಿತ್ಯ ಹಾಗೂ ಪ್ರೀತಿಗಳಿಂದ ಕೂಡಿ ನಡೆದ ಆ ಸಂಭಾಷಣೆ ಕೇಳಲು ಬಲು ಮನೋಹರವಾಗಿತ್ತು. ಶ್ರೀಪಾದರ ಸಹಜ ಸ್ವಭಾವದಂತೆ ಸಂಭಾಷಣೆ ವಾಕ್ಯಾರ್ಥ ಗೋಷ್ಠಿಯಾಗಿ ಪರಿವರ್ತಿಸಿತು. ಶಾಸ್ತ್ರಿಗಳೂ ಮುನ್ನುಗ್ಗಿದರು ಶ್ರೀಪಾದರು ಹಿಂದಿನ ದಿನ ಮಾಡಿದ ಪ್ರಶ್ನೆಯನ್ನೇ ಮುಂದಿಟ್ಟರು. ಉತ್ತರ ನೀಡಲು ಸಾಧ್ಯವಾಗದಾಗ ವಿಷಯಾಂತರವನ್ನು ಮಾಡುವ ಚಮತ್ಕಾರ ಕೃಷ್ಣಮೂರ್ತಿ ಶಾಸ್ತ್ರಿಗಳಲ್ಲಿತ್ತು. ವೇದಾಂತದ ಕುರಿತಾದ ವಾಕ್ಯಾರ್ಥವು ನ್ಯಾಯ ಶಾಸ್ತ್ರವನ್ನು ಪ್ರವೇಶಿಸಿತು. ನ್ಯಾಯ ಶಾಸ್ತ್ರದಲ್ಲೂ ಪ್ರಗಲ್ಭಪಂಡಿತರಾದ ಶ್ರೀ ವಿದ್ಯಾಮಾನ್ಯ ತೀರ್ಥರು ಶಾಸ್ತ್ರಿಗಳ ಮಾರ್ಗದಲ್ಲೇ ನಡೆದು ಅವರನ್ನು ಬಂಧಿಸುತ್ತಿದ್ದರು.

ಹೀಗೆಯೇ ಮೂರು ನಾಲ್ಕು ಗಂಟೆಗಳು ಕಳೆದವು ಆಗ ಸಮಯ ಮಧ್ಯಾಹ್ನದ ಎರಡು ಗಂಟೆಯಾಗಿತ್ತು. ಶ್ರೀಪಾದರು ಯೋಚಿಸಿದರು. 'ಇಷ್ಟರತನಕ ನಡೆದ ವಾಕ್ಯಾರ್ಥವು ಉದ್ದೇಶ ರಹಿತವಾದುದು ಕಾಲವ್ಯರ್ಥ ಹರಣವಾಗುವುದು. ಆದ್ದರಿಂದ ನಾವು ಮೊದಲು ಮಾಡಿದ ಪ್ರಶ್ನೆಗೆ ಉತ್ತರವನ್ನು ನೀಡಬೇಕು' ಎಂದು ಶಾಸ್ತ್ರಿಗಳಿಗೆ ಹೇಳಿದರು. ಆಗ ಶಾಸ್ತ್ರಿಗಳಿಗೆ ವೃದ್ಧಾಪ್ಯದ ಬಲದಿಂದ ಆಯಾಸವೂ ಆಗಿತ್ತು. ಅದಕ್ಕಿಂತ ಹೆಚ್ಚಾಗಿ ಆ ಪ್ರಶ್ನೆಗೆ ಉತ್ತರ ಕೊಡಲಾಗು ವುದಿಲ್ಲವಲ್ಲ ಎಂಬ ಆಕ್ರೋಶವೂ ಮನದಲ್ಲಿ ಕುದಿಯುತ್ತಿತ್ತು, ಮುಖವು ಕೆಂಪಾಗಿತ್ತು. ಸಂಸ್ಕೃತ ಭಾಷೆಯ ಮಾತು ನಿಂತಿತು ತಮಿಳು ಭಾಷೆ ಆರಂಭವಾಯಿತು. 'ಇಂತಹವರನ್ನು ನಮ್ಮ ಮಠದ ಒಳಗೆ ಬಿಡಬಾರದಿತ್ತು. ಏಕೆ ಬಿಟ್ಟಿರಿ?' ಎಂದು ವಿಜಯೇಂದ್ರ ಸರಸ್ವತಿಗಳನ್ನು ಸಿಟ್ಟಿನಿಂದ ಕೇಳಿದರು. ವಿಜಯೇಂದ್ರ ಸರಸ್ವತಿಗಳೂ ಎಷ್ಟು ಸಮಾಧಾನ ಪಡಿಸಿದರೂ ವ್ಯರ್ಥವಾಯಿತು. ಆಗ ಪಲಿಮಾರು ಶ್ರೀಪಾದರೇ ಮರು ನುಡಿದರು. 'ಶಾಸ್ತ್ರಿಗಳೇ ನಿಮಗೆ ಈ ಪ್ರಶ್ನೆಗೆ ಉತ್ತರವನ್ನೀಡಲು ಸಾಧ್ಯವಿಲ್ಲವೆಂದಾದರೆ ಕೋಪ ವನ್ನು ಮಾಡದಿರಿ, ಮತ ದುರ್ಬಲವಾದರೆ ನೀವೇನು ಮಾಡುವಿರಿ? ಉತ್ತರದ ಅಭಾವದಿಂದ ಸಿದ್ಧವಾಗುವುದು ಅದ್ವೈತ ಅಬದ್ಧವೆಂದು ಆದ್ದರಿಂದ 'ಅದ್ವೈತವು ಶಾಸ್ತ್ರೀಯವಲ್ಲ' ಎಂದು ನೀವು ಬರೆದುಕೊಡಬೇಕು

ಎಂದರು. ಈ ಮಾತನ್ನು ಕೇಳಿದ ತಕ್ಷಣ ಮೊದಲೇ ಕುಪಿತರಾಗಿದ್ದ ಶಾಸ್ತ್ರಿಗಳು ಎದ್ದು ಹೊರಟೇ ಹೋದರು. ಯಾರು ತಡೆದರೂ ನಿಲ್ಲಲಾರರು.

ನಂತರದಲ್ಲಿ ಶ್ರೀಪಾದರು ಹೊರಟಾಗ ಕಂಚಿ ಪರಮಾಚಾರ್ಯರು ತಮ್ಮ ಜನ್ಮೋತ್ಸವದ ನಿಮಿತ್ತ ಪಲಿಮಾರು ಶ್ರೀಪಾದರಿಗೆ ಅವರೊಡನೆ ಬಂದ ಶಿಷ್ಯವರ್ಗಕ್ಕೆ ಸತ್ಕಾರವನ್ನು ಮಾಡಲು ಮುಂದಾದರು. ಶ್ರೀಪಾದರಿಗೆ ಉತ್ತಮ ರೇಷ್ಮೆಯ ಜರತಾರಿ ಶಾಲನ್ನು,ಫಲಕಾಣಿಕೆಗಳನ್ನು ಹಾಗೂ ಶಿಷ್ಯರಿಗೆ ಉತ್ತಮ ಧೋತಿ ವಿದ್ವಾಂಸರ ಶಾಲುಗಳನ್ನು ನೀಡಲು ಬಂದಾಗ ಪಲಿಮಾರು ಶ್ರೀಪಾದರು 'ನಮಗೆ ಈ ಸನ್ಮಾನಕ್ಕಿಂತ ಅದ್ವೈತವು ತಪ್ಪು ಎಂದು ಬರೆದು ಕೊಡುವುದೇ ಬಹು ದೊಡ್ಡ ಸನ್ಮಾನ ಇಲ್ಲವಾದರೆ ನಮ್ಮ ಪ್ರಶ್ನೆಗೆ ಉತ್ತರವನ್ನು ನೀಡುವುದು ಸಮರ್ಪಕ ಸನ್ಮಾನವಾಗುವುದು ಅದಿಲ್ಲದೆ ಇದನ್ನು ಸ್ವೀಕರಿಸಲಾರೆವು' ಎಂದು ನುಡಿಯುತ್ತಾ ಸಂತೋಷದಿಂದ ಹೊರಟರು. ಅವರು ಹೊರಟಾಗ ಕಾಂಚಿ ಪರಮಾಚಾರ್ಯರು ಹಾಗೂ ವಿಜಯೇಂದ್ರ ಸರಸ್ವತಿಗಳು ಹೃತ್ಪೂರ್ವಕವಾಗಿ ಆದರದಿಂದ ಬೀಳ್ಕೊಟ್ಟರು. ಆ ಬೀಳ್ಕೊಡುಗೆಯಲ್ಲಿ ಆತ್ಮೀಯ ಗೆಳೆಯನ ವಿರಹದ ವೇದನೆ ಹಾಗೂ ಅದಕ್ಕಿಂತ ಅಧಿಕವಾದ ಉತ್ತರ ನೀಡಲಾಗದ ಅಸಹಾಯಕತೆಯ ಪ್ರಯುಕ್ತ ತಮ್ಮ ಸತ್ಕಾರವನ್ನು ಉಡುಪಿ ಶ್ರೀಪಾದರು ಸ್ವೀಕರಿಸದ ವೇದನೆ ವ್ಯಕ್ತವಾಗುತ್ತಿತ್ತು.

ಹೀಗೆ ಪರವಾದಿಗಳು ಇರುವಲ್ಲಿಗೆ ಹೋಗಿ ತಮ್ಮ ಸನ್ಮಾನವನ್ನು ಅವಮಾನವನ್ನು ಗಣನೆ ಮಾಡದೆ ಪರಮತವನ್ನು ಖಂಡಿಸಿ ಮಧ್ವ ಸಿದ್ಧಾಂತದ ವಿಜಯವನ್ನು ಪ್ರಕಾಶ ಪಡಿಸಿದ ಧೀಮಂತ ವೇದಾಂತ ಚಕ್ರವರ್ತಿಗಳು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು.

## ಖಂಡನಾಭಾಸಗ್ರಂಥದ ಖಂಡನೆ

ವೇದಗಳ ಅರ್ಥವನ್ನು ನಿರ್ಣಯಿಸುವ ಶ್ರೇಷ್ಠ ಗ್ರಂಥ ವೇದವ್ಯಾಸ ಭಗವತ್ಪ್ರಣೀತ ಬ್ರಹ್ಮ ಸೂತ್ರ. ಇದಕ್ಕೆ ಶ್ರೀಮದಾಚಾರ್ಯರ ವ್ಯಾಖ್ಯಾನ ಗ್ರಂಥ ನಾಲ್ಕು ಬ್ರಹ್ಮ ಸೂತ್ರಭಾಷ್ಯ. ಅನುವ್ಯಾಖ್ಯಾನ, , ಅಣುಭಾಷ್ಯ ಮತ್ತು ನ್ಯಾಯವಿವರಣ. ಈ ಅನುವ್ಯಾಖ್ಯಾನದಲ್ಲಿ ಎರಡು ಸಾವಿರ ಶ್ಲೋಕಗಳು ಅಡಕವಾಗಿವೆ. ಇದರಲ್ಲಿ ಸಕಲ ಮತಗಳ ವಿಮರ್ಶೆಯನ್ನು ವಿಸ್ತಾರವಾಗಿ ಮಾಡಲಾಗಿದೆ. ಆಚಾರ್ಯರ ಈ ಗ್ರಂಥದ ಪ್ರತಿಯೊಂದು ವಾಕ್ಯವೂ ಅನೇಕ ಅರ್ಥಗರ್ಭಿತವಾಗಿದೆ. ಈ ಅಂಶ ಅದಕ್ಕೆ ವ್ಯಾಖ್ಯಾನವಾದ ಶ್ರೀಮನ್ನ್ಯಾಯಸುಧೆಯಿಂದ ವ್ಯಕ್ತವಾಗುವುದು. ಶ್ರೀಮನ್ನ್ಯಾಯಸುಧೆ ಶ್ರೀಮಟ್ಟೀಕಾ ಕೃತ್ಪಾದರಿಂದ ರಚಿತವಾಗಿದೆ. ಇದು ದ್ವೈತವೇದಾಂತ ವಾಙ್ಮಯದ ಮೇರುಕೃತಿ ಎನಿಸಿದೆ. ಇದರ ವೈಶಿಷ್ಟ್ಯದಿಂದಲೇ 'ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ' ಎಂಬ ನಾಣ್ನುಡಿಯೂ ಪ್ರಸಿದ್ಧವಾಗಿದೆ. ಇದು ಮಾಧ್ವರು ಮಾತ್ರ ಅಭಿಮಾನದಿಂದ ಹೇಳತಕ್ಕ ಮಾತಲ್ಲ ವಿಮರ್ಶೆಯವರೆಗೆಲ್ಲಿಗೆ ತಿಕ್ಕಿ ಹೇಳಿದ ನಿಷ್ಪಕ್ಷಪಾತ ಸಹೃದಯನ ಉದ್ಗಾರದ ಮಾತು. ಈ ಗ್ರಂಥದ ಭಾಷಾ, ಶೈಲಿ, ವಿಷಯ ಪ್ರತಿಪಾದಾನಾಚಾತುರ್ಯ, ಪರಮತ ಖಂಡನ, ಸ್ವಮತಸ್ಥಾಪನಗಳ ಕ್ರಮಗಳು ಅಸಾಧಾರಣವಾದುವು. ಅಂದಿನಿಂದ ಇಂದಿನವರೆಗೆ ಈ ಗ್ರಂಥವನ್ನು ಖಂಡನೆ ಮಾಡುವ ಧೈರ್ಯ ಯಾವ ಉದ್ದಂಡ ಪಂಡಿತನಿಗೂ ಬಂದಿಲ್ಲ. ಇದು ಮಾಧ್ವಸಿದ್ಧಾಂತದ ಅಚ್ಛೆದ್ಯ

ಅಭೇದ್ಯ ಕೋಟೆಯಾಗಿದೆ. ಮಧ್ವ ಸಿದ್ಧಾಂತದ ವಿಜಯ ಪತಾಕೆ ಎನಿಸಿದೆ. ಇದರಿಂದಾಗಿ ದ್ವೈತ ವಾಙ್ಮಯ ಪ್ರಪಂಚದಲ್ಲಿ ಶ್ರೀಮನ್ನ್ಯಾಯಸುಧೆ ಗ್ರಂಥರಾಜನೆಂದು ಪ್ರಸಿದ್ಧವಾಗಿದೆ.

ಮಹಾಮಹೋಪಾಧ್ಯಾಯ ಅನಂತ ಕೃಷ್ಣ ಶಾಸ್ತ್ರಿಗಳು ಇಂಥ ಗ್ರಂಥಕ್ಕೆ ಪ್ರತಿಯಾಗಿ ಖಂಡನಾ ಭಾಸರೂಪವಾದ ಒಂದು ಗ್ರಂಥವನ್ನು ಬರೆದರು. 'ಅದ್ವೈತ ತತ್ವಸುಧಾ' ಎಂದು ಅದರ ಹೆಸರು. ಅದನ್ನು ಬರೆದು 'ನೊಣವು ಪರ್ವತವನ್ನು ನೂಕಿದಂತೆ' ಎಂಬ ಗಾದೆಯ ಮಾತಿಗೆ ಅನುಗುಣವಾಗಿ ನಗೆಗೀಡಾದರು. ಶ್ರೀ ಅನಂತ ಕೃಷ್ಣ ಶಾಸ್ತ್ರಿಗಳು ಶ್ರೀ ವಿದ್ಯಾಮಾನ್ಯತೀರ್ಥರನ್ನು ಆಗಾಗ ಭೇಟಿಯಾಗುತ್ತಿದ್ದರು. ವಾಕ್ಯಾರ್ಥವನ್ನು ಮಾಡುತ್ತಿದ್ದರು. ಆಗೆಲ್ಲಾ ಶ್ರೀಪಾದರು 'ನೀವು ಎತ್ತಿದ ಆಕ್ಷೇಪಗಳನ್ನು ನಮ್ಮ ನ್ಯಾಯ ಸುಧೆಯಲ್ಲಿ ಖಂಡಿಸಿದ್ದಾರೆ' ಎಂದು ನುಡಿಯುತ್ತಿದ್ದರು. ಒಂದೊಮ್ಮೆ ಶಾಸ್ತ್ರಿಗಳು 'ಆ ನಿಮ್ಮ ನ್ಯಾಯಸುಧೆಯನ್ನೇ ಖಂಡಿಸುತ್ತೇನೆ' ಎಂದು ಪ್ರತಿ ನುಡಿದು ಶ್ರೀಪಾದರಿಗೆ ಪತ್ರವನ್ನು ಬರೆದರು. ಆಗ ಶ್ರೀಪಾದರು 'ಬಹಳ ಸಂತೋಷ ಗ್ರಂಥ ಬರೆಯುವುದಕ್ಕಿಂತ ಆ ವಿಷಯದಲ್ಲಿ ಪ್ರತ್ಯಕ್ಷವಾಗಿಯೇ ವಾಕ್ಯಾರ್ಥವನ್ನೇ ಮಾಡೋಣ ಬನ್ನಿರಿ' ಎಂದು ಕರೆದರು. ಆದರೆ ಶಾಸ್ತ್ರಿಗಳು ಅಂದಿನಿಂದ ಶ್ರೀಪಾದರ ಬಳಿ ಸುಳಿಯಲಿಲ್ಲ. ಪರೋಕ್ಷವಾಗಿಯೇ ಇದ್ದುಕೊಂಡು ''ಅದ್ವೈತ ತತ್ವಸುಧಾ'' ಎಂಬ ಗ್ರಂಥವನ್ನು ಬರೆದು ಶ್ರೀಗಳವರಿಗೆ ತಲುಪಿಸಿದರು. ಶ್ರೀಪಾದರು ಅನಾಯಾಸವಾಗಿ ಅನಂತ ಕೃಷ್ಣಶಾಸ್ತ್ರಿಗಳ ಆ ಗ್ರಂಥದಲ್ಲಿರುವ ''ಅಥ'' ದಿಂದ ''ಇತಿ'' ಯವರೆಗೆ ಪ್ರತ್ಯಕ್ಷರವನ್ನು ಖಂಡಿಸಿದರು. ಆ ಖಂಡನೆಯೇ ಶ್ರೀಮನ್ನ್ಯಾಯಸುಧೆಯ ಮಂಡನೆಯಾಗಿತ್ತು. ಈ ಖಂಡನಖಂಡನ ಗ್ರಂಥವು ''ಅದ್ವೈತ ತತ್ವ ಸುಧಾ ಸಮೀಕ್ಷಾ'' ಎಂಬ ಶಿರೋನಾಮೆಯಿಂದ ಕೂಡಿಕೊಂಡು ಬಂದಿತು. ಶ್ರೀಪಾದರು ಇದನ್ನು ಬರೆದು ಮುದ್ರಿಸಿ ಶಾಸ್ತ್ರಿಗಳಿಗೆ ಕಳುಹಿಸಿಕೊಟ್ಟರು. ಅಲ್ಲದೇ ತಾವು ಬರೆದ ಗ್ರಂಥದಲ್ಲಿ 'ಒಂದು ದೋಷವೂ ಕೂಡ ನ್ಯಾಯಸುಧೆಗೆ ತಗುಲುವುದಿಲ್ಲ ಮತ್ತು ಒಂದೊಂದು ಸಾವಿರ ರೂಪಾಯಿಗಳನ್ನು ನೀಡುತ್ತೇನೆ' ಎಂದು ಬರೆದು ಪ್ರಕಟಿಸಿದರು. ಅ.ಕೃ. ಶಾಸ್ತ್ರಿಗಳಿಗೂ, ಅನೇಕ ಅದ್ವೈತ ಪಂಡಿತರಿಗೂ, ಎಲ್ಲ ಅದ್ವೈತ ಪೀಠಾಧಿಪತಿಗಳಿಗೂ ಕಳುಹಿಸಿದರು. 'ಪ್ರತ್ಯಕ್ಷವಾಗಿ ಬಂದು ವಾಕ್ಯಾರ್ಥವನ್ನು ನಡೆಸಿ ನ್ಯಾಯಸುಧೆಯ ದೋಷವನ್ನು ತೋರಿಸಿದಲ್ಲಿ ಆ ವಿದ್ವಾಂಸರಿಗೂ ಅವರ ಶಿಷ್ಯರಿಗೂ ಬಂದು ಹೋಗುವ ವಾಹನದ ವೆಚ್ಚ ವಿಪುಲ ಸಂಭಾವನೆಗಳನ್ನೂ ನೀಡುತ್ತೇವೆ' ಎಂದು ಪತ್ರ ಮುಖಾಂತರ ತಿಳಿಸಿದರು. 'ಅಥವಾ ನಾವೇ ನೀವಿದ್ದಲ್ಲಿಗೆ ನಮ್ಮ ವೆಚ್ಚವನ್ನು ನೋಡಿಕೊಂಡು ಬರುತ್ತೇವೆ. ನಿಮ್ಮಿಂದ ಒಂದು ಬಿಡಿಕಾಸು ಪಡೆಯುವುದಿಲ್ಲ ನೀವು ಬರೆದ ಗ್ರಂಥದ ಅಪದ್ಧತೆಯನ್ನೂ ಅದರ ದೋಷವನ್ನೂ ಸ್ಪಷ್ಟಪಡಿಸಿ ನ್ಯಾಯಸುಧೆಯ ನಿರ್ದುಷ್ಟತೆಯನ್ನೂ ಅದರ ಶ್ರೇಷ್ಠತೆಯನ್ನೂ ದೃಢಪಡಿಸಿಕೊಡುತ್ತೇವೆ' ಎಂದು ಅನಂತ ಕೃಷ್ಣಶಾಸ್ತ್ರಿಗಳಿಗೆ ಪತ್ರ ಬರೆದರು.

ಶ್ರೀಪಾದರ ಅಸಾಧಾರಣ ಪಾಂಡಿತ್ಯವಾದಕೌಶಲ್ಯಗಳನ್ನು ವಿಶೇಷವಾಗಿ ದ್ವೈತ ಸಿದ್ಧಾಂತದ ವಾಸ್ತವತೆಯನ್ನೂ ಚೆನ್ನಾಗಿ ಅರಿತ ಯಾವ ಅದ್ವೈತ ಪಂಡಿತನೂ ಶ್ರೀಪಾದರ ಈ ಪಂಥಾಹ್ವಾನವನ್ನು ಸ್ವೀಕರಿಸಲಿಲ್ಲ. ಕಾರಣ, ಅವರಲ್ಲಿ ಉತ್ತರ ಕೊಡುವ ಧೈರ್ಯ ಶಕ್ತಿ ಇಲ್ಲದಾಗಿತ್ತು. ಇದರಿಂದ ಅವರ ಬಾಯಿಗೆ ಬೀಗ ಜಡಿದಂತಾಗಿತ್ತು. ಉತ್ತರ ಮೌನವಾಗಿತ್ತು. ಶಾಸ್ತ್ರಿಗಳಂತೂ ಶ್ರೀಪಾದರನ್ನು

ಸಂಧಿಸಲೇ ಇಲ್ಲ. ಆದರೆ ದಿಲ್ಲಿಯ ವೇದಶಾಖಾ ಪ್ರತಿನಿಧಿ ಸಭೆಗೆ ಶ್ರೀಪಾದರು ಆಗಮಿಸಿದಾಗ ಅನಂತ ಕೃಷ್ಣ ಶಾಸ್ತ್ರಿಗಳೂ ಬಂದಿದ್ದರು ಈ ಸಂದರ್ಭವನ್ನು ಉಪಯೋಗಿಸಿದ ಶ್ರೀಪಾದರು, ನೂರಾರು ಜನ ಅದ್ವೈತ ಪಂಡಿತರ ಸಮ್ಮುಖದಲ್ಲೇ 'ಶಾಸ್ತ್ರಿಗಳೇ ನೀವು ಬರೆದ ಗ್ರಂಥದಲ್ಲಿಯ ಒಂದು ದೋಷವಾದರೂ ನಮ್ಮ ನ್ಯಾಯಸುಧೆಗೆ ಹತ್ತುತ್ತದೆಂದು ತೋರಿಸಿರಿ ತೋರಿಸಿಕೊಟ್ಟ ಪ್ರತಿಯೊಂದು ದೋಷಕ್ಕೂ ಒಂದೊಂದು ಸಾವಿರ ರೂಪಾಯಿಗಳನ್ನು ಸ್ವೀಕರಿಸಿರಿ. ಇಷ್ಟೊಂದು ಪಂಡಿತರು ನಿಮ್ಮವರೇ ಆಗಿದ್ದಾರೆ ಅವರೇ ನಮ್ಮಿಬ್ಬರ ವಾಗ್ವಾದದ ಮಧ್ಯಸ್ಥರಾಗಲಿ' ಎಂದು ಶಾಸ್ತ್ರಿಗಳನ್ನು ಆಹ್ವಾನಿಸಿದರು. ಆಗ ಶಾಸ್ತ್ರಿಗಳು ನಗುತ್ತಲೇ 'ತಮ್ಮೊಡನೆ ವಾಕ್ಯಾರ್ಥವನ್ನು ನಡೆಸಲು ಸಾಧ್ಯವಿಲ್ಲ ಏಕೆಂದರೆ ನನ್ನ ಮತಿ ದುರ್ಬಲವಾಗದಿದ್ದರೂ ಮತ ದುರ್ಬಲವಾಗಿದೆ' ಎಂದು ತಮ್ಮ ಅಂತರಂಗದ ಇಂಗಿತವನ್ನು ಬಹಿರಂಗಗೊಳಿಸಿದರು.

ಆ ಸಂದರ್ಭದಲ್ಲಿ ಶ್ರೀಪಾದರು ನ್ಯಾಯಸುಧಾ ಗ್ರಂಥದ ನಿರ್ದುಷ್ಟತೆಯನ್ನು ಸ್ಪಷ್ಟಪಡಿಸಿ ಮಾಧ್ವ ಸಿದ್ಧಾಂತದ ತತ್ವಗಳನ್ನು ಭೋದಿಸಿದರು. ಇದರಿಂದ ಅಲ್ಲಿ ನೆರೆದ ಎಲ್ಲ ವಿದ್ವಾಂಸರಿಗೂ ಶ್ರೀಮನ್ನ್ಯಾಯ ಸುಧಾ ಅಚ್ಛೇದ್ಯ ಅಭೇದ್ಯ ಗ್ರಂಥವೆಂದೂ ಮನದಟ್ಟಾಯಿತು.

ಈ ರೀತಿ ಅನಂತ ಕೃಷ್ಣ ಶಾಸ್ತ್ರಿಗಳ ಗ್ರಂಥವನ್ನು ಲೌಕಿಕವಾಗಿಯೂ ಲಿಖಿತ ಮೂಲಕವಾಗಿಯೂ ಖಂಡಿಸಿ ಶ್ರೀಮನ್ನ್ಯಾಯ ಸುಧಾ ಗ್ರಂಥದ ಹಿರಿಮೆಯನ್ನು ಮೆರೆಯಿಸಿ ಸಮಸ್ತ ಮಾಧ್ವ ಸಮಾಜಕ್ಕೆ ಮಹದುಪಕಾರವನ್ನು ಮಾಡಿದ ಮಹಾನುಭಾವರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು. ಅಲ್ಲದೆ ಅದೇ '' ಅದ್ವೈತ ತತ್ವಸುಧಾ'' ಕ್ಕೆ ಖಂಡನಾತ್ಮಕವಾಗಿ ಶ್ರೀಮದುತ್ತರಾಧಿಮಠಾಧೀಶರಾದ ಶ್ರೀಶ್ರೀಸತ್ಯಧ್ಯಾನತೀರ್ಥ ಶ್ರೀಪಾದರು ರಚಿಸಿದ '' ನ್ಯಾಯ ಸುಧಾಮಂಡನಂ'' ಎಂಬ ಕೃತಿಯೂ ಇಲ್ಲಿ ಸ್ಮರಣೀಯ.



# ಗುರುವಚನಾನುಷ್ಠಾನ ಸಭಾಸ್ಥಾಪನಾ

'ಶ್ರೀಮದಾಚಾರ್ಯರು ಕರುಣಿಸಿದ, ಆ ಭಗವಂತನ ಬಗೆಗಿನ ತಿಳಿಯಾದ ತಿಳುವಳಿಕೆಯು ಮಠದ ಪರಿಸರದೊಳಗಿನ ಪಂಡಿತರಿಗೆ ಮಾತ್ರ ಸೀಮಿತವಾದ ಆಸ್ತಿಯಾಗಬಾರದು. ಅದು ವಿಸ್ತೃತ ಜಿಜ್ಞಾಸು ಸಮಾಜದ ಮಹದಾಸ್ತಿಯಾಗಬೇಕು. ತನ್ಮೂಲಕ ಸಮಾಜದಲ್ಲಿ ಭಗವಂತನಲ್ಲಿ ಭಕ್ತಿ ಹಾಗೂ ಧಾರ್ಮಿಕ ಪ್ರಜ್ಞೆಗಳು ಜಾಗೃತಿಗೊಳ್ಳಬೇಕು. ಸಮಾಜ ಜೀವನವು ದೈವಿಕ ಮೌಲ್ಯಾಧಾರಿತವಾಗಿ ರೂಪಿತವಾಗಬೇಕು. ಸ್ವಚ್ಛವೂ ಆದರ್ಶವೂ ಆಗಬೇಕು. ಎಂಬ ಹಿರಿದಾದ ಹಂಬಲವನ್ನು ಹೊತ್ತ ಹಿರಿಯ ವ್ಯಕ್ತಿ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು. ಅವರೂ 'ಜ್ಞಾನ ಹಿಮಾಲಯ'ರೆನಿಸಿದ ಶ್ರೀ ಶ್ರೀ ಸತ್ಯಧ್ಯಾನ ತೀರ್ಥರಲ್ಲಿದ್ದ ಜ್ಞಾನ ಭಂಡಾರವನ್ನು ಪಡೆದರು. ಆ ಮಹಾ ಗುರುಗಳಿಂದಲೇ 'ನಿಜವಾದ ಜ್ಞಾನಭಂಡಾರ' ರೆಂಬ ಹೊಗಳಿಕೆಯನ್ನೂ ಪಡೆದರು.

ಅವರು ಪಾಠ ಮುಗಿಸಿ ತವರಿಗೆ ಹೊರಟಾಗ ಆ ಗುರುಗಳು 'ಪಾಠ-ಪ್ರವಚನಗಳು ನಿರಂತರವಾಗಿರಲಿ. ಮತ ರಕ್ಷಣೆ ಭರದಿಂದ ನಡೆಯಲಿ. ನೀವೂ ಒಂದು ಸಭೆಯನ್ನು ಆರಂಭಿಸಿರಿ. ಅದರ ಮೂಲಕ ತತ್ವಪ್ರಸಾರವನ್ನು ಮಾಡಿರಿ'. ಎಂದು ಆದೇಶಿಸಿದ್ದರು. ಈ ಆದೇಶದಲ್ಲಿ ಮೊದಲ ಮೂರು ಕಾರ್ಯಗಳನ್ನು ಶ್ರೀ ವಿದ್ಯಾಮಾನ್ಯ ತೀರ್ಥರು ಬಹು ಆದರದಿಂದ ನಡೆಸಿದರು.

ಆ ಗುರುಗಳು ಸೂಚಿಸಿದ ಸಭೆಯ ಸ್ಥಾಪನೆಯು ಮಾತ್ರ ಕೆಲವು ಕಾರಣಗಳಿಂದ ಸಾಧ್ಯವಾಗಿರಲಿಲ್ಲ. ಆದರೆ ಅವರ ಮನಸ್ಸು ಅದನ್ನು ಮರೆತಿರಲಿಲ್ಲ. 1943 ರ ಅವಧಿಯಲ್ಲಿ ವಿದ್ಯಾ ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರು ವೈಕುಂಠಪತಿಯ ಪದವನ್ನು ಸಮೀಪಿಸಿದರು. ಗುರುಗಳ ವಿರಹವನ್ನು ತಾಳಲಾರದೆ ಶ್ರೀ ವಿದ್ಯಾಮಾನ್ಯ ತೀರ್ಥರು ಶೋಕ ಸಾಗರದಲ್ಲಿ ಮುಳುಗಿದರು. 'ಮಾಧ್ವ ಜನತೆ ಧೀಮಂತನಾಯಕರನ್ನು ಕಳೆದುಕೊಂಡು ತಬ್ಬಲಿಯಾಯಿತೆಂದು' ಮಮ್ಮಲ ಮರುಗಿದರು.

ಪರವಾದಿಗಳಿಗೆ ಸಿಂಹ ಸ್ವಪ್ನರಾಗಿದ್ದ ಹಾಗೂ ಪಂಡಿತ ಪೋಷಕರಾಗಿದ್ದ ಗುರು ಶ್ರೀ ಸತ್ಯಧ್ಯಾನ ತೀರ್ಥರು ಆಡಿದ ನುಡಿಗಳು ಶ್ರೀ ವಿದ್ಯಾಮಾನ್ಯ ತೀರ್ಥರ ಕಿವಿಗಳಲ್ಲಿ ರಿಂಗಣ ಗುಟ್ಟುತ್ತಿದ್ದವು. ಮನಸ್ಸು ಅವುಗಳನ್ನೇ ಸುತ್ತುತ್ತಿತ್ತು.

''ಇನ್ನು ವಿಲಂಬಮಾಡಬಾರದು. ಎಷ್ಟೇ ಕಷ್ಟವೆನಿಸಿದರೂ ಈ ವರುಷ ಸಭೆಯನ್ನು ಆರಂಭಿಸಬೇಕು ತನ್ಮೂಲಕ ತತ್ವಪ್ರಸಾರವನ್ನು ಮಾಡಬೇಕು. ಗುರು ವಚನವನ್ನು ಆಚರಣೆಯಲ್ಲಿ ತರಬೇಕು'' ಎಂದು ನಿಶ್ಚಯಿಸಿದರು. ಮನಸ್ಸಲ್ಲಿ ಮೂಡಿದ ನಿಶ್ಚಯವು ಕಾರ್ಯರೂಪದಲ್ಲಿ ಬಂದಿತು.

ಶ್ರೀ ವಿದ್ಯಾಮಾನ್ಯ ತೀರ್ಥರು ವೇದಪುರುಷನನ್ನು ಸ್ತುತಿಸುವುದರೊಂದಿಗೆ ಜ್ಯೋತಿ ಬೆಳಗಿದರು. ಆ ಮೂಲಕ ಸಭೆಯನ್ನು ಉದ್ಘಾಟಿಸಿದರು. ಪ್ರಾರಂಭಿಸಿದರು.

ಪ್ರಾರಂಭಿಸಿದ ಶುಭ ದಿನ, 1943ರ ಫೆಬ್ರುವರಿ ಸ್ವಭಾನು ಸಂವತ್ಸರದ ಮಾಘ ಶುದ್ಧ ನವಮಿ . ಸಭೆ ಪ್ರಾರಂಭಗೊಂಡ ಸ್ಥಳ, ಪಶ್ಚಿಮ ಕರಾವಳಿ ತೀರದ ಬಾರ್ಕೂರಿನ ಪಚ್ಚೆ ತೋಟದೊಳಿರುವ ಭವ್ಯ ಭಂಡಾರಕೇರಿ ಮಠ. ಸಭೆಯ ಹೆಸರು 'ಶ್ರೀಮನ್ಮಾಧ್ವ ರಾದ್ಧಾಂತ ಸಂವರ್ಧಕ ಸಭಾ'. ಸಭೆಯ ಮೊದಲ ಅಧಿವೇಶನದ ಅಧ್ಯಕ್ಷರು, ಹದಿಮೂರರ ವಯಸ್ಸಿನ ದಿಟ್ಟ, ಪುಟ್ಟ ಯತಿ ಶ್ರೀಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು. ಸಭೆಯಲ್ಲಿ ಭಾಗವಹಿಸಲು ಆಗಮಿಸಿದ ಊರ-ಪರವೂರ ಪ್ರಸಿದ್ಧ ಪಂಡಿತರು ನೂರಾರು. ವಿದ್ಯಾರ್ಥಿ ಸಮೂಹ, ಭಕ್ತರ-ಅಭಿಮಾನಿಗಳ ವೃಂದಗಳಿಂದ ತುಂಬಿದ ಆ ಸಮಾರಂಭಕ್ಕೆ ಭಂಡಾರಕೇರಿ ಶ್ರೀಪಾದರೇ ಬೇರು. ಅವರೊಂದಿಗೆ ಸೇರಿದ ಶ್ರೀವಿಶ್ವೇಶತೀರ್ಥರು, ಮುಂದಿನ ದಿನಗಳಲ್ಲಿ ಉತ್ತಮ ಫಲವನ್ನೀಡುವ ಹೊಸ ಚಿಗುರು. ಅದ್ಭುತ ಪ್ರತಿಭಾ ಸಾಗರರು. ಅವರ ಆ ಅಧ್ಯಕ್ಷ ಭಾಷಣ ಹಾಗೂ ಅದರ ಲ್ಲಡಕವಾದ ಸ್ವರಚಿತ ಶ್ಲೋಕಗಳ ಶ್ರವಣದಿಂದ ಶ್ರೀ ವಿದ್ಯಾಮಾನ್ಯ ತೀರ್ಥರು ಬಲು ಸಂತುಷ್ಟರಾದರು. ಅಂತೆಯೇ ಅವರ ಅಸ್ಖಲಿತ ವಾಕ್ಪಟುತ್ವ ಹಾಗೂ ಬುದ್ಧಿ ಮತ್ತೆಗೆ ಆಕರ್ಷಿತರಾದರು.

ಮಧ್ವನವಮಿಯಂದು ಆರಂಭಗೊಂಡ ಸಭೆ ನಾಲ್ಕು ದಿನಗಳ ಕಾಲ ವೈಭವದಿಂದ ಜರುಗಿತು. ಘನವಿದ್ವಾಂಸರ ತಾತ್ವಿಕ ಚರ್ಚಾಗೋಷ್ಠಿಗಳು, ವಿದ್ಯಾರ್ಥಿಗಳ ಪರೀಕ್ಷೆಗಳು, ಶ್ರೀಪಾದರುಗಳ ಉಪನ್ಯಾಸಗಳು, ವಿದ್ವಾಂಸರಿಗೆ - ವಿದ್ಯಾರ್ಥಿಗಳಿಗೆ ಯಥೇಷ್ಟ ಸಂಭಾವನೆ, ಸನ್ಮಾನಗಳು ನಡೆದವು.

ಅನಂತರದ ವರ್ಷದಿಂದ ಆರಂಭಿಸಿ ಪ್ರತಿವರ್ಷವೂ ಸಭೆಯ ಅಧಿವೇಶನಗಳು ನಡೆಯುತ್ತಿದ್ದ ದಿನಗಳು ರಥಸಪ್ತಮೀ, ಭೀಷ್ಮಾಷ್ಟಮೀ ಹಾಗೂ ಮಧ್ವನವಮೀ. ಅದೇ ಕ್ರಮದಿಂದಲೇ ಯಶಸ್ವಿಯಾಗಿ ನಡೆದು ಬಂದ ಸಭೆ ಸುಮಾರು ಐವತ್ತೇಳು ವರ್ಷಗಳನ್ನು ಕಳೆದು ಐವತ್ತೆಂಟನೆಯ ವರ್ಷಕ್ಕೆ ಅಡಿಯಿಟ್ಟಿದೆ.

ಸಭೆಯ ಮುಖ್ಯ ಉದ್ದೇಶ :- 'ಮಾಧ್ವರಾದ್ಧಾಂತ ಸಂವರ್ಧಕ ಸಭಾ' ಎಂಬ ನಾಮವೇ ಸೂಚಿಸುವಂತೆ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಎಲ್ಲೆಡೆ ಪ್ರಸಾರ ಮಾಡುವುದು.

ಉದ್ದೇಶಸಿದ್ಧಿಗಾಗಿ ಸಭೆಯ ಸಾಧನೆ :-

1) ವಿದ್ಯಾರ್ಥಿ ಪರೀಕ್ಷೆ - ಯಥೇಷ್ಟ ಸಂಭಾವನೆ :- ಶಾಸ್ತ್ರಾರ್ಥ-ಪ್ರವಚನಗಳಲ್ಲಿ ನಿರತರಾಗಿರುವ ವಿದ್ಯಾರ್ಥಿಗಳಿಗೆ - ವಿದ್ವಾಂಸರಿಗೆ ಉತ್ತೇಜನವನ್ನು ನೀಡುವುದಕ್ಕೋಸ್ಕರ ಆ ವಿದ್ಯಾರ್ಥಿಗಳ ಪರೀಕ್ಷೆಗಳನ್ನು ನಡೆಸುವುದು, ವಿಶೇಷ ಸಂಭಾವನೆಯನ್ನು ನೀಡುವುದು.

ವಿದ್ಯಾರ್ಥಿಗಳಿಗಿಂತ ದ್ವಿಗುಣವಾದ ಸಂಭಾವನೆಯನ್ನು ಪಾಠ ಹೇಳಿದ ವಿದ್ವಾಂಸರಿಗೆ ನೀಡುವುದು ಈ ಸಭೆಯ ಪ್ರಮುಖ ಕಾರ್ಯಗಳಲ್ಲಿ ಸೇರಿತ್ತು.

ಈ ಸಭೆಯ ವಾರ್ಷಿಕ ಅಧಿವೇಶನಕ್ಕೆ ಮುಂಚಿತವಾಗಿಯೇ ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯ ವಿದ್ಯಾರ್ಥಿಗಳೂ, ಭಂಡಾರಕೇರಿ ಮಠದ ಗುರುಕುಲದ ವಿದ್ಯಾರ್ಥಿಗಳೂ, ಹಾಗೂ ಪರವೂರ ವಿದ್ಯಾರ್ಥಿಗಳೂ ಈ ಸಭೆಯಲ್ಲಿ ಪರೀಕ್ಷೆಯನ್ನು ನೀಡಲು ವಿಶೇಷ ತಯಾರಿಯನ್ನು ಪ್ರಾರಂಭಿಸುತ್ತಿದ್ದರು. ಈ ರೀತಿ ಎಲ್ಲೆಡೆಯಲ್ಲೂ ಅಧ್ಯಯನದ ವಿಶೇಷವಾತಾವರಣವು ನಿರ್ಮಾಣವಾಗುತ್ತಿತ್ತು. ವಿದ್ವಾಂಸರು ವಿಶೇಷ ಪಾಠಗಳನ್ನಾರಂಭಿಸುತ್ತಿದ್ದರು. ವಿದ್ಯಾರ್ಥಿಗಳು ವಿಶೇಷವಾಗಿ ಅಧ್ಯಯನಗೈಯ್ಯುತ್ತಿದ್ದರು. ಎಲ್ಲಿಲ್ಲೂ ಅಧ್ಯಯನದ ಸಡಗರವೇ ಸಡಗರ. ಪ್ರತಿವರ್ಷವೂ ನೂರಾರು ವಿದ್ಯಾರ್ಥಿಗಳು ಹೊಸ ಹೊಸ ಗ್ರಂಥವನ್ನು ಈ ಪರೀಕ್ಷೆಯ ಉತ್ಸಾಹದಿಂದ ಅಭ್ಯಸಿಸುತ್ತಿದ್ದರು. ಇದರಿಂದ ಶಾಸ್ತ್ರಾಧ್ಯಯನದ ಒಂದು ಉತ್ತಮ ಪರಂಪರೆಯ ಮುನ್ನಡೆಗೆ ಈ ಸಭೆ ಕಾರಣವಾಯಿತು. ಈ ಸಭೆಯಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥರೇ ವಿದ್ಯಾರ್ಥಿಗಳ ಪರೀಕ್ಷೆಯನ್ನು ನಡೆಸುತ್ತಿದ್ದರು. ಕೆಲವು ವರ್ಷಗಳ ನಂತರ ಶ್ರೀ ವಿಶ್ವೇಶತೀರ್ಥರೂ ವಿದ್ಯಾರ್ಥಿಗಳ ಪರೀಕ್ಷೆಗಳನ್ನು ನಡೆಸುತ್ತಿದ್ದರು.

ಈ ಪರೀಕ್ಷೆಗಳಲ್ಲಿ ಎಲ್ಲ ಶಾಸ್ತ್ರಗಳ ಗ್ರಂಥಗಳ ಪರೀಕ್ಷೆಗೂ ಅವಕಾಶವಿತ್ತು. ಯಾವ ಮತಸ್ಥರೂ ಪರೀಕ್ಷೆ ನೀಡಿ ಸಂಭಾವನೆಯನ್ನು ಪಡೆಯಬಹುದಿತ್ತು. ದ್ವೈತ ವಾಙ್ಮಯದಲ್ಲಿ ಉನ್ನತ ಗ್ರಂಥಗಳಾದ ಅನುವ್ಯಾಖ್ಯಾನ ನ್ಯಾಯಸುಧಾ, ವ್ಯಾಸತ್ರಯ, ದಶಪ್ರಕರಣ, ಸರ್ವಮೂಲಗ್ರಂಥಗಳು ಮೊದಲ್ಗೊಂಡು, ಪ್ರಾಥಮಿಕ ಗ್ರಂಥಗಳಾದ ಶ್ರೀಮಧ್ವವಿಜಯ, ಮಣಿಮಂಜರಿಗಳ ಪರೀಕ್ಷೆಗಳೂ ನಡೆಯುತ್ತಿದ್ದವು,ಋಗ್ವೇದಾದಿ ನಾಲ್ಕು ವೇದಗಳ, ಪವಮಾನಾದಿ ಸೂಕ್ತಗಳ, ವಾಯುಸ್ತುತ್ಯಾದಿ ಸ್ತೋತ್ರಗಳ, ಸಂಧ್ಯಾವಂದನೆಗಳ ಪರೀಕ್ಷೆಗಳೂ ಅಲ್ಲಿ ಹೊರತಾಗಿರಲಿಲ್ಲ.

ಐವತ್ತು ವರುಷಗಳ ಹಿಂದೆ ಚಿಕ್ಕ ಪರೀಕ್ಷೆಯನ್ನೀಡಿ ಸಂಭಾವನೆ ಪಡೆದ ಮಂದಿಯೂ ಇಂದಿನ ಶ್ರೇಷ್ಠ ವಿದ್ವಾಂಸರಯಾದಿಯಲ್ಲಿ ಸೇರಿರುವರು. ಕೆಲವರು ಸಂಭಾವನೆಗೋಸ್ಕರ ಚಿಕ್ಕ ಶ್ಲೋಕವನ್ನಾದರೂ ಪರೀಕ್ಷೆ ನೀಡಿ ಸಂಭಾವನೆ ಪಡೆದು ಧನ್ಯರಾದರೆ, ಮತ್ತೆ ಕೆಲವರು ಪರೀಕ್ಷೆಗೋಸ್ಕರವೇ ಬಂದು ಉತ್ತಮ ಪರೀಕ್ಷೆಯನ್ನೀಡಿ ಈ ಮಹಾಗುರುಗಳಿಂದ ಶಹಭಾಸ್ ಗಿರಿಯನ್ನು, ಸಂಭಾವನೆಯನ್ನು ಪಡೆದು ಧನ್ಯರಾದರು. ಒಟ್ಟಿನಲ್ಲಿ ಸಭೆಗೆ ಬಂದ ಯಾವ ವ್ಯಕ್ತಿಯೂ ಬರಿಗೈಯಲ್ಲಿ ಹಿಂತಿರುಗಲಿಲ್ಲ. ಹೀಗೆ ಶ್ರೀ ವಿದ್ಯಾಮಾನ್ಯ ತೀರ್ಥರ ಸಂಭಾವನೆಯ ಆಸೆಯಿಂದಾದರೂ ಶಾಸ್ತ್ರಪ್ರಪಂಚದೊಳಗೆ ಪ್ರವೇಶಿಸಿದ ಅಂದಿನ ಮಕ್ಕಳು ಇಂದಿನ ಒಳ್ಳೆಯ ವಿದ್ವಾಂಸರೆನಿಸಿದರು. ಈಗ 'ಆ ಗುರುಗಳ ಕರಗಳ ಸಂಭಾವನೆಯ ಆಕರ್ಷಣೆ ನಮ್ಮನ್ನು ಒಳ್ಳೆಯ ವಿದ್ಯಾಂವತರನ್ನಾಗಿಸಿತು. ಈಗಿನ ನಿರಂತರ ಸಂಭಾವನೆ-ಪ್ರಶಸ್ತಿಗಳ ಸುರಿಮಳೆಯ ಸುಖದ ಅನುಭವಕ್ಕೆ ಕಾರಣವಾಯಿತು.' ಎಂದು ಅವರೆಲ್ಲರೂ ಉದ್ಗರಿಸುವರು. ಶ್ರೀ ವಿದ್ಯಾಮಾನ್ಯ ತೀರ್ಥರ ಸಭೆಯಲ್ಲಿ ಸಂಭಾವನೆಯನ್ನು ಪಡೆಯದ ತ್ರಿಮತಸ್ಥ ಶ್ರೇಷ್ಠ ವಿದ್ವಾಂಸರಿಲ್ಲ - ವಿದ್ಯಾರ್ಥಿಗಳಿಲ್ಲ ಎನ್ನಬಹುದು. ಪರಮತದ ಗ್ರಂಥಗಳ ಪರೀಕ್ಷೆ ನೀಡಿ ಸಂಭಾವನೆಯನ್ನು ಪಡೆದ ಪರಮತೀಯ ವಿದ್ಯಾರ್ಥಿಗಳು ನೂರಾರು.

ಅದರಲ್ಲೊಂದು ಪುಟ್ಟ ಉದಾಹರಣೆ, ಸಭೆಯ ಮೂರನೆಯ ಅಧಿವೇಶನದಲ್ಲಿ ಶಂಕರಾಚಾರ್ಯ ರಚಿತ ಅಧ್ಯಾಸಭಾಷ್ಯದ ಪರೀಕ್ಷೆಯನ್ನು ನೀಡಿ ಉತ್ತಮ ಸಂಭಾವನೆಯನ್ನು ಪಡೆದ ಬಾರ್ಕೂರಿನ ನೀಲಕಂಠ ಶಾಸ್ತ್ರಿಗಳು.

ಇತ್ತೊಂದು ಶ್ರೀ ವಿದ್ಯಾಮಾನ್ಯ ತೀರ್ಥರಲ್ಲಿ ಮುಗಿಯಲಾರದ ಆಸೆ. ಅದು ಶ್ರೇಷ್ಠ ವಿದ್ಯಾರ್ಥಿಗಳಿಗೆ - ವಿದ್ವಾಂಸರಿಗೆ ಸಂಭಾವನೆ ನೀಡುವ ಆಸೆ. ಅವರಿಗೆ ನೀಡಿದಷ್ಟು ತೃಪ್ತಿಯಿಲ್ಲ. ಮತ್ತಷ್ಟು ನೀಡಬೇಕೆಂಬ ಆಸೆ. ಇಂತಹ ಆಸೆ ದೋಷವಲ್ಲವಲ್ಲ! ಅಪರೂಪದ ಇಂತಹವರನ್ನು ನೋಡಿಯೇ 'ದಾತಾ ಭವತಿ ವಾ ನವಾ' ಎಂದು ಸುಭಾಷಿತಕಾರರು ನುಡಿದಿರಬೇಕು. ಇಂತಹ ದಾತೃಗಳನ್ನು ನಾವು ಕಂಡೆವು ಎನ್ನುವುದೇ ನಮ್ಮ ಬದುಕಿನ ಸಾರ್ಥಕ್ಯ.

ಕೆಲವರಿಗೆ ಸಭೆಗಳಿಗೆ ಬರಲಾಗದಿದ್ದರೆ ಅವರವರ ಊರುಗಳಲ್ಲೇ ಪರೀಕ್ಷೆಗಳನ್ನು ನಡೆಸಿ ಸಂಭಾವನೆಯನ್ನು ನೀಡುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಈ ರೀತಿ ಧಾರಾಳಿ ಗುರುಗಳ ಬಳಿ ತರಬೇತಿ ಪಡೆದು ನಿಜವಾದ ವಿದ್ಯಾಪೋಷಕರಾಗಿ ಮೆರೆದವರು ಶ್ರೀ ವಿದ್ಯಾಮಾನ್ಯ ತೀರ್ಥರು.

## ಸ್ಪರ್ಧೆಗಳು - ಪಾರಿತೋಷಕಗಳು :-

ವಿದ್ಯಾರ್ಥಿಗಳ ಪ್ರತಿಭೆಯ ಉತ್ತೇಜನಕ್ಕಾಗಿ ಸಭೆಯಲ್ಲಿ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಅವುಗಳಲ್ಲಿ ಉಪನ್ಯಾಸ ಸ್ಪರ್ಧೆ, ಪ್ರಬಂಧ ಸ್ಪರ್ಧೆ ಮೊದಲಾದವುಗಳಿದ್ದವು. ಸ್ಪರ್ಧಾ ವಿಜೇತರಿಗೆ ಅನೇಕ ಪಾರಿತೋಷಕಗಳನ್ನೂ ನೀಡುತ್ತಿದ್ದರು. ಸರ್ವಮೂಲ ಗ್ರಂಥಗಳು, ನ್ಯಾಯಸುಧಾ ಭಾಗವತಾದಿ ಗ್ರಂಥಗಳ ಕುರಿತಾದ ಈ ಸ್ಪರ್ಧೆಗೆ ಅನುಗುಣವಾಗಿ ಪಾರಿತೋಷಕಗಳನ್ನು ನಿಯೋಜಿಸಲಾಗಿತ್ತು. 'ಶ್ರೀ ಆನಂದ ತೀರ್ಥ ಪಾರಿತೋಷಕ', 'ಶ್ರೀ ಜಯತೀರ್ಥ ಪಾರಿತೋಷಕ', 'ಶ್ರೀಸುಧೀಂದ್ರತೀರ್ಥ ಪಾರಿತೋಷಕ', 'ಶ್ರೀಮದ್ಭಾಗವತ ಪಾರಿತೋಷಕ', 'ತ್ರೈಕಾಲಿಕ ಸಂಧ್ಯಾಂವಂದನ ಪಾರಿತೋಷಕ' ಮೊದಲಾದ ಪಾರಿತೋಷಕಗಳಿದ್ದವು. ಆ ಸ್ಪರ್ಧೆಗಳಲ್ಲಿ ಭಾಗವಹಿಸಿ ಉತ್ತಮ ಪ್ರತಿಭೆಯನ್ನು ಪ್ರದರ್ಶಿಸಿ, ಸಾವಿರಾರು ರೂಗಳ ಪಾರಿತೋಷಕಗಳನ್ನು ಪಡೆದ ವಿದ್ಯಾರ್ಥಿಗಳು ಅನೇಕರು.

ಇತ್ತೀಚಿನ ಅಧಿವೇಶನಗಳಲ್ಲಿ ಕಿರಿಯರಿಗಾಗಿ ದ್ವಾದಶಸ್ತೋತ್ರಾದಿಗಳ ಸ್ಪರ್ಧೆಗಳನ್ನು ಮಹಿಳೆಯರಿಗಾಗಿ ದಾಸ ಸಾಹಿತ್ಯ ಸ್ಪರ್ಧೆಯನ್ನು ನಡೆಸುತ್ತಿದ್ದರು. ಬಹುಮಾನಗಳನ್ನು ನೀಡುತ್ತಿದ್ದರು.

ಇಂತಹ ಸ್ಪರ್ಧೆಗಳಿಂದ ಸಭೆಯ ಪ್ರಯೋಜನವನ್ನು ಎಲ್ಲರೂ ಪಡೆಯುವಂತಾಯಿತು. ಮಾಧ್ವಸಾಹಿತ್ಯದಲ್ಲಿ ಪ್ರವೇಶಿಸುವಂತಾಯಿತು. ತಿಳಿಯುವಂತಾಯಿತು.

## ಪ್ರಶಸ್ತಿ ಪ್ರದಾನ :-

ಶಾಸ್ತ್ರ ಸಾಗರದಲ್ಲಿ ತೇಲಾಡುವ ವಿದ್ವಾಂಸರನ್ನು ಪೋಷಿಸುವುದಕ್ಕಾಗಿ ಇನ್ನಷ್ಟು ಪ್ರೋತ್ಸಾಹಿಸುವುದಕ್ಕಾಗಿ ಅವರ ವಿದ್ವತ್ತನ್ನು ಗುರುತಿಸಿ ಬೇರೆ ಬೇರೆ ಪ್ರಶಸ್ತಿಗಳನ್ನು ನೀಡುತ್ತಿದ್ದುದು, ಗೌರವಿಸುತ್ತಿದ್ದುದು ಸಭೆಯ ಅಧಿವೇಶನಗಳಲ್ಲಿ ಒಂದು ವಿಶಿಷ್ಟ ಕಾರ್ಯಕ್ರಮವಾಗಿತ್ತು.

ಕೇವಲ ಮಾಧ್ವ ವಿದ್ವಾಂಸರು ಮಾತ್ರವಲ್ಲ. ಅದ್ವೈತ, ಹಾಗೂ ವಿಶಿಷ್ಟಾದ್ವೈತ ಮತಗಳ ವಿದ್ವಾಂಸರೂ ಅನೇಕರು

ಈ ಪ್ರಶಸ್ತಿಗಳನ್ನು ಪಡೆದಿರುವರು. ಹತ್ತಾರು ಸಾವಿರ ರೂಗಳ ಸಂಭಾವನೆಗಳನ್ನು ಪಡೆದಿರುವರು. ಪರವಾದಿ ವಿದ್ವಾಂಸರನ್ನು ಆಹ್ವಾನಿಸಿ ವಾಕ್ಯಾರ್ಥದಲ್ಲಿ ಅವರ ಮತಗಳ ಅಬದ್ಧತೆಯನ್ನು ಸಮರ್ಥಿಸಿ ಅವರನ್ನೇ ಸನ್ಮಾನಿಸುವ ಔದಾರ್ಯಪೂರ್ಣ ಸ್ವಭಾವ ಹಾಗೂ ಪಾಂಡಿತ್ಯ ಪ್ರೇಮ ಶ್ರೀ ವಿದ್ಯಾಮಾನ್ಯ ತೀರ್ಥರಲ್ಲಿತ್ತು. ಅದು ಅವರ ವಿದ್ಯಾ ಗುರುಗಳಿಂದ ಬಂದ ಬಳುವಳಿಯಾಗಿತ್ತು.

## ಚರ್ಚಾಗೋಷ್ಠಿ :-

ಈ ಸಭೆಯ ಮುಖ್ಯ ಆಕರ್ಷಣೆಯೆಂದರೆ ವಿದ್ಯೆ,-ವಿದ್ಯಾರ್ಥಿಗಳು, ವಿದ್ವಾಂಸರು - ಜಿಜ್ಞಾಸುಗಳು. ಅಂತೆಯೇ ಅವರವರಲ್ಲಿಯೇ ನಡೆಯುತ್ತಿದ್ದ ಚರ್ಚಾಗೋಷ್ಠಿ. ಪಂಡಿತರ ಜೊತೆಗೆ ಚರ್ಚೆಗಳಲ್ಲಿ ಸ್ವತಃ ಶ್ರೀ ವಿದ್ಯಾಮಾನ್ಯ ತೀರ್ಥರೇ ಭಾಗವಹಿಸುತ್ತಿದ್ದರು. ಜಗತ್ತನ್ನೇ ಮರೆಯುತ್ತಿದ್ದರು. 'ತನ್ನ ಕಿಂ ನೇತಿವಿದ್ವತ್ಸುಮೀಮಾಂಸಿತಂ' ಎಂದು ಶ್ರೀಮದಾಚಾರ್ಯರ ದ್ವಾದಶಸ್ತೋತ್ರದಲ್ಲಿರುವ ಒಂದು ವಾಕ್ಯ. 'ಭಗವಂತನ ಕುರಿತು ಪಂಡಿತರು ನಡೆಸುವ ಚಿಂತನ-ಮಂಥನಗಳು ಅವನಿಗತಿಪ್ರಿಯ.' ಎಂದು ಆ ವಾಕ್ಯದ ಅಭಿಪ್ರಾಯ. ಈ ಮಂತ್ರಾರ್ಥಕ್ಕೆ ಶ್ರೀ ವಿದ್ಯಾಮಾನ್ಯ ತೀರ್ಥರ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ಆ ಚರ್ಚಾಗೋಷ್ಠಿಗಳೇ ಸಾಕ್ಷಿ.

ಶ್ರೀ ವಿದ್ಯಾಮಾನ್ಯ ತೀರ್ಥರು ಸಭೆಯಲ್ಲಿ ವ್ಯಾಸಪೀಠವನ್ನಲಂಕರಿಸಿ ಆಸೀನರಾದರೆ ನೋಡುವ ಭಾವುಕ ಕಂಗಳಿಗೆ ಅದೇ ಒಂದು ಚೆಂದ. ಭ್ರಮೆ-ಜಾಡ್ಯ-ಸಂಶಯಾದಿಗಳು ಹಾವಳಿಗೊಳಗಾಗದ ಹಾಗೂ ತಾಪತ್ರಯಗಳನ್ನು ಪರಿಹರಿಸುವ ಶುದ್ಧಪ್ರಮಾಣರೆನಿಸಿದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರನ್ನು ಸ್ಮರಣೆಗೆ ತಂದುಕೊಡುತ್ತಿದ್ದ ಪರಮ ಪವಿತ್ರ ದೃಶ್ಯವದು.

ಸಭೆಯ ಅಧಿವೇಶನಗಳಿಗೆ ತ್ರಿಮತಸ್ಥ ವಿದ್ವಾಂಸರನ್ನು ಆಹ್ವಾನಿಸಲಾಗುತ್ತಿತ್ತು. ಅವರಿಂದ ದ್ವೈತಾದ್ವೈತ ಪ್ರಮೇಯಗಳ ಪ್ರಕಾಶಕ್ಕಾಗಿ ಸಭೆಯಲ್ಲಿ ಚರ್ಚಾಗೋಷ್ಠಿಗಳನ್ನು ಏರ್ಪಡಿಸಲಾಗುತ್ತಿತ್ತು. ಆಗೋಷ್ಠಿಗಳು ಸೌಹಾರ್ದಪೂರ್ಣವಾಗಿರುತ್ತಿದ್ದವು. ಅವುಗಳಲ್ಲಿ ಕೆಲವು ಉದಾಹರಣೆಗಳು.

ಬೆಂಗಳೂರಿನಲ್ಲಿ ಶ್ರೀವ್ಯಾಸರಾಜ ಮಠಾಧೀಶ ಶ್ರೀ ವಿದ್ಯಾಪ್ರಸನ್ನತೀರ್ಥರ ಅಧ್ಯಕ್ಷತೆಯಲ್ಲಿ ಜರುಗಿದ ಹದಿನೇಳನೆಯ ಅಧಿವೇಶನದಲ್ಲಿ ಆಸ್ಥಾನ ವಿದ್ವಾನ್ ಶ್ರೀ ಕೆ.ಪಿ. ಶಂಕರ ಶಾಸ್ತ್ರಿಗಳು, ವಿಶಿಷ್ಟಾದ್ವೈತ ವೇದಾಂತ ವಿದ್ವಾನ್ ಶ್ರೀಕೃಷ್ಣತಾತಾಚಾರ್ಯರು ಹಾಗೂ ರಾವ್ ಬಹಾದ್ದೂರ್ ಶ್ರೀ ಬಿ. ವೇಂಕಟೇಶಾಚಾರ್ಯರು ಸೇರಿಕೊಂಡು 'ತತ್ತ್ವಮಸಿ' ಎಂಬ ಶ್ರುತ್ಯರ್ಥದ ಕುರಿತು ವಿಮರ್ಶೆಯನ್ನು ನಡೆಸಿದ್ದರು.

ಉಡುಪಿಯಲ್ಲಿ ನಡೆದ ಇಪ್ಪತ್ತನಾಲ್ಕನೆಯ ಅಧಿವೇಶನದಲ್ಲಿ ಶ್ರೇಷ್ಠವೈಯ್ಯಾಕರಣಿ ಶ್ರೀಶ್ರೀನಿವಾಸ ವರದಾಚಾರ್ಯ, ಪೂರ್ವಮೀಮಾಂಸಾ ಶಾಸ್ತ್ರಸಂಪನ್ನರಾದ ಶ್ರೀ ಎಸ್, ವರದಾಚಾರ್ಯ ಇತ್ಯಾದಿಯಾಗಿ ಹನ್ನೆರಡು ಮಂದಿ ವಿಶಿಷ್ಟಾದ್ವೈತ ವಿದ್ವಾಂಸರು, ಮೈಸೂರಿನ ಶ್ರೇಷ್ಠ ಅದ್ವೈತ ವಿದ್ವಾಂಸ ರಾದ ಶ್ರೀರಾಮಚಂದ್ರ ಶಾಸ್ತ್ರಿಸೋಮಯಾಜಿಗಳು ಹಾಗೂ ಅನೇಕ ಅದ್ವೈತ ವಿದ್ವಾಂಸರು, ದ್ವೈತ ಪಂಥಿಗಳಲ್ಲಿ ಅಗ್ರಗಣ್ಯ ವಿದ್ವಾಂಸರಾದ ಶ್ರೀ

ವಾಲಕೊಂಡ ನರಸಿಂಹಾಚಾರ್ಯ, ಶ್ರೀಪಾಂಡುರಂಗಿ ಗುರುರಾಜ ಆಚಾರ್ಯ, ಶ್ರೀ ಬನ್ನಂಜೆ ಅನಂತ ಕೃಷ್ಣಾಚಾರ್ಯ, ಶ್ರೀನಗ್ರಿಹಯಗ್ರೀವಾಚಾರ್ಯ, ಶ್ರೀ ಕಾಪು ಹಯಗ್ರೀವಾಚಾರ್ಯ, ಶ್ರೀ ವಾಡಿಗಾರು ಕೇಶವಾಚಾರ್ಯ, ಶ್ರೀ ಮಾಗಡಿ ರಂಗನಾಥಾಚಾರ್ಯರೇ ಮೊದಲಾದವರು ಜೊತೆಗೂಡಿ 'ಮತತ್ರಯ ಸಿದ್ಧಾಂತಗಳ ವೈಶಿಷ್ಟ್ಯ' ಕುರಿತು ವಾಕ್ಯಾರ್ಥವನ್ನು ನಡೆಸಿದರು.

ಈ ಅಧಿವೇಶನದ ಇನ್ನೊಂದು ವಿಶೇಷವೆಂದರೆ ಶ್ರೀ ವಿದ್ಯಾಮಾನ್ಯ ತೀರ್ಥರು ಶ್ರೀರಾಮಚಂದ್ರ ಶಾಸ್ತ್ರಿ ಸೋಮಯಾಜಿಗಳೊಂದಿಗೆ 'ಮೋಕ್ಷಸಾಧನ'ದ ಕುರಿತು ವಿಮರ್ಶೆಯನ್ನು ನಡೆಸಿದರು.

ಸಭೆಯ ಐದನೆಯ ಅಧಿವೇಶನದಲ್ಲಿ ನಾಸ್ತಿಕ್ಯವಾದ ಹಾಗೂ ಆಸ್ತಿಕ್ಯವಾದಗಳ ಕುರಿತು ಚರ್ಚಾಗೋಷ್ಠಿ ನಡೆದಿತ್ತು. ನಾಸ್ತಿಕ್ಯ ವಾದವನ್ನು ಶ್ರೀ ಕೆ.ಎಲ್. ಕಾರಂತರು (ಶಿವರಾಮಕಾರಂತ- ಸೋದರರು) ಮಂಡಿಸಿದರೆ ಮೈಸೂರಿನ ಶ್ರೀ ಎಚ್. ಸುಬ್ರಾಯರು ಆಸ್ತಿಕ್ಯವಾದವನ್ನು ಸಮರ್ಥಿಸಿದ್ದರು. ಆ ಸಭೆಯಲ್ಲಿ ಉಪಸ್ಥಿತರಿದ್ದ ಶ್ರೀ ಶೀರೂರು ಮಠದ ಶ್ರೀ ಲಕ್ಷ್ಮೀಂದ್ರ ತೀರ್ಥರೂ ಆಸ್ತಿಕ್ಯವಾದವನ್ನು ಸಮರ್ಥಿಸಿದರು.

1998ರಲ್ಲಿ ಘಟಿಕಾಚಲ ಕ್ಷೇತ್ರದಲ್ಲಿ ನಡೆದ 54ನೆಯ ಅಧಿವೇಶನದಲ್ಲಿ ನೂರಾರು ವಿದ್ವಾಂಸರು ಬ್ರಹ್ಮಸೂತ್ರದ ಮೊದಲನೆಯ ಅಧ್ಯಾಯದ ಮೊದಲ ಪಾದದ ಒಂದೊಂದು ಅಧಿಕರಣದ ಕುರಿತು ಅನುವಾದವನ್ನು ನೀಡಿದರು. ಆ ಅನುವಾದದಲ್ಲಿ ಪರಮತೀಯ ಅರ್ಥದ ಪರಿಶೀಲನೆ ಹಾಗೂ ಸೈದ್ಧಾಂತಿಕ ಅರ್ಥವಿವರಣೆಗಳು ಅಡಕವಾಗಿದ್ದವು. ಈ ಸಂದರ್ಭದಲ್ಲಿ ಕಾಶಿಯಿಂದ ಆಗಮಿಸಿದ ಶ್ರೀಶ್ರೀನಿವಾಸ ತಾತಾಚಾರ್ಯರೊಂದಿಗೆ 'ಭ್ರಮೆ'ಯ ವಿಷಯದಲ್ಲಿ ಚರ್ಚಾಗೋಷ್ಠಿಯು ನಡೆಯಿತು. ಗೋಷ್ಠಿಯ ನಂತರ ಶ್ರೀ ವಿದ್ಯಾಮಾನ್ಯ ತೀರ್ಥರು ತಾತಾಚಾರ್ಯರನ್ನು ಹತ್ತಾರು ಸಾವಿರ ರೂಗಳ ಸಂಭಾವನೆಯೊಂದಿಗೆ ಸನ್ಮಾನಿಸಿದರು.

1999ರ ಅವಧಿಯಲ್ಲಿ ಪಾಜಕ ಕ್ಷೇತ್ರದಲ್ಲಿ ಮಧ್ವನವರಾತ್ರೋತ್ಸವನ್ನಾಚರಿಸಿದರು. ಆಗಲೇ ಸಭೆಯ ಅಧಿವೇಶವನವೂ ಸೇರಿತ್ತು. ಅದು 56ನೆಯದಾಗಿತ್ತು. ವೈಶಿಷ್ಟ್ಯಪೂರ್ಣವಾಗಿತ್ತು. ಶ್ರೀಮದಾಚಾರ್ಯರ ಅವತಾರ ಕ್ಷೇತ್ರದಲ್ಲಿಯೇ ಅವರ ಸಿದ್ಧಾಂತದ ಸಮರ್ಥನೆ ನಡೆಯುತ್ತಿತ್ತು. ಬ್ರಹ್ಮಸೂತ್ರದ ಆರಂಭಣಾಧಿಕರಣಕ್ಕೆ ಯುಕ್ತವಾದ ವ್ಯಾಖ್ಯಾನವಾದುದು ಯಾವುದು? ಎಂದು ಸಮರ್ಥನೆಯ ಪೂರ್ವದ ಜಿಜ್ಞಾಸೆಯಾಗಿತ್ತು. ಜಿಜ್ಞಾಸೆಗೆ ಉತ್ತರವಾಗಿ ಅದ್ವೈತ ಹಾಗೂ ವಿಶಿಷ್ಟಾದ್ವೈತಗಳ ಭಾಷ್ಯಗಳು ಸಮಂಜಸವೆಂದು ಆಯಾಮತಗಳ ವಿದ್ವಾಂಸರಿಂದ ವಾದ ಬಂದಿತು. ಆದರೆ ಅದರಲ್ಲಿ ಶುದ್ಧತೆ ಇಲ್ಲದಾಗಿತ್ತು. ಶುದ್ಧತೆ ಪೂರ್ಣವಾಗಿ ಶ್ರೀಮದಾಚಾರ್ಯರ ಭಾಷ್ಯದಲ್ಲಿದ್ದುದು ಕೇಳಿ ಬಂತು. ಅದು ನಿರ್ಣಯಾತ್ಮಕವಾಗಿತ್ತು. ಆ ನಿರ್ಣಯವನ್ನು ಪಂಡಿತ ಮಂಡಲಿ ಒಪ್ಪಿತು. ಆಮಂಡಲಿಯ ಘನಾಧ್ಯಕ್ಷತೆ ಶ್ರೀ ವಿದ್ಯಾಮಾನ್ಯ ತೀರ್ಥರದಾಗಿತ್ತು. ಇವರೊಂದಿಗೆ ಚರ್ಚೆಯಲ್ಲಿ ಶ್ರೀ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥರು ಹಾಗೂ ಶ್ರೀಮದುತ್ತರಾದಿ ಮಠದ ಶ್ರೀ ಶ್ರೀ ಸತ್ಯಾತ್ಮತೀರ್ಥರ ವಿಶೇಷ ಸಹಮತವೂ ಸಮರ್ಥನೆಯೂ ಸೇರಿತ್ತು. ಗೋಷ್ಠಿಯು ವಿಶಿಷ್ಟಾದ್ವೈತವಿದ್ವಾಂಸರುಗಳೆನಿಸಿದ, ಶ್ರೀರಾಮಾನುಜ ತಾತಾಚಾರ್ಯ, ಶ್ರೀ

ದೇವನಾಥಾಚಾರ್ಯ, ಶ್ರೀ ಮಣಿದ್ರಾವಿಡ, ಶ್ರೀ ಗೋಪಾಲಕೃಷ್ಣ ಶಾಸ್ತ್ರಿ ಶ್ರೀ ಗೋಡಾ ವೇಂಕಟೇಶ್ವರ ಶಾಸ್ತ್ರಿ ಶ್ರೀ ಡಿ. ಪ್ರಹ್ಲಾದಾಚಾರ್ಯ, ಶ್ರೀ ಹಯವದನ ಪುರಾಣಿಕ, ಶ್ರೀ ಐ. ಹರಿದಾಸ ಭಟ್ ಶ್ರೀ ಕೊರ್ಲಹಳ್ಳಿ ನರಸಿಂಹಾಚಾರ್ಯರೇ ಮೊದಲಾದವನ್ನು ಒಳಗೊಂಡಿತ್ತು.

2000 ಇಸ್ವಿಯ ಫೆಬ್ರುವರಿಯ 13 ಹಾಗೂ 14 ರಲ್ಲಿನ ಸಭೆಯ 57ನೆಯ ಅಧಿವೇಶನ ಉಡುಪಿ ಶ್ರೀ ಕೃಷ್ಣನ ಸನ್ನಿಧಿಯಲ್ಲಿ ನಡೆಯಿತು.ಅದು ಶ್ರೀ ಪೇಜಾವರ ಶ್ರೀಪಾದರ ಪರ್ಯಾಯದ ಅವಧಿ. ಆ ಅಧಿವೇಶನದ ಅಂಗವಾಗಿ ಬ್ರಹ್ಮಸೂತ್ರದ ಇಂದ್ರಿಯಾಧಿಕರಣಧ ಶಾಂಕರಭಾಷ್ಯದ ಕುರಿತು ಚರ್ಚೆ ನಡೆದಿತ್ತು. ಆ ಅಧಿಕರಣದ ವಿಷಯದಲ್ಲಿ ಆ ಭಾಷ್ಯದ ಅಸ್ವಾರಸ್ಯವು ವಿಷಯವಾಗಿತ್ತು. ಅದನ್ನು 'ಶಾಂಕರ ಭಾಷ್ಯ ವಿಮರ್ಶಃ' ಎಂಬ ಕಿರು ಹೊತ್ತಿಗೆಯಲ್ಲಿ ಪ್ರಕಟಿಸಲಾಗಿತ್ತು. ಈ ಚರ್ಚೆಗಾಗಿ ಕಾಶಿಯ ಶ್ರೀ ಮಣಿದ್ರಾವಿಡ ಹಾಗೂ ಮದ್ರಾಸಿನ ಶ್ರೀ ಗೋಪಾಲಕೃಷ್ಣಶಾಸ್ತ್ರಿಎಂಬ ಅದ್ವೈತ ವಿದ್ವಾಂಸರು ಆಗಮಿಸಿದ್ದರು.

ಪ್ರಾಯಃ ಈ ಅಧಿವೇಶನದ ಈ ಚರ್ಚೆಯೇ ಶ್ರೀ ವಿದ್ಯಾಮಾನ್ಯ ತೀರ್ಥರ ಅಂತಿಮ ಚರ್ಚೆಯಾಯಿತು. ಶ್ರೀ ಕೃಷ್ಣನ ಸನ್ನಿಧಿಯಲ್ಲೇ ನಡೆದು ಮಧ್ವಾಂತರ್ಗತನಾದ ಅವನಡಿಗಳಲ್ಲಿ ಅರ್ಪಿತವಾಯಿತು.

ಸಭೆಯ ಚರ್ಚಾಗೋಷ್ಠಿಗಳಲ್ಲಿ ಕೆಲವು ವಿಶೇಷ ಆಕರ್ಷಣೆ:- ದ್ವೈತಾದ್ವೈತ ವಿಶಿಷ್ಟಾದ್ವೈತ ವಿದ್ವಾಂಸರು ಪರಸ್ಪರ ವಾದಗಳನ್ನು ನಡೆಸುವುದನ್ನು ನಾವು ಸಾಮಾನ್ಯ ವಾಗಿ ಕಾಣುತ್ತಿದ್ದೆವು. ಆದರೆ ದ್ವೈತಿಗಳೇ ಅದ್ವೈತವನ್ನು ವಿಶಿಷ್ಟಾದ್ವೈತವನ್ನು ಮಂಡಿಸಿದಾಗ, ದ್ವೈತಿಗಳೇ ಅದರ ಖಂಡನೆಯನ್ನು ಮಾಡಿರುವುದನ್ನು ಪ್ರಾಯಃ ನಾವು ಕಾಣುವುದಿಲ್ಲ, ಕಂಡಿಲ್ಲ. ಆದರೆ ಅಂತಹ ಸೋಜಿಗದ ಸಂಗತಿಯೊಂದು ಮೂವತ್ತೊಂದು ವರುಷಗಳ ಹಿಂದೆ ಮುಗುಟಖಾನ ಹುಬ್ಬಳ್ಳಿಯಲ್ಲಿ ನಡೆದ ಇಪ್ಪತ್ತೊಂದನೆಯ ಅಧಿವೇಶನದಲ್ಲಿ ನಡೆಯಿತು. ಶ್ರೀ ಸತ್ಯಧ್ಯಾನ ತೀರ್ಥರ ಬಳಿ ಅದ್ವೈತ ಗ್ರಂಥಗಳನ್ನು ಚೆನ್ನಾಗಿ ಅಧ್ಯಯನಗೈದು ಅದರ ಅಸಾರತೆಯನ್ನು ಅರಿತ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರೇ ಅದ್ವೈತವನ್ನು ಅದ್ಭುತವಾಗಿ ಪ್ರತಿಪಾದಿಸಿದರು. ಅದಕ್ಕುತ್ತರವಾಗಿ ಅವರ ನೆಚ್ಚಿನ ಶಿಷ್ಯರಾದ ಶ್ರೀ ವಿಶ್ವೇಶತೀರ್ಥರು ದ್ವೈತವನ್ನು ಬಹು ಚೆನ್ನಾಗಿ ಸಮರ್ಥಿಸಿದರು. ಈ ಸಂದರ್ಭದಲ್ಲಿ ಗುರುಗಳನ್ನು ನಿರುತ್ತರರನ್ನಾಗಿಸಿದರು. ಗುರುಗಳನ್ನು ಆನಂದದಲ್ಲಿ ಮುಳುಗಿಸಿದರು. ಶ್ರೀ ವಿದ್ಯಾಮಾನ್ಯ ತೀರ್ಥರು ಶಿಷ್ಯರ ಕೀರ್ತಿಗಾಗಿ ಜಯವನ್ನು ಘೋಷಿಸಿದರು.

ಹೀಗೆ ಮಾಧ್ವಯತಿ ಗುರು-ಶಿಷ್ಯರೇ ದ್ವೈತಾದ್ವೈತ ಚರ್ಚೆಯನ್ನು ನಡೆಸಿ ಆಚಾರ್ಯರ ಸಿದ್ಧಾಂತ ವೈಶಿಷ್ಟ್ಯವನ್ನು ಸಮಾಜಕ್ಕೆ ಅರುಹಿದರು. ಆ ಅಧಿವೇಶನದಲ್ಲಿ ಶ್ರೀ ಭೀಮನಕಟ್ಟೆ ಮಠದ ಶ್ರೀ ರಘುತಿಲಕ ತೀರ್ಥರು ಅಧ್ಯಕ್ಷರಾಗಿದ್ದರು.

ಅಂತಹದೇ ಇನ್ನೊಂದು ವಿಶಿಷ್ಟ ಸನ್ನಿವೇಶ 1985-86ರ ಅವಧಿಯಲ್ಲಿ ಉಡುಪಿಯಲ್ಲಿ ನಡೆಯಿತು. ಶ್ರೀವಿದ್ಯಾಮಾನ್ಯ ತೀರ್ಥರ ಪಡಿಯಚ್ಚಿನಂತಿರುವ ಮೂರು ತೇಜೋಮೂರ್ತಿಗಳು ನಡೆಸಿದ ಚರ್ಚೆ. ಅವರು ಶ್ರೀ ಅದಮಾರು ಮಠದ ಶ್ರೀ ವಿಶ್ವಪ್ರಿಯ ತೀರ್ಥರು. ಶ್ರೀ ಪೇಜಾವರ ಮಠದ ಶ್ರೀ ವಿಶ್ವವಿಜಯ ತೀರ್ಥರು,

ಶ್ರೀ ಪಲಿಮಾರು ಮಠದ ಶ್ರೀವಿದ್ಯಾಧೀಶ ತೀರ್ಥರು. ಇವರಲ್ಲಿ ಶ್ರೀವಿಶ್ವವಿಜಯತೀರ್ಥರು ಸಯುಕ್ತಿಕವಾಗಿ 'ನಾಸ್ತಿಕ್ಯ'ವಾದವನ್ನು ಪ್ರತಿಪಾದಿಸಿದರೆ, ಅದೇ ಶೈಲಿಯಲ್ಲಿಯೇ ಉತ್ತರವನ್ನು ನೀಡಿ 'ಆಸ್ತಿಕ್ಯ' ವಾದವನ್ನು ಸಮರ್ಥಿಸಿದವರು ಶ್ರೀ ವಿಶ್ವ ಪ್ರಿಯ ತೀರ್ಥರು ಹಾಗೂ ಶ್ರೀ ವಿದ್ಯಾಧೀಶ ತೀರ್ಥರು.

ಈ ರೀತಿಯ ಚರ್ಚೆಗಳಿಂದ ಸಾಮಾನ್ಯ ಮಾನವನ ಮನಸ್ಸಿನಲ್ಲಿ ಮೂಡುವ ಧಾರ್ಮಿಕ ಪ್ರಶ್ನೆ-ಸಂಶಯಗಳಿಗೆ ಪರಿಹಾರವು ದೊರಕಿ ಧರ್ಮಾಚರಣೆಯಲ್ಲಿ ಆಸಕ್ತಿ ಮೂಡುವಂತಾಗುತ್ತಿತ್ತು. ಇಂತಹ ಚರ್ಚೆಗಳ ಪ್ರೇರಣೆ, ಗುರುಗಳಾದ ಶ್ರೀ ವಿದ್ಯಾಮಾನ್ಯ ತೀರ್ಥರದು. ಅವರ ಅಧ್ಯಕ್ಷತೆಯಲ್ಲಿ ಚರ್ಚೆ ನಡೆದಿತ್ತು.

ಅದೇ ರೀತಿ 48ನೆಯ ಅಧಿವೇಶನವು ಉಡುಪಿಯ ಅನಂತೇಶ್ವರನ ಸನ್ನಿಧಿಯಲ್ಲಿ ನಡೆದಿತ್ತು. ಆ ಸಂದರ್ಭದಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳಿಂದ ಚರ್ಚಾಗೋಷ್ಠಿಯನ್ನು ಮಾಡಿಸಿದರು. ಆ ಚರ್ಚೆಯ ವಿಷಯ ಗೀತೆಯ 'ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ' ಎಂಬಿತ್ಯಾದಿ ಶ್ಲೋಕಗಳಿಂದ ಅದ್ವೈತ ಖಂಡನೆಯಾಗಿತ್ತು. ಈ ಖಂಡನೆಯ ಆಕ್ಷೇಪಕರ್ತೃಗಳಾಗಿ ಕೆಲವು ವಿದ್ಯಾರ್ಥಿಗಳು. ಖಂಡನೆಯ ಮಂಡನಕಾರರಾಗಿ ಕೆಲವು ವಿದ್ಯಾರ್ಥಿಗಳು.

ಹೀಗೆ ಸಮಾಜಕ್ಕೆ ಅದ್ವೈತದ ಅಸಂಬದ್ಧತೆಯನ್ನು ಗೀತೆಯ ಆಧಾರದಲ್ಲಿ ನಿರೂಪಿಸಿ ತಿಳಿಸುವುದರ ಜೊತೆಯಲ್ಲಿ. ವಿದ್ಯಾರ್ಥಿಗಳಿಗೆ ಪರವಾದಿಖಂಡನಾದಿ ಕಾರ್ಯಗಳಲ್ಲಿ ಆಸಕ್ತಿ ಹಾಗೂ ಪ್ರವೃತ್ತಿಯನ್ನುಂಟು ಮಾಡುವುದೂ ಈ ಚರ್ಚೆಯ ಹಿನ್ನೆಲೆಯಾಗಿತ್ತು. ಅದು ಶ್ರೀ ವಿದ್ಯಾಮಾನ್ಯ ತೀರ್ಥರ ಮಾರ್ಗದರ್ಶನದಲ್ಲಿ ಮೂಡಿ ಬಂದಿತ್ತು.

**ಪ್ರವಚನಗಳು:-** ಸಭೆಯ ಎಲ್ಲ ಅಧಿವೇಶನಗಳಲ್ಲಿಯೂ ಜರುಗಿದ ಮತ್ತೊಂದು ವಿಶಿಷ್ಟ ಕಾರ್ಯಕ್ರಮ ಶ್ರೀಪಾದರ ಪ್ರವಚನಗಳು ಹಾಗೂ ವಿದ್ವಾಂಸರ ಉಪನ್ಯಾಸಗಳು. ತತ್ವವನ್ನು ತಿಳಿಯಲಿಚ್ಛಿಸುವ ಸಾಮಾನ್ಯ ಭಕ್ತನಿಗೂ ತಿಳಿಯುವ ರೀತಿಯಲ್ಲಿ ಬ್ರಹ್ಮಸೂತ್ರ, ಗೀತೆ, ಗಾಯತ್ರೀ ಮುಂತಾದ ಗ್ರಂಥಗಳ ಕುರಿತು ಹಾಗೂ ಪರಮತ ಸಹಿಷ್ಣುತೆ ಮೊದಲಾದ ಸಾಮಾನ್ಯ ವಿಷಯಗಳ ಕುರಿತೂ ಉತ್ತಮ ಉಪನ್ಯಾಸಗಳು ನಡೆಯುತ್ತಿದ್ದವು. ಶ್ರೀಪಾದರ ಅನುಗ್ರಹ ಸಂದೇಶಗಳು ವ್ಯಕ್ತವಾಗುತ್ತಿದ್ದವು. ಅವುಗಳನ್ನು ಪರವೂರ ಭಕ್ತರೂ ತಿಳಿಯುವುದಕ್ಕಾಗಿ, ಆ ವಿಷಯಗಳನ್ನು ಕಿರುಹೊತ್ತಿಗೆಯಲ್ಲಿ ಪ್ರಕಟಿಸಿ ಅವರಿಗೆಲ್ಲ ತಲುಪಿಸಲಾಗುತ್ತಿತ್ತು. ಆ ಹೊತ್ತಿಗೆಯಲ್ಲಿ ಅಧಿವೇಶನದ ಎಲ್ಲ ವರದಿಗಳೂ ಸೇರಿರುತ್ತಿದ್ದವು.

ಇತ್ತೀಚಿನ ಕೆಲವು ಅಧಿವೇಶನಗಳಲ್ಲಿ ರಾಮಾಯಣ ಮಹಾಭಾರತ ತಾತ್ಪರ್ಯ ನಿರ್ಣಯ, ಸುಮಧ್ವ ವಿಜಯ, ಹರಿಕಥಾಮೃತಸಾರ ಮುಂತಾದ ಗ್ರಂಥಗಳ ಬಗ್ಗೆ ವಿಚಾರ ಸಂಕಿರಣಗಳನ್ನು ಏರ್ಪಡಿಸಲಾಗುತ್ತಿತ್ತು.

ಅಂತೆಯೇ ಪುರೋಹಿತರ ಸಮ್ಮೇಳನವನ್ನು ನಡೆಸಿ ಉಪನಯನ, ಶ್ರಾದ್ಧ ಮೊದಲಾದ ಪ್ರಮೇಯಗಳ ಕುರಿತು ಪುರೋಹಿತರೊಂದಿಗೆ ವಿಮರ್ಶೆಯನ್ನು ನಡೆಸಲಾಗುತ್ತಿತ್ತು.

**ಗ್ರಂಥದಾನ:-** ಅಧ್ಯಯನ ಶೀಲ ವಿದ್ಯಾರ್ಥಿಗಳ ಪ್ರೋತ್ಸಾಹಕ್ಕಾಗಿ ರೂಪಿತವಾದ ಒಂದು ಯೋಜನೆ ಗ್ರಂಥದಾನ. ಪ್ರತಿವರುಷವೂ ಓರ್ವ ವಿದ್ಯಾರ್ಥಿಗೆ ಹಾಗೂ ವಿದ್ವಾಂಸರಿಗೆ ದಶಪ್ರಕರಣ ಮುಂತಾದ

ಗ್ರಂಥಗಳ ದಾನವನ್ನು ಸಭೆಯವತಿಯಿಂದ ಮಾಡಲಾಗುತ್ತಿತ್ತು. ಈ ದಾನಕ್ಕೆ ಆರ್ಥಿಕ ನೆರವನ್ನು ನೀಡಿದ ದಾನಿಗಳು ಶ್ರೀಯುತ ಸಿ.ಆರ್. ಗುರುರಾಜರಾವ್.

**ಪಾಠಗಳ ವ್ಯವಸ್ಥೆ :-** ಪಾಠ-ಪ್ರವಚನಗಳು ನಿರಂತರ ವಾಗಿರಲಿ ಎಂಬ ಉದ್ದೇಶದಿಂದ 'ಮಾಧ್ವರಾದ್ಧಾಂತ ಸಂವರ್ಧಕ' ಸಭೆಯು ಅನೇಕ ಸ್ಥಳಗಳಲ್ಲಿ ಪಾಠದ ವ್ಯವಸ್ಥೆಯನ್ನು ಮಾಡಿತ್ತು. ಬಾರ್ಕೂರಿನ ಭಂಡಾರಕೇರಿ ಮಠದಲ್ಲಿ, ಉಡುಪಿಯ ಭಂಡಾರಕೇರಿ ಮಠದಲ್ಲಿ ವಿದ್ಯಾರ್ಥಿಗಳನ್ನಿಟ್ಟು ಅನ್ನ ವಸ್ತ್ರಾದಿಗಳನ್ನು ಕೊಟ್ಟು ಶಾಸ್ತ್ರಪಾಠಗಳನ್ನು ಮಾಡಿಸುತ್ತಿದ್ದ ಮಹಾನ್ ವ್ಯಕ್ತಿ ಶ್ರೀ ವಿದ್ಯಾಮಾನ್ಯ ತೀರ್ಥರು. ಕೊಯಂಬತ್ತೂರು, ಧಾರವಾಡ ಮೊದಲಾದ ಕಡೆಗಳಲ್ಲಿ ತಮ್ಮ ಪಂಡಿತ ಶಿಷ್ಯರ ಮೂಲಕ ನ್ಯಾಯಸುಧಾದಿ ಪ್ರವಚನಗಳನ್ನು ಮಾಡಿಸುತ್ತಿದ್ದರು. ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯ ನ್ಯಾಯ-ವೇದಾಂತ ವರ್ಗದ ವಿದ್ಯಾರ್ಥಿಗಳಿಗೆ ಮಾಸಿಕ ವೇತನವನ್ನು ನೀಡುತ್ತಿದ್ದರು.

**ಗ್ರಂಥ ಪ್ರಕಾಶನ :-** ಚರ್ಚೆ, ಉಪನ್ಯಾಸಗಳಲ್ಲದೆ, ಮಾಧ್ವ ತತ್ವವು ಪ್ರಸಾರವಾಗುವುದಕ್ಕಾಗಿ ಶ್ರೀಪಾದರು ಕೈಗೊಂಡ ಇನ್ನೊಂದು ಶಾಶ್ವತ ಸಫಲ ಮಾರ್ಗ ಗ್ರಂಥ ಪ್ರಕಾಶನ.

ಶ್ರೀಪಾದರೇ ಸ್ವತಃ ಬರೆದಿರುವ 'ದ್ವೈತಸ್ಯ ಅಪೂರ್ವತಾ' ಗಾಯತ್ರೀ ಗಾಂಭೀರ್ಯ, ತತ್ವಸಂಖ್ಯಾನ, ತತ್ವ ವಿವೇಕ, ಉಪಾಧಿ ಖಂಡನ, ಮಾಯಾವಾದ ಖಂಡನ ಮೊದಲಾದ ಗ್ರಂಥಗಳ ಕನ್ನಡಾನುವಾದದ ಪುಸ್ತಕಗಳು ಸಭೆಯ ವತಿಯಿಂದ ಪ್ರಕಟಗೊಂಡವು. ವಿಶೇಷವಾಗಿ ಮೂರು ಸಾವಿರ ಪುಟಗಳಿಗೂ ಅಧಿಕವಾದ ಬೃಹದ್ಗ್ರಂಥಗಳಾದ ಶ್ರೀಮದಾಚಾರ್ಯರ ದಶ ಪ್ರಕರಣಗಳನ್ನು, ಶ್ರೀಮಟ್ಟೀಕಾಕೃತ್ಪಾದರ ಟೀಕೆ ಹಾಗೂ ಅನೇಕ ವ್ಯಾಖ್ಯಾನಗಳೊಂದಿಗೆ ಪ್ರಕಟಿಸಿದ ಮಾಧ್ವ ಸಮಾಜದ ಮಹದುಪಕಾರಿಗಳು ಶ್ರೀ ವಿದ್ಯಾಮಾನ್ಯ ತೀರ್ಥರು. ಈ ಉಪಕಾರವನ್ನು ಸಮಾಜವು ಎಂದಿಗೂ ಮರೆಯುವಂತಿಲ್ಲ.

ಇದಲ್ಲದೆ ನಾಡಿನ ಅನೇಕ ವಿದ್ವಾಂಸರು ಪ್ರಕಟಿಸಿದ ಉತ್ತಮ ಪುಸ್ತಕ ಪ್ರಕಾಶನಗಳಿಗೆ ಸಭೆಯವತಿಯಿಂದ ಆರ್ಥಿಕ ನೆರವನ್ನು ನೀಡಲಾಗುತ್ತಿತ್ತು.

**ಸಭೆಯ ಸುವರ್ಣಮಹೋತ್ಸವ :-** ದೇಶಾದ್ಯಂತ ವ್ಯಾಪಕವಾಗಿ ಯಶಸ್ವಿ ಅಧಿವೇಶನಗಳನ್ನು ಹಾಗೂ ಸಾರ್ಥಕ ಕಾರ್ಯಕ್ರಮಗಳನ್ನು ನಡೆಸಿದ ಶ್ರೀಮನ್ಮಾಧ್ವ ರಾದ್ಧಾಂತ ಸಂವರ್ಧಕ ಸಭೆಯು ಐವತ್ತು ವಸಂತಗಳನ್ನು ಕಂಡ ಸಂಭ್ರಮಕ್ಕಾಗಿ ಅದರ ಸುವರ್ಣ ಮಹೋತ್ಸವವನ್ನು ಆಚರಿಸಿದ ಸಂಸ್ಥಾಪಕರು ಶ್ರೀ ವಿದ್ಯಾಮಾನ್ಯ ತೀರ್ಥರು. ಪ್ರಾಯಃ ಒಬ್ಬನೇ ವ್ಯಕ್ತಿಯು, ಸಂಸ್ಥೆಯ ಹುಟ್ಟಿಗೆ ಕಾರಣನಾಗಿ, ಅದನ್ನು ಚೆನ್ನಾಗಿ ಪೋಷಿಸಿ, ಬೆಳೆಯಿಸಿ, ಐವತ್ತರ ಸುವರ್ಣ ಮಹೋತ್ಸವವನ್ನು ಆಚರಿಸುವುದು ಬಹಳ ಅಪರೂಪ. ಈ ಅಪರೂಪದ ಸಂಗತಿಗೆ ಉದಾಹರಣೆ ಈ ಸಭೆಯ ಸುವರ್ಣ ಮಹೋತ್ಸವ.

ಈ ಸುವರ್ಣ ಮಹೋತ್ಸವವು ನಡೆದ ಸ್ಥಳ, ಉಡುಪಿ ಶ್ರೀಕೃಷ್ಣ ದೇವಾಲಯ. (2-3-1993) ಶ್ರೀ ಪುತ್ತಿಗೆ ಮಠದ ಶ್ರೀ ಸುಗುಣೇಂದ್ರ ತೀರ್ಥರ ದ್ವಿತೀಯ ಪರ್ಯಾಯ. ಸಮಾರಂಭದಲ್ಲಿ ಜರುಗಿದ ಕಾರ್ಯ ಕ್ರಮಗಳೆಲ್ಲವೂ ವೈವಿಧ್ಯಮಯ. ಆ ಸುವರ್ಣ ಮಹೋತ್ಸವವು ನಿಜವಾಗಿಯೂ ಸುವರ್ಣಮಯ. ಅದೇ ರಸಮಯ ಸಮಯ.

ಮಾಧ್ವರಾದ್ಧಾಂತ ಸಂವರ್ಧಕ ಸಭೆಯ ಸುವರ್ಣ

ಮಹೋತ್ಸವ ಸಮಾರಂಭದಲ್ಲಿ ಮೂವರು ಅಧ್ಯಕ್ಷರು. ಶ್ರೀ ವಿದ್ಯಾಮಾನ್ಯ ತೀರ್ಥರು ಸಭೆಯ ಸಂಸ್ಥಾಪಕಾಧ್ಯಕ್ಷರು. ಪರ್ಯಾಯಪೀಠಾಧೀಶ ಶ್ರೀ ಸುಗುಣೇಂದ್ರ ತೀರ್ಥರು ಮಹಾಧ್ಯಕ್ಷರು. ಶ್ರೀ ವಿಶ್ವೇಶ ತೀರ್ಥರು ಅಧಿವೇಶನಾಧ್ಯಕ್ಷರು. ಸಮಾರಂಭದ ಮೂರು ದಿನಗಳಲ್ಲಿ ಶ್ರೀ ಸುಬ್ರಹ್ಮಣ್ಯಮಠಾಧೀಶ ಶ್ರೀ ವಿದ್ಯಾಭೂಷಣ ತೀರ್ಥರು, ಶ್ರೀ ಅದಮಾರು ಮಠದ ಶ್ರೀ ವಿಶ್ವ ಪ್ರಿಯ ತೀರ್ಥರು, ಶ್ರೀ ಪಲಿಮಾರು ಮಠದ ಶ್ರೀ ವಿದ್ಯಾಧೀಶ ತೀರ್ಥರು, ಶ್ರೀ ಭೀಮನಕಟ್ಟೆ ಮಠದ ಶ್ರೀ ರಘುಮಾನ್ಯತೀರ್ಥರು, ಶ್ರೀ ಭಂಡಾರಕೇರಿ ಮಠದ ಶ್ರೀ ವಿದ್ಯೇಶತೀರ್ಥರು, ಶ್ರೀ ಬಾಳಗಾರು ಮಠದ ಶ್ರೀ ರಘುಭೂಷಣ ತೀರ್ಥರು ಹಾಗೂ ಶ್ರೀ ಪೇಜಾವರ ಮಠದ ಶ್ರೀ ವಿಶ್ವ ಪ್ರಸನ್ನ ತೀರ್ಥರೂ ಉಪಸ್ಥಿತರಿದ್ದರು.

ಶ್ರೀಪಾದರೆಲ್ಲರೂ ನೀಡಿದ ಅನುಗ್ರಹ ಸಂದೇಶದ ಸಾರಗಳನ್ನು ನೀಡಲಾಗಿದೆ.

'ಭಾ.ಭಾ.ಭಾ.....' ಇತ್ಯಾದಿಯಾಗಿ ಗಂಭೀರ ಶೈಲಿಯಲ್ಲಿ ಸಾಹಿತ್ಯವನ್ನು ರಚಿಸುವ ಪಾಂಡಿತ್ಯವುಳ್ಳ ಶ್ರೀಮದಾಚಾರ್ಯರು, ಸಾಮಾನ್ಯ ಜಿಜ್ಞಾಸುವಿಗೂ ತಿಳಿಯಾಗಿ ಅರ್ಥವಾಗುವುದಕ್ಕಾಗಿ 'ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್ಪಿತೃಮಾತೃಗತಿಃ' ಎಂಬಿತ್ಯಾದಿ ರೀತಿಯ ಸುಲಭ ಶೈಲಿಯಲ್ಲೂ ಅನೇಕ ಕೃತಿಗಳನ್ನು ರಚಿಸಿ ಅನುಗ್ರಹಿಸಿರುವರು.'

- ಶ್ರೀ ವಿದ್ಯಾಮಾನ್ಯತೀರ್ಥರು.

'ಶ್ರೀಮದಾಚಾರ್ಯರು ಕೆಲವು ಜೀವರು ನಿತ್ಯನರಕಕ್ಕೆ ತೆರಳುವವರೆಂದು ಪ್ರತಿಪಾದಿಸಿದರೂ, ಯಾವ ಜೀವ ನಿತ್ಯ ನರಕಕ್ಕೆ ಅರ್ಹನಾದವನು ಎಂಬುದು ಸಾಧನೆಯ ಪರಿಪಕ್ವ ಸ್ಥಿತಿಯಲ್ಲಿಯೇ ತಿಳಿಯುವುದಾದ್ದರಿಂದ ನಿತ್ಯನರಕದ ಸಂಶಯದಿಂದ ಯಾರೂ ನಿರಾಶರಾಗಬೇಕಿಲ್ಲ.'

- ಶ್ರೀ ವಿಶ್ವೇಶ ತೀರ್ಥರು.

ಗೀತಾವಾಙ್ಮಯಕ್ಕೆ ಅಸಾಧಾರಣ ಕೊಡುಗೆಯನ್ನು ನೀಡಿದವರು ಶ್ರೀಮದಾಚಾರ್ಯರು. ಅವರ ಜ್ಞಾಪಕಾರ್ಥವಾಗಿ ಗೀತಾಮಂದಿರದಲ್ಲಿ ಮಧ್ವ ಮಂದಿರವನ್ನೂ ರಚಿಸಲು ಸಂಕಲ್ಪಿಸಿದ್ದೇವೆ.

-ಶ್ರೀ ಸುಗುಣೇಂದ್ರ ತೀರ್ಥರು

ಪರ್ಯಾಯ ಪೀಠಾಧೀಶರು.

'ಭಗವಂತನು ಸರ್ವಾಂತರ್ಯಾಮಿಯು' ಎಂಬ ತತ್ವವನ್ನು ಹಾಗೂ ವೈದಿಕ ಸಿದ್ಧಾಂತದ ಏಕದೇವತಾವಾದವನ್ನು ಸಮರ್ಥಿಸಿದವರು ಶ್ರೀಮದಾಚಾರ್ಯರು.

- ಶ್ರೀ ವಿಶ್ವಪ್ರಿಯ ತೀರ್ಥರು.

'ಸೂರ್ಯೇ ತು ವಿದ್ಯಯಾ ತ್ರಯ್ಯಾ....' ಎಂಬ ಶಾಸ್ತ್ರ ಮಾತಿನಂತೆ ಸೂರ್ಯ ಪ್ರತೀಕದಲ್ಲಿ 'ತ್ರಯೀ ವಿದ್ಯೆ'ಯ ಅಧ್ಯಯನಾದಿಗಳ ಮೂಲಕ ಮಾಡುವ ಭಗವಂತನ ಆರಾಧನೆ ವೈಶಿಷ್ಟ್ಯಪೂರ್ಣ'.

- ಶ್ರೀ ವಿದ್ಯಾಧೀಶ ತೀರ್ಥರು.

'ಸತ್ಯವಾದುದನ್ನೇ ತಿಳಿದು ಕೊಳ್ಳಬೇಕಾದಂತೆ, ಸತ್ಯವಾದುದನ್ನೇ ಧ್ಯಾನಿಸಬೇಕೂ ಕೂಡಾ.'

-ಶ್ರೀ ವಿದ್ಯೇಶ ತೀರ್ಥರು.

'ಕರ್ಮಾಚರಣೆ ಅಂತಃಕರಣ ಶುದ್ಧಿಯನ್ನುಂಟು ಮಾಡಿ ಜ್ಞಾನಸಂಪಾದನೆಗೆ ಸಹಕಾರಿಯಾಗಬಲ್ಲದು.'

- ಶ್ರೀ ವಿಶ್ವಪ್ರಸನ್ನ ತೀರ್ಥರು.

'ಶ್ರೀ ವೇದವ್ಯಾಸ ದೇವರ ಸಂದೇಶಗಳನ್ನೇ ಶ್ರೀಮದಾಚಾರ್ಯರ 'ಸರ್ವ ಮೂಲ' ಗ್ರಂಥಗಳಲ್ಲಿ ಕಾಣಬಹುದಾಗಿದೆ.'

-ಶ್ರೀ ರಘುಮಾನ್ಯ ತೀರ್ಥರು.

ಶ್ರೀಪಾದಂಗಳವರ ಪ್ರವಚನಗಳಲ್ಲದೆ ಅನೇಕ ಪ್ರಸಿದ್ಧ ವಿದ್ವಾಂಸರ ಉಪನ್ಯಾಸಗಳೂ ನಡೆದಿದ್ದವು.

ವಿಶೇಷವಾಗಿ ಒಂದೊಂದು ಶಾಸ್ತ್ರದ ಕುರಿತೂ ಚರ್ಚಾಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು.

'ತಥಾ ಅಸ್ಯೈವ ಚ ತತ್ವಮುತ್ಥಂ....' ಎಂದು ಪ್ರಾರಂಭಗೊಳ್ಳುವ ನ್ಯಾಯ ಸುಧೆಯ ವಾಕ್ಯವು ಪ್ರಾಭಾಕರರ ಮತವನ್ನು ಅನುವಾದಿಸುತ್ತದೆ. ಆ ವಾಕ್ಯದ ಅರ್ಥದ ಬಗ್ಗೆ ಗೋಷ್ಠಿಯು ನಡೆಯಿತು. ಅದು ವೇದಾಂತ ಶಾಸ್ತ್ರದ ಚರ್ಚಾಗೋಷ್ಠಿ.

'ಜನಿ ಕರ್ತುಃ ಪ್ರಕೃತಿಃ' ಎಂಬ ಸೂತ್ರಕ್ಕೆ ನ್ಯಾಯ ಸುಧೆಯಲ್ಲಿರುವ ವ್ಯಾಖ್ಯಾನದ ಬಗ್ಗೆ ಹಾಗೂ 'ಸಮರ್ಥಯಿತ್ವಾ' ಎಂಬ ಶಬ್ದ ಪ್ರಯೋಗದ ಔಚಿತ್ಯದ ಕುರಿತೂ ವ್ಯಾಕರಣ ಶಾಸ್ತ್ರದ ಚರ್ಚಾಗೋಷ್ಠಿ ನಡೆಯಿತು.

ನ್ಯಾಯ ಶಾಸ್ತ್ರಕ್ಕೆ ಸಂಬಂಧಿಸಿದಂತೆ ವಿಧಿವಾದದ ಕುರಿತು 'ತರ್ಕತಾಂಡವ'ದಲ್ಲಿ ಮಾಡಲಾದ ಮಣಿಗ್ರಂಥದ ವಿಮರ್ಶೆಯ ಆಧಾರದಲ್ಲಿ ಚರ್ಚಾ ಗೋಷ್ಠಿಯು ನಡೆಯಿತು.

'ನಿತ್ಯನರಕ' ಹಾಗೂ 'ಜೀವಕರ್ತೃತ್ವ' ಗಳೆಂಬ ಎರಡು ಪ್ರಮೇಯಗಳ ಕುರಿತು ಗೋಷ್ಠಿಗಳು ನಡೆದವು. ಇವುಗಳಲ್ಲಿ ದಾಸಸಾಹಿತ್ಯವೂ ವಿಜೃಂಭಿಸುತ್ತಿತ್ತು.

ಎಲ್ಲ ಗೋಷ್ಠಿಗಳಲ್ಲಿ ಒಬ್ಬ ಮಠಾಧೀಶರು ಅಧ್ಯಕ್ಷರಾಗಿ ಓರ್ವ ಪಂಡಿತರನ್ನು ನಿರ್ವಾಹಕಾಧ್ಯಕ್ಷರನ್ನಾಗಿ ನಿಯೋಜಿಸಲಾಗಿತ್ತು. ಪೂರ್ವಪಕ್ಷಿಗಳಾಗಿ ಕೆಲವು ವಿದ್ವಾಂಸರು, ಹಾಗೂ ಸಿದ್ಧಾಂತಿಗಳಾಗಿ ಕೆಲವು ವಿದ್ವಾಂಸರು ಪಾಲ್ಗೊಂಡಿದ್ದರು. ಒಂದು ರೀತಿಯಲ್ಲಿ ವ್ಯವಸ್ಥಿತವಾಗಿ ಗೋಷ್ಠಿಗಳು ನಡೆದವು. ಭಕ್ತ ಜನತೆಗೆ ಪ್ರಮೇಯವು ಅರ್ಥವಾಗುವುದಕ್ಕೆ ಸಹಕಾರಿಗಳಾದವು.

**ಸನ್ಮಾನ:-** ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ವಿದ್ವಾಂಸರನ್ನು, ಪುರೋಹಿತರನ್ನು ಸನ್ಮಾನಿಸಿ, ಅವರು ಇನ್ನೂ ಹೆಚ್ಚಿನ ಸೇವೆಯಗೈಯ್ಯುವಂತೆ ಪ್ರೋತ್ಸಾಹಿಸುತ್ತ ಬಂದಿರುವ ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮ ಸಭೆಯ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ವಿಶೇಷವಾಗಿ ಸನ್ಮಾನವನ್ನು ಮಾಡಿದರು.

ಸುಮಾರು ಎಂಬತ್ತಕ್ಕಿಂತಲೂ ಅಧಿಕವಾದ ಊರ ಹಾಗೂ ಪರವೂರ ಪಂಡಿತರನ್ನು ಸುವರ್ಣದ ಪವಿತ್ರದುಂಗುರ, ಜರಿತಾರಿಶಾಲು, ಸಂಭಾವನೆ ಹಾಗೂ ಪ್ರಮಾಣ ಪತ್ರಗಳೊಂದಿಗೆ ಸನ್ಮಾನಿಸಿ ಅನುಗ್ರಹಿಸಿದರು. ಐವತ್ತಕ್ಕಿಂತಲೂ ಹೆಚ್ಚಿನ ಪುರೋಹಿತರನ್ನು, ಅರ್ಚಕರನ್ನು ಚಿನ್ನದ ನಾಣ್ಯ , ಶಾಲು ಸಂಭಾವನೆಗಳೊಂದಿಗೆ ಸನ್ಮಾನಿಸಿದರು. ಆ ಸುವರ್ಣ ನಾಣ್ಯದೊಳಗೆ ಉಡುಪಿ ಶ್ರೀ ಕೃಷ್ಣನ ಪ್ರತೀಕವಿತ್ತು.

ತಮ್ಮ ಸಭೆಗೆ ಐವತ್ತು ವರ್ಷಗಳಿಂದ ದಾನಿಗಳಾಗಿ, ಕಾರ್ಯ

ಕರ್ತೃಗಳಾಗಿ, ಅಭಿಮಾನಿಗಳಾಗಿ ಸೇವೆ ಸಲ್ಲಿಸುತ್ತ ಬಂದ ನೂರಾರು ಗಣ್ಯ ಭಕ್ತರನ್ನು ಚಿಕ್ಕ ಚಿನ್ನದ ನಾಣ್ಯ, ಶ್ರೀಮದಾಚಾರ್ಯರ ಭಾವಚಿತ್ರ, ಶಾಲುಗಳೊಂದಿಗೆ ಸನ್ಮಾನಿಸಿದರು.

ಹೀಗೆ ಸೇವಾಕರ್ತೃಗಳ ಮನಸ್ಸಿನಲ್ಲಿ ಆತ್ಮ ವಿಶ್ವಾಸವನ್ನು ಮೂಡಿಸಿ ಹುರಿದುಂಬಿಸುವ ಈ ಸನ್ಮಾನ ಕಾರ್ಯಕ್ರಮ ಅಭೂತ ಪೂರ್ವವಾಗಿತ್ತು.

**ಪುಸ್ತಕ ಬಿಡುಗಡೆ:-** ಸಭೆಯ ಸ್ವರ್ಣಮಹೋತ್ಸವದ ಅಂಗವಾಗಿ ಪ್ರಾಥಮಿಕ ಹಾಗೂ ಪ್ರೌಢಶಾಲೆಯ ವಿದ್ಯಾರ್ಥಿಗಳಿಗಾಗಿ 'ಆಚಾರ್ಯಮಧ್ವ' ಹಾಗೂ 'ಮಧ್ವ ರಾಮಾಯಣ' ಎಂಬ ಪಠ್ಯ ಪುಸ್ತಕಗಳ ಕುರಿತು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಏರ್ಪಡಿಸಲಾಗಿತ್ತು. ಅದಕ್ಕೆ ಉಪಯುಕ್ತವಾಗುವಂತೆ ವಿದ್ಯಾರತ್ನಾಕರ ಶ್ರೀಬನ್ನಂಜೆ ಗೋವಿಂದಾಚಾರ್ಯರ ಕನ್ನಡ ಅನುವಾದದಿಂದ ಕೂಡಿದ 'ಮಧ್ವ ರಾಮಾಯಣ' ಕೃತಿಯನ್ನು ಪರಿಷ್ಕಾರಗಳೊಂದಿಗೆ ಪುನಃ ಮುದ್ರಿಸಲಾಗಿತ್ತು. ಅದರ ಬಿಡುಗಡೆಯು ಈ ಶುಭ ಸಮಾರಂಭದಲ್ಲಿ ನಡೆಯಿತು. ಅದನ್ನು ಬಿಡುಗಡೆಗೊಳಿಸಿದವರು ಶ್ರೀ ಸುಗುಣೇಂದ್ರ ತೀರ್ಥರು.

ಅಂತೆಯೇ ಶ್ರೀ ವಿದ್ಯೇಶ ತೀರ್ಥರಿಂದ ಭಗವದ್ಗೀತೆಯ ಆರು ಶ್ಲೋಕಗಳ ಅರ್ಥವಿಶೇಷಗಳ ಆಧಾರದಲ್ಲಿ ರಚಿತವಾದ 'ಹರಿತತ್ವವಿವೇಕ' ಎಂಬ ಗ್ರಂಥದ ಬಿಡುಗಡೆಯೂ ಆಯಿತು. ಅಲ್ಲದೆ ಶ್ರೀಮಾಧ್ವರಾದ್ಧಾಂತ ಸಂವರ್ಧಕ ಸಭೆಯು ಐವತ್ತು ವರ್ಷಗಳಲ್ಲಿ ನಡೆಸಿರುವ ಸಾಧನೆ, ಹಾಗೂ 50 ಅಧಿವೇಶನಗಳಲ್ಲಿ ನೀಡಲಾದ ಶ್ರೀಪಾದರ ಸಂದೇಶಗಳನ್ನು ಸಂಗ್ರಹಿಸಿರುವ 'ಸುವರ್ಣ ಸಭಾ' ಎಂಬ ಸ್ಮರಣ ಸಂಚಿಕೆಯನ್ನು ಬಿಡುಗಡೆಗೊಳಿಸಲಾಯಿತು.

**ಸಂಗೀತ - ನೃತ್ಯ- ರೂಪಕ:-** ಆಧ್ಯಾತ್ಮಿಕ ಕಾರ್ಯಕ್ರಮಗಳೇ ತುಂಬಿರುವ ಈ ಸುವರ್ಣ ಮಹೋತ್ಸವದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆದವು. ತತ್ವಗಳನ್ನೊಳಗೊಂಡ ದಾಸಸಾಹಿತ್ಯದ ಹಿನ್ನೆಲೆಯಲ್ಲಿ ಪ್ರತಿಬಿಂಬಿತವಾಗಿದ್ದವು. ಉತ್ಸವದ ಮೊದಲನೆಯ ರಾತ್ರಿ ಶ್ರೀ ಸುಬ್ರಹ್ಮಣ್ಯ ಮಠಾಧೀಶ ಶ್ರೀ ವಿದ್ಯಾಭೂಷಣ ತೀರ್ಥರ 'ಭಕ್ತಿ ಸಂಗೀತ' ಕಾರ್ಯಕ್ರಮ ನಡೆಯಿತು. ಎರಡನೆಯ ರಾತ್ರಿ ಬೆಂಗಳೂರಿನ ಪೂರ್ಣಿಮಾ ಅಶೋಕ್ ಅವರಿಂದ ಭರತನಾಟ್ಯ ಸೇವೆ ನಡೆಯಿತು. ಮೂರನೆಯ ದಿನ ಮಧ್ವನವಮಿಯ ರಾತ್ರಿಯಂದು, ಶ್ರೀಮದಾಚಾರ್ಯರ ದ್ವಾದಶಸ್ತೋತ್ರದ ಆಧಾರದಲ್ಲಿ ರಚಿತವಾದ 'ಆನಂದಮುಕುಂದ' ಎಂಬ ನೃತ್ಯ ರೂಪಕವು ಪ್ರದರ್ಶಿತವಾಯಿತು. ಉಡುಪಿ ತರುಣ ಕಲಾವಿದರಿಂದ ರೂಪುಗೊಂಡ ಈ ರೂಪಕ ಮನೋರಂಜಕವಾದುದಲ್ಲದೆ ಆಧ್ಯಾತ್ಮಿಕ ಸ್ಫೂರ್ತಿದಾಯಕವೂ ಆಗಿತ್ತು.

**ಪುಷ್ಪವೃಷ್ಟಿ :-** ಶ್ರೀಮದಾಚಾರ್ಯರು ಅದೃಶ್ಯರಾಗಿ ಬದರಿಗೆ ತೆರಳಿದ ದಿನ ಮಾಘ ಶುದ್ಧ (ಮಧ್ವ) ನವಮಿ. ಅಂದು ಅನಂತಾಸನ ದೇವಾಲಯದಲ್ಲಿ ಪಾಠದಲ್ಲಿ ನಿರತರಾದ ಶ್ರೀಮದಾಚಾರ್ಯರ ಮೇಲೆ ದೇವತೆಗಳಿಂದ ಪುಷ್ಪ ವೃಷ್ಟಿಯಾಯಿತು. ಈ ಐತಿಹ್ಯವನ್ನು ಸೂಚಿಸುವ ಭಾವುಕತೆಯನ್ನು ಉದ್ದೀಪನ ಗೊಳಿಸುವ ಕಾರ್ಯಕ್ರಮ ಈ ಮಹೋತ್ಸವದ ಸಂದರ್ಭದಲ್ಲಿ ನಡೆಯಿತು. ವಿಶಿಷ್ಟವಾಗಿತ್ತು. ಶ್ರೀಮಧ್ವನವಮಿಯ ಪ್ರಯುಕ್ತ ಶ್ರೀವಿದ್ಯಾಮಾನ್ಯತೀರ್ಥರು ಶ್ರೀಮದಾಚಾರ್ಯರ ಪೂರ್ಣ ಜೀವನ ಚರಿತ್ರೆಯನ್ನು ಬೋಧಿಸಿದರು. ಅವರ ಆ ಪ್ರವಚನ ಶ್ರೀಮಧ್ವ ವಿಜಯದ ಆಧಾರದ ಮೇಲೆ

ನಡೆಯುತ್ತಿತ್ತು. ಕೊನೆಯ ಘಟ್ಟದಲ್ಲಿ ವೇದಿಕೆಯ ಮೇಲಿರುವ ಶ್ರೀಮದಾಚಾರ್ಯರ ಸುಂದರ ಪ್ರತೀಕಕ್ಕೆ ಮಂಗಳಾರತಿಯನ್ನು ಮಾಡಿದರು. ಪುಷ್ಪ ವೃಷ್ಟಿಯನ್ನು ಆರಂಭಿಸಿದರು. ಶ್ರೀಪಾದಂಗಳವರೆಲ್ಲರ ಹಾಗೂ ಸಮಸ್ತ ಭಕ್ತ ಜನತೆಯ ತುಟಿಗಳಲ್ಲಿ ಆಚಾರ್ಯರ ಸ್ತುತಿ ಕೇಳುತ್ತಿತ್ತು. ಕಣ್ಣುಗಳಲ್ಲಿ ಭಾವುಕತೆ ತುಂಬಿತ್ತು. ಅದಕ್ಕೆ ಸರಿಯಾಗಿ ಮಂಗಲವಾದ್ಯಗಳ ಸಮೂಹ ಮೊಳಗುತ್ತಿತ್ತು. ಆಚಾರ್ಯರ ಪ್ರತೀಕದ ಮೇಲೆ ರಾಶಿ ರಾಶಿ ಪುಷ್ಪಗಳು ಕಾಣದ ಕೈಗಳಿಂದ ಮಳೆಯಂತೆ ಬೀಳುತ್ತಲೇ ಇದ್ದವು. ನಿಜ, ಅಂದಿನ ದೃಶ್ಯವನ್ನು ಕಂಡ 20ನೆಯ ಶತಮಾನದ ಭಕ್ತ ಸಮೂಹ ಒಂದು ಕ್ಷಣ 13ನೆಯ ಶತಮಾನದ ಅಂಚಿಗೆ ಹೋದಂತಾಗಿತ್ತು.

**ಸಭೆಯ ಆರ್ಥಿಕ ವ್ಯವಸ್ಥೆ :-** ವರುಷದಿಂದ ವರುಷಕ್ಕೆ ಬಹಳ ಅದ್ದೂರಿಯಾಗಿ ಸಭೆಯನ್ನು ನಡೆಸಿದ ಶ್ರೀ ವಿದ್ಯಾಮಾನ್ಯ ತೀರ್ಥರ ಆರ್ಥಿಕ ವ್ಯವಸ್ಥೆ ಹೇಗಿತ್ತು? ಎನ್ನುವುದರ ಬಗ್ಗೆ ಸಂಕ್ಷಿಪ್ತ ಮಾಹಿತಿ.

ಸಭೆ ಮಾಡಿ ಧನವನ್ನು ಸಂಪಾದಿಸಿದವರು ಕೆಲವರು. ದುಡ್ಡು ಮಾಡಿ ಸಭೆಗಳನ್ನು ನಡೆಸುವವರು ಹಲವರು. ಇವೆರಡನ್ನೂ ಮೀರಿ ಹಣಕ್ಕಾಗಿ ಹೆಣಗಾಡದೆ ಯಶಸ್ವಿ ಸಭೆ ಮಾಡಿದವರು ಶ್ರೀ ವಿದ್ಯಾಮಾನ್ಯ ತೀರ್ಥರು. ಕಾರಣ, ಅವರು ಮುಟ್ಟಿದ್ದೆಲ್ಲ ಚಿನ್ನವಾಗುತ್ತದೆ. ಏಕೆಂದರೆ ಅವರು ಸುವರ್ + ಣ = ಜ್ಞಾನ ಹಾಗೂ ಆನಂದ ಸ್ವರೂಪಿಯಾದ ಭಗವಂತನಲ್ಲಿ ವಿಶ್ವಾಸವನ್ನಿರಿಸಿದವರು. ಅವನನ್ನು ಒಲಿಸಿದವರು.

ಆರು ದಶಕಗಳ ಹಿಂದೆ ಸಭೆಯನ್ನಾರಂಭಿಸಿದ ಶ್ರೀ ವಿದ್ಯಾಮಾನ್ಯತೀರ್ಥರ ಬಳಿ ಕೇವಲ ಐದು ಸಾವಿರ ರೂಗಳಿದ್ದವು. ಅವುಗಳನ್ನು ಯಥೇಷ್ಟವಾಗಿ ವಿತರಿಸಿ ಸಭೆಯನ್ನಾಚರಿಸಿದರು.

ಸಭೆಯ ನೈರಂತರ್ಯದ ನಿರ್ವಹಣೆಗಾಗಿ ಒಂದು ವ್ಯವಸ್ಥೆ ಆಗತ್ಯವಾಗಿತ್ತು. ಅದನ್ನು ಕಾರ್ಯರೂಪಕ್ಕೆ ತಂದು ಸೇವೆಸಲ್ಲಿಸಲು ಶ್ರೀಪಾದರ ಅಭಿಮಾನಿ, ಶಿಷ್ಯವೃಂದ ಸಿದ್ಧವಾಗಿತ್ತು. ಆ ವೃಂದದ ಸೇವೆ ಈ ರೀತಿಯಿತ್ತು. ಆಕರ್ಷಕವಾಗಿತ್ತು. ಅಭಿಮಾನಿಗಳು ಬೇರೆ ಬೇರೆ ಊರುಗಳಲ್ಲಿರುವ ಆಸ್ತಿಕರಿಂದ ಸಭೆಗಾಗಿ ದೇಣಿಗೆಯನ್ನು ಸ್ವೀಕರಿಸುತ್ತಿದ್ದರು. ಆ ದೇಣಿಗೆ ಸಾವಿರ ರೂಗಳಿರಬಹುದು, ನೂರೂ ಇರಬಹುದು, ಹತ್ತೂ ಇರಬಹುದು ಒಂದೂ ಇರಬಹುದು. ಆ ದೇಣಿಗೆಗೆ ತಪ್ಪದೆ ರಸೀದಿಯನ್ನು ನೀಡುತ್ತಿದ್ದರು. ಆ ದೇಣಿಗೆಸಂಗ್ರಹ ಕರ್ನಾಟಕ, ಆಂಧ್ರ, ತಮಿಳ್ನಾಡು ಮುಂತಾದ ನಾಡಿನ ಹೊರ-ಒಳ ಊರುಗಳಲ್ಲಿ ನಡೆಯುತ್ತಿತ್ತು. ದೇಣಿಗೆ ನೀಡಿದ ಪ್ರತಿಯೊಬ್ಬ ಆಸ್ತಿಕನಿಗೂ ಸಭೆಯ ಆಹ್ವಾನ ಹೋಗುತ್ತಿತ್ತು. ಸಭೆಯಲ್ಲಿ ಸಂಗ್ರಹೀತ ನಿಧಿಯ ವಿವರವನ್ನು ಪ್ರಕಟಿಸಲಾಗುತ್ತಿತ್ತು. ಸಭೆಯ ನಂತರ ಒಂದು ಕಿರು ಹೊತ್ತಿಗೆಯಲ್ಲಿ ಎಲ್ಲ ದಾನಿಗಳ ವಿವರದೊಂದಿಗೆ ಸಭೆಯ ವೃತ್ತಾಂತವನ್ನೂ ನೀಡಿ ಪ್ರಕಾಶಗೊಳಿಸಲಾಗುತ್ತಿತ್ತು. ಇದರಿಂದ ದೇಣಿಗೆ ನೀಡಿದ ಆಸ್ತಿಕರಲ್ಲಿ ತೃಪ್ತಿಯುಂಟಾಗುತ್ತಿತ್ತು. ಅವರು ಆ ದೇಣಿಗೆಯನ್ನು ಸ್ವೇಚ್ಛೆಯಿಂದ ಮುಂದುವರೆಸುವಂತೆ ಮಾಡುತ್ತಿತ್ತು. ಈ ಭಕ್ತ ಜನತೆಯ ದೇಣಿಗೆಯೇ ಸಭೆಗೆ ನಿಜವಾದ ಆಧಾರವಾಗಿತ್ತು.

ಈ ದೇಣಿಗೆಯ ಸಂಗ್ರಹ ಕಾರ್ಯದಲ್ಲಿ ನಿರತರಾಗಿ ಸೇವೆ ಸಲ್ಲಿಸುವ ಶಿಷ್ಯರು ಅಪಾರ. ಅವರೆಲ್ಲರೂ ಉಲ್ಲೇಖಾರ್ಹರು.

ಸಭೆಯ ಶಾಶ್ವತ ನಿಧಿಗಾಗಿ ಶ್ರೀಪಾದರು ಪ್ರಯತ್ನಿಸಿದರು. ಕಲ್ಕತ್ತೆಯ ಚಾತುರ್ಮಾಸ್ಯದಲ್ಲಿ ಶ್ರೀಮದಾಚಾರ್ಯರ ಅಪ್ಪಣೆಯಂತೆ ಮುಂದುವರೆದರು. ಯಶಸ್ಸನ್ನು ಕಂಡರು. ಆ ಯಶಸ್ಸಿನ ಬೆನ್ನಲುಬಾಗಿ ಅನೇಕ ಮಹಾತ್ಮರು ಭಕ್ತರು ಇರುವರು.

ಶ್ರೀಮದಾಚಾರ್ಯರ ಸಿದ್ಧಾಂತ ಪ್ರಸಾರಕ್ಕಾಗಿ ನಡೆಯುತ್ತಿರುವ ಸಭೆಗೆ ಮಾಧ್ವ ಪೀಠಗಳಿಂದಲೇ ಉದಾರ ಸಹಾಯಹಸ್ತವು ದೊರಕಿತು.

ಶ್ರೀಪುತ್ತಿಗೆ ಮಠದ ಶ್ರೀ ಸುಧೀಂದ್ರ ತೀರ್ಥರು, ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾಸಮುದ್ರ ತೀರ್ಥರು, ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥರು ಶ್ರೀ ಅದಮಾರು ಮಠದ ಶ್ರೀ ವಿಬುಧೇಶ ತೀರ್ಥರು, ಶ್ರೀಮದುತ್ತರಾದಿ ಮಠದ ಶ್ರೀ ಸತ್ಯ ಪ್ರಮೋದ ತೀರ್ಥರು, ಶ್ರೀ ಸೋದೆ ಮಠದ ಶ್ರೀ ವಿಶ್ವೋತ್ತಮ ತೀರ್ಥರು, ಶ್ರೀ ಸುಬ್ರಹ್ಮಣ್ಯ ಮಠದ ಶ್ರೀ ವಿಶ್ವಜ್ಞತೀರ್ಥರು, ಶ್ರೀರಾಘವೇಂದ್ರ ಮಠದ ಶ್ರೀ ಸುಯಮೀಂದ್ರ ತೀರ್ಥರು, ಶ್ರೀ ಭೀಮನಕಟ್ಟೆ ಮಠದ ಶ್ರೀ ರಘುತಿಲಕ ತೀರ್ಥರು, ಶ್ರೀ ಬಾಳಗಾರು ಮಠದ ಶ್ರೀ ರಘುಮಾನ್ಯ ತೀರ್ಥರು, ಶ್ರೀ ಚಿತ್ರಾಪುರ ಮಠದ ಶ್ರೀ ವಿದ್ಯಾ ಪೂರ್ಣ ತೀರ್ಥರು, ಶ್ರೀ ಪುತ್ತಿಗೆ ಮಠದ ಶ್ರೀ ಸುಜ್ಞಾನೇಂದ್ರ ತೀರ್ಥರು, ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾವಾರಿನಿಧಿ ತೀರ್ಥರು ಶ್ರೀ ಕಾಶೀ ಮಠದ ಶ್ರೀ ಸುಧೀಂದ್ರ ತೀರ್ಥರು, ಶ್ರೀ ಗೋಕರ್ಣ ಪರ್ತಗಾಳಿ ಮಠದ ಶ್ರೀ ದ್ವಾರಕಾನಾಥ ತೀರ್ಥರು, ಹೀಗೆ ಮಾಧ್ವ ಸಮಾಜದ ಅನೇಕ ಪೀಠಾಧಿಪತಿಗಳು ತಮ್ಮ ದೇಣಿಗೆಗಳನ್ನು ನೀಡಿದ್ದರು.

ಆರ್ಥಿಕ ಸಹಾಯವನ್ನಲ್ಲದೆ ಸಭೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಮೂಲಕ ಸಭೆಗೆ ಮೆರುಗು ತಂದ ಪೀಠಾಧಿಪತಿಗಳೂ ಅನೇಕ.

ಪೀಠಾಧಿಪತಿಗಳಂತೆ ಅನೇಕ ಗೃಹಸ್ಥರೂ ಈ ಸಭೆಗೆ ದೇಣಿಗೆ ನೀಡಿದವರು. ಅದರಲ್ಲಿ ಮದ್ರಾಸಿನ ಧರ್ಮಭೂಷಣ ಶ್ರೀಸೀತಾರಾಮರಾಯರ ಕೊಡುಗೆ ಸ್ಮರಣಾರ್ಹ. ಅವರ ಬೆಂಬಲ ಹಾಗೂ ಕಾಣಿಕೆಗಳು ಶ್ರೀ ವಿದ್ಯಾಮಾನ್ಯ ತೀರ್ಥರ ಶಾಶ್ವತ ನಿಧಿಗೆ ಬಲ ತಂದು ಕೊಟ್ಟಿತು. ಮದ್ರಾಸಿನಲ್ಲಿ ಅಧಿವೇಶನ ನಡೆದ ಸಂದರ್ಭದಲ್ಲಿ 'ಆನಂದ ತೀರ್ಥ ನಿಧಿ ಪಾರಿತೋಷಕ'ಕ್ಕೆ ಚಾಲನೆಯನ್ನು ನೀಡಿತು. ಆ ಸಂದರ್ಭದಲ್ಲಿ ಶ್ರೀ ಸೀತಾರಾಮರಾಯರು 108 ಶ್ರೋತ್ರಿಯರಿಗೆ ಚಿನ್ನದ ಪವನ್, ಬೆಳ್ಳಿಯ ತಂಬಿಗೆ, ಥಾಲಿ, ಉದ್ಧರಣೆ, ಜೋಡು ಪಂಚೆ ದಕ್ಷಿಣೆಗಳನ್ನು ನೀಡಿ ಸತ್ಕರಿಸಿದರು.

**ಶ್ರೀ ಸುಧೀಂದ್ರ ತೀರ್ಥರ ಅನುಗ್ರಹ :-** ಸಭೆಯ 13ನೆಯ ಅಧಿವೇಶನವು ಉಡುಪಿ ಶ್ರೀಕೃಷ್ಣನ ಸನ್ನಿಧಿಯಲ್ಲಿ ನಡೆಯಿತು. ಆಗ ಪುತ್ತಿಗೆ ಮಠದ ಶ್ರೀ ಸುಧೀಂದ್ರ ತೀರ್ಥರ ಶತಮಾನೋತ್ಸವ ಸಂಭ್ರಮವೂ ಸೇರಿತ್ತು. ಅದಕ್ಕಂಗವಾಗಿ ಶ್ರೀ ಸುಧೀಂದ್ರ ತೀರ್ಥರಿಗೆ ಒಂದು ಸಾವಿರ ರೂಗಳನ್ನು ಕಾಣಿಕೆಯಾಗಿ ನೀಡಲಾಗಿತ್ತು. ಆದರೆ ಶ್ರೀ ಸುಧೀಂದ್ರ ತೀರ್ಥರು ಆ ಕಾಣಿಕೆಯನ್ನು ಸಭೆಗೇ ಒಪ್ಪಿಸಿ ಪ್ರತಿ ವರುಷವೂ ಪಾರಿತೋಷಕ ನೀಡಲು ಆದೇಶಿಸಿದರು. ಅಂದಿನಿಂದ 'ಶ್ರೀ ಸುಧೀಂದ್ರ ತೀರ್ಥ ಪಾರಿತೋಷಕ' ಆರಂಭಗೊಂಡಿತು.

'ಮಹಾ ತಪಸ್ವಿಗಳೂ, ಜ್ಞಾನ, ವಯೋವೃದ್ಧರೂ ಆಗಿದ್ದ ಶ್ರೀ ಸುಧೀಂದ್ರ ತೀರ್ಥರಂತಹ ಮಹಾತ್ಮರ ತುಂಬು

ಹೃದಯದ ಅನುಗ್ರಹವೇ ಸಭೆಯು ಸುವರ್ಣ ಮಹೋತ್ಸವವನ್ನು ಕಾಣುವಷ್ಟು ಅಭಿವೃದ್ಧಿ ಹೊಂದಿತು.' ಎನ್ನುವುದು ಉತ್ಪ್ರೇಕ್ಷೆಯ ಮಾತಲ್ಲ.

**ಶಾಶ್ವತ ದ್ರವ್ಯದಾನ :-** ಐವತ್ತೇಳು ಸಂವತ್ಸರಗಳಲ್ಲಿ ಹರಿ-ವಾಯುಪ್ರೀತಿ- ಕರವಾದ ರೀತಿಯಲ್ಲಿ ಸಭೆಯನ್ನು ನಡೆಸುತ್ತ ಬಂದ ಶ್ರೀ ವಿದ್ಯಾಮಾನ್ಯ ತೀರ್ಥರು ಸಭೆಯ ಸಂದರ್ಭದಲ್ಲಿ ನೀಡಿದ ಸಂಭಾವನೆಗೆ ಎಣೆಯಿಲ್ಲ. ಸಭೆಯ ಪ್ರಾರಂಭದಿಂದಲೂ ವಿದ್ಯಾರ್ಥಿ-ವಿದ್ವಾಂಸರಿಗೆ ಹೇರಳವಾಗಿಯೇ ಸಂಭಾವನೆಯನ್ನು ನೀಡುತ್ತಿದ್ದ ಅವರ ದಾತೃತ್ವವು ಅಭಿವೃದ್ಧಿಯಾಗುತ್ತಲೇ ಇತ್ತು. 6 ದಶಕಗಳ ಹಿಂದೆ ಇದ್ದ ಸಂಭಾವನೆಯ ಖರ್ಚಿನ ಮೊತ್ತ ಐದು ಸಾವಿರ ರೂಪಾಯಿಗಳನ್ನು ಮೀರುತ್ತಿತ್ತು. ಇತ್ತೀಚಿನ ದಶಕಗಳಲ್ಲಿ ಕೇವಲ ಸಂಭಾವನೆಯ ಮೊತ್ತ ಎರಡು ಲಕ್ಷ ರೂಗಳನ್ನು ದಾಟುತ್ತಿತ್ತು. ಸ್ವಲ್ಪ ವರ್ಷಗಳ ನಂತರ ಸಂಭಾವನೆಯೊಂದಿಗೆ ಒಂದು ವಿಶಿಷ್ಟವಾದ ರಜತದುಡುಗೊರೆಯನ್ನೂ ನೀಡುತ್ತಿದ್ದರು. ಅದನ್ನು ಪಡೆದ ವಿದ್ವಾಂಸರು-ವಿದ್ಯಾರ್ಥಿಗಳು ನೂರಾರು. ಒಂದೊಂದು ವರುಷ ಒಂದೊಂದು ವಿಶಿಷ್ಟ ಉಡುಗೊರೆಯಾಗಿತ್ತು. ಅಂತಹ ಘಟನೆಗಳಲ್ಲಿ ಕೆಲವು ಉದಾಹರಣೆಗಳು.

1995ರಲ್ಲಿ ಸಭೆಯ ಐವತ್ತೆರಡನೆಯ ಅಧಿವೇಶನವು ಘಟಿಕಾಚಲ ಕ್ಷೇತ್ರದಲ್ಲಿ ನಡೆಯಿತು. ಆ ಸಂದರ್ಭದಲ್ಲಿ ಸುಮಾರು ಎಪ್ಪತ್ತು ಪವಮಾನ ಹೋಮಗಳು ನಡೆದವು. ಆ ಹೋಮಗಳನ್ನು ನಡೆಸಿದ ಋತ್ವಿಜರಿಗೆ ವಿಶೇಷ ಸಂಭಾವನೆಗಳನ್ನು ನೀಡಿದ ಶ್ರೀ ವಿದ್ಯಾಮಾನ್ಯ ತೀರ್ಥರು, ಅಧಿವೇಶನದಲ್ಲಿ ಪಾಲ್ಗೊಂಡ ಶಾಸ್ತ್ರಾರ್ಥ್ಯಯನವನ್ನು ನಡೆಸಿದ ವಿದ್ಯಾರ್ಥಿ-ವಿದ್ವಾಂಸರಿಗೆ ಸಂಭಾವನೆ ಜೊತೆಯಲ್ಲಿ ತಮ್ಮ ಉಪಾಸ್ಯ ಮೂರುತಿಯಾದ ಶ್ರೀರಾಮಚಂದ್ರನ ಚಿಹ್ನೆಯುಳ್ಳ ಒಂದೊಂದು ಚಿನ್ನದ ನಾಣ್ಯವನ್ನೂ ನೀಡಿದರು.

1996ರಲ್ಲಿ ಐವತ್ತ ಮೂರನೆಯ ಅಧಿವೇಶನವು ರಾಯಚೂರಿನ ಮುಂಗ್ಲಿ ಶ್ರೀಮುಖ್ಯಪ್ರಾಣದೇವರ ಸನ್ನಿಧಿಯಲ್ಲಿ ನಡೆಯಿತು. ಆಗ ಅದರೊಂದಿಗೆ 18ನೆಯ ಮಾಧ್ವ ತತ್ವಜ್ಞಾನ ಸಮ್ಮೇಳನವೂ ಜೊತೆಗೂಡಿತ್ತು. ಆ ಸಂದರ್ಭದಲ್ಲಿಯೂ 150 ವಿದ್ವಾಂಸರಿಗೆ ಸಂಭಾವನೆ ಜೊತೆ ಒಂದು ಚಿನ್ನದ ಮಿಸ್ರಿಯನ್ನು ನೀಡಿದ ದಾನಶೂರರು ಶ್ರೀ ವಿದ್ಯಾಮಾನ್ಯ ತೀರ್ಥರು.

1997ರಲ್ಲಿ 54ನೆಯ ಅಧಿವೇಶನವೂ ಘಟಿಕಾಚಲದಲ್ಲಿಯೇ ನಡೆಯಿತು. ಆಗ ಪಾಲ್ಗೊಂಡ 125 ವಿದ್ವಾಂಸರಿಗೆ ಸಾವಿರಾರು ರೂಗಳ ಸಂಭಾವನೆಯ ಜೊತೆಯಲ್ಲಿ ಉತ್ತಮ ಬೆಳ್ಳಿಯ ತುಳಸಿ ಮಣಿ ಹಾರವನ್ನೂ ನೀಡಿದರು.

1998ರ 55ನೆಯ ಅಧಿವೇಶನವು ಪಾಜಕ ಕ್ಷೇತ್ರದಲ್ಲಿ ನಡೆಯಿತು. ಇದರ ಅಂಗವಾಗಿ 108 ವಿದ್ವಾಂಸರಿಗೆ ಸಂಭಾವನೆಯ ಜೊತೆ ಬೆಳ್ಳಿಯಿಂದ ಆವೃತವಾದ ರಾಮೇಶ್ವರದ ಅಭಿಷೇಕದ ಶಂಖವನ್ನು ನೀಡಿದರು.

1999ರಲ್ಲಿ 56ನೆಯ ಅಧಿವೇಶನವೂ ಪಾಜಕ ಕ್ಷೇತ್ರದಲ್ಲಿಯೇ ನಡೆಯಿತು. ಈ ಅಧಿವೇಶನದ ಅಂಗವಾಗಿ ಸುಮಾರು 150 ವಿದ್ವಾಂಸರಿಗೆ ಸಂಭಾವನೆಯ ಜೊತೆಯಲ್ಲಿ ಶ್ರೀರಾಮಚಂದ್ರನ ಚಿಹ್ನೆಯಿಂದ ಕೂಡಿದ ಬೆಳ್ಳಿಯ ಸಂಪುಟದಲ್ಲಿ ಸುದರ್ಶನವನ್ನಿಟ್ಟು ದಾನ ಮಾಡಿದರು.

ಸಭೆಯ 57ನೆಯ ಅಧಿವೇಶನವು 2000ವರ್ಷದ ಫೆಬ್ರುವರಿ 14ರಂದು ಉಡುಪಿಯಲ್ಲಿ ನಡೆಯಿತು. ಈ

ಸಂದರ್ಭದಲ್ಲಿ ಹರಿದ್ವಾರದಿಂದ ತಾವು ಖರೀದಿಸಿ ತಂದ ಉತ್ತಮ ಶಾಲುಗಳನ್ನು ಹಾಗೂ ಗಯೆಯ ಶ್ರೀವಿಷ್ಣುಪಾದದಲ್ಲಿರಿಸಿ ಪೂಜಿಸಲ್ಪಟ್ಟ ಬೆಳ್ಳಿಯ ವಿಷ್ಣು ಪಾದಗಳನ್ನು ಸಂಭಾವನೆಯ ಜೊತೆಯಲ್ಲಿ ನೂರಾರು ವಿದ್ವಾಂಸರಿಗೆ ಹಾಗೂ ವಿದ್ಯಾರ್ಥಿಗಳಿಗೆ ನೀಡಿದ 'ಮಹಾದಾತೃಗಳು' ಶ್ರೀ ವಿದ್ಯಾಮಾನ್ಯ ತೀರ್ಥರು.

ಹೀಗೆ ಗುರು ಶ್ರೀಸತ್ಯಧ್ಯಾನತೀರ್ಥರ ಅನುಜ್ಞೆಯಂತೆ ಆರಂಭಿಸಿದ ಶ್ರೀಮನ್ಮಾಧ್ವ ರಾದ್ಧಾಂತ ಸಂವರ್ಧಕ ಸಭೆಯನ್ನು ಅತ್ಯಂತ ಯಶಸ್ವಿಯಾಗಿ, ಶ್ರೀಹರಿ-ವಾಯುಗಳಿಗೆ ಅತಿ ಪ್ರೀತಿಕರವಾಗುವ ರೀತಿಯಲ್ಲಿಯೇ ನಡೆಸಿ 57ನೆಯ ಅಧಿವೇಶನವನ್ನು ಆಚಾರ್ಯ ಪ್ರತಿಷ್ಠಿತ ಶ್ರೀಕೃಷ್ಣನ ಸನ್ನಿಧಿಯಲ್ಲಿ ನಡೆಸಿ ಅವನ ಪಾದಾರವಿಂದಗಳಲ್ಲಿ ಅರ್ಪಿಸಿದರು. ಆ ಸಭೆಯನ್ನು ಮುಂದೆ ನಡೆಸುವ ಭಾರವನ್ನು, ಶಕ್ತಿಯನ್ನು ಸ್ಫೂರ್ತಿಯನ್ನು ತಮ್ಮ ಉತ್ತರಾಧಿಕಾರಿಗಳಿಗೆ ನೀಡಿದರು. ಆ ಎಂಬತ್ತೇಳರ ಶ್ರೀ ವಿದ್ಯಾಮಾನ್ಯ ತೀರ್ಥರು ನಡೆಸಿದ ಐವತ್ತೇಳರ 'ಶ್ರೀಮನ್ಮಾಧ್ವ ರಾದ್ಧಾಂತ ಸಂವರ್ಧಕ ಸಭೆಯು' ಅಧಿವೇಶನವೇ ಅವರ ಅಂತಿಮ ಅಧಿವೇಶನವಾಯಿತು. ಶ್ರೀಮಧ್ವ-ಕೃಷ್ಣರಿಗೆ ಪ್ರಿಯವಾಯಿತು.

ಈ ರೀತಿ ತಮ್ಮ ವಿದ್ಯಾಗುರುಗಳಾದ ಶ್ರೀ ಸತ್ಯಧ್ಯಾನ ತೀರ್ಥರ 'ಪಾಠ ಪ್ರವಚನ, ಮತರಕ್ಷಣ, ಸಭಾಸ್ಥಾಪನ' ಗಳೆಂಬ ಧ್ಯಾನವನ್ನು 'ಸತ್ಯ'ವನ್ನಾಗಿಸಿ ಆ ಗುರುಗಳನ್ನು ಸಾರ್ಥಕ ನಾಮರನ್ನಾಗಿ ಮಾಡಿದ ಶಿಷ್ಯ ವರೇಣ್ಯರು ಸಾರ್ಥಕ ನಾಮದ ಶ್ರೀ ವಿದ್ಯಾಮಾನ್ಯ ತೀರ್ಥರು.



# ಕಾಷ್ಠಮೌನ ವ್ರತ

ಭಗವಂತನೊಲಿಸಲು ಭಕ್ತಿ ಬೇಕು. ಅದು ನಿಶ್ಚಲವಾಗಿರಬೇಕು. ನಿರ್ಮಲವಾಗಿರಬೇಕು. ಇವೆರಡನ್ನೂ ಪಡೆಯುವುದಕ್ಕಾಗಿ ತ್ರಿಕರಣಗಳನ್ನು ನಿಯಂತ್ರಿಸಬೇಕು. ಈ ನಿಯಂತ್ರಣದ ಹಿಂದೆ ಶಾಸ್ತ್ರ ಜ್ಞಾನ ಪ್ರಶಸ್ತವಾಗಿರಬೇಕು. ಶಾಸ್ತ್ರಜ್ಞಾನವು ಸಿದ್ಧಿಸಲು ಸತತ ಅಧ್ಯಯನಾದಿ ಪ್ರಯತ್ನ, ಭಗವದನುಗ್ರಹ ಸಂಪಾದನೆಗಳಾಗಬೇಕು. ಇವೆರಡನ್ನೂ ಮಾಡದ ವ್ಯಕ್ತಿ ಸಿದ್ಧಿಯಅಭಿಲಾಷೆಯನ್ನು ಬಿಡಬೇಕು. ಸಿದ್ಧಿಯನ್ನು ಬಯಸುವವನು ಮಹಾಪ್ರಯತ್ನ ಹಾಗೂ ಭಗವದನುಗ್ರಗಳ ಕಡೆಗೆ ಸಾಗಬೇಕು, ಸಾಧಿಸಬೇಕು. ಭಗವಂತನನ್ನು ಒಲಿಸಬೇಕು. ಇದು ಸಾಧಕರ ಅನುಭವದ ಮಾತು. ಈ ಮಾತಿನ ಪೂರ್ಣ ಅರ್ಥ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು. ಅವರು ಬಾಲ್ಯದಿಂದಲೂ ಅಭ್ಯಾಸ - ಅನುಗ್ರಹಗಳನ್ನು ಮೇಳೈಸಿಕೊಂಡೇ ಬೆಳೆದವರು. ಅವರ ಜೀವನ ಅಧ್ಯಯನ ಅಧ್ಯಾಪನಗಳಿಗೆ ಸವೆದಂತೆ ತಪಸ್ಸಿಗಾಗಿಯೂ ಪೂರ್ಣಸವೆದ ಜೀವನ. 'ಬ್ರಾಹ್ಮಣ ದೇಹವಿರುವುದು ಕ್ಷುದ್ರ ಭೋಗಕ್ಕಾಗಿ ಅಲ್ಲ. ಕಠಿಣ ತಪಸ್ಸಿಗಾಗಿ. ಆ ತಪಸ್ಸಿನಿಂದ ಉತ್ತಮ ಆನಂದವನ್ನು ಪಡೆಯುವುದಕ್ಕಾಗಿ' ಎಂಬ ಮಾತಿನ ಅರ್ಥವನ್ನು ಸಾರುವ ಜೀವನ.

ಈ ತಪಸ್ಸು ಎರಡು ಬಗೆಯದು. ಶಾಸ್ತ್ರಾಭ್ಯಾಸಾದಿಗಳು ಬೌದ್ಧಿಕ ತಪಸ್ಸಾದರೆ ಜಪೋಪವಾಸಾದಿಗಳು ದೈಹಿಕ ತಪಸ್ಸು. ಇವೆರಡರಲ್ಲೂ ಮನಸ್ಸು ಸೇರಿರಲೇಬೇಕು. ಶ್ರೀಪಾದರ ಶಾಸ್ತ್ರಾಭ್ಯಾಸ ರೂಪದ ತಪಸ್ಸಿನ ಕುರಿತು ನಾವು ಹೇಳಬೇಕಿಲ್ಲ. ಅಂತೆಯೇ ದೈಹಿಕ ತಪಸ್ಸುಕೂಡ. ಆದರೆ ಅವರ ದೈಹಿಕ ತಪಸ್ಸನ್ನು ಎಷ್ಟೋ ಮಂದಿ ತಿಳಿಯರು.

ಏಕಾದಶೇಂದ್ರಿಯಗಳನ್ನು ನಿಯಂತ್ರಿಸುವ ಮೂಲಕ ಭಗವಂತನನ್ನು ಒಲಿಸಲು ಏಕಾದಶಿಯನ್ನು ಆಚರಿಸುವುದು ಸರ್ವವಿದಿತ ವಿಷಯ. ಅದರಂತೆ ವಿಷ್ಣುಪಂಚಕ ವ್ರತ, ಭೀಷ್ಮ ಪಂಚಕ ವ್ರತಗಳು ಪ್ರಸಿದ್ಧಗಳು. ಇವುಗಳನ್ನು ಕೆಲವರು ಮಾತ್ರ ಮಾಡುವರು. ಕೃಚ್ಛ್ರ ಚಾಂದ್ರಾಯಣಾದಿಗಳೂ ಈ ಪಂಕ್ತಿಯಲ್ಲಿ ಸೇರುವುವು. ಈ ತರಹದ ವ್ರತಗಳನ್ನು ಆಚರಿಸುವುದನ್ನು ನಾವು ನೋಡುತ್ತೇವೆ, ಕೇಳುತ್ತೇವೆ.

ಆದರೆ ಒಬ್ಬ ಸಾಮಾನ್ಯ ವ್ಯಕ್ತಿಯಿಂದ ಆಚರಿಸಲು ಅಸಾಧ್ಯವಾದ ಒಂದು ವ್ರತವಿದೆ ಅದು 'ಕಾಷ್ಠ ಮೌನವ್ರತ'.

ಅದರ ಹೆಸರೇ ಹೇಳುವಂತೆ ಈ ವ್ರತದಲ್ಲಿ ಮೌನವೇ ಪ್ರಧಾನ, 'ಕಾಷ್ಠ' ಎಂದರೆ ಮರದ ತುಂಡು. ಅದರಂತೆ ಇದ್ದು ಅಮೌನಟವನ್ನು ತಾಳುವ ವ್ರತ. ಇದು ಒಂದೆರಡು ದಿನಗಳ ವ್ರತವಲ್ಲ. 48 ದಿನಗಳ ವ್ರತ. ಈ ವ್ರತದ ಪರಿಚಯವಾದಾಗ ನಮಗೆ ಇದು ಅಸಾಧ್ಯವೆಂದೆನಿಸುವುದು. ಕಾರಣ, ದಿನವಿಡೀ ಹಾಳು ಹರಟೆಯಲ್ಲಿಯೇ ತೊಡಗುವ ನಮ್ಮ ಅಬಾಯಿಟಗೆ ಈ ವ್ರತ ಹಿಡಿಸದು. ಆದರೆ ಕೆಲವರು ಹಟದಿಂದ ತುಟಿಗಳನ್ನು ಬಿಗಿಹಿಡಿದು ಮೌನವನ್ನು ತೋರುವರು. ಅವರ ತುಟಿಗಳಿಂದ ಮಾತುಗಳು ಕೇಳಿಬರದಿದ್ದರೂ ಅವರ ಕೈಗಳು, ಕಣ್ಣುಗಳು ಶಬ್ದವಿಲ್ಲದೆ ಮಾತಾಡುತ್ತಿರುತ್ತವೆ. ಇಂತಹ ಮೌನವು, ವ್ರತವೆಂದೆನಿಸದು ಏಕೆಂದರೆ 'ಬಾಹ್ಯಪ್ರಾಪಂಚ'ದ ಬಗ್ಗೆ ಅವರ ತುಟಿ ಪಿಟಕ್ಕೆನದಿದ್ದರೂ ಅವರ ಮನಸ್ಸು ಮಾತ್ರ ಪ್ರಪಂಚದಲ್ಲೇ ಮುಳುಗಿರುವುದು. ಹೀಗಾಗಿಯೇ ಆ ಮನಸ್ಸು ಕಣ್ಣು ಕೈಗಳ ಮೂಲಕ ಸನ್ನೆ ನೀಡುತ್ತದೆ. ಆದ್ದರಿಂದ ಇಂತಹ ಕೇವಲ ವದನದ ಮೌನವಾಗಬಾರದು. ಜೊತೆಯಲ್ಲಿ ಬಾಹ್ಯ ಪ್ರಪಂಚದ ಬಗ್ಗೆ ಮನಸ್ಸೂ ಮೌನವನ್ನು ತಾಳಬೇಕು. ಆ ಮನಸ್ಸು ಭಗವಂತನಲ್ಲಿರಬೇಕು. ಆಗಲೇ ಈ ಮೌನ ಸಾರ್ಥಕ.

ಈ ಮೌನಕ್ಕೆ ಸಹಕಾರಿಯಾಗಿ ನಿರಶನವೂ ಸೇರಿರಬೇಕು. ಉಪವಾಸವನ್ನು ಆಚರಿಸಬೇಕು. ಇದು ಅತಿಕಠಿಣವಾದುದು. ಒಂದೆರಡು ಅಥವಾ ಐದಾರು ದಿನಗಳವರೆಗೆ ಉಪವಾಸವನ್ನು ಮಾಡುವುದೇ ಕಠಿಣ. 48 ದಿನಗಳವರೆಗೆ ಉಪವಾಸವಿರುವುದು ಸಾಮಾನ್ಯ ಮನುಷ್ಯರಿಂದ ಊಹಿಸಲೂ ಅಸಾಧ್ಯವಾದುದು. ಆದರೆ ಇಂತಹ ವ್ರತವನ್ನು ಆಚರಿಸಿ ತೋರಿಸಿದವರು ಶ್ರೀಮದಾಚಾರ್ಯರು. ಅವರ ಆಚರಣೆಯ ಕ್ರಮ ಉದ್ದೇಶಗಳನ್ನು ಶ್ರೀನಾರಾಯಣ ಪಂಡಿತಾಚಾರ್ಯರು ಬಿತ್ತರಿಸಿರುವರು.

ಭಾರತದ ಉತ್ತರದಲ್ಲೊಂದು ಎತ್ತರದ ಪರ್ವತ. ಅದು ಅಹಿಮಾಲಯಟ ಎಂದು ಪ್ರಖ್ಯಾತ. ಶ್ರೀಕಾಂತನ ಏಕಾಂತಭಕ್ತ ಸಾಧಕರಿಗೆ ಉತ್ತಮ ನಿಕೇತ. ಬುಡದಲ್ಲಿ ತರುಗುಲ್ಮಲತೆಗಳಿಂದ ಆವೃತ. ಎತ್ತರಕ್ಕೆ ಹೋದಂತೆ ಅಹಿಮಾವೃತಟ ಇದರಲ್ಲಿರುವ ಗಿರಿಶಿಖರಗಳನಿಕರ ಗಗನ ಚುಂಬಿತ ಒಡನೆಯೇ ಶತ್ರುಪಡೆಯಪೀಡೆಯಾಗದಂತೆ ತಡೆವ ಭಾರತದ ತ್ರಾತ ಪ್ರಜೆಗಳನ್ನು ಪವಿತ್ರೀಕರಿಸುವ ತೀರ್ಥಗಳಿಗೆ ಆಶ್ರಯದಾತ. ಹೀಗೆಲ್ಲ ಅನೇಕ ಕಾರಣಗಳಿಂದಲೇ ಇದರ ಬಗ್ಗೆ ಭಾರತೀಯರಲ್ಲಿ ಮೂಡಿದ ಭಾವನೆ ಅಇದು ದೇವತಾಟ.

ಈ ಹಿಮಗಿರಿಯಲ್ಲೊಂದು ಕ್ಷೇತ್ರ ಅಬದರಿಕಾಶ್ರಮಟ ಯಮಕುಮಾರಾರಿಂದ ನರ-ನಾರಾಯಣರು ತಪಸ್ಸಿಗಾಗಿ ಕುಳಿತ ಕ್ಷೇತ್ರ. ಶ್ರೀಹರಿಯ 8 ಸ್ವಯಂ ವ್ಯಕ್ತ ಕ್ಷೇತ್ರಗಳಲ್ಲಿ ಇದೂ ಒಂದು. ಇಲ್ಲಿ ಅರುಣೋದಯದ ಮುಹೂರ್ತದಲ್ಲಿ ಶ್ರೀಮದಾಚಾರ್ಯರು ಅಲಕನಂದೆಯಲ್ಲಿ ಮುಳುಗಿ ಸ್ನಾನ ಮಾಡುತ್ತಿದ್ದರು.ಹಿಮಕರಗಿ ಬರುವ ನೀರು ತುಂಬಿ ಹರಿಯುವ ನದಿ ಅಲಕನಂದಾ ಸಾಮಾನ್ಯವಾಗಿ ಅವಳನ್ನು ಸ್ಪರ್ಶಿಸಿದರೆ ಬೆರಳು ಸೀಳಾಗುವುದು. ಮುಳುಗಿದರೆ

ಏನಾದೀತು? ದೇಹದ ರಕ್ತಸಂಚಾರ ಸ್ಥಗಿತ (ಬುದ್ಧಿ ವ್ಯಾಪಾರ ಎಲ್ಲವೂ) ಹೀಗಾಗಿ ಪ್ರಾಣಭಯದಿಂದ ಮನುಷ್ಯರು ಇವಳನ್ನು ಮುಟ್ಟಲೂ ಮುಂದಾಗರು. ಆದರೆ ಪಂಚಭೂತಗಳಿಗೂ ಅಧಿಪತಿಗಳಾದ ಆಚಾರ್ಯರಿಗೆ ಇದು ಯಾವ ರೀತಿಯಲ್ಲೂ ಬಾಧಕವಾಗದು. ಅವರು ಸಂಕಲ್ಪ ಪೂರ್ವಕವಾಗಿ ಸ್ನಾನವನ್ನು ಮಾಡುತ್ತಿದ್ದರು. ಸ್ನಾನದ ನಂತರದಲ್ಲಿ ವಿಶೇಷವಾಗಿ ಭಗವಂತನ ಧ್ಯಾನ ಅರ್ಚನಾದಿಗಳನ್ನು ಪಾಠ-ಪ್ರವಚನಾದಿಗಳನ್ನು ಮಾಡುತ್ತಿದ್ದರು. ಹೀಗೆಯೇ 48 ದಿನಗಳನ್ನು ಕಳೆದರು. ಅದನ್ನು ಕೊನೆಯಲ್ಲಿ ಶ್ರೀಮನ್ನಾರಾಯಣನಿಗೆ ಅರ್ಪಿಸಿದರು. ಇದು ಯಾವುದೋ ಒಂದು ಅಭೀಷ್ಟಸಿದ್ಧಿಗಾಗಿ ಅವರು ಮಾಡಿದ ವ್ರತವಲ್ಲ. ಸದಾ ವ್ರತಿಗಳಾದ, ಭಗವಂತನನ್ನು ಕಾಣುವ ಅವರಿಗೆ ಈ ವ್ರತದ ಅವಶ್ಯಕತೆಯಿಲ್ಲ. ಆದರೆ ಸಾಧಕ ಜೀವರಿಗೆ ದಾರಿ ತೋರಲು ಮಾತ್ರ ಈ ಅನುಷ್ಠಾನ ಪ್ರದರ್ಶನ. ಆಚಾರ್ಯರ ನಂತರದಲ್ಲಿ ಈ ಬದರಿಕ್ಷೇತ್ರದಲ್ಲಿ ಮಹಾವ್ರತದ ಅನುಷ್ಠಾನವನ್ನು ನಮ್ಮ ಪ್ರಾಚೀನರಲ್ಲಿ ಅನೇಕರು ಮಾಡಿರಬಹುದು. ಆದರೆ ಆ ದಾಖಲೆ ಯಾವುದೂ ನಮಗೆ ದೊರೆತಿಲ್ಲ. ದಾಖಲೆಗೊಂಡ ಕಾಷ್ಠಮೌನ ವ್ರತಿಗಳು ಎಂದರೆ ಶ್ರೀ ಪಲಿಮಾರುಮಠದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು.

1961ರಲ್ಲಿ ಶ್ರೀಗಳು ಬದರೀಕ್ಷೇತ್ರಕ್ಕೆ ಬಂದರು. ಇದು ಅವರ ಎರಡನೆಯ ಬಾರಿಯ ಬದರೀ ಯಾತ್ರೆ. ಬದರಿಗೆ ಬಂದ ಶ್ರೀಪಾದರಿಗೆ ಅಲ್ಲಿಯೇ ಇರುವ ಬಯಕೆ ಮೂಡಿತು. ಆಚಾರ್ಯರು ತೋರಿದ ಈ ವ್ರತಾಚರಣೆಯ ಸಂಕಲ್ಪ ಬಲವಾಯಿತು. ಕಾರ್ಯರೂಪಕ್ಕೂ ಬಂದಿತು. ಶ್ರೀಪಾದರಿಗೆ ಇದೇ ನಿರ್ಣಯ. ಆದರೆ ಪರಿವಾರಕ್ಕೆ ಚಳಿಯ ಭಯ. ಎನ್.ವಾಸುದೇವ, ಮೂಗೂರುಮಧ್ವಾಚಾರ್ಯ, ವೆಂಕಟನಾರಾಯಣ ಕೆಕುಡ, ಈ ಮೂವರನ್ನು ಮಾತ್ರ ಬಿಟ್ಟು ಉಳಿದವರೆಲ್ಲ ಹರಿದ್ವಾರಕ್ಕೆ ಮರಳಿದರು. ಶ್ರೀಗಳ ಮನದಾಸೆಗೆ ಸರಿಯಾಗಿ ಆ ಬದರಿನಾರಾಯಣ ತನ್ನ ಸನ್ನಿಧಿಯ ಸನಿಹದಲ್ಲಿಯೇ ಒಂದು ವ್ಯವಸ್ಥೆಯನ್ನು ಕಲ್ಪಿಸಿದ. ಛತ್ರವೊಂದರಲ್ಲಿ ಶ್ರೀಪಾದರ ವಾಸ. ಶ್ರೀಪಾದರ ಅಂದಿನ ಕಾರ್ಯಕ್ರಮ ಹೀಗಿತ್ತು. ಬೆಳಗಿನ ಝಾವ ನಾಲ್ಕು ಗಂಟೆಗೆ ಏಳುವುದು ಬಾಹ್ಯಶೌಚಗಳನ್ನು ಪೂರೈಸುತ್ತಿದ್ದರು. ಭೋರ್ಗರೆವ ಅಲಕನಂದೆಯಲ್ಲಿ ಅವಗಾಹನ ಸ್ನಾನವನ್ನು ಮಾಡುತ್ತಿದ್ದರು. ಅನಂತರ 'ಗೀತಾಭಾಷ್ಯ', 'ಬ್ರಹ್ಮಸೂತ್ರ ಪಾಠ' ಮಧ್ಯಾಹ್ನದ ಸ್ನಾನ ಅಲಕನಂದೆಯಲ್ಲಿ. ಅನಂತರದಲ್ಲಿ ಶ್ರೀ ಸೀತಾರಾಮ ಲಕ್ಷ್ಮಣರ ಅರ್ಚನ, ಮತ್ತೆ ಜಪ, ಸಾಯಂಕಾಲ ಮತ್ತೆ ನಾರದ ಕುಂಡದಲ್ಲಿ ಸ್ನಾನ. ಸೀತಾರಾಮಚಂದ್ರರಿಗೆ ರಾತ್ರಿ ಪೂಜೆ. ಸರ್ವಮೂಲ ಗ್ರಂಥಗಳ ಪಾರಾಯಣ ಕೊನೆಯಲ್ಲಿ ಭಗವಂತನ ಸ್ಮರಣೆ ಮಾಡುತ್ತಲೇ ಶಯನ. ಈ ರೀತಿಯ 48 ದಿನಗಳಲ್ಲಿ ಅವರ ಆಹಾರ ಒಂದೇ ಒಂದು ಲೋಟದಲ್ಲಿ ಹಾಲು. ಭಗವಂತನಿಗರ್ಪಿತವಾದ ಹಾಲು. ಈ ಹಾಲು ಎಷ್ಟು ಆಹಾರಾವಾದಿತು?. ಪೂರ್ಣ ಉಪವಾಸದಂತೆ ಹೀಗೆ ಉಪವಾಸ ಸಹಿತ ಮೌನವ್ರತವನ್ನಾಚರಿಸಿ ಮಧ್ವಾಂತರ್ಗತ ಬದರಿ ನಾರಾಯಣನಿಗೆ ಅರ್ಪಿಸಿದರು. ಈ ಶ್ರೇಷ್ಠವ್ರತವನ್ನಾಚರಿಸಿದ ಫಲವಾಗಿಯೇ ಪ್ರಾಯಃ ಅವರೇ ಎಣಿಸದಂತೆ ಶ್ರೀಕೃಷ್ಣಪೂಜಾಭಾಗ್ಯ ಪ್ರಾಪ್ತವಾಗಿರಬೇಕು.

ಅವರ ನಂತರ ಅವರ ಶಿಷ್ಯರಾದ ಶ್ರೀ ಶ್ರೀ ವಿದ್ಯಾಧೀಶತೀರ್ಥರೂ 1997ರಲ್ಲಿ ವೈಶಾಖ ಹಾಗೂ ಜ್ಯೇಷ್ಠಮಾಸಗಳಲ್ಲಿ ಕಾಷ್ಠಮೌನ ವ್ರತವನ್ನಾಚರಿಸಿ ಭಗವಂತನಿಗೆ ಅರ್ಪಿಸಿದರು. ಪಾಠ ಪಾರಾಯಣ, ಜಪ-ಪೂಜೆಗಳನ್ನು ಬಿಟ್ಟು ಬೇರೆವ್ಯವಹಾರವಿಲ್ಲ. ಆಹಾರ ಕೇವಲ ಒಂದು ಲೋಟ ಕಷಾಯ. ಕೊನೆಯಲ್ಲಿ ಅದೂ ಇಲ್ಲವಾಗಿತ್ತು. ಗುರುಗಳಿಗೆ ತಕ್ಕ ಶಿಷ್ಯರು ತಾವು ಎಂದು ಸಾಬೀತು ಪಡಿಸಿದ ಯತಿವರರು. ಶ್ರೀ ಶ್ರೀ ವಿದ್ಯಾಧೀಶತೀರ್ಥರು. ಅವರೊಂದಿಗೆ ಇದ್ದ ಅವರ ಶಿಷ್ಯರು ರಾಮಮೂರ್ತಿಭಟ್, ಗಿರೀಶ ಉಪಾಧ್ಯಾಯ, ಮುಳಬಾಗಿಲು ಮೋಹನಾಚಾರ್ಯ, ಚಿತ್ರದುರ್ಗ ರಘುರಾಮಚಾರ್ಯ, ಶೈಲೇಶರಾವ್, ಜನಾರ್ಧನ ಭಟ್, ಕೋಟೇಶ್ವರ ಸುಬ್ರಹ್ಮಣ್ಯ ಭಟ್ ಹಾಗೂ ಲೇಖಕ.



# ನೈಷ್ಠಿಕ ಯತಿಜೀವನ

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಹಂಸ (ಸಂನ್ಯಾಸಿ)ಗಳ ಸಮೂಹದಲ್ಲಿ ರಾಜನಂತೆ ರಾರಾಜಿಸಿದರು. ಪುಟಕ್ಕಿಟ್ಟ ಅಪ್ಪಟ ಚಿನ್ನದಂತಿರುವ ವ್ಯಕ್ತಿತ್ವವುಳ್ಳವರು. ನಾವು ಇಂದಿನ ಜೀವನದಲ್ಲಿ ಕಾಣುವಂತೆ, ಕೆಲವರು ಕೀರ್ತಿಸಂಪತ್ತುಗಳಿಗೆ ಸಂನ್ಯಾಸವನ್ನು ಸ್ವೀಕರಿಸುತ್ತಾರೆ. ಇಂತಹವರಿಗೆ ಸಂನ್ಯಾಸವು ಅನಿವಾರ್ಯವಾಗಿ ಒಳ್ಳೆಯ ವರ್ಚಸ್ಸನ್ನು ನೀಡುತ್ತದೆ. ಅವರು ಅದನ್ನು ಸಂಪೂರ್ಣ ದುರುಪಯೋಗ ಪಡಿಸುತ್ತಾರೆ. ಇಂತಹ ವ್ಯಕ್ತಿಗಳನ್ನು ಆಶ್ರಯಿಸಿದ ಪ್ರಯುಕ್ತ ಸಂನ್ಯಾಸವು ತನ್ನ ವರ್ಚಸ್ಸನ್ನು ಕಳೆದುಕೊಳ್ಳುತ್ತದೆ. ಇದರಿಂದ ಕಾಲಕೆಟ್ಟು ಹೋಯಿತು, ಧರ್ಮನಾಶವಾಯಿತು ಎಂಬ ಸಂಶಯ ಭಯ ತಲೆದೋರುವುದು. ಆದರೆ ಕಾಲ ಎಂದಿಗೂ ಕೆಡುವುದಿಲ್ಲ. ಬದಲಾಗಿ ಕೆಡುತ್ತಿರುವವರು ನಾವು. ಅವನತಿಯತ್ತ ನಾಗುತ್ತಿರುವವರು ನಾವು. ನಾವು ಸರಿಯಿದ್ದರೆ ಎಲ್ಲವೂ ಸರಿಯಾಗಿರುವುದು. ಪರಿಸರವು ಎಂತಹ ವಿಷಪೂರಿತವಾದರೂ ಸಾಧಕನಿಗೆ ಅಡ್ಡಿಯಾಗಲಾರದು. ಅದಕ್ಕೆ ಜ್ವಲಂತ ದೃಷ್ಟಾಂತ ಶ್ರೀವಿದ್ಯಾಮಾನ್ಯತೀರ್ಥರು. ಅವರು ಕೀರ್ತಿ ಸಂಪತ್ತುಗಳಿಗಾಗಿ ಸಂನ್ಯಾಸವನ್ನು ಹುಡುಕಿಕೊಂಡು ಉಡುಪಿಗೆ ಬಂದವರಲ್ಲ. ಅಧ್ಯಯನಕ್ಕಾಗಿ ಆಗಮಿಸಿದವರು. ಆದರೆ ತುರೀಯಾಶ್ರಮಪ್ರಿಯನಾದ ಭಗವಂತನೇ ಇವರನ್ನು ಆಯ್ಕೆ ಮಾಡಿದನು. ಸಂನ್ಯಾಸವೇ ಅರಿಸುತ ಬಂದು ಇವರನ್ನಾಶ್ರಯಿಸಿತು.

ಸಂನ್ಯಾಸ ಧರ್ಮದ ಅನುಷ್ಠಾನ ಯೋಗ್ಯತೆಯುಳ್ಳವರು ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು ಎಂಬುದು ಅವರ ಜೀವನದ ಸಾಧನೆಯಿಂದ ತಿಳಿಯಿತು. ಸ್ಪಷ್ಟವಾಯಿತು. ಸಂನ್ಯಾಸ ಪಡೆದ ನಂತರ ಅವರ ಮನಸ್ಸು ಯಾವ ಕ್ಷಣದಲ್ಲೂ ಕೀರ್ತಿ ಸಂಪತ್ತುಗಳನ್ನು ಆಲೋಚಿಸಲಿಲ್ಲ. ಅವರ ಮಾತುಗಳು ಅವುಗಳ ಬಗ್ಗೆ ಆಡಲಿಲ್ಲ. ಅವರ ದೇಹ ಅವುಗಳಿಗಾಗಿ ಪ್ರಯತ್ನ ಮಾಡಲಿಲ್ಲ. ಹೀಗೆ ಅವರ ತ್ರಿಕರಣಗಳೂ ಪರಿಶುದ್ಧವಾಗಿದ್ದವು. ಆದ್ದರಿಂದಲೇ ಶ್ರೀಪಾದರು ಸಂನ್ಯಾಸಾಶ್ರಮದ ಶೋಭೆವರ್ಚಸ್ಸುಗಳನ್ನು ಹೆಚ್ಚಿಸುವ ಭೂಷಣವಸ್ತುವೆನಿಸಿದರು. ಈ ಆದರ್ಶಯತಿಯ ತಪಸ್ಸು ಬ್ರಹ್ಮ ಚರ್ಯ, ಭಕ್ತಿಜ್ಞಾನ, ವೈರಾಗ್ಯ ಹಾಗೂ ಪ್ರವಚನಾದಿಗಳಿಂದ ಸಂನ್ಯಾಸವು ತನ್ನ ಗೌರವವನ್ನು ಹೆಚ್ಚಿಸಿಕೊಂಡು ತಲೆಯೆತ್ತಿ ತಿರುಗುವಂತಾಯಿತು. ಅದು ತನಗಾಗುತ್ತಿರುವ ಅಪಚಾರದ ನೋವನ್ನು

ಮರೆಯಲಾರಂಭಿಸಿತು. ಒಟ್ಟಿನಲ್ಲಿ ಇಂದಿರುವ ಹಾಗೂ ಮುಂಬರುವ ಸಂನ್ಯಾಸಕೂಟಕ್ಕೆ ಆದರ್ಶ. ಯತಿಯಾಗಿ ಬಾಳಿದವರು ಶ್ರೀ ವಿದ್ಯಾಮಾನ್ಯತೀರ್ಥರು.

ಯತಿಯಾಗಿ ಅವರ ಕೆಲವು ಚಟುವಟಿಕೆಗಳು ಅತ್ಯಂತ ಆದರ್ಶವೆನಿಸಿವೆ. ದಿನದ 24 ಗಂಟೆಗಳಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ತಪ್ಪದೇ ಮಾಡಿದ ಮಹಾತ್ಮರು ಶ್ರೀಪಾದರು.

ಇವರ ಅನುಷ್ಠಾನಕ್ಕೆ ಶ್ರೀಮದಾಚಾರ್ಯರ ಸದಾಚಾರ ಸ್ಮೃತಿಯೇ ಮಾರ್ಗದರ್ಶಿ. ಬೆಳಗಿನ ಝಾವ ಅರುಣೋದಯದಲೆದ್ದು ಮಂಗಲಾಷ್ಟಕಾದಿಗಳ ಮೂಲಕ ಭಗವಂತನ ಸ್ಮರಣೆಯನ್ನು ತಪ್ಪದೇ ಮಾಡುತ್ತಿದ್ದರು. ಉಳಿದವರಿಗೂ ಮಾಡಿಸುತ್ತಿದ್ದರು. ನಂತರ ಬಾಹ್ಯ ಶೌಚಗಳನ್ನು ವಿಧಿವತ್ತಾಗಿ ಮಾಡುತ್ತಿದ್ದರು. ಅವರ ಆಚಾರ ಶಾಸ್ತ್ರಕ್ಕೆ ವೈದ್ಯ ಶಾಸ್ತ್ರಕ್ಕೆ ಅನುಗುಣವಾಗಿತ್ತು. ಅವರ ಪ್ರಾತಃ ಕಾಲದ ಸ್ನಾನವು ವಿಶಿಷ್ಟವಾಗಿತ್ತು. ಅದು ಅವಗಾಹನಸ್ನಾನ. ಮುಳುಗಿ ಸ್ನಾನ ಮಾಡುವುದು. ಅದು ಅವರ 75 ವರ್ಷಗಳ ಸಂನ್ಯಾಸ ಜೀವನದಲ್ಲಿ ಅನೂಚಾನವಾಗಿ ನಡೆಸಿಕೊಂಡು ಬಂದ ಸಾಧನೆ. ಎಲ್ಲೂ ತಪ್ಪದ ಸ್ನಾನ, ದೇಶದ ಉದ್ದಗಲಕ್ಕೂ ತಿರುಗುವ ಈ ತಪೋಧನರಿಗೆ ಕೆಲವೊಂದೆಡೆ ಮಹಾನದಿಗಳು, ಸರೋವರಗಳು ಏನಾದರೊಂದು ದೊರೆಯುತ್ತಿದ್ದವು. ಇದು ಯಾವುದೂ ಇಲ್ಲದ ಊರಿನಲ್ಲಿ ಇಳಿಯುವ ಬಾವಿಗಳನ್ನು ಹುಡುಕಿ ಅಲ್ಲಿ ಅವಗಾಹನ ಸ್ನಾನವನ್ನು ಮಾಡುತ್ತಿದ್ದರು. ಅದೂ ದೊರೆಯದ ಸ್ಥಳಗಳಲ್ಲಿ ಏನುಮಾಡುವುದು? ಇಂದಿನ ಜನಜೀವನದಲ್ಲಿ ನಗರಗಳಲ್ಲಿ ಬಾವಿಗಳೇ ಇಲ್ಲ ಇಂತಹ ಸಂದರ್ಭದಲ್ಲಿ ಶ್ರೀಗಳು ಏನು ಮಾಡುತ್ತಿದ್ದರು? ಎಂಬ ಪ್ರಶ್ನೆ ಸಹಜ. ಆದರೆ ಆ ಸ್ನಾನ ಮಾತ್ರ ತಪ್ಪುತ್ತಿರಲಿಲ್ಲ. ಅವರ ಅಚಲವಾದ ಅನುಷ್ಠಾನ ದೀಕ್ಷೆಗೆ ತಕ್ಕ ವ್ಯವಸ್ಥೆಯಾಗುತ್ತಿತ್ತು. ಶಿಷ್ಯರು, ಭಕ್ತರು ಸಿಮೆಂಟಿನಿಂದ ನೀರಿನ ತೊಟ್ಟಿಯನ್ನು ಕಟ್ಟಿಸುತ್ತಿದ್ದರು. ಅದರಲ್ಲಿ ಬೋರ್‌ವೆಲ್‌ನ ಮೂಲಕ ನೀರನ್ನು ತುಂಬಿಸುತ್ತಿದ್ದರು. ಅದು ಹರಿಯುವಂತೆ ಮಾಡುತ್ತಿದ್ದರು. ತೊಟ್ಟಿಯಲ್ಲಿ ಒಂದೆಡೆ ನೀರು ಬೀಳುತ್ತಿದ್ದರೆ ಇನ್ನೊಂದೆಡೆ ಹೊರಗೆ ಹೋಗುತ್ತಿತ್ತು. ಆಗ ಶ್ರೀಗಳ ಸಂಕಲ್ಪ ಮುಗಿಯುತ್ತಿತ್ತು. ಶ್ರೀಗಳು ಚೆನ್ನಾಗಿ ಮುಳುಗಿ ಸ್ನಾನ ಮಾಡುತ್ತಿದ್ದರು.

ಇಂತಹ ಶ್ರೀಗಳ ಸ್ನಾನಕ್ಕಾಗಿ ನದಿ, ಸರೋವರ, ಬಾವಿಗಳಿಲ್ಲದ ಅನೇಕ ಮಹಾನಗರಗಳಲ್ಲಿ ಊರುಗಳಲ್ಲಿ ಇಂತಹ ತೊಟ್ಟಿಗಳು ಕಟ್ಟಲ್ಪಟ್ಟಿದ್ದವು. ಅವುಗಳು ಎಂದೆಂದಿಗೂ ಶ್ರೀಗಳವರ ಅವಗಾಹನ ಸ್ನಾನದ ಸಾಕ್ಷಿಗಳಾಗಿ ನಿಂತಿವೆ.

## ನೀರಿನ ಕೃತಕ ಕೊಳಗಳು

ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ - 1, ರಾಮಧಾಮದಲ್ಲಿ -2, ವಿದ್ಯಾಮಾನ್ಯ ನಗರದಲ್ಲಿ - 1, ಮುಂಬೈಯ ಅಂಧೇರಿ ಅದಮಾರು ಮಠದಲ್ಲಿ - 1, ಹೈದ್ರಾಬಾದ್ ಲಿಂಗಂಪಲ್ಲಿ ರಾಯರ ಮಠದಲ್ಲಿ -1, ಮುದಗಲ್ ರಾಘವೇಂದ್ರ ಮಠದಲ್ಲಿ - 1.

ಅದೂ ಅಲ್ಲದೆ ಬೆಂಗಳೂರಿನಲ್ಲಿ ಕಲ್ಯಾಣಿ ರಾಘವೇಂದ್ರ ಮಠದ ಇಳಿಬಾವಿಯಲ್ಲಿಯೂ ಶ್ರೀಪಾದರ ಅವಗಾಹನ ಸ್ನಾನ ಅದೆಷ್ಟೋ ಬಾರಿ ನಡೆದಿದೆ. ವಿಶೇಷವಾಗಿ ಉತ್ತರಾದಿ ಮಠದ ಒಳಾವರಣದಲ್ಲಿರುವ ಇಳಿ ಬಾವಿಯಂತಿರುವ ಪುಟ್ಟ ಸರೋವರದಲ್ಲಿ ಮಾಡಿದ ಅವಗಾಹನ ಸ್ನಾನ ಲೆಕ್ಕವಿಲ್ಲದಷ್ಟು. ★

# ''ಶ್ರೀವಿದ್ಯಾಮಾನ್ಯತೀರ್ಥರ ಆಯ್ಕೆ''

''ಶ್ರೀವಿದ್ಯಾಮಾನ್ಯತೀರ್ಥರ ಆಯ್ಕೆ'' ಇದು ಇಪ್ಪತ್ತು ವರುಷಗಳ ಹಿಂದಿನ ಉದಯವಾಣಿ ದೈನಿಕ ಪತ್ರಿಕೆಯ ಮಾತು. ಅದು ಏಕೆ ಬಂದಿತು? ಸ್ವಲ್ಪ ತಿಳಿಯೋಣ ಬನ್ನಿ.

ಪಲಿಮಾರು ಪೀಠದಲ್ಲಿ ಮುಂದುವರೆಯಬಯಸದ ಶ್ರೀರಘುವಲ್ಲಭರು ತಮ್ಮ ಪೀಠದ ಉಸ್ತುವಾರಿಯನ್ನು ಭಂಡಾರಕೇರಿ ಮಠದ ಶ್ರೀವಿದ್ಯಾಮಾನ್ಯತೀರ್ಥರಿಗೆ ಧಾರೆಯೆರೆದಿತ್ತರು. 1969 ರಂದು ಉಡುಪಿಯ ಪಲಿಮಾರು ಮಠದಲ್ಲಿ ಸಾರ್ವಜನಿಕರ ಹಾಗೂ ಶ್ರೀಪೇಜಾವರ. ಶ್ರೀ ಅದಮಾರುಶ್ರೀಪಾದರ ಸಮಕ್ಷಮದಲ್ಲಿ ಅಧಿಕಾರವನ್ನು ನೀಡಿದರು. ಶ್ರೀವಿದ್ಯಾಮಾನ್ಯತೀರ್ಥರು ಸ್ವೀಕರಿಸಿದರು. ಶ್ರೀಕೃಷ್ಣನನ್ನು ಪೂಜಿಸಿದರು. ಕಾಲಕ್ರಮದಲ್ಲಿ ಅದ್ಭುತ ಎರಡು ಪರ್ಯಾಯಗಳನ್ನೂ ನಡೆಸಿದರು. ಎಲ್ಲವೂ ಮನುಷ್ಯನ ಬುದ್ಧಿಬಲಗಳನ್ನು ಮೀರಿಹೋಯಿತು. ಅದೊಂದು ದೈವೀವವಾಡವಾಯಿತು. ಇದರ ಹಿನ್ನೆಲೆಯಾಗಿ ಶ್ರೀರಘುವಲ್ಲಭತೀರ್ಥರ ವೈಚಾರಿಕ ಉತ್ತಮನಿಶ್ಚಯವಿತ್ತು. ಅಲ್ಲದೆ ಶ್ರೀವಿದ್ಯಾಮಾನ್ಯತೀರ್ಥರ ಅಂತಃಸತ್ವಶುದ್ಧಿ, ತಪಸ್ಸಿದ್ಧಿ, ಶಾಸ್ತ್ರರತಬುದ್ಧಿಗಳಿದ್ದವು. ಅವುಗಳ ಫಲವಾಗಿ ಶ್ರೀಕೃಷ್ಣನ, ಶ್ರೀಮದಾಚಾರ್ಯರ ಅನುಗ್ರಹರಕ್ಷೆಯೂ ಇತ್ತು. ಶ್ರೀಪಾದರ ಭಕ್ತಿಪರಸ್ಸರವಾದ ಅಸಾಧಾರಣ ಪೂಜೆ ಪರ್ಯಾಯಗಳನ್ನು ವೀಕ್ಷಿಸಿದ ಜಗತ್ತು ಬಹುಮೆಚ್ಚಿತು. ಆದರೆ,

ಕೆಲವೊಂದು ಮಂದಿಗಳ ಮಂದೆ ಮಾತ್ರ ಭಂಡಾರಕೇರಿ ಶ್ರೀಪಾದರ ಪಲಿಮಾರು ಮಠಾಧಿಪತ್ಯವನ್ನು ಸಮ್ಮತಿಸಲಿಲ್ಲ. ಬದಲಾಗಿ ಆಕ್ಷೇಪಿಸಿತು. ಅದರ ವಿರುದ್ಧ 7-5-1969 ರಂದು ಕೋರ್ಟಿನ ಕಟಕಟೆಯನ್ನು ಹತ್ತಿತು. ಧರ್ಮಮರ್ಮವ ಮರೆತ ಆ ಜನತೆ ನ್ಯಾಯದೇವತೆಯ ನಿರ್ಣಯವನ್ನು ಕೇಳ ಹೋಯಿತು. ''ಭಂಡಾರಕೇರಿ ಮಠಾಧೀಶಶ್ರೀವಿದ್ಯಾಮಾನ್ಯತೀರ್ಥರು ಪಲಿಮಾರು ಮಠಾಧೀಶರಾಗಿ ಶ್ರೀಕೃಷ್ಣನನ್ನು ಸ್ಪರ್ಶಿಸುವುದು, ಪೂಜಿಸುವುದು ಅಸಿಂಧು''ವೆಂದಿತು. ಅಷ್ಟಮಠಗಳ ಹೊರತು ಇನ್ನಾವ ಮಠದಯತಿಗಳೂ ಕೃಷ್ಣನನ್ನು ಮುಟ್ಟ ಕೂಡದೆಂದೇನೋ ಸಬೂಬುಗಳನ್ನು ನೀಡಿತು. ಈ

ದಾವೆಗೆ ನ್ಯಾಯದೇವತೆಯಿಂದ ಯಾವತೀರ್ಮಾನ ಬಂದಿತು? ಫಲಿತಾಂಶ ಆ ಕೂಟಕ್ಕೆ ವಿರುದ್ಧವಾಗಿತ್ತು. ಶ್ರೀಪಾದರ ಆಯ್ಕೆ ಊರ್ಜಿತವೆಂದೇ ನಿರ್ಣಯ ವಾಯಿತು. ಕಾರಣ, ನ್ಯಾಯಾಲಯದಲ್ಲಿ ನ್ಯಾಯದೇವತೆ ಯೊಂದಿದ್ದರೆ, ಅದು ಇದೇ ನಿರ್ಣಯವನ್ನೇ ನೀಡಬೇಕಿತ್ತು. ಇಲ್ಲವಾದರೆ, ಸತ್ಯ, ನ್ಯಾಯ, ಧರ್ಮ, ತಪಸ್ಸುಗಳೇ ಮೂರ್ತಿಮತ್ತಾದ ಶ್ರೀವಿದ್ಯಾಮಾನ್ಯತೀರ್ಥರ ಪವಿತ್ರ ಬದುಕಿಗೆ ಏನು ಅರ್ಥವಿರುತ್ತಿತ್ತು? ಅದಕ್ಕೂ ಮಿಗಿಲಾಗಿ ಅವರು ನಂಬಿದ ಭಗವಂತನಿಗೆ, ಶಾಸ್ತ್ರಗಳಿಗೆ ಅವಮಾನವಾಗುತ್ತಿತ್ತು. ಆದರೆ ಅದಾವುದೂ ಎಂದಿಗೂ ಆಗದು. ಕಾರಣ, ಸತ್ಯಸಂಕಲ್ಪನಾದ ಭಗವಂತನಿಗೆ ಶ್ರೀಪಾದರು ಅವರ ಪೂಜೆಬೇಕೆನಿಸಿದಾಗ ಯಾರು ಎಷ್ಟು ವಿರೋಧಿಸಿದರೂ ಅದು ಅತ್ಯಂತ ಅಪ್ರಯೋಜಕ ವಾಗುವುದು. ಆದರೂ ಇದು ಕೇವಲ ದೈವಿಕಪವಾಡ ವಾಗಲ್ಲದೆ. ನ್ಯಾಯಾಲಯದ ಮೂಲಕ ಲೌಕಿಕ ವಾಗಿಯೂ ಶ್ರೀಪಾದರ ಶ್ರೀಕೃಷ್ಣಪೂಜಾರ್ಹತೆ ಸಮಂಜಸವೆಂಬ ತೀರ್ಮಾನ ಬೇಕಿತ್ತು. ಅದರಿಂದ ಶ್ರೀಪಾದರ ಸರ್ವೋತ್ಕೃಷ್ಟವ್ಯಕ್ತಿತ್ವ ಜಗದೊಳಗೆ ಬೆಳಗಬೇಕಿತ್ತು. ಆ ಬೆಳಕು ವಿರೋಧವಿಲ್ಲದೆ ಬಾರದಾಗಿತ್ತು. ಅದಕ್ಕಾಗಿ ಕೆಲವರಲ್ಲಿ ಭಗವಂತನಿಂದ ವಿರೋಧದ ಪ್ರೇರಣೆಯಾಯಿತು. ಅದಕ್ಕೆ ಸಮಾಜದ ನ್ಯಾಯಾಲಯ ಬೇಕಾಯಿತು. ನ್ಯಾಯಾಧೀಶರು ನಿಷ್ಪಕ್ಷಪಾತವಾಗಿ ವಿಮರ್ಶಿಸಿ ನ್ಯಾಯಾತ್ಮಕನಿರ್ಣಯ ವನ್ನೀಯಲು ಸುಮಾರು ಒಂದು ದಶಕ ಸಂದಿತು. ತೀರ್ಪು ತೋರಿದ ತಾರೀಖು 30-101980. ಆ ನಿಷ್ಪಕ್ಷಪಾತನ್ಯಾಯವನ್ನು ನೀಡಿದಕೀರ್ತಿ ನ್ಯಾಯಾಧೀಶಶ್ರೀ ಎನ್.ಎಸ್. ಸಂಗೊಳ್ಳಿಯವರಿಗೆ ಸಲ್ಲಿತು. ವಿಶೇಷವೆಂದರೆ ಅವರ ಆ ತೀರ್ಪು ಅಚ್ಚ ಕನ್ನಡದಲ್ಲಿಯೇ ಹೊಮ್ಮಿತು. ಕರ್ನಾಟಕನ್ಯಾಯಾಲಯದ ಇತಿಹಾಸದಲ್ಲಿ ಮೊದಲನೆಯ ಕನ್ನಡದ ತೀರ್ಪಾಗಿ ದಾಖಲೆಯಾಯಿತು. ಸುಮಾರು 94 ಪುಟಗಳಷ್ಟಿರುವ ಆ ತೀರ್ಪು ಗದಗಿನ ನ್ಯಾಯವಾದಿಗಳಾದ ಶ್ರೀ . ಕಾ. ಸ. ಪಾಟೀಲ ಹಾಗೂ ಶ್ರೀ ಎಲ್. ಎ . ಪೋತ್ನಿಸ್ ರಿಂದ ಪ್ರಕಟಗೊಂಡಿತು. ಅಲ್ಲದೆ ಉದಯವಾಣಿ ಪತ್ರಿಕೆಯಲ್ಲಿ ಅನೇಕ ದಿನಕಾಲ ಧಾರಾವಾಹಿಯಾಗಿ ಬಂದಿತು.

ಈ ದಾವೆ ನಡೆದು ನ್ಯಾಯಾಧೀಶ ನಿರ್ಣಯವನ್ನು ನೀಡಿದ ಬಳಿಕ 1993 ಹಾಗೂ 1996 ಮಾರ್ಚ್ 26 ರಂದು ಮರುಪರಿಶೀಲನೆ ನಡೆಯಿಸಿ ಉಚ್ಚನ್ಯಾಯಾಲಯದ ನ್ಯಾಯಮೂರ್ತಿ ಶ್ರೀಕೃಷ್ಣಮೂರ್ತಿ ಹಾಗೂ ಶ್ರೀಅಶ್ವತ್ಥನಾರಾಯಣರನ್ನೊಳಗೊಂಡ ವಿಭಾಗೀಯ ನ್ಯಾಯಪೀಠವು ಶ್ರೀವಿದ್ಯಾಮಾನ್ಯತೀರ್ಥರು ಪಲಿಮಾರು ಮಠಾಧೀಶರಾಗಿ ಶ್ರೀಕೃಷ್ಣನ ಪೂಜೆ ಸಲ್ಲಿಸಲು ಅತ್ಯಂತ ಅರ್ಹರೆಂದು ಸಾರಿದರು.

ಶ್ರೀಪಾದರಿಗೆ ಶ್ರೀಕೃಷ್ಣನ ಪೂಜಾಧಿಕಾರ ಅಕಸ್ಮಾತ್ತಾಗಿ ದೊರೆಯಿತು. ಅದು ಅನಂತರ ಅತ್ಯಂತ ಸಮುಚಿತವೆಂದು ಸಮರ್ಥಿತವಾಯಿತು. ಇದು ಶ್ರೀಪಾದರ ಸುವರ್ಣವ್ಯಕ್ತಿತ್ವಕ್ಕೆ ವಜ್ರದ ಸಂಬಂಧವಾದಂತಾಯಿತು.

ಶ್ರೀನ್ಯಾಯಮೂರ್ತಿ ಸಂಗೊಳ್ಳಿಯವರು ನೀಡಿದ ಉತ್ತಮ ಐತಿಹಾಸಿಕ ತೀರ್ಪಿನ ಕೆಲವೊಂದು ಅಂಶಗಳನ್ನು ಇಲ್ಲಿ ನೀಡಲಾಗಿದೆ.

## ತೀರ್ಪಿನ ಶಿರೋನಾಮ

ಸಿವಿಲ್ ಜಡ್ಜರ ನ್ಯಾಯಾಲಯ. ಉಡುಪಿ.

ಉಪಸ್ಥಿತರು ಎನ್.ಎಸ್. ಸಂಗೊಳ್ಳಿ.
ಎಮ್.ಎ.ಎಲ್.ಎಲ್.ಬಿ

ಸಿವಿಲ್ ನ್ಯಾಯಾಧೀಶರು

ಅಸಲು ದಾವೆಯ ನಂ 11 1969

ವಾದಿಪರ ವಕೀಲರು:

1 ಶ್ರೀ ಬಿ. ವೈ. ಹೊಳ್ಳ

2. ಶ್ರೀ ಪಿ.ಎಸ್, ಕೆ, ರಾವ್

ಪ್ರತಿವಾದಿ ಪರ ವಕೀಲರು:

1. ಶ್ರೀ ಎನ್.ಎಸ್. ರಾವ್

2. ಶ್ರೀ ಕೆ.ಬಿ.ರಾವ್

3. ಶ್ರೀ ವಿ. ಆರ್. ಕಿದಿಯಾರು

4 ಶ್ರೀ ಪಿ.ವಿ.ಆಚಾರ್

5.ಶ್ರೀ ವಿ.ಜಿ. ಕೆದ್ಲಾಯರು.

## ನ್ಯಾಯಾಧೀಶ ತೀರ್ಪಿನ ಕೆಲವು ಮಾತು

1ನೇ ಪ್ರತಿವಾದಿಯು ಬಾಲಬ್ರಹ್ಮಚಾರಿ ಇದ್ದು, ಸಂನ್ಯಾಸಿಯೂ ಆಗಿದ್ದು, ಒಂದು ಮಠದ ಅಧಿಪತಿಯೂ ಆಗಿದ್ದು, ಮಾಧ್ವರಷ್ಟೆ ಏಕೆ? ಭಾರತದ ಎಲ್ಲ ಪಂಡಿತರಿಂದಲೂ ಸಹ ವಿದ್ವಾಂಸರೆಂದು ಗೌರವಿಸಲ್ಪಟ್ಟವರು. ಇವರು ಪರ್ಯಾಯ ಸ್ವಾಮಿಗಳಾ ದರೆ ತಪ್ಪಲ್ಲ. ಅಥವಾ ಸಂಪ್ರದಾಯ ಇಲ್ಲಿ ಅಡ್ಡ ಬರಲಾರದು ಹಾಗೂ ಬರಬಾರದು.

ಉಡುಪಿಯ ಯಾವುದೇ ಅಷ್ಟಮಠದ ಪೀಠಕ್ಕೆ ಉತ್ತರಾಧಿಕಾರಿಯ ನೇಮಕದ ಬಗ್ಗೆ ಒಂದು ಸಂಪ್ರದಾಯ ರೂಪುಗೊಂಡಿದ್ದರೂ ಅದು ಲಿಖಿತವಾದುದು, ನಿರ್ದಿಷ್ಟವಾದುದು ಸ್ಪಷ್ಟವಾದದೂ ಪುರಾತನವಾದುದೂ ಆಗಿಲ್ಲ. ಸಾಮಾನ್ಯವಾಗಿ ತುಳು ಶಿವಳ್ಳಿಬ್ರಾಹ್ಮಣ ಬ್ರಹ್ಮಚಾರಿಯನ್ನು ಹಿಂದೂಶಾಸ್ತ್ರವಿಧಿಯಂತೆ ಸಂನ್ಯಾಸಿ ಆಶ್ರಮಕೊಟ್ಟು ಅಷ್ಟಮಠದ ಪಟ್ಟಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡುವುದು ಎಂದು ತಿಳಿಯಬಹುದಾದರೂ , ಇದನ್ನು ಶ್ರೀಮಧ್ವಾ ಚಾರ್ಯರೇ ಆದಿಯಾಗಿ ಖಚಿತವಾಗಿ ಅನುಸರಿಸಿ ಬಂದಿಲ್ಲವಾದ್ದರಿಂದ ಮತ್ತು ವಾದಿಯರು ಹೇಳುವುದು ಕೇವಲ 'ಮಧ್ವಾಚಾರ್ಯರ ಕಾಲದಿಂದ ಅದು ಪ್ರಾರಂಭವಾಗಿದೆ ಎನ್ನುವುದರಿಂದ ಅದು ಪುರಾತನವೆಂದು ಕರೆಯಲಾಗುವುದರಿಂದ ಅದು ಖಚಿತವಾದ ಕಾನೂನಿನ ಬಲವನ್ನು ಪಡೆದ ಸಂಪ್ರದಾಯ ಅಲ್ಲ. ಅದು ಅಂಥದು ಎಂದು ವಾದಿಯರು ರುಜುವಾತುಪಡಿಸಿಲ್ಲ.

ವಿವಾದಾಂಶ ನಂ 10 - 1ನೇ ಪ್ರತಿವಾದಿಯ 9ನೇ ಪ್ರತಿವಾದಿ ಶ್ರೀಕೃಷ್ಣನ ಮೂರ್ತಿಯನ್ನು ಪೂಜೆ ಮಾಡಿರುವುದರಿಂದ ಅದು ದೂಷಿತವಾಗಿದೆ, ಅಪವಿತ್ರಗೊಳಿಸಲ್ಪಟ್ಟಿದೆ ಹೀಗಾಗಿ ತಮಗೆ ಅನ್ಯಾಯವಾಗಿದೆ ಎಂದು ವಾದಿಯರು ಹೇಳಿರುತ್ತಾರೆ. ನಿಶಾನೆ ಪಿ. 2 ರ 130ರಿಂದ 140ನೇ ಶ್ಲೋಕಗಳಲ್ಲಿ ''ವಿಗ್ರಹವು ಯಾವಯಾವ ಸಂದರ್ಭದಲ್ಲಿ ಮಲಿನವಾಗುತ್ತದೆ'' ಎನ್ನುವದನ್ನು ಹೇಳುತ್ತಾರೆ. ಅವುಗಳ

ಸಾರಾಂಶವೆಂದರೆ ಚೋರಚಾಂಡಾಲಇತ್ಯಾದಿಗಳು ಮುಟ್ಟಿದರೆ ದೇವತಾ ವಿಗ್ರಹಗಳು ಅಪವಿತ್ರವಾಗುತ್ತವೆ. ಇಲ್ಲಿ. 'ಇತ್ಯಾದಿ ಎಂಬಲ್ಲಿಯ 'ಆದಿ' ಎಂಬ ಶಬ್ದದ ಅರ್ಥವೇ 1ನೆಯ ಪ್ರತಿವಾದಿಯು ಆಗಿರುತ್ತಾರೆಂದು ವಾದಿಯರ ವಾದ. ಏಕೆಂದರೆ ಅವರು ಅಷ್ಟಮಠದ ಸ್ವಾಮಿಗಳಲ್ಲ. ಅವರು ಭಂಡಾರಕೇರಿಮಠದ ಸ್ವಾಮಿಗಳು ಆದ್ದರಿಂದ ಹಕ್ಕಿಲ್ಲದೆ ವಿಗ್ರಹವನ್ನು ಮುಟ್ಟಿರುವುದು ತಪ್ಪು. ಅದು ಅನಾಚಾರ. ಆದ್ದರಿಂದ ವಿಗ್ರಹ ಅಪವಿತ್ರವಾಗಿದೆ' ಎಂದು ವಾದಿಯರ ವಾದ. ಆದರೆ ಚೋರಚಾಂಡಾಲ ಈ ಪದಗಳೊಂದಿಗೆ 'ಇತ್ಯಾದಿ' ಪದವನ್ನು ಸೇರಿಸಿರುವುದರಿಂದ 'ಇತ್ಯಾದಿ'ಎಂಬಲ್ಲಿಯ 'ಆದಿ' ಶಬ್ದದಿಂದ ಚೋರಚಾಂಡಾಲಜಾತಿಯ ಪದಗಳನ್ನು ಮಾತ್ರವೇ ಸೇರಿಸಬೇಕಲ್ಲದೇ ನಮ್ಮ ಮನಸ್ಸಿಗೆ ಬಂದ ಯಾವುದೇ ಶಬ್ದಗಳನ್ನು ಸೇರಿಸುವಂತಿಲ್ಲ. ಇದು ಶಾಸನಗಳನ್ನು ಅರ್ಥೈಸುವಾಗ ಅನುಸರಿಸುವ ಒಂದು ಸಾರ್ವಕಾಲಿಕ ಸತ್ಯವಾದ ಸಿದ್ಧಾಂತ. ಇಲ್ಲಿ 1ನೆಯ ಪ್ರತಿವಾದಿಯು ಚಾಂಡಲನಂತೂ ಅಲ್ಲ. ಆ ಪ್ರವರ್ಗದ ಅರ್ಥಬರುವ ಯಾವ ಪದದ ವ್ಯಾಪ್ತಿಯಲ್ಲೂ ಅವರು ಬರುವುದಿಲ್ಲ. ಏಕೆಂದರೆ ಅವರು ಎರಡನೆಯ ವಾದಿಗೆ ತಿಳಿಯದೆ ಅವರ ಮನಸ್ಸಿನ ವಿರುದ್ಧ ಅವರ ಸ್ವತ್ತನ್ನೂ ಅಪಹರಿಸಿ ಅಂತಹ ಕಾರ್ಯ ಮಾಡಿದ ಬಗ್ಗೆ ಯಾವ ಸಾಕ್ಷ್ಯವನ್ನು ವಾದಿಯರು ಹಾಜರು ಪಡಿಸಿಲ್ಲ. ಅಲ್ಲದೆ ಇಲ್ಲಿ ಲಭ್ಯವಿರುವ ಸಾಕ್ಷ್ಯದ ಮೇಲಿಂದ 1ನೇ ಪ್ರತಿವಾದಿಯು ಜ್ಞಾನಿಯೆಂಬುದನ್ನು ಒಪ್ಪಲೇಬೇಕಾದ ಸಂಗತಿಯಾಗಿರುತ್ತದೆ. ಅದೂ ಅಲ್ಲದೆ ವಾದಿಯರಾದ ಸ್ವಾಮಿಗಳು 1ನೇ ಪ್ರತಿವಾದಿಯು ಪರ್ಯಾಯವನ್ನೂ ಮುಕ್ತಾಯಗೊಳಿಸಿದ ಅನಂತರ ತಾವು ಶ್ರೀಕೃಷ್ಣನ ವಿಗ್ರಹವನ್ನು ಶುಚಿಗೊಳಿಸಿಲ್ಲ. ಎನ್ನುತ್ತಾರೆ. ದೂಷಿತವಾದ ವಿಗ್ರಹಗಳನ್ನು ಪವಿತ್ರಗೊಳಿಸಲು ಅನೇಕ ವಿಧಾನಗಳನ್ನು ವಾದಿಯರು ಹಾಜರು ಪಡಿಸಿದ ಧರ್ಮಶಾಸ್ತ್ರಸಾಹಿತ್ಯದಲ್ಲೆಲ್ಲ ಹೇಳಲಾಗಿದೆ. ಒಂದು ವೇಳೆ ಮೂರ್ತಿ ಅಪವಿತ್ರವಾಗಿದ್ದರೆ, ಅದನ್ನು ಶುದ್ಧಗೊಳಿಸದೇ ಮುಂದಿನವರು ಪೂಜಿಸಬೇಕೇ? ಉತ್ತರ ಸ್ಪಷ್ಟ. ಆ ಮೂರ್ತಿ ಅಪವಿತ್ರವಾಗಿಲ್ಲ. ಆದ್ದರಿಂದ ಆ ಬಗ್ಗೆ ಹೆಚ್ಚಿನ ಚರ್ಚೆ ಅನಗತ್ಯ ಎಂದು ತೋರುತ್ತದೆ. ಆದರೆ ಇನ್ನೊಂದು ವಿಷಯವನ್ನು ಗಮನಿಸಲೇಬೇಕು. ಏನೆಂದರೆ ಶ್ರೀಕೃಷ್ಣನ ವಿಗ್ರಹವು ಸಾಲಿಗ್ರಾಮ ಶಿಲೆಯೆಂದು ಒಪ್ಪಿದ ಮತ್ತು ರುಜುವಾತಾದ ಸಂಗತಿ ಅದು. ಸ್ವಯಂ ವ್ಯಕ್ತ ಅಂದರೆ ಅದರಲ್ಲಿ ದೇವರಸನ್ನಿಧಾನವು ಸ್ವತಃಸಿದ್ಧ. ಆದ್ದರಿಂದ ಅಂಥ ಮೂರ್ತಿಯನ್ನು 1ನೇ ಪ್ರತಿವಾದಿಯರು ಮುಟ್ಟಿದರೆ ಅಪವಿತ್ರವಾಗಲಾರದು.

ಶ್ರೀಮಧ್ವಾಚಾರ್ಯರ ತಪಸ್ಸಿಗೆ, ಭಕ್ತಿಗೆ, ತಾನೇ ಒಲಿದು ಬಂದ ಮೂರ್ತಿ ಅದು. ಕನಕನ ಭಕ್ತಿಗೆ ಒಲಿದ ಮೂರ್ತಿ ಅದು. ಭಕ್ತಿಯಿಂದ ಪ್ರೀತಿಯಿಂದ ಅಚಲವಿಶ್ವಾಸ ಶ್ರದ್ಧೆಗಳಿಂದ ತನ್ನ ಹತ್ತಿರ ಬಂದ ರುಗ್ಮಿಣಿಗೆ ಕೃಷ್ಣನೇ ಆಗಿರುವ ಮೂರ್ತಿ ಅದು. ಆದ್ದರಿಂದ ಮಧ್ವರ ತಪಸ್ಸು, ಕನಕನಭಕ್ತಿ,ರುಗ್ಮಿಣಿಯ ನಿರ್ವ್ಯಾಜಪ್ರೇಮಗಳು, ಆ ಮೂರ್ತಿಯನ್ನು ಮುಟ್ಟಿ ಪೂಜಿಸಲು ಇರಬೇಕಾದ ಅರ್ಹತೆಗಳು.ಇಂತಹ ಗುಣಗಳನ್ನೇ ಶ್ರೀಮಧ್ವರು ವಿದಿತಗೊಳಿಸಿದರು. ಅದು ನಿಯಮವಾಯಿತು. ಆ ರೀತಿಯಲ್ಲಿ ತಯಾರಾಗದವರು, ತಪಸ್ಸಿನಲ್ಲಿ ,ಭಕ್ತಿಯಲ್ಲಿ, ಪ್ರೇಮದಲ್ಲಿ ಕಡಿಮೆಯಿದ್ದವರು 'ಪೂಜೆ ಮಾಡಿದೆ' ಎಂಬ ಲೌಕಿಕ ಸಮಾಧಾನ ಪಡೆಯಬಹುದೇ ಹೊರತು ಮಧ್ವರಂತೆ ಲೋಕಕಲ್ಯಾಣಮಾಡಲಾರರು.

ಪೂರ್ವಪುಣ್ಯದ ಬಲ ದಿಂದ ದೊರೆತ ಅವಕಾಶವನ್ನು ಅವರು ಉಪಯೋಗಮಾಡಿಕೊಳ್ಳದೇ ಹೋದರೆ ಅವರ ಪುಣ್ಯವೇ ನಶಿಸೀತು ಅಷ್ಟೇ.

ಮೂರ್ತಿ ಪವಿತ್ರವಾದುದು ಎಂದು ಮೇಲಿನ ಚರ್ಚೆಯಿಂದ ಹಾಗೂ ಈ ಮೊಕದ್ದಮೆಯಲ್ಲಿನ ಸಾಕ್ಷ್ಯಾಧಾರದಿಂದ ರುಜುವಾತಾದ ಸಂಗತಿ. ಹಾಗಿರುವಾಗ ಅಷ್ಟಮಠಾಧೀಶರಿಗೆ ಅನ್ಯಾಯವಾಗುವ ಪ್ರಶ್ನೆಯೇ ಉಂಟಾಗುವುದಿಲ್ಲ. ಮೂರ್ತಿ ಅಪವಿತ್ರವಾಗಿ ಅದರ ಶುದ್ಧಿಗಾಗಿ ತಾವು ಏನಾದರೂ ಶಾಸ್ತ್ರಾಧಾರಿತಕ್ರಮಗಳನ್ನು ಕೈಕೊಂಡು 1ನೇ ಪ್ರತಿವಾದಿ ಮಾಡಿದ ಪೂಜೆಯಿಂದ ತಮ್ಮ ಮನಸ್ಸಿಗೆ ಅತಿನೋವು ಉಂಟಾಗಿದೆ. ಆ ರೀತಿಯಲ್ಲಿ ತಮ್ಮ ಹಕ್ಕಿಗೆ ಚ್ಯುತಿಉಂಟಾಗಿದೆ ಎಂಬ ಬಗ್ಗೆ ವಾದಿಯರು ಯಾವ ಸಾಕ್ಷ್ಯವನ್ನುಹೇಳಿಲ್ಲ. ಮೇಲಾಗಿ ಈ ಮೇಲೆ ಚರ್ಚಿಸಿದಂತೆ 1ನೇ ಪ್ರತಿವಾದಿಯ ಪರ್ಯಾಯದ ನಂತರ ಬಂದ ಎಲ್ಲ ಸ್ವಾಮಿಗಳೂ ತಮ್ಮ ಪರ್ಯಾಯಪೂಜೆಯನ್ನು ಮುಂದುವರೆಸಿಕೊಂಡು ಹೋಗಿದ್ದಾರೆ. ಅವರಿಗೆ ಆದ ಅನ್ಯಾಯಕ್ಕೆ ಪ್ರತಿಭಟನೆಯನ್ನು ಮಾಡಿಲ್ಲ. ಹಾಗೇನಾದರೂ ಅನ್ಯಾಯವಾಗಿರುತ್ತಿದ್ದರೆ ಪ್ರತಿಭಟಿಸದೇ ಇರುತ್ತಿರಲಿಲ್ಲ. ಉಡುಪಿಯ ಅಷ್ಟಮಠದ ಇತಿಹಾಸ ನೋಡಿದರೆ ಚಿಕ್ಕಪುಟ್ಟ ವಿಷಯಕ್ಕೂ ಹಾಗೂ ನ್ಯಾಯಾಲಯ ಕಟ್ಟೆಯನ್ನು ಅವರು ಹತ್ತಿದ್ದು ಕಂಡುಬರುತ್ತದೆ. ಈ ಮೊಕದ್ದಮೆ ಇದೆ ನಿಜ. ಇದು ಲೌಕಿಕಕ್ರಿಯೆ ಆದರೆ ಮೂರ್ತಿಯನ್ನುಮೊದಲು ಪವಿತ್ರಗೊಳಿಸಿ ನಂತರ ಅವರು ಅದನ್ನು ಮುಂದುವರಿಸಬೇಕಾಗಿತ್ತು. ಅದು ಧಾರ್ಮಿಕ ಅಗತ್ಯತೆ. ಆದರೆ ಸಂಬಂಧಿಸಿದವರು ಹಾಗೆ ಮಾಡಿಲ್ಲ. ಆದ್ದರಿಂದ ಅವರಿಗೆ ಅನ್ಯಾಯವಾಗಿಲ್ಲ. ಹೆಚ್ಚಿನ ಚರ್ಚೆ ಅನಗತ್ಯ.

ಈ ನ್ಯಾಯಲಯವು ಮೂಲಹಕ್ಕುಗಳ ಸಿವಿಲ್ ನ್ಯಾಯಾಲಯ. ಅದು ಧರ್ಮನ್ಯಾಯದ ನ್ಯಾಯಾಲಯವೂ ಹೌದು. ಆದ್ದರಿಂದ ತಾನು ಮಾಡುವ ಆದೇಶಗಳು ನ್ಯಾಯದ ಉದ್ದೇಶಗಳನ್ನು ಸಾಧಿಸುತ್ತವೆಯೇ ಅಥವಾ ಅವುಗಳ ಪರಿಣಾಮಗಳು ಸಮಾಜದಲ್ಲಿ ಗೊಂದಲವನ್ನುಂಟು ಮಾಡಲು ಸಹಾಯಕ ವಾಗುತ್ತವೆಯೋ ಎಂಬುದನ್ನು ಗಮನಿಸಬೇಕು. 1ನೇಯ ಪ್ರತಿವಾದಿಯು 9ನೇ ಪ್ರತಿವಾದಿಗೆ ಮಾಡಿದ ಪೂಜೆ ನಡೆದು ಹೋಗಿದೆ ಪಲಿಮಾರು ಮಠದ ಆಸ್ತಿಯ ಬಗ್ಗೆ ಉಳಿದಮಠಾಧೀಶರ ವಿವಾದ ಇಲ್ಲ. ಆದ್ದರಿಂದ ಮೇಲಿನ ಸಂಗತಿಗಳನ್ನು ಗಮನಿಸಿದಾಗ ಫ್ಯಾಕ್ಟಮ್ ವ್ಯಾಲೆಟ್ ಸಿದ್ಧಾಂತವನ್ನು ಧರ್ಮನ್ಯಾಯದ ಆಧಾರದ ಮೇಲೆ ಅನ್ವಯಿಸಲೇ ಬೇಕಾಗುತ್ತದೆ. ಏಕೆಂದರೆ ಇಲ್ಲಿ ಮೀರಲೇಬಾರದೆಂದು ಶ್ರೀಮಧ್ವರು ಹಾಕಿಕೊಟ್ಟ ಸಂಪ್ರದಾಯವನ್ನು ಉಲ್ಲಂಘನೆಮಾಡಿದ ಯಾವ ಕೃತ್ಯವೂ ಇಲ್ಲಿಲ್ಲ. ಈ ಬಗ್ಗೆ ಹಿಂದೆ ಚರ್ಚಿಸಿದ್ದೇನೆ. 'ಒಂದನೇ ಪ್ರತಿವಾದಿ ಮಾಡಿದ ಪೂಜೆ ಅನಧಿಕಾರದ್ದು'ಎಂದು ಕೇವಲ ವಾದಕ್ಕಾಗಿ ಮಾತ್ರ ಹೇಳಿದಂತಾಗಿದೆ. ಅದು ಸರಿಯಲ್ಲ ಆದ್ದರಿಂದ 1ನೇ ಪ್ರತಿವಾದಿಯು ನೇಮಕವನ್ನು ಸಿಂಧುವೆಂದೇ ಎನ್ನಬೇಕಾಗುತ್ತದೆ. ಏಕೆಂದರೆ ಒಂದು ಘಟನೆಯು ಅರ್ಧಸಿಂಧು ಅರ್ಧ ಅಸಿಂಧು ಆಗಲಾರದು. ಆದರೆ ಅದು ಪೂರ್ಣಸಿಂಧುವಾಗಬೇಕು. ಇಲ್ಲವೇ ಪೂರ್ಣಅಸಿಂಧುವಾಗಬೇಕು. ಅವರು ಪೂಜೆಮಾಡಿದಷ್ಟು ಕಾಲ ಸಿಂಧು. ಅನಂತರ ಅಸಿಂಧು ಎಂದು ನಿರ್ಣಯಿಸುವುದು ಹಾಸ್ಯಾಸ್ಪದ ಹಾಗೂ ಅವ್ಯಾವಹಾರಿಕ ನಿರ್ಣಯವಾದೀತು.

ಇಲ್ಲಿ ವಾದಿಯರು ಹೇಳಿದ ವಾದವನ್ನು ನಾನು ಒಪ್ಪಲಾರೆ. ಏಕೆಂದರೆ ಅವರೇ ಹೇಳುವಂತೆ ಅವರ ಪೂಜೆಯ ವಿಷಯ ನ್ಯಾಯಾಲಯದ ಕಟ್ಟೆ ಹತ್ತಿ 1ನೇ ಪ್ರತಿವಾದಿಯು ಪೂಜೆಗೆ ಕೇಳಲಾದ ಪ್ರತಿಬಂಧಾಜ್ಞೆಯನ್ನು ನ್ಯಾಯಾಲಯ ತಿರಸ್ಕರಿಸಿದೆ. ಮೂರ್ತಿ ಅಪವಿತ್ರಗೊಳ್ಳುವ ಪ್ರಶ್ನೆಯೂ ಇಲ್ಲಿ ಇಲ್ಲ. ಎಂದೂ ಈಗಾಗಲೇ ಕಾರಣ ಸಹಿತ ಹೇಳಿ ಆಗಿದೆ. ಅಷ್ಟಮಠ ಮತ್ತು ಈ ದಾವೆಯ ಪಕ್ಷಕಾರರೆಲ್ಲರೂ ಹಿಂದೂ ಕಾನೂನಿನ ವ್ಯಾಪ್ತಿಗೆ ಒಳಪಟ್ಟವರು. ಫ್ಯಾಕ್ಟಮ್ ವ್ಯಾಲೇಟ್ ಸಿದ್ಧಾಂತವು ಹಿಂದೂ ಕಾನೂನಿನಲ್ಲಿ ಅನ್ವಯವಾಗುತ್ತದೆ ಎಂಬುದು ಒಪ್ಪುವ ಸಂಗತಿ. ಪೂಜೆಯ ಅಧಿಕಾರ ಮಠಾಧಿಪತಿಯ ಅಧಿಕಾರ ವ್ಯಕ್ತಿಯ ವೈಯಕ್ತಿಕ ಕಾನೂನಿನ ವ್ಯಾಪ್ತಿಯಲ್ಲಿ ಬರುತ್ತದೆ. ಎನ್ನುವದನ್ನು ಒಪ್ಪಿದ ಸಂಗತಿ. ಮೇಲೆ ಉಲ್ಲೇಖಿಸಿದ ಸರ್ವೋಚ್ಚನ್ಯಾಯಾಲಯ ದ ಮೊಕದ್ದಮೆಯೇ ಹೇಳುತ್ತದೆ ಕಾರಣ ಹೆಚ್ಚಿನ ಚರ್ಚೆ ಮಾಡದೇ ಈ ವಿವಾದಾಂಶವನ್ನು ಅಹುದು ಎಂದೇ ನಾನು ಉತ್ತರಿಸುತ್ತೇನೇ.

ವಿವಾದಾಂಶ19 ಮೇಲಿನ ಎಲ್ಲಾ ವಿವಾದಾಂಶಗಳನ್ನು ಸಾಕ್ಷ್ಯಾಧರದ ಮೇಲೆ ಚರ್ಚೆ ಮಾಡಿ ಉತ್ತರಿಸುವಾಗ 1ನೇ ಪ್ರತಿವಾದಿಯ ನೇಮಕವು ಸಿಂಧುವಾದುದು ಹೇಗೆ? ಮುತ್ತು ಏಕೆ? ಎಂದು ಹೇಳಿದ್ದೇನೆ. ಮತ್ತು ಆ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರತಿವಾದಿಯರು (1,2,ಹಾಗೂ3) ಹೇಗೆ ತಮ್ಮ ವಾದವನ್ನು ರುಜುವಾತು ಪಡಿಸಿದ್ದಾರೆ ಮತ್ತು ವಾದಿಯರು ಹೇಗೆ ತಮ್ಮ ಪ್ರಯತ್ನದಲ್ಲಿ ವಿಫಲರಾಗಿದ್ದಾರೆ ಎಂದೂ ಹೇಳಿದ್ದೇನೆ. ಅಂದರೆ 1ನೇ ಪ್ರತಿವಾದಿಯನ್ನು 4ನೇ ಪ್ರತಿವಾದಿಯು ತನ್ನ ಉತ್ತರಾಧಿಕಾರಿ ಎಂದು ನೇಮಕ ಮಾಡಿದ್ದು ಸಿಂಧುವಾಗಿದೆ. ಎಂದು ನಾನು ನಿರ್ಣಯಿಸುತ್ತೇನೆ. ಮತ್ತು ಆ ಕಾರಣದಿಂದಾಗಿ ವಾದಿಯರು ಕೇಳಲಾಗಿರುವ ಪರಿಹಾರವನ್ನು ಪಡೆಯಲು ಹಕ್ಕುದಾರರಲ್ಲ ಎಂದೂ ನಿರ್ಣಯಿಸುತ್ತೇನೆ.

ಈ ತೀರ್ಪಿನ ಕೊನೆಯ ಆದೇಶವನ್ನು ಮಾಡುವ ಮುಂದೆ ಒಂದು ವಿಷಯವನ್ನು ನನಗೆ ತಿಳಿದಂತೆ ಹೇಳಬಯಸುತ್ತೇನೆ. ಇದು ನ್ಯಾಯಾಲಯದ ನಿರ್ಬಂಧಾತ್ಮಕ ಆದೇಶವಲ್ಲ. ನಿರ್ದೇಶನವೂ ಅಲ್ಲ. ಈ ಮೊಕದ್ದಮೆಯಲ್ಲಿ ಹಾಜರುಪಡಿಸಲಾದ ಸಾಕ್ಷ್ಯಾಧಾರಗಳನ್ನೂ ತನ್ನ ಯೋಗ್ಯತೆಗೆ ತಕ್ಕಂತೆ ಅಭ್ಯಸಿಸಿ ಈ ತೀರ್ಪು ನೀಡಿದ ನ್ಯಾಯಾಧಿಶರ ಅನಿಸಿಕೆ ಮಾತ್ರ. ನನ್ನ ವಿವೇಕ ಅಂತರಾತ್ಮ ಹಾಗೆ ಬರೆದರೆ ತಪ್ಪೇನಿಲ್ಲ ಎಂದಿದೆ.

'ಅರಿವಿನಾಳಕೆ ಇಳಿದು ಬರುವಾತನು ಹರಿಯ ಹೊರಗಿನಂಗಳದಲ್ಲೇ ದೊರೆಯುವಾತನು ದೊರೆಯು'ಎಂದು ಭಕ್ತರೊಬ್ಬರು ಅನುಭವದಿಂದ ಹೇಳಿರುವರು. ಆದ್ದರಿಂದ ಶ್ರೀಹರಿಯ ಪೂಜೆಮಾಡಬೇಕೆನ್ನುವವರು ಆ ಅರಿವಿನ ಆಳಕ್ಕೆ ಇಳಿಯಬೇಕು. ರುಗ್ಮಿಣಿಯಂತೆ ಸರ್ವಸ್ವವನ್ನೂ ಅವನಿಗರ್ಪಿಸಿ ಅವನಲ್ಲಿಯೇ ಇರಬೇಕು. ಕೇವಲ ಹೊರಗಿನಂಗಳದಲ್ಲೇ ಅಷ್ಟಮಠಗಳ ಹೆಸರಿನಲ್ಲಿ ವ್ಯಾಜ್ಯಮಾಡುತ್ತಾ ಹೋದರೆ ಶ್ರೀಕೃಷ್ಣ ಪರಮಾತ್ಮ ಯಾರಿಗೂ ದಕ್ಕದೇ ಹೋದಾನು. ಮತ್ತೆ ಗೋಪಿಚಂದನವನ್ನು ಪ್ರವೇಶಿಸಿಯಾನು. ಮತ್ತೆ ಶ್ರೀಮಧ್ವರ ಆಗಮನಕ್ಕಾಗಿ ದಾರಿ ನೋಡಿಯಾನು. ಏಕೆಂದರೆ ಭಕ್ತಿಯಿಂದ ಕರೆದವರ ಕರೆಗೆ ಓಗೊಡುವವನಾತ ಹೂವತರುವರ ಮನೆಗೆ ಹುಲ್ಲ ತರುವವನಾತ'

ಮೇಲೆ ಹೇಳಿದ ಎಲ್ಲ ಕಾರಣಗಳಿಂದಾಗಿ ನಾನು ಈ ಕೆಳಗಿನಂತೆ ಕೊನೆಯ ಆದೇಶ ಮಾಡುತ್ತೇನೆ.

## 'ಆದೇಶ'

ವಾದಿಯರ ದಾವೆಯನ್ನು ವಜಾ ಮಾಡಿದ್ದೇನೆ. ವಾದಿಪ್ರತಿ ವಾದಿಯರೆಲ್ಲೂ 9ನೇ ಪ್ರತಿವಾದಿ ಕೃಷ್ಣಮಠಕ್ಕೆನೇ ಸಂಬಂಧ ಪಟ್ಟವರಿರುವುದರಿಂದ ಅವರವರ ಈ ದಾವಾಖರ್ಚನ್ನು ಅವರವರೇ ವಹಿಸಿಕೊಳ್ಳತಕ್ಕದ್ದು.

1980ನೇ ಅಕ್ಟೋಬರ್ ತಿಂಗಳಿನ 30 ನೇ ದಿನಾಂಕದಂದು ನಾನೇ ಸ್ವತಃ ಬರೆದು ಈ ತೀರ್ಪನ್ನು ಹೊರನ್ಯಾಯಾಲಯದಲ್ಲಿ ಉತ್ತರಿಸಿದ್ದೆನೆ.

ಸಹಿ/-

ಎನ್.ಎಸ್. ಸಂಗೊಳ್ಳಿ

ಸಿವಿಲ್ ನ್ಯಾಯಾಧಿಶರು ಉಡುಪಿ

31-10-1980

ಶ್ರೀವಿದ್ಯಾಮಾನ್ಯತೀರ್ಥರ ಪಲಿಮಾರುಮಠಾಧಿವತ್ಯ ಸಿಂಧುತ್ವದ ಈ ನಿರ್ಣಯಕೆ ಬೆನ್ನೆಲುಬಾಗಿ ಸೇವೆಸಲ್ಲಿಸಿದ ಭಕ್ತರು ಖ್ಯಾತನ್ಯಾಯವಾದಿ ಶ್ರೀಪಡುಬಿದ್ರಿ ರಾಘವೇಂದ್ರರಾವ್.

## ಮಂಗಲಾಷ್ಟಕ ಫಲ

ಶ್ರೀಫಲಿಮಾರು ಮಠದ ಶ್ರೀರಾಜರಾಜೇಶ್ವರ ತೀರ್ಥರು ರಚಿಸಿದ ಮಂಗಲಾಷ್ಟಕವನ್ನು ನಿತ್ಯವೂ ಪಠಿಸಿದರೆ ಫಲವೇನು? ಅದಕ್ಕುತ್ತರ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು. ಬಾಲ್ಯದಿಂದಲೂ ಒಂದು ದಿನವೂ ಬಿಡದೆ ಪಠಿಸಿದ ಮಂಗಲಾಷ್ಟಕದ ಫಲವಾಗಿ ಶ್ರೀಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥರನ್ನು ಶ್ರೀರಾಜರಾಜೇಶ್ವರ ಪೀಠದಲ್ಲಿಯೇ ಕುಳ್ಳಿರಿಸಿ ಅವರಿಂದ ಪೂಜೆಯ ಕೈಕೊಂಡನು ಉಡುಪಿಯ ಆ ಶ್ರೀಕೃಷ್ಣನು.

★★★

# ''ಅದ್ವಿತೀಯ ಪರ್ಯಾಯದ್ವಯ''

ಭಂಡಾರಕೇರಿ ಮಠದ ಶ್ರೀ ವಿದ್ಯಾಮಾನ್ಯ ತೀರ್ಥರು ಪಲಿಮಾರು ಮಠದ ಆಧಿಪತ್ಯವನ್ನು ಸ್ವೀಕರಿಸಿದ್ದು 1969ರಲ್ಲಿ. ಅದರ ಮುಂದಿನ ವರುಷವೇ ಅವರ ಸರದಿ, ಶ್ರೀ ಕೃಷ್ಣಪೂಜಾಪಾಳಿಯಲ್ಲಿ. ಅದಕ್ಕೆ ಪೂರ್ವಭಾವಿಯಾಗಿ ಶ್ರೀಪಾದರ ಪ್ರಥಮ ಪರ್ಯಾಯ ಸಂಚಾರವು ನಾಗುತ್ತಿತ್ತು, ತತ್ವ ಪ್ರಚಾರದ ಜೊತೆಯಲ್ಲಿ. ಶ್ರೀಗಳಿಗೆ ಸ್ವಾಗತವೇ ಸ್ವಾಗತವು ಎಲ್ಲ ಊರು-ಪರವೂರುಗಳಲ್ಲಿ. ಶ್ರೀಪಾದರ, ಪಲಿಮಾರು ಮಠಾಧಿಪತ್ಯದಿಂದ ಭಕ್ತರ ಆನಂದಕ್ಕೆ ಪಾರವೆಲ್ಲಿ? ಸಂಚಾರ ಸಮಾಪ್ತಿಯ ನಂತರ ಶ್ರೀಪಾದರು ಶ್ರೀಕೃಷ್ಣ ಮಠಕ್ಕೆ ಆಗಮಿಸಿದರು ಸಾಂಪ್ರದಾಯಿಕಪಲ್ಲಕ್ಕಿ ಶೋಭಾಯಾತ್ರೆಯಲ್ಲಿ. ಶ್ರೀ ಸರ್ವಜ್ಞಾಚಾರ್ಯರ ಸಿಂಹಾಸನವನ್ನೇರಿದರು 1970ರ ಜನವರಿ 18ರ ಪ್ರಾತಃ ಕಾಲದ ಸುಮುಹೂರ್ತದಲ್ಲಿ. ಭಕ್ತರ, ಶಿಷ್ಯರ ಸಮ್ಮುಖದಲ್ಲಿ. ದ್ವಿತೀಯ ಪರ್ಯಾಯವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಶ್ರೀವಿಶ್ವೇಶ ತೀರ್ಥರು ಶ್ರೀಕೃಷ್ಣಮಠದ ಅಧಿಕಾರವನ್ನು ಅರ್ಪಿಸಿದರು ತಮ್ಮ ಗುರುಗಳ ಅಮೃತ ಹಸ್ತದಲ್ಲಿ. ಗುರು ಶ್ರೀ ವಿದ್ಯಾಮಾನ್ಯ ತೀರ್ಥರು ಮುಳುಗಿದ್ದರು, ಶ್ರೀಕೃಷ್ಣಪೂಜಾ ಸೌಭಾಗ್ಯದ ಆನಂದದ ಹೊಳೆಯಲ್ಲಿ, ಶಿಷ್ಯ ಶ್ರೀ ವಿಶ್ವೇಶತೀರ್ಥರೂ ಸಹ ತನ್ಮಯರಾಗಿದ್ದರು, ಪೂಜಾಧಿಕಾರವನ್ನು ಗುರುಗಳಿಗೊಪ್ಪಿಸಿದ ಧನ್ಯತೆಯಲ್ಲಿ, ಅಮಿತ ಸಮ್ಮೋದದಲ್ಲಿ.

ಶ್ರೀಪಾದರ ಮೊದಲ ಪರ್ಯಾಯವು ವಿಶಿಷ್ಟವಾಗಿತ್ತು. ಆ ವೈಶಿಷ್ಟ್ಯಕ್ಕೆ ಕಾರಣ. ಅವರ ಅಲೌಕಿಕ ಮನೋಭಾವ, ಪ್ರಜ್ಞಾವಂತ ವ್ಯವಹಾರಗಳ ಜೋಡಿಯಾಗಿತ್ತು. ತಮ್ಮ ಎರಡು ವರ್ಷದ ಅವಧಿಯಲ್ಲಿ ಶ್ರೀಕೃಷ್ಣನ ಪೂಜೆ, ಶ್ರೀ ಸರ್ವಜ್ಞಾಚಾರ್ಯರ ಪೀಠದಲ್ಲಿ ಕುಳಿತು ಸರ್ವಮೂಲ ಗ್ರಂಥಗಳ ಶಾಂತಿ ಪುರಸ್ಸರ ಪಾಠ, ನಿತ್ಯ ಯಥೇಷ್ಟ ಅನ್ನದಾನ ಮೊದಲಾದ ಅತ್ಯಂತ ಉಚ್ಚತಮ ಕಾರ್ಯಕ್ರಮ ಜರುಗುತ್ತಿತ್ತು. ಈ ಸರ್ವಮೂಲ ಗ್ರಂಥಗಳ ಅಧ್ಯಯನ ಶ್ರವಣಾದಿಗಳಿಗಾಗಿ ಊರು ಪರವೂರುಗಳಿಂದ ಅನೇಕ ಜಿಜ್ಞಾಸುಗಳ ಆಗಮನವಾಗಿತ್ತು. ಶ್ರೀಕೃಷ್ಣ ಮಠವು ಅಂತಹ ಅನೇಕ ಜಿಜ್ಞಾಸು ಕುಟುಂಬಗಳಿಗೆ ಉತ್ತಮತವರಾಗಿತ್ತು.

ನಾವು ಇಂದು ಕೇಳುವ ಇತಿಹಾಸದ ದಾಖಲೆ ಪ್ರಕಾರ ನಾಲ್ಕು ಶತಮಾನಗಳ ಪೂರ್ವದಲ್ಲಿ ಶ್ರೀಮದ್ವಾದಿರಾಜ ಶ್ರೀಮಚ್ಚರಣರು ತಮ್ಮ ನಾಲ್ಕೂ ಪರ್ಯಾಯಗಳಲ್ಲೂ ಸಂಪೂರ್ಣ ಸರ್ವಮೂಲ ಪಾಠಗಳನ್ನು ನಡೆಸುತ್ತಿದ್ದರು. ಆನಂತರದಲ್ಲಿ ಅನೇಕ ಮಹಾತ್ಮರ ಪರ್ಯಾಯ ಗಳಲ್ಲಿಯೂ ಸರ್ವಮೂಲ ಪಾಠಗಳು ನಡೆದಿರಬಹುದು. ಆದರೆ ಇತಿಹಾಸವು ಸ್ಪಷ್ಟವಾಗಿ ದಾಖಲಿಸಿಕೊಂಡ ಇನ್ನೊಂದು ಸಂಪೂರ್ಣ ಸರ್ವಮೂಲಪಾಠದ ಪರ್ಯಾಯ, ಶ್ರೀ ವಿದ್ಯಾಮಾನ್ಯ ತೀರ್ಥರ ಪರ್ಯಾಯ. ಅವರು ಈ ಶ್ರೇಷ್ಠ ಜ್ಞಾನಯಜ್ಞದ ಮೂಲಕ ಜ್ಞಾನಿ ಪ್ರಿಯತಮನಾದ ಶ್ರೀಕೃಷ್ಣನನ್ನು ಅರ್ಚಿಸಿದರು. ಒಲಿಸಿದರು. ತಮ್ಮ ಪ್ರಥಮ ಪರ್ಯಾಯದ ಶಾಶ್ವತ ಸ್ಮರಣಿಕೆಯಾಗಿ ಸುಂದರ ಸುವರ್ಣ ತೊಟ್ಟಿಲನ್ನು ಶ್ರೀಕೃಷ್ಣನಿಗೆ ಅರ್ಪಿಸಿದರು. ಅದರಲ್ಲಿ ಅವನನ್ನು ಕುಳ್ಳಿರಿಸಿ ತೂಗಿದರು. ಆನಂದಿಸಿದರು. ವೈಭವದಿಂದ ಅನೇಕ ಸೇವೆಗಳ ಜೊತೆಯಲ್ಲಿ ಸಾಂಪ್ರದಾಯಿಕವಾಗಿ ಸಪ್ತೋತ್ಸವ, ಲಕ್ಷದೀಪೋತ್ಸವ, ಶ್ರೀಕೃಷ್ಣಜಂಯತ್ಯುತ್ಸವ ವಸಂತೋತ್ಸವಾದಿಗಳನ್ನು ನಡೆಸಿದರು.

ಮಧ್ವನವಮೀ ರಾಮನವಮೀ ಮೊದಲಾದ ವಿಶೇಷ ಸಂದರ್ಭಗಳಲ್ಲಿ ವಿದ್ವದ್ಗೋಷ್ಠಿಗಳು, ಅನೇಕ ವಿದ್ವಾಂಸರ ಉಪನ್ಯಾಸಗಳು ಅನೇಕ ಹರಿಕಥೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಯಿಸಿ ಕಲೆಯನ್ನು ಪೋಷಿಸಿದರು. ಒಟ್ಟಿನಲ್ಲಿ ಶ್ರೀಕೃಷ್ಣ ಮಠವನ್ನು ರಾಮರಾಜ್ಯದಂತೆ ಮೆರೆಯಿಸಿದರು.

ಈ ರೀತಿ ಎರಡು ವರ್ಷಗಳಲ್ಲಿ ಜ್ಞಾನ ಪೂರ್ವಕ ಭಕ್ತಿಯಿಂದ ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿದರು. 1972ರ ಜನವರಿ 18ರಂದು ಆ ಪರ್ಯಾಯಾಧಿಕಾರವನ್ನು ಶ್ರೀಅದಮಾರು ಮಠಾಧೀಶ ಶ್ರೀ ವಿಬುಧೇಶತೀರ್ಥರಿಗೆ ಹಸ್ತಾಂತರಿಸಿದರು.

ತಮ್ಮ ಎರಡೂ ಮಠಗಳೂ ಅಷ್ಟೊಂದು ಸಿರಿವಂತವಲ್ಲ. ಬರಿಗೈಯಲ್ಲೇ ಸರ್ವಜ್ಞಾಚಾರ್ಯರ ಪೀಠವನ್ನೇರಿದರು. ಆದರೂ ಯಥೇಷ್ಟವಾಗಿ ಸಮೃದ್ಧಿಯಾಗಿ ಪರ್ಯಾಯವನ್ನು ನಡೆಸಿದರು. ಕಾರಣ ಅವರು ಶ್ರೀಕೃಷ್ಣ ಮುಖ್ಯಪ್ರಾಣರಲ್ಲಿ ವಿಶ್ವಾಸವುಳ್ಳವರು. ಪರ್ಯಾಯದ ನಂತರ ಬರಿಗೈಯಲ್ಲಿಯೇ ಮರಳಿದವರು. ಸ್ವಲ್ಪ ಸಾಲವನ್ನೂ ಹೊತ್ತವರು. ಆದರಿಂದಾಗಿ ಚಿಂತಿಸದವರು. ಅದೆಲ್ಲವೂ ಶ್ರೀಕೃಷ್ಣನ ಸೇವೆ ಎಂಬ ಅನುಸಂಧಾನವುಳ್ಳವರು. ಇಂತಹ ಸ್ವಾರ್ಥರಹಿತ ವ್ಯಕ್ತಿಗಳು ಈ ನಮ್ಮ ಕಾಲದಲ್ಲಿ ಕಾಣಸಿಗರು.

1986ರ ಜನವರಿಯ 18 ರಂದು ಉಡುಪಿಯು ನವೋಲ್ಲಾಸದಿಂದ ಕೂಡಿತ್ತು. ಜನನಿಬಿಡವಾಗಿತ್ತು. ಹಗಲು ಹಾಗೂ ಇರುಳುಗಳ ಅಂತರದ ಅರಿವೇ ಇರದವರಂತೆ ಊರ, ಪರವೂರ ಜನರು ತಿರುಗುತ್ತಿದ್ದರು. ಎಲ್ಲ ಕಡೆಗಳಲ್ಲೂ ವಿದ್ಯುದ್ದೀಪಾಲಂಕಾರಗಳಿಂದ ಶೋಭಿಸುವ ಕಟ್ಟಡಗಳು. ಬೀದಿ ಬೀದಿಗಳ ಎಡಬಲಗಳಲ್ಲಿಯೂ ವಿದ್ಯುದ್ದೀಪಗಳಿಂದ ವೈವಿಧ್ಯಪೂರ್ಣ ವರ್ಣ ರಂಜಿತ ತೋರಣ ಪಂಕ್ತಿಗಳು. ಉಡುಪಿಯ ಮುಖ್ಯ ಮಾರ್ಗಗಳಲ್ಲಿ ಪರ್ಯಾಯ ಪೀಠವನ್ನೇರುವ ಶ್ರೀಪಾದರ ಪೂರ್ವ ಪರಂಪರೆಯ ಶ್ರೀಪಾದರುಗಳ ಮಂಟಪಗಳು. ಹಚ್ಚ ಹಸಿರಿನ ಮಾವಿನ ತೋರಣಗಳು. ಅಲ್ಲಲ್ಲಿ ವೇದಿಕೆಗಳು. ಅಲ್ಲಿ ವೈವಿಧ್ಯಮಯ ಸಂಗೀತ ಕಾರ್ಯಕ್ರಮಗಳು. ಅಂತೂ ಉಡುಪಿಯಲ್ಲಿ ಅಂದು ಯಾರಿಗೂ ನಿದ್ದೆ ಬಾರದ ಇರುಳು. ಅಂದೇನು? ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ದ್ವಿತೀಯ ಪರ್ಯಾಯ.

ಹದಿನೆಂಟರ ಮುಂಜಾವಿನ ಮುಂಚೆ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ತಮ್ಮ ಉತ್ತರಾಧಿಕಾರಿಗಳಾದ ಶ್ರೀ ವಿದ್ಯಾಧೀಶ ತೀರ್ಥರೊಂದಿಗೆ ಉಡುಪಿಯ ಸಮೀಪದ ದಂಡತೀರ್ಥಕ್ಕೆ ತೆರಳಿದರು. ಅಲ್ಲಿ ಅವಗಾಹನ ಸ್ನಾನ ಮಾಡಿದರು. ಆಹ್ನೀಕವನ್ನು ಮಾಡಿದರು. (ಪರ್ಯಾಯ ಪೀಠವನ್ನೇರುವ ಪೂರ್ವದಲ್ಲಿ ಶ್ರೀಪಾದರು ಈ ತೀರ್ಥದಲ್ಲಿ ಸ್ನಾನಮಾಡುವುದು ಸಂಪ್ರದಾಯ) ಅಲ್ಲಿಂದ ಉಡುಪಿಯ ಜೋಡುಕಟ್ಟೆಯ ಬಳಿ ಇರುವ ಗುಲ್ಬರ್ಗವಾಸಿಗಳಾಗಿದ್ದ ಶ್ರೀವಾದೂರು ರಾಮಕೃಷ್ಣ ತಂತ್ರಿಗಳ ಮನೆಗೆ ಆಗಮಿಸಿದರು. ಅಲ್ಲಿ ಶೋಭಾ ಯಾತ್ರೆಗೆ ಸನ್ನದ್ಧರಾಗಿದ್ದ ಶ್ರೀಅದಮಾರು ಮಠ ಹಿರಿಯ ಹಾಗೂ ಕಿರಿಯ ಶ್ರೀಪಾದರನ್ನು, ಶ್ರೀ ಪುತ್ತಿಗೆ ಶ್ರೀಪಾದರನ್ನು ಜೊತೆಗೂಡಿದರು. ತಂತ್ರಿಗಳ ಪಾದ ಪೂಜೆಯ ಬಳಿಕ, ಸಂಪ್ರದಾಯದಂತೆ ಮೆರವಣಿಗೆಯ ಮೇನೆಗಳಲ್ಲಿ ಆಗಮಿಸುವ ಎಲ್ಲ ಶ್ರೀಗಳವರೂ ತಲೆಗೆ ಪೇಟವನ್ನು ಸುತ್ತಿದರು. ಅದೇ ರೀತಿ ಪರ್ಯಾಯ ಪೀಠವನ್ನೇರುವ ಶ್ರೀ ವಿದ್ಯಾಮಾನ್ಯ ತೀರ್ಥರು ಜರಿತಾರಿ ರೇಷ್ಮೆಯ ಪಟ್ಟೆಯನ್ನು ತಲೆಗೆ ಸುತ್ತಿದರು. ಸುಮಾರು ಒಂದು ಅಡಿ ಅಗಲದ ಹಸಿರು ಜರಿಯ ಅಂಚಿನ ಕೆಂಪು ರೇಷ್ಮೆ ಪಟ್ಟೆಯನ್ನು ಹೊದಿದು ಕೊಂಡರು. ರೇಷ್ಮೆಯ ವಸ್ತ್ರವೊಂದನ್ನು ಉಟ್ಟುಕೊಂಡರು. ಅವರು ಬ್ರಹ್ಮವಸ್ತ್ರವಾಗಿ ಹೊದಿದುಕೊಂಡು ಹಾಗೂ ತಲೆಗೆ ಪೇಟವಾಗಿ ಸುತ್ತಿದ ರೇಷ್ಮೆಯ ವಸ್ತ್ರಗಳು ಸಾಮಾನ್ಯ ವಾದುದಲ್ಲ ತಿರುಪತಿ ಶ್ರೀಶ್ರೀನಿವಾಸ ಪರಬ್ರಹ್ಮನ ಶೇಷವಸ್ತ್ರ ಅದ್ಭುತವಾದ, ಅತ್ಯಂತ ದುರ್ಲಭವಾದ ಪೀತಾಂಬರ. ಅದನ್ನು ಅವನ ಪ್ರಸಾದವೆಂಬ ಅನುಸಂಧಾನದಿಂದ ಅವರು ಧರಿಸಿದರು. ಹೊರತು ಕ್ಷಣಿಕ ವೈಭವಕ್ಕಾಗಿ ಅಲ್ಲ.

ಶ್ರೀಪಲಿಮಾರು ಮಠದ ರಾಮದೇವರನ್ನು ಪುಷ್ಪಾಲಂಕೃತ ಸುವರ್ಣ ಪಲ್ಲಕ್ಕಿಯಲ್ಲಿ ಕುಳ್ಳಿರಿಸಲಾಯಿತು. ಶ್ರೀ ಪಲಿಮಾರು ಶ್ರೀಪಾದರು ಬಂದು ಆರತಿ ಬೆಳಗಿದರು. ದೇವರ ಪಲ್ಲಕ್ಕಿಯ ಹಿಂಬದಿಯ ಮೊದಲ ಪಲ್ಲಕ್ಕಿಯನ್ನು ಏರಿದರು. ಆಸೀನರಾದರು. ಅವರ ತರುವಾಯ ಕ್ರಮವಾಗಿ ಶ್ರೀ ವಿಬುಧೇಶತೀರ್ಥರು ಶ್ರೀ ವಿಶ್ವಪ್ರಿಯ ತೀರ್ಥರು, ಶ್ರೀಸುಗುಣೇಂದ್ರ ತೀರ್ಥರು ಹಾಗೂ ಶ್ರೀವಿದ್ಯಾಧೀಶತೀರ್ಥರು ತಮ್ಮ ತಮ್ಮ ಪಲ್ಲಕ್ಕಿ ಗಳನ್ನೇರಿದರು. ಎಲ್ಲ ಪಲ್ಲಕ್ಕಿಗಳೂ ಘಮಘಮಿಸುವ ಪರಿಮಳದ ಪುಷ್ಪಗಳಿಂದ ಸಿಂಗಾರಗೊಂಡಿದ್ದವು.

ಬೆಳಗಿನ ಝಾವ ನಾಲ್ಕು ಗಂಟೆಗೆ ಸರಿಯಾಗಿ ಪಲಿಮಾರು ಶ್ರೀಪಾದರ ದ್ವಿತೀಯ ಪರ್ಯಾಯದ ಮೆರವಣಿಗೆ ಆರಂಭಗೊಂಡಿತು. ಮೆರವಣಿಗೆಯ ಮುಂಭಾಗದಲ್ಲಿ ದೈತ್ಯಾಕಾರದ ತಟ್ಟಿರಾಯಗಳು ನರ್ತನಮಾಡುತ್ತಿದ್ದವು. ಅವುಗಳೊಂದಿಗೆ ಬಿರುದಾವಲಿಗಳೂ ಬರುತ್ತಿದ್ದವು. ಬಿರುದಾವಲಿಯ ಬೆನ್ನಲ್ಲಿಯೇ ಬ್ಯಾಂಡ್ ಸೆಟ್ ಘೋಷಣ, ಅದರ ನಂತರ ಪ್ರಸಿದ್ಧ ಜಾನಪದ ನೃತ್ಯ ಕಲಾವಿದರ ನರ್ತನ. ಅದರೊಂದಿಗೆ ಡೊಳ್ಳು ಕುಣಿತದ ದರ್ಶನ, ಶಾಲಾ ವಿದ್ಯಾರ್ಥಿಗಳ ಸ್ಕೌಟ್ ಅಭ್ಯರ್ಥಿಗಳ ಶಿಸ್ತಿನ ಪಥಸಂಚಲನ, ನಾದಸ್ವರ ಸ್ಯಾಕ್ಸೋಫೋನ್ ವಾದ್ಯಗಳ ಸುಮಧುರ ವಾದನ, ಪ್ರಾಚೀನ ಇತಿಹಾಸವನ್ನು ಪ್ರತಿಬಿಂಬಿಸುವ ಸ್ತಬ್ಧಚಿತ್ರ ಪ್ರದರ್ಶನಗಳನ್ನೊಳಗೊಂಡ ಇಪ್ಪತ್ತೈದಕ್ಕೂ ಹೆಚ್ಚಿನ ಸಾಲಂಕೃತ ಟ್ಯಾಬ್ಲೋ ವಾಹನ. 'ಹರೇ ರಾಮ ಹರೇ ಕೃಷ್ಣ' ಎಂದುಸುರುತ್ತಿರುವ ಅನೇಕ ಭಕ್ತನಿಕರದ ಹರಿನಾಮ ಸಂಕೀರ್ತನ, ಅನೇಕ ಪ್ರಸಿದ್ಧ ವಿದ್ವಾಂಸರ, ವಿದ್ಯಾರ್ಥಿಗಳ ಸುಸ್ವರ ವೇದ ಘೋಷಣ,

ಅದರ ಹಿಂದೆಯೇ ನಾಡಿನ ಪ್ರತಿಷ್ಠಿತ ಗಣ್ಯ ವ್ಯಕ್ತಿಗಳ ಗಂಭೀರಗತಿಯ ಗಮನ. ಇದೆಲ್ಲದರ ಹಿಂದೆ ಶ್ರೀ ಪಲಿಮಾರು ಮಠದ ಉಪಾಸ್ಯ ಮೂರುತಿಯಾದ ಶ್ರೀ ಲಕ್ಷ್ಮಣ ಆಂಜನೇಯ ಸಹಿತನಾದ ಸೀತಾರಮಣ. ಕೊನೆಯಲ್ಲಿ ಪರ್ಯಾಯ ಪೀಠಾಧೀಶರಾಗಲಿರುವ ಶ್ರೀ ವಿದ್ಯಾಮಾನ್ಯ ತೀರ್ಥರೇ ಮೊದಲಾದ ಯತಿ ಪುಂಗವರ ಪಲ್ಲಕ್ಕಿಗಳ ಆಗಮನ. ಅಂತೂ ಮೆರವಣಿಗೆಯನ್ನು ಎಂದೂ ಮರೆಯದು ಅಂದಿನ ಆ ಲಕ್ಷಾಂತರ ಜನಮನ.

ಮೆರವಣಿಗೆ ಉಡುಪಿಯ ಹೆದ್ದಾರಿಗಳಲ್ಲಿ ಸಾಗಿ ರಥಬೀದಿಯನ್ನು ತಲುಪಿದ ನಂತರ ಮೇನೆಯಲ್ಲಿ ಕುಳಿತ ಯತಿಗಳು ಇಳಿದು ಇಳೆಯ ಮೇಲೆ ಹಾಸಿದ ಬಿಳಿ ವಸ್ತ್ರದ ಮೇಲೆಯೇ ನಡೆದುಕೊಂಡು ಬಂದರು. ಕನಕನ ಕಿಂಡಿಯ ಮುಖಾಂತರ ಶ್ರೀಕೃಷ್ಣನನ್ನು ಕಂಡರು. ಪಲಿಮಾರು ಶ್ರೀಪಾದರು ಅಲ್ಲಿ ನವಗ್ರಹ ಪೂಜೆ, ದಾನಗಳನ್ನು ಮಾಡಿದರು. ಅನಂತರ ಅನಂತೇಶ್ವರ ಹಾಗೂ ಚಂದ್ರೇಶ್ವರರನ್ನು ಪೂಜಿಸಿ ಶ್ರೀಕೃಷ್ಣಮಠವನ್ನು ಸಮೀಪಿಸಿದರು. ಆಗ ಮಹಾದ್ವಾರದಲ್ಲಿ ಪರ್ಯಾಯ ಪೀಠದಿಂದೇಳುವ ಶ್ರೀಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥರು ಹಾಗೂ ಅವರ ಶಿಷ್ಯ ಶ್ರೀವಿಶ್ವವಿಜಯ ತೀರ್ಥರು ಪರ್ಯಾಯ ಶ್ರೀಪಾದರನ್ನು ಸ್ವಾಗತಿಸಲು ಸಿದ್ಧರಾಗಿದ್ದರು. ವೇದಘೋಷ, ಪೂರ್ಣಕಲಶ, ತಾಜಾ ಪುಷ್ಪವೃಷ್ಟಿ ,ಜೊತೆಗೆ ಲಾಜಾ ವೃಷ್ಟಿ, ಹಾರಾರ್ಪಣೆ ಹಾಗೂ ಹಸ್ತಲಾಘವಗಳೊಂದಿಗೆ ಶ್ರೀಪಾದದ್ವಯರು ಶ್ರೀಪಾದ ಪಂಚಕವನ್ನು ಬರಮಾಡಿಕೊಂಡರು. ನಂತರ ಮಧ್ವಸರೋವರದಲ್ಲಿ ಪಾದ ಪ್ರಕ್ಷಾಲನ, ತೀರ್ಥ ಪ್ರೋಕ್ಷಣ, ಆಚಮನಗಳನ್ನು ಪೂರೈಸಿ ಬೆಳ್ಳಿಯ ನವಗ್ರಹ ಕಿಂಡಿಯ ಮುಖಾಂತರ ಭಗವಾನ್ ಶ್ರೀಕೃಷ್ಣನ ವಿಶ್ವರೂಪದರ್ಶನ, ಶ್ರೀ ಮುಖ್ಯಪ್ರಾಣ ದೇವರ ಹಾಗೂ ಗರುಡ ದೇವರ ದರ್ಶನ, ಚಂದ್ರಶಾಲೆಯಲ್ಲಿ ಭಕ್ತಿ ಪೂರ್ವಕ ಸಾಷ್ಟಾಂಗ ಪ್ರಣಾಮ ಸಮರ್ಪಣೆಯನ್ನು ಎಲ್ಲ ಶ್ರೀಪಾದರೂ ಮಾಡಿದರು. ಆ ಬಳಿಕ ಅಲ್ಲಿಯೇ, ಪರ್ಯಾಯಪೀಠದಿಂದೇಳುವ ಶ್ರೀಪೇಜಾವರ ಮಠದ ವತಿಯಿಂದ ನೂತನ ಪರ್ಯಾಯ ಪೀಠಾಧೀಶರಿಗೆ ಪಾದ ಪ್ರಕ್ಷಾಲನೆ ಹಾಗೂ ಮಾಲಿಕೆ - ಮಂಗಳಾರತಿಗಳನ್ನು ಮಾಡಲಾಯಿತು. ನಂತರ ಶ್ರೀವಿಶ್ವೇಶ ತೀರ್ಥರು ಶ್ರೀ ಮದ್ವಾದಿರಾಜಗುರು ಸಾರ್ವಭೌಮ ಪ್ರತಿಷ್ಠಿತ ಶ್ರೀಮದಾಚಾರ್ಯರ ಸಾಕ್ಷಿಯಾಗಿ ಶ್ರೀಕೃಷ್ಣ ಮಠದ ಅಧಿಕಾರವನ್ನು ಹಾಗೂ ಅಕ್ಷಯ ಪಾತ್ರೆಯನ್ನು ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಸಮರ್ಪಿಸಿದರು. ಅನಂತರ ಗುರು ಶ್ರೀ ವಿದ್ಯಾಮಾನ್ಯ ತೀರ್ಥರನ್ನು ಕರೆದೊಯ್ದು ಶ್ರೀ ಸರ್ವಜ್ಞಾಚಾರ್ಯರ ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಶ್ರೀ ವಿದ್ಯಾಮಾನ್ಯ ತೀರ್ಥರು ಪೀಠವನ್ನೇರುವ ಸಮಯದಲ್ಲಿ ಮಂಗಳವಾದ್ಯಗಳು ಮೊಳಗಿದವು. ವೇದಜ್ಞರು ಸ್ವಸ್ತಿ ಮಂತ್ರವನ್ನುಚ್ಚರಿಸುತ್ತಿದ್ದರು. ಭಕ್ತರು 'ಗೋವಿಂದ ಗೋವಿಂದ' ಎಂದು ಉದ್ಘೋಷಣೆಯನ್ನು ಮಾಡುತ್ತಿದ್ದರು. ಶ್ರೀ ವಿದ್ಯಾಮಾನ್ಯ ತೀರ್ಥರಾದರೂ ಆ ಪೀಠವನ್ನೇರುವ ಮುನ್ನ ಒಂದು ಕ್ಷಣ, 'ಶ್ರೀಮದಾಚಾರ್ಯರನ್ನು ಹಾಗೂ ಶ್ರೀ ಪಲಿಮಾರು ಮಠದ ಶ್ರೀ ಹೃಷಿಕೇಶತೀರ್ಥರಿಂದಾರಂಭಿಸಿ ಶ್ರೀರಘುಮಾನ್ಯತೀರ್ಥರವರೆಗಿನ ಎಲ್ಲ ತಮ್ಮ ಪೂರ್ವ ಗುರುಗಳನ್ನು ಅನುಸಂಧಾನಿಸಿ, ನಮಸ್ಕರಿಸಿ ಸಿಂಹಾಸನವನ್ನೇರಿದರು. ಆಸೀನರಾದರು.

ಸರ್ವಜ್ಞಾಚಾರ್ಯರ ಸಿಂಹಾಸನವನ್ನೇರಿದ ತತ್‌ಕ್ಷಣದಲ್ಲಿ ಶ್ರೀ ಪಲಿಮಾರು ಹಿರಿಯ ಶ್ರೀಪಾದರು ಒಂದು ಮಹತ್ತರ ಸಂಕಲ್ಪವನ್ನು ಮಾಡಿದರು. ಅದು 'ಶ್ರೀಕೃಷ್ಣನ ಶ್ರೀಮುಖ್ಯಪ್ರಾಣದೇವರ ಪೂಜೆ, ಸೇವೆಗಳನ್ನು ಶ್ರೀಮದಾಚಾರ್ಯರು ಆದೇಶಿಸಿದ ತಂತ್ರಸಾರೋಕ್ತ ತಾರತಮ್ಯೋಪೇತ ಕ್ರಮದಲ್ಲಿಯೇ ತಪ್ಪದೇ ಮಾಡಲು ಪ್ರಯತ್ನಿಸುವುದು.' ಈ ಸಂಕಲ್ಪವನ್ನು ತಾವು ಮಾಡಿದ್ದಲ್ಲದೇ ತಮ್ಮ ಕಿರಿಯ ಪಟ್ಟದ ಶ್ರೀ ವಿದ್ಯಾಧೀಶ ತೀರ್ಥರಿಗೂ ಆದೇಶಿಸಿದರು. ಅವರೂ ಸಂಕಲ್ಪಗೈದರು. ಈ ಸಂಕಲ್ಪದ ಮಹತ್ವವೇನು? ಅದರ ಅನುಷ್ಠಾನದ ಮಹತ್ವವೇನು? ಎಂಬ ಈ ಪ್ರಶ್ನೆಗಳಿಗೆ ಶ್ರೀ ವಿದ್ಯಾಮಾನ್ಯ ತೀರ್ಥರ ಹಾಗೂ ಶ್ರೀ ವಿದ್ಯಾಧೀಶತೀರ್ಥರ ಶುದ್ಧ ತಂತ್ರ ಸಾರೋಕ್ತ ಅನುಷ್ಠಾನದ ಈ ಪರ್ಯಾಯವು ಉತ್ತರ ನೀಡುತ್ತದೆ. ಅದೂ ಪರ್ಯಾಯದ ಸಮಾಪ್ತಿಯಲ್ಲಿ ತಿಳಿಯುತ್ತದೆ.

ಗುರುಗಳನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದ ಶ್ರೀ ವಿಶ್ವೇಶ ತೀರ್ಥರು 'ಭಗವದನುಗ್ರಹ ಹಾಗೂ ಶ್ರೀಮದಾ ಚಾರ್ಯರ ಅನುಗ್ರಹದಿಂದ ಸ್ವತಃ ತಮ್ಮ ಸಾಮರ್ಥ್ಯದಿಂದ ತಮ್ಮ ಪರ್ಯಾಯವು ಪೂರ್ಣಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ' ಎಂದಾಶಿಸಿದರು. ತಾವು ಮಾಡಿದ ಎರಡು ವರ್ಷದ ಅತ್ಯದ್ಭುತ ಪರ್ಯಾಯ ಸೇವೆಯನ್ನು ತಮ್ಮ ಗುರುಗಳ ಮುಖಾಂತರ ಮಧ್ವಾಂತರ್ಗತ ಭೈಷ್ಮೀಕಾಂತನಿಗೆ ಅರ್ಪಿಸಿದರು. ಇಂತಹ ಮಹಾ ಗುರುಗಳಿಗೆ ಅಧಿಕಾರ ಒಪ್ಪಿಸುವ, ಅವರ ಮೂಲಕ ಸೇವೆ ಸಮರ್ಪಿಸುವ ಈ ಸುಯೋಗ ಬೇರಾರಿಗದೆ? ಶ್ರೀ ವಿಶ್ವೇಶತೀರ್ಥರಿಗಲ್ಲದೆ!

ಬಳಿಕ ಬಡಗು ಮಾಳಿಗೆಯಲ್ಲಿ 'ಪಟ್ಟ ಕಾಣಿಕೆ' ಕಾರ್ಯಕ್ರಮ. ಅದರಲ್ಲಿ ಎಲ್ಲ ಮಠಾಧೀಶರೂ ಉಪಸ್ಥಿತರಾದರು. ಪರ್ಯಾಯ ಶ್ರೀಪಲಿಮಾರು ಮಠದಪತಿಯಿಂದ ಎಲ್ಲ ಶ್ರೀಪಾದರಿಗೂ ಗಂಧೋ ಪಚಾರ ಗೌರವಾದಿಗಳು ಜರುಗಿದವು. ಅಲ್ಲಿಂದ ರಾಜಾಂಗಣದರ್ಬಾರ್ ಮಹಲ್‌ಗೆ ಪ್ರವೇಶ. ಅಲ್ಲಿ ಹರಿಗುರು ಭಕ್ತರ, ಯತಿ ಶ್ರೇಷ್ಠರ, ಪ್ರಕಾಂಡ ಪಂಡಿತರ, ರಾಜಕೀಯ ಮುಖಂಡರ, ಸಮಾಜದ ಗಣ್ಯ ವ್ಯಕ್ತಿಗಳ ಸಮಾವೇಶ. ಕಿಕ್ಕಿರಿದ ಭಕುತ ಸಾಗರದ ಎಲ್ಲೆಲ್ಲೂ ನಿಲ್ಲಲೂ ಇರಲಾದಷ್ಟು ಅವಕಾಶ. ಅತಿಯಾದ ಜನಸಂದಣಿಯ ನಡುವೆಯೂ ವ್ಯವಸ್ಥಿತವಾಗಿ ಆಸೀನ ಭಕ್ತಸ್ತೋಮದ ಪಂಕ್ತಿಗಳನ್ನು ನೋಡುವುದೇ ಮನಸ್ಸಿಗೆ ಸಂತೋಷ. ನಾನಾ ಬಗೆಯ ಪುಷ್ಪ ಮಾಲಿಕೆಗಳಿಂದ ಅಲಂಕೃತವಾದ ಭವ್ಯವೇದಿಕೆಯನ್ನು ಕಾಣುವುದೇ ಕಂಗಳಿಗೆ ಹರುಷ. ಆಗ ಆರಂಭವಾಯಿತು. ಒಂದರ ಮೇಲೊಂದರಂತೆ ನಾಲ್ಕು ವೇದಗಳ ಸುಘೋಷ, ಅಷ್ಟೋತ್ತಿಗೆ ಆಗ ತಾನೇ ಆಗುತ್ತಿತ್ತು ಆಗಸದಲ್ಲಿ ಬೆಳಕು ಹರಿದು ಕತ್ತಲೆಯ ನಾಶ.

ಮಂಜುಲ ವೇದನಿನಾದದೊಂದಿಗೆ ಆರಂಭಗೊಂಡ ಸಭೆಯ ವೇದಿಕೆಯ ಬಲತುದಿಯಲ್ಲಿ ಪರ್ಯಾಯ ಪಲಿಮಾರುಮಠಾಧೀಶ ಶ್ರೀ ವಿದ್ಯಾಮಾನ್ಯ ತೀರ್ಥರು ಆಸೀನರಾದರು. ಅವರ ನಂತರದಲ್ಲಿ ಕ್ರಮವಾಗಿ ಶ್ರೀ ವಿಬುಧೇಶತೀರ್ಥ ಶ್ರೀಪಾದರು. ಶ್ರೀ ವಿಶ್ವಪ್ರಿಯ ತೀರ್ಥ ಶ್ರೀಪಾದರು, ಶ್ರೀ ಸುಬ್ರಹ್ಮಣ್ಯ ಮಠಾಧೀಶರು, ಶ್ರೀ ಸುಗುಣೇಂದ್ರ ತೀರ್ಥರು, ಶ್ರೀ ವಿದ್ಯಾಧೀಶ ತೀರ್ಥರು, ಶ್ರೀ ವಿಶ್ವವಿಜಯ ತೀರ್ಥರು, ಶ್ರೀ ಬಾಳಗಾರು ಮಠದ ಶ್ರೀ ರಘುಭೂಷಣ ತೀರ್ಥರು ಕೊನೆಯ ಎಡತುದಿಯಲ್ಲಿ ಶ್ರೀ ವಿಶ್ವೇಶತೀರ್ಥರು

ಆಸೀನರಾಗಿದ್ದರು. ಶ್ರೀಪಾದರೆಲ್ಲರೂ ಆಸೀನರಾಗಲು ವ್ಯವಸ್ಥಿತರೀತಿಯಲ್ಲಿ ಬತ್ತರಳಿನ ಚೀಲಗಳಿಂದ ಮೆತ್ತನೆಯ ದಪ್ಪ ಆಸನವನ್ನೆ ನಿರ್ಮಿಸಲಾಗಿತ್ತು.

ಎಲ್ಲ ಶ್ರೀಪಾದರಿಗೂ ಪರ್ಯಾಯ ಸ್ವಾಗತ ಸಮಿತಿಯ ವತಿಯಿಂದ ಮಾಲಾರ್ಪಣೆ ಹಾಗೂ ಫಲಾರ್ಪಣೆ ನಡೆಯಿತು.

ಪರ್ಯಾಯ ದರ್ಬಾರ್‌ನಲ್ಲಿ ಪಂಡಿತವರೇಣ್ಯರನ್ನು, ಸಮಾಜದ ಗಣ್ಯರನ್ನು ಸನ್ಮಾನಿಸಿದ ಶ್ರೀಪಾದರು ಅವರಿಗೆಲ್ಲರಿಗೂ ಶ್ರೀಕೃಷ್ಣಾನುಗ್ರಹ ಪ್ರಶಸ್ತಿಯನ್ನೀಡಿದರು. ಎಲ್ಲ ಶ್ರೀಪಾದರ ಉಪನ್ಯಾಸದ ಬಳಿಕ. ಶ್ರೀ ವಿದ್ಯಾಮಾನ್ಯ ತೀರ್ಥರು ನೀಡಿದ ಸಂದೇಶ 'ಉಡುಪಿಯೆಂಬ ವ್ಯಾಪಾರಕೇಂದ್ರದಲ್ಲಿ ಶ್ರೀಕೃಷ್ಣನೇ ವ್ಯಾಪಾರಿ ಪುರುಷ. ಆತ ಭಕ್ತಿ ಎಂಬ ಧನವನ್ನು ಸ್ವೀಕರಿಸಿ, ನೀಡುವನು 'ಸುಖ ಸಂಪತ್ತಿನ ಕೋಶ, ಜೊತೆಯಲ್ಲೇ ನೀಗುವನು ಭವ ಕ್ಲೇಶ ವಿನಾಶ. ಎಂದೆಂದಿಗೂ ನಾವೆಲ್ಲರೂ ಅವನದೇ ವಶ. ಇದೇ ಶ್ರೀಮದಾಚಾರ್ಯರ ಆದೇಶ. ಇದೇ ನಮ್ಮ ಬದುಕಿಗೆ ಬೇಕಾದ ಶಾಶ್ವತ ಪೌಷ್ಟಿಕಾಂಶ.' ಎಂದು ನುಡಿಯುತ್ತಾ 'ಯುಧಿಷ್ಠಿರನಿಗೆ ಭೀಮಸೇನಾರ್ಜುನರ ಬೆಂಬಲವಿದ್ದಂತೆ ಶ್ರೀ ಅದಮಾರು ಹಾಗೂ ಶ್ರೀ ಪೇಜಾವರ ಶ್ರೀಪಾದರಿಬ್ಬರ ಪೂರ್ಣ ಬೆಂಬಲದಿಂದ ನಮಗೆ ಲಭಿಸಿತು ಈ ಮಹಾಸದವಕಾಶ' ಎಂದು ಅವರು ಭಾವೋದ್ವೇಗದಿಂದ ನುಡಿದಾಗ ಅವರ ಕಂಗಳಲ್ಲಿ ನೀರಾಗಿಳಿದಿತ್ತು ಅಮಿತ ಅದಮ್ಯ ಹರುಷ. ಪ್ರೇಕ್ಷಕ ಭಕ್ತಸಾಗರದ ಪ್ರಚಂಡ ಕರತಾಡನಗಳ ಶಬ್ದವನ್ನು ಪ್ರತಿಧ್ವನಿಸುತ್ತಿತ್ತು ಆ ಎತ್ತರದ ಆಕಾಶ.

ದಿವ್ಯ ಸಂದೇಶದ ಬಳಿಕ ಪರ್ಯಾಯ ಶ್ರೀಪಾದರು, ಪೂಜೆಗಾಗಿ ಹಾಗೂ ಶಾಶ್ವತವಾಗಿ ಇಡಲು ರಜತದ ದಪ್ಪ ತಗಡುಗಳಲ್ಲಿ ಬರೆಯಿಸಿದ, ಆಚಾರ್ಯರ ಪ್ರತೀಕದಂತಿರುವ 'ಬ್ರಹ್ಮಸೂತ್ರಭಾಷ್ಯವನ್ನು' ಬಿಡುಗಡೆಗೊಳಿಸಿದರು. ಕಾರ್ಯಕ್ರಮಮಧ್ಯದಲ್ಲಿ ಪರ್ಯಾಯ ಶ್ರೀಪಾದರ ಅಪೇಕ್ಷೆಯಂತೆ, ಭಕ್ತಾಭಿಮಾನಿಗಳ ಪ್ರಾರ್ಥನೆಯಂತೆ ಶ್ರೀ ಸುಬ್ರಹ್ಮಣ್ಯ ಮಠಾಧೀಶ ಶ್ರೀ ವಿದ್ಯಾಭೂಷಣತೀರ್ಥರು 'ಪ್ರೀಣ ಯಾಮೋ ವಾಸುದೇವಂ' ಎಂಬ ಶ್ರೀಮದಾಚಾರ್ಯರ ದ್ವಾದಶಸ್ತೋತ್ರವನ್ನು ಹಾಡಿದರು. ಸಾತ್ವಿಕತೆಯು ದಟ್ಟವಾಗಿದ್ದ ಆ ಸಮಾರಂಭದಲ್ಲಿ ಭಾವುಕತೆಯನ್ನು ಉದ್ರೇಕಿಸಿದರು. ಪರ್ಯಾಯ ದರ್ಬಾರಿನ ಕಾರ್ಯಕ್ರಮಗಳನ್ನು ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಸಮರ್ಥವಾಗಿ ನಿರ್ವಹಿಸಿದರು.

ದರ್ಬಾರ್ ಕಾರ್ಯಕ್ರಮವು ಮುಗಿಯುತ್ತಿದ್ದಂತೆಯೇ ಕಿರಿಯ ಶ್ರೀಪಾದರೆಲ್ಲರೂ ಶ್ರೀಕೃಷ್ಣನ ಪೂಜೆಗಾಗಿ ತೆರಳಿದರು. ಹಂತ ಹಂತವಾಗಿ ಉಷಃ ಕಾಲಪೂಜೆ, ಗೋಪೂಜೆ, ಪಂಚಾಮೃತ, ಉದ್ವರ್ತನ, ಕಲಶ, ಅಭಿಷೇಕ, ಅಲಂಕಾರ ಪೂಜೆಗಳನ್ನು ನೆರವೇರಿಸಿದರು. ಆನಂತರದ ಅವಸರಸನಕಾದಿ ಪೂಜೆ, ಮಹಾಪೂಜೆ ಹಾಗೂ ಉತ್ತರ ಪೂಜೆಗಳನ್ನು ಮಾಡುವವರು ಪರ್ಯಾಯ ಶ್ರೀಪಲಿಮಾರು ಹಿರಿಯ ಶ್ರೀಪಾದರು. ಅಂತಹ ಮಹಾಭಕ್ತನಿಂದ ಮಹಾ ಪೂಜೆಯನ್ನು ಕೈಗೊಳ್ಳಲು ಕಾಯುತ್ತಿದ್ದ ಕಡಗೋಲು ಕೃಷ್ಣನಿಗೆ ಅಂದಿನಿಂದ ದೊಡ್ಡ ಹಬ್ಬ, ಎಲ್ಲಿಲ್ಲದ ಮಹಾಸಂಭ್ರಮ. ಶ್ರೀವಿದ್ಯಾಮಾನ್ಯ ತೀರ್ಥರೂ ಭಕ್ತಿ ಪೂರ್ವಕವಾಗಿ

ಶ್ರೀಕೃಷ್ಣನನ್ನು ಪೂಜಿಸುವಾಗ ತನ್ಮಯರಾದರು. ಮಹಾನೈವೇದ್ಯದ ಮಹಾಮಂಗಳಾರತಿಯನ್ನು ಬೆಳಗುವಾಗ 'ಅವರ ಭಕ್ತಿ, ಭಾವಕ್ಕೊಲಿದು ನಲಿದು ನಲಿದು ಬಂದ ಶ್ರೀಕೃಷ್ಣನನ್ನು ಕಂಡ ಭಾವ' ಅವರ ಕಂಗಳಲ್ಲಿ ಮಿನುಗುತ್ತಿತ್ತು. ನಿಜ! ಖಂಡಿತವಾಗಿಯೂ ಆ ಮುದ್ದು ಕೃಷ್ಣ ಅವರ ಭಕ್ತಿಗೆ ಒಲಿದು ನಲಿಯುತ್ತಾ ಬಂದಿದ್ದಾನು. ಕಾರಣ, ಮಗುವಿನಂತಹ ಮುಗ್ಧ ನಿರ್ಮಲ ಹೃದಯ, ವಿಚಾರ ಪೂರಿತ ಸುದೃಢ ಜ್ಞಾನ ಹಾಗೂ ಅಮಿತ ಅನವರತ ಪ್ರೀತಿಗಳ ಸಮ್ಮಿಲನವೇ ಮೂರ್ತಿ ಮತ್ತಾದ ಶ್ರೀ ವಿದ್ಯಾಮಾನ್ಯ ತೀರ್ಥರಂತಹವರನ್ನೇ ಅವನು ಪ್ರೀತಿಸುವವನು.

ಶ್ರೀಕೃಷ್ಣ ಮುಖ್ಯಪ್ರಾಣ ಗುರು ಪೂಜೆ, ಗೋಗ್ರಾಸ, ತೀರ್ಥಗಳ ಬಳಿಕ ಲಕ್ಷಕ್ಕೂ ಮಿಕ್ಕಿದ ಭಕ್ತರೆಲ್ಲರಿಗೂ ನಾನಾವಿಧದ ಸುಗ್ರಾಸ ಭಗವತ್ಪ್ರಸಾದದ ವಿತರಣೆ, ಜೊತೆಯಲ್ಲಿ ದಕ್ಷಿಣೆ. ಸಾಯಂಕಾಲದಲ್ಲಿ ವಿದ್ವಾಂಸರಿಂದ ಉಪನ್ಯಾಸಗಳು, ಸನ್ಮಾನಗಳು ಹಾಗೂ ಶ್ರೀಪಾದರ ಸಂದೇಶಗಳು ಜರುಗಿದವು. ನಂತರ ಭಗವಂತನ ವೈಭವದ ತೆಪ್ಪೋತ್ಸವ ಬ್ರಹ್ಮೋತ್ಸವ, ಡೋಲೋತ್ಸವಗಳು ಜರುಗಿದವು. ನಕಲ ಕಲಾಧಾರಕನಾದ ಶ್ರೀಕೃಷ್ಣನಿಗೆ ಸಮೂಹಕಲಾವಿದರಿಂದ 'ಪ್ರಸನ್ನರಾಮ' ಎಂಬ ನೃತ್ಯ ರೂಪಕ ಹಾಗೂ ಶ್ರೀಪಾದರ ಭಕ್ತರಾದ ವಿಜಯವಾಡದ ಶ್ರೀ ಹೆಚ್. ಟಿ. ಮುರಳಿಧರ ರಾವ್ ಅವರ ಸುಪುತ್ರಿ ಕುಮಾರಿ ರಶ್ಮಿ ಇವರಿಂದ 'ಕೂಚುಪುಡಿ ಹಾಗು ಭರತನಾಟ್ಯ' ನೃತ್ಯ ಸೇವೆಯು ಸಮರ್ಪಿತವಾಯಿತು.

ಮರುದಿನ 19-1-1986ರಂದು ಸೌರಮಧ್ವನವಮೀ ಉತ್ಸವ. ಅಂದು ವಿಶೇಷವಾಗಿ ವಾಕ್ಯಾರ್ಥ ಪ್ರಿಯರಾದ ಶ್ರೀಪಾದರ ನೇತೃತ್ವದಲ್ಲಿ ವಿದ್ವದ್ಗೋಷ್ಠಿ, ವಿದ್ವಾಂಸರ ಉಪನ್ಯಾಸಗಳು, ಶ್ರೀಪಾದರೆಲ್ಲರ ಅನುಗ್ರಹ ವಚನಗಳು ಜರುಗಿದವು. ರಾತ್ರಿ ತೆಪ್ಪೋತ್ಸವ ಬ್ರಹ್ಮೋತ್ಸವಾದಿಗಳ ಬಳಿಕ ಬೆಂಗಳೂರಿನ 'ಪ್ರಭಾತ್ ಕಲಾವಿದರು' ಇವರಿಂದ 'ಶ್ರೀಕೃಷ್ಣ ವೈಜಯಂತೀ' ಎಂಬ ನೃತ್ಯರೂಪಕ ಸೇವೆಯು ಶ್ರೀಕೃಷ್ಣನಿಗೆ ಅರ್ಪಿತವಾಯಿತು. ಈ ರೀತಿ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ ದ್ವಿತೀಯ ಪರ್ಯಾಯ ದ್ವಿತೀಯ ವಿಘ್ನವಿಲ್ಲದಂತೆ ಅತ್ಯಂತ ಉತ್ತಮ ರೀತಿಯಿಂದ ಶುಭಾರಂಭಗೊಂಡಿತು.

ಶ್ರೀ ವಿದ್ಯಾಮಾನ್ಯ ತೀರ್ಥರ ದ್ವಿತೀಯ ಪರ್ಯಾಯ ಇತಿಹಾಸದಲ್ಲಿ ಅದ್ವಿತೀಯವಾಯಿತು. ಶ್ರೀಕೃಷ್ಣಮಧ್ವರಿಗೆ ಅತಿಪ್ರಿಯವಾಯಿತು. ಅವರ ಪರ್ಯಾಯದ ಚಟುವಟಿಕೆಗಳನ್ನು ಅವಲೋಕಿಸಿದಾಗ ಆ ಅಂಶದ ಅರಿವಾಯಿತು.

1986 ಜನವರಿ 18 ರಿಂದ 1988 ಜನವರಿ 17 ರವರೆಗೆ ಶ್ರೀಕೃಷ್ಣಮಠದ ಚಟುವಟಿಕೆಗಳಲ್ಲಿ ಪ್ರಧಾನ ಪಾತ್ರ ಶ್ರೀ ವಿದ್ಯಾಮಾನ್ಯ ತೀರ್ಥರದು. ಅಲ್ಲಿಯ ಆಗು ಹೋಗುಗಳೆಲ್ಲವೂ ಅವರ ಮಾತಿನಂತೆ ನಡೆಯತಕ್ಕದ್ದು. ಆ ಪ್ರತಿಯೊಂದು ಕಾರ್ಯವೂ ಶ್ರೀಕೃಷ್ಣ ಮುಖ್ಯಪ್ರಾಣರ ಪೂಜಾರೂಪವಾದುದು. ಎಂಬ ಆ ಅನುಸಂಧಾನ ಸಹಿತ ಕಾರ್ಯವೇ ಅತ್ಯಂತ ಸಾಧು. ಅಂತಹ ಕಾರ್ಯಗಳ ಕರ್ತೃವಾಗಿ ಮೆರೆದ ಸಾಧಕ ಶ್ರೇಷ್ಠ ಶ್ರೀ ವಿದ್ಯಾಮಾನ್ಯ ತೀರ್ಥರ ದಕ್ಷವಾದ ಆಡಳಿತದ ವೈಖರಿಯ ತಿಳಿವು ನಮ್ಮ ಬಾಳಿನ ಒಳತಿಗೆ. ಕಾರಣವಾಗುವುದು.

ಪೂರ್ವ ದಿಕ್ಕಿನಲ್ಲಿ ರವಿಯೇಳುವುದರೊಳಗೆ ಐದಕ್ಕೆ ಸರಿಯಾಗಿ ಯಾದವವೀರನಿಗೆ ಸುಪ್ರಭಾತ. ಕಿರಿಯ

ಶ್ರೀಪಾದರು ಕೃಷ್ಣನ ಗುಡಿಯ ಪ್ರವೇಶಿಸುವರು ಮಧ್ವಸರದಲ್ಲಿ ಮಿಂದು ಬರುತ. ಗೋಪಿಚಂದನದಿಂದ ದ್ವಾದಶ ಪುಂಡ್ರಗಳನ್ನು ಚಕ್ರಾದಿ ಪಂಚ ಮುದ್ರೆಗಳನ್ನು ಧರಿಸಿ ಪ್ರಣವ ಜಪದಲ್ಲಿ ರತರಾಗುವರು ಪ್ರಾಣಾಯಾಮಗೈಯ್ಯುತ. ಅನಂತರ ಬಾಲಕೃಷ್ಣನ ಅಲಂಕಾರಗಳನ್ನುತೆಗೆಯುವರು ಭಾಗ್ಯಸೂಕ್ತಮಂತ್ರವನು ಪಠಿಸುತ. ಭಾಗ್ಯ ಸೂಕ್ತವು ಮುಗಿದಾಗ ಕೃಷ್ಣ ಸಂಪೂರ್ಣ ಆಭರಣ ರಹಿತ. ಆಗಲೂ ಆತ ಚೆಲ್ವಿಕೆಯ ನಿಕೇತ. ಕಿರಿಯ ಶ್ರೀಪಾದರು ಬಾಲಕೃಷ್ಣನಿಗೆ ಬೆಣ್ಣೆ ಮೊದಲಾದ್ದನ್ನು ಸಮರ್ಪಣೆಗೈವರು ಪ್ರೇಮ ಸಹಿತ. ಕಣ್ತುಂಬ ಕಾಂಬರು ಆರತಿಯನೆತ್ತುತ. ಅನಂತರದಿ ಆರಂಭವಾಗುವುದು ಶ್ರೀ ವಿದ್ಯಾಮಾನ್ಯತೀರ್ಥರಿಂದ ಕೃಷ್ಣನಿಗೆ ಪಂಚಾಮೃತ. ಅವರಾನಂದಿಸುವರು ಘೃತ, ಕ್ಷೀರ, ದಧಿ, ಜೇನು, ಬೆಲ್ಲ, ಬಾಳೆಹಣ್ಣುಗಳೊಡನೆ ಎಳನೀರನೆರೆಯುತ. ಇದೆಲ್ಲ ಹೊರಗಿನ ಪ್ರಪಂಚದಲ್ಲೇ ಇರುವ ಜನರಿಗಾಗಿರುವ ಪಂಚಾಮೃತ. ಆದರೆ ಇದನ್ನೇ ಇಷ್ಟಪಡದವನು ಆ ಭಗವಂತ. ಅವನಿಗೆ ಬೇಕಾದುದು ಶ್ರೀ ವಿದ್ಯಾಮಾನ್ಯ ತೀರ್ಥರಂತಹವರ ಅಂತಃಕರಣದಲ್ಲಿ ತುಂಬಿ ತುಳುಕಿ ಹರಿವ ನಿರ್ವ್ಯಾಜ ನಿಶ್ಚಲ ಪ್ರೇಮಾಮೃತ. ನಿಜ! ಈ ಪಂಚಾಮೃತಾಭಿಷೇಕವು ಜ್ಞಾನ, ಭಕ್ತಿ ಸುಧಾಭಿಷೇಕದ ಸಂಕೇತ.

ಈ ಪಂಚಾಮೃತ ಪೂಜೆ ಶ್ರೀಕೃಷ್ಣನ ದಿನನಿತ್ಯದ ಹದಿನಾಲ್ಕು ಪೂಜೆಗಳಲ್ಲಿ ಮೊದಲನೆಯ ಪೂಜೆ. ಅದನ್ನು ಎರಡು ವರ್ಷದ ಪರ್ಯಾಯದ 730 ದಿನಗಳಲ್ಲೂ ತಪ್ಪದೇ ಮಾಡಿದ ಪರ್ಯಾಯ ಪೀಠಾಧೀಶರು ಶ್ರೀ ವಿದ್ಯಾಮಾನ್ಯ ತೀರ್ಥರು.

ಪಂಚಾಮೃತದ ನಂತರ ಶ್ರೀಕೃಷ್ಣನನ್ನು ಶುಚಿಗೊಳಿಸಿ ಮಹಾಭಿಷೇಕಗೈದು, ಮುದ್ದಾಗಿ ವಿವಿಧ ಅಲಂಕಾರಗಳನ್ನು ಮಾಡಿ ಆನಂದಿಸುವ ಸೌಭಾಗ್ಯ ಕಲಾನಿಪುಣ, ತರುಣ ಯತಿಗಳಾದ ಶ್ರೀ ವಿಶ್ವಪ್ರಿಯ ತೀರ್ಥರಿಗೆ ಹಾಗೂ ಶ್ರೀ ವಿದ್ಯಾಧೀಶ ತೀರ್ಥರಿಗಿತ್ತು.

ಪಂಚಾಮೃತ ಪೂಜೆಯನ್ನು ಪೂರೈಸಿದ ಬಳಿಕ ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಶ್ರೀ ಸರ್ವಜ್ಞಾಚಾರ್ಯರ ಸಿಂಹಾಸನಕ್ಕಾಗಮನ. ಅದರಲ್ಲಿ ಆಸೀನರಾಗೋಣ. ಸುಮಾರು ಎರಡು ತಾಸುಗಳಷ್ಟು ಜಪತಪಾನುಷ್ಠಾನ. ಅದರ ಸಮಾಪನದ ನಂತರ ಜಿಜ್ಞಾಸುಗಳಿಗೆ ಸರ್ವಮೂಲ-ನ್ಯಾಯಸುಧಾ ಗ್ರಂಥಗಳ ಪಾಠನ. ಆ ಪಾಠದ ವೈಶಿಷ್ಟ್ಯವೆಂದರೆ ಪಾಠದ ಆದ್ಯಂತಗಳಲ್ಲಿ ಶಾಂತಿ ಮಂತ್ರೋಚ್ಚಾರಣ ಹಾಗೂ ಗುರೂಚ್ಚಾರದ ನಂತರ ಶಿಷ್ಯರೆಲ್ಲರ ಗ್ರಂಥೋಚ್ಚಾರಣ ! ಪಾಠದ ನಂತರ ಶ್ರೀಪಾದರಿಂದ ಶ್ರೀ ಅನಂತೇಶ್ವರನ ದರ್ಶನ. ಅಂತೆಯೇ ಅಲ್ಲಿರುವ ಆಚಾರ್ಯರ ಆಸನ ಸ್ಥಳಕ್ಕೆ ವಾಯುಸ್ತುತಿ ಪುರಶ್ಚರಣ ತೀರ್ಥಾಭಿಷೇಚನ ಆನಂತರ ಅವರಿಂದ ಅಡಿಗೆ ಮನೆ-ಉಗ್ರಾಣಗಳಲ್ಲಿ ಆದಿನದ ಅಡಿಗೆಯ, ಭೋಜನದ ವ್ಯವಸ್ಥೆಯ ಕುರಿತು ವಿಚಾರಣ. ಬಳಿಕ ಬಡಗು ಮಾಳಿಗೆಯ ಸಿಂಹಾಸನ ಕೋಣೆಯಲ್ಲಿ ಪಾಠ-ಪ್ರವಚನ.

ಇತ್ತ ಶ್ರೀಕೃಷ್ಣಸನ್ನಿಧಿಯಲ್ಲಿ ಸುಪ್ರಭಾತದ ಧ್ವನಿಯ ನಂತರ ಧ್ವನಿವರ್ಧಕಗಳಲ್ಲಿ ಕೇಳಿ ಬರುತ್ತಿದ್ದ ನಿರಂತರದ ಧ್ವನಿ ಚತುರ್ವೇದ ಪಾರಾಯಣ. ಮಧ್ಯ ಮಧ್ಯದಲ್ಲಿ ಕೃಷ್ಣನ ಪೂಜೆಯನ್ನು ಪೂರೈಸಿದ ಕಿರಿಯ ಶ್ರೀಪಾದರುಗಳು ದೇವರಿಗೆ ಪ್ರದಕ್ಷಿಣೆ ಬರುವಾಗ ಕೇಳುತ್ತಿದ್ದ ಅವರ ಹಾಗೂ

ಅವರ ಶಿಷ್ಯರ ಸುಮಧ್ವವಿಜಯದ ಸುಸ್ವನವ್ರದಕ್ಷಿಣೆ, ದಂಡೋದಕವೃಂದಾವನ ದರ್ಶನಾದಿಗಳ ನಂತರ ಕಿರಿಯ ಶ್ರೀಪಾದರಿಂದ ಜಿಜ್ಞಾಸುಗಳಿಗೆ ಸರ್ವಮೂಲ ಗ್ರಂಥಗಳ ಪ್ರವಚನ. ಅದಾಗಿತ್ತು ತಮ್ಮ ಗುರುಗಳ ಆದೇಶ ಹಾಗೂ ಕರ್ತವ್ಯಗಳ ಪಾಲನ.

ಪುನಃ ಪರ್ಯಾಯ ಶ್ರೀಪಾದರಿಂದ ಮಧ್ವ ಸರೋವರದಲ್ಲಿ ಮಧ್ಯಾಹ್ನದ ಸ್ನಾನ. ಶ್ರೀಕೃಷ್ಣನಿಗೆ ವಿಷ್ಣು ಸಹಸ್ರನಾಮ, ಬ್ರಹ್ಮ ಸೂತ್ರಗಳ ಮೂಲಕ ತುಲಸೀ ಅರ್ಚನ. ಆ ಸಮಯದಲ್ಲಿ ಶ್ರೀಕೃಷ್ಣ ಮಠದ ಸೂರ್ಯ ಶಾಲೆ ಚಂದ್ರಶಾಲೆಗಳಲ್ಲಿ ವಿದ್ವಾಂಸರಿಂದ ಸರ್ವಮೂಲ ಗ್ರಂಥಗಳ ಪಾರಾಯಣ. ಸಹಸ್ರನಾಮಾರ್ಚನೆಗಳ ನಂತರ ವಿವಿಧ ಭಕ್ಷ್ಯ ಭೋಜ್ಯಗಳೊಂದಿಗೆ ಮಹಾನೈವೇದ್ಯ ಸಮರ್ಪಣ. ಆವೇಳೆಯಲ್ಲಿ ಧ್ವನಿವರ್ಧಕದಲ್ಲಿ ಮೊಳಗುವುದು ದ್ವಾದಶಸ್ತೋತ್ರ ಗಾಯನ. ಶ್ರೀಕೃಷ್ಣನಿಗೆ ಅನೇಕ ಆರತಿಗಳೊಂದಿಗೆ ಮಹಾ ಮಂಗಳಾರತಿಯನ್ನು ಶ್ರೀಪಾದರು ಮಾಡುವಾಗ ಅನೇಕ ಮಂಗಳ ವಾದ್ಯಗಳ ಘೋಷಣ. ಶ್ರೀಕೃಷ್ಣನಿಗೆ ಮಹಾಪೂಜೆಯನ್ನು ಮಾಡಿದ ಬಳಿಕ ಶ್ರೀಮುಖ್ಯಪ್ರಾಣ, ಮಧ್ವಾಚಾರ್ಯರಿಗೆ ಶ್ರೀಕೃಷ್ಣನ ನೈವೇದ್ಯ ನಿವೇದನ. ನಂತರ ದಂಡೋದಕ, ಮಠದ ಪೂರ್ವಗುರುಗಳಿಗೆ ಹಸ್ತೋದಕ, ಭಾಗೀರಥಿ, ಭೋಜನಾಲಯದಾಂಜನೇಯ, ಸುಬ್ರಹ್ಮಣ್ಯ ಅಶ್ವತ್ಥನಾರಾಯಣರ ದರ್ಶನ, ಪುನಃ ಸಿಂಹಾಸನದಲ್ಲಿ ಯತಿಗಳಿಗೆ ವಿದ್ವಾಂಸರಿಗೆ ವಿದ್ಯಾರ್ಥಿಗಳಿಗೆ ತೀರ್ಥ ಪ್ರದಾನ, ದಕ್ಷಿಣೆಯೊಂದಿಗೆ ಚೌಕಿಯಲ್ಲಿ ಎಲ್ಲರಿಗೂ ಸುಗ್ರಾಸ ಭೋಜನ. ವಿಶಾಲ ಭೋಜನ ಶಾಲೆಯಲ್ಲಿ ಹತ್ತಾರು ಸಾವಿರ ಭಕ್ತರಿಗೆ ಹಾಗೂ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೆ ಉಚಿತವಾದ ನಿರಂತರ ಅನ್ನದಾನ.

ಭೋಜನದ ನಂತರ ಬಡಗು ಮಾಳಿಗೆಯ ಕೋಣೆಗಳಲ್ಲಿ ಪಾಠಗಳು ನಡೆಯುತ್ತಿದ್ದವು. ಶ್ರೀ ವಿದ್ಯಾಮಾನ್ಯ ತೀರ್ಥರು ಸಂಜೆಯ 5 ಗಂಟೆಯವರೆಗೆ ಚಂದ್ರಿಕಾ ಪಾಠವನ್ನು ಮಾಡುತ್ತಿದ್ದರು. ಅತ್ತ ಶ್ರೀಕೃಷ್ಣನ ಮುಂಭಾಗದ ಚಂದ್ರಶಾಲೆಯಲ್ಲಿ ಶ್ರೀಪಾದರ ಪ್ರಥಮ ಶಿಷ್ಯರಾದ ವಿದ್ವಾನ್ ಶ್ರೀ ಪಿ.ಕೆ. ಹರಿದಾಸಾಚಾರ್ಯರು. ಪುರಾಣವನ್ನು ಹೇಳುತ್ತಿದ್ದರು. ಅವರು ಆ ಪುರಾಣವನ್ನು ಅಪರಾಹ್ನ ನಾಲ್ಕು ರಿಂದಾರಂಭಿಸಿ ಸರಿಯಾಗಿ ಐದಕ್ಕೆ ಸಮಾಪ್ತಿ ಗೊಳಿಸುತ್ತಿದ್ದರು. ಆ ಹೊತ್ತಿಗೆ ಶ್ರೀಪಾದರು ಬರುತ್ತಿದ್ದರು. ಪುರಾಣ ಪ್ರತಿಪಾದ್ಯನಿಗೆ ಹಾಗೂ ಗ್ರಂಥಕ್ಕೆ ಮಂಗಳಾರತಿಯ ಮಾಡುತ್ತಿದ್ದರು. ನಂತರ 5-30ಯಿಂದ 6-30 ವರೆಗೆ ಬಡಗು ಮಾಳಿಗೆಯಲ್ಲಿ ಸರ್ವ ಮೂಲ ಗ್ರಂಥ ಪ್ರವಚನವನ್ನು ಮಾಡುತ್ತಿದ್ದರು. 6-30 ಯಿಂದ 8-00 ವರೆಗೆ ರಾಜಂಗಣ ದಲ್ಲಿ ಜ್ಞಾನಯಜ್ಞದ ಅಂಗವಾಗಿ ಪಂಡಿತರ ಪ್ರವಚನ ಜೊತೆಯಲ್ಲಿ ಶ್ರೀಪಾದರ ಆಶೀರ್ವಚನಗಳು ಜರುಗುತ್ತಿದ್ದವು. ನಂತರ ಪುನಃ ಶ್ರೀಪಾದರೆಲ್ಲರ ಸಾಯಂ ಸ್ನಾನ ಶ್ರೀಕೃಷ್ಣನಿಗೆ ದೀವಟಿಗೆ ಸೇವೆ, (ಚಾಮರ ಸೇವೆ) ರಾತ್ರಿ ಪೂಜೆ, ಪ್ರಾಣದೇವರಿಗೆ ರಂಗ ಪೂಜೆ, ಶ್ರೀಕೃಷ್ಣನ ಉತ್ಸವ ತೊಟ್ಟಿಲು ಪೂಜೆ, ಕೊಳಲು ಸೇವೆ, ಈ ಸೇವೆಯವರೆಗೂ ಕಿರಿಯ ಶ್ರೀಪಾದರೇ ಎಲ್ಲ ಸೇವೆ ಪೂಜೆಗಳನ್ನು ನಡೆಸುತ್ತಿದ್ದರು. ಕೊನೆಯ ಸೇವೆ ಏಕಾಂತ ಸೇವೆ. ಈ ಸೇವೆಯನ್ನು ಸಮರ್ಪಿಸಿ ಭಗವಂತನನ್ನು ಪೂಜಿಸುತ್ತಿದ್ದವರು ಶ್ರೀ ವಿದ್ಯಾಮಾನ್ಯ ತೀರ್ಥರೇ. ಕಾರಣ ಕೃಷ್ಣನ ದಿನದ ಹದಿನಾಲ್ಕು ಪೂಜಾ ಸೇವೆಗಳಲ್ಲಿ ಮೊದಲನೆಯದು ಪಂಚಾಮೃತ ಕೊನೆಯದು ಏಕಾಂತಸೇವೆ. ಇವೆರಡನ್ನೂ ಹಾಗೂ ಮಧ್ಯದ ಮಹಾಪೂಜೆ ಚಾಮರ ಸೇವೆಗಳನ್ನು ಮಾಡಿದರೆ ಎಲ್ಲ 14 ಪೂಜೆಗಳನ್ನು ಮಾಡಿದಂತೆ.

ಕಿರಿಯ ಶ್ರೀಪಾದರು ವೈಭವದಿಂದ ಉತ್ಸವದಲ್ಲಿ ಮೆರೆದ ಬಾಲಕೃಷ್ಣನ ಪ್ರಭಾವಳಿ ಹಾಗೂ ಎಲ್ಲ ಆಭರಣಗಳನ್ನು ತೆಗೆಯುತ್ತಿದ್ದರು. ಕೇವಲ ಪುಟ್ಟ ಕೃಷ್ಣವಿಗ್ರಹವನ್ನು ನಾಲ್ಕು ಕಂಬದ ಬೆಳ್ಳಿಯ ಮಂಟಪದಲ್ಲಿ ಲೋಲಾಡುವ ಸುಂದರ ಸುವರ್ಣ ತೊಟ್ಟಿಲಲ್ಲಿ ಮಲಗಿಸುತ್ತಿದ್ದರು. ಹಿರಿಯ ಶ್ರೀಪಾದರು ಬಂದು ತೊಟ್ಟಿಲ ಸರಪಳಿಯನ್ನು ಮೃದುವಾಗಿ ಹಿಡಿದು ಮೆಲ್ಲ ಮೆಲ್ಲನೆ ತೂಗುತ್ತಿದ್ದರು. ಹಾಲಿನ ಕಷಾಯ, ಲಡ್ಡಿಗೆ ಮೊದಲಾದವುಗಳನ್ನು ಬಾಲಕೃಷ್ಣನಿಗೆ ಅರ್ಪಿಸುತ್ತಿದ್ದರು. ಸುಮದಿಂದ ಸುಗಂಧದ ತೈಲವನ್ನು ಶ್ರೀಲೋಲನಿಗೆ ಲೇಪಿಸುತ್ತಿದ್ದರು. ಜರಿ ವಸ್ತ್ರವನ್ನು ಹೊದಿಸುತ್ತಿದ್ದರು. ಮಂಗಳಾರತಿಯ ಬೆಳಗುತ್ತಿದ್ದರು. ಮತ್ತೊಮ್ಮೆ ಮಮತೆಯಿಂದ ತಾಯಿ ತನ್ನ ಕಂದಮ್ಮನ ತೊಟ್ಟಿಲನ್ನು ತೂಗಿದಂತೆ, ಜಗದೊಡೆಯನಾದ ಮುದ್ದು ಬಾಲಕೃಷ್ಣನನ್ನು ಪ್ರೇಮಾತಿಶಯದಿಂದ ತೂಗುತ್ತಿದ್ದರು. ಅಷ್ಟು ಹೊತ್ತಿಗೆ ಮಠದ ಭಾಗವತರು 'ಧೀರ ಶೇಷನು ಬಂದು ಹಾಸಿಗೆಯಾಗಲು ನಾರಿಯರೊಡನೆ ಮಲಗಿದೆ ಹಯವದನ' ಎಂದು ಹಾಡುತ್ತಿದ್ದರು. ನಂತರ ಶೋಭಾನೆಯನ್ನು ಹೇಳುತ್ತಿದ್ದರು. ಆ ವೇಳೆಯಲ್ಲಿ ಹಿರಿಯ ಹಾಗೂ ಕಿರಿಯ ಶ್ರೀಪಾದರು ಶ್ರೀಕೃಷ್ಣ ಪ್ರಸಾದವಾದ ತೈಲವನ್ನು ಪರಸ್ಪರ ಹೃದಯಕ್ಕೆ ಲೇಪಿಸುತ್ತಿದ್ದರು. ಶ್ರೀಕೃಷ್ಣನ ಮಾಲೆಯನ್ನು ಹಾಕುತ್ತಿದ್ದರು. ಆ ಹೊತ್ತಿಗೆ ಭಾಗವತರು,

ಮಧ್ವಾಗಮವೇ ಸಿದ್ಧಾಗಮ, ಮಧ್ವಮತವೇ ಸಕಲಮತಕೆ ಮೇಲೆನಿಸಿದ ಮತವು, ಈ ಮಧ್ವಮತವನ್ನು ಪಿಡಿದು ನಡೆದರೆ ಅಪದ್ಧಮತವಂ ತೆಗೆದು ಮುಕ್ತಿ ಪಥಕ್ಕೊಯ್ಯುವುದು ಸುಕೃತಂ. ರಘುನಾಥಪಾದಪಂಕಜ ಮಧುಕರ, ಪರವಾದಿಕಂಠೀರವ, ಅಘದೂರಚರಿತ, ಪಾವನ, ಅಷ್ಟೋತ್ಕೃಷ್ಟ ಶ್ರೀಮದ್ಹೃಷೀಕೇಶ ತೀರ್ಥ ವಂಶ ಪರಂಪರಾ ಪ್ರಾಪ್ತ ಶ್ರೀಮದ್ರಘುಮಾನ್ಯ ತೀರ್ಥ ಕರಕಮಲಸಂಜಾತ, ಗುರುರಾಜ ಪಟ್ಟಭದ್ರ ವ್ಯಾಖ್ಯಾನ ಸಿಂಹಾಸನಾಧೀಶ್ವರ, ಅಜ್ಞಾನತಿಮಿರ ಮಾರ್ತಾಂಡ ಸುಜ್ಞಾನತೇಜೋಮಯ, ಜಗದ್ಭರಿತ ಪಾಂಚಜನ್ಯ ಪ್ರಿಯ ಪಾಂಚಜನ್ಯಸೇವಾ ಮವಧಾರಯ' ಎಂದು ಸಾಂಪ್ರಯದಾಯಿಕ ಉದ್ಘೋಷಣೆಯನ್ನು ಮಾಡುತ್ತಿದ್ದರು. ಅದಕ್ಕೆ ಸರಿಯಾಗಿ ಮೂರು ಬಾರಿ ಶಂಖನಾದ ಮೊಳಗುತ್ತಿತ್ತು.

ಆನಂತರದಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥರು ಸಿಂಹಾಸನದಲ್ಲಿ ಕುಳಿತು, ಅಂದಿನ ಎಲ್ಲ ಸೇವಾಕರ್ತೃಗಳಿಗೂ ಫಲ, ಪ್ರಸಾದ ಮಂತ್ರಾಕ್ಷತೆಗಳನ್ನು ನೀಡುತ್ತಿದ್ದರು. ಅದು ಮುಗಿಯುವ ವೇಳೆ ಹತ್ತು ಗಂಟೆಯ ಕೆಳಗಿಳಿಯುತ್ತಿರಲಿಲ್ಲ. ಹನ್ನೊಂದನ್ನೂ ಸಮೀಪಿಸದೇ ಇರುತ್ತಿರಲಿಲ್ಲ. ಆನಂತರದಲ್ಲಿ ಶ್ರೀಪಾದರ ಹಣ್ಣುಹಂಪಲುಗಳ ಅಲ್ಪೋಪಹಾರ. ತರುವಾಯ ಬಡಗುಮಾಳಿಗೆಯ ಕಾರ್ಯಾಲಯದಲ್ಲಿ ಅಧಿಕಾರಿಗಳೊಂದಿಗೆ ಶ್ರೀಪಾದರ ಆದಿನದ ಲೆಖ್ಖಾದ ಜಮಾ-ಖರ್ಚುಗಳ ವಿಚಾರ. ಆ ಹೊತ್ತಿನಲ್ಲೂ ಕಿರಿಯ ಶ್ರೀಪಾದರ ಕೋಣೆಗಳಿಂದ ನಿಲ್ಲದೆ ಕೇಳಿಬರುತ್ತಿತ್ತು ಶಾಸ್ತ್ರಪಾಠಗಳ ಸ್ವರ.

86ರಿಂದ 88 ರ ವರೆಗಿನ 730 ದಿನಗಳಲ್ಲೂ ಇದೇ ರೀತಿ ಶಬ್ದಮಯವಾಗಿತ್ತು. ಶ್ರೀಕೃಷ್ಣ ಮಠದ ಪರಿಸರ. ಶ್ರೀ ವಿದ್ಯಾಮಾನ್ಯ ತೀರ್ಥರ ದ್ವಿತೀಯ ಪರ್ಯಾಯದ ಅದ್ವಿತೀಯತೆಗೆ ಅನೇಕ ಕಾರಣಗಳು. ಸ್ವಲ್ಪ ತಿಳಿಯುವುದಕ್ಕಾಗಿ ಇಲ್ಲಿ ಮೂಡಿ ಬಂದಿದೆ ಅವುಗಳ ತಿರುಳು.

ವಿದ್ಯಾಪಕ್ಷಪಾತಿಗಳಾದ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ವಿದ್ವಾಂಸರನ್ನೆಲ್ಲ ಸನ್ಮಾನಿಸುವ ಬಯಕೆ. ಅದಕ್ಕಾಗಿ ರಾಜಾಂಗಣದಲ್ಲಿ ನಿರ್ಮಾಣಗೊಂಡಿತು ಜ್ಞಾನಯಜ್ಞದ ವೇದಿಕೆ. ಕ್ಷಯಸಂವತ್ಸರದ ವೈಶಾಖ ಶುದ್ಧ ಅಕ್ಷಯ ತೃತೀಯಾ ದಿನದಂದು ಆರಂಭಗೊಂಡಿತು ಜ್ಞಾನಯಜ್ಞದ ಪ್ರವಚನ ಮಾಲಿಕೆ. ಪ್ರಸಿದ್ಧ ಪ್ರವಚನಕಾರರಿಗೆಲ್ಲ ತಲುಪಿತು ಪರ್ಯಾಯ ಶ್ರೀಪಾದರ ಹೇಳಿಕೆ. ತಮ್ಮ ವಾಙ್ಮಯ ಸೇವೆಯನ್ನು ಮಹಾಗುರುಗಳ ಮುಖಾಂತರ ಮಧ್ವವಲ್ಲಭ ಶ್ರೀಕೃಷ್ಣನಿಗೆ ಅರ್ಪಿಸುವ ಈ ಸೌಭಾಗ್ಯಕ್ಕಿಂತ ಅಧಿಕವಾದ ಭಾಗ್ಯ ಆ ಪ್ರವಚನಕಾರರಿಗೆ ಬೇರೆ ಬೇಕೆ?

ಅಂತೂ ಶ್ರೀಕೃಷ್ಣಮಠದಲ್ಲಿ ನಿರಂತರ ಹರಿಯುವಂತಾಯಿತು ವೇದ ವೇದಾಂತ ತತ್ವ ಪ್ರವಾಹ. ಅದರ ನೆಲೆಯಾಗಿತ್ತು ಪರ್ಯಾಯ ಶ್ರೀಪಾದರ ದ್ವಿವಿಧ ತಪಸ್ಸಿನ ಪ್ರಭಾವ.

ಪ್ರವಚನ ಮಾಲಿಕೆಯಲ್ಲಿ ಪ್ರಾರಂಭದ ಪ್ರವಚನಕಾರರು, ವಿದ್ಯಾರತ್ನಾಕರ ಬನ್ನಂಜೆ ಗೋವಿಂದಾಚಾರ್ಯರು. ಅವರು ಶ್ರೀ ವಿದ್ಯಾಮಾನ್ಯ ತೀರ್ಥರ ಸೂಚನೆಯಂತೆ ಪ್ರತಿ ತಿಂಗಳ ಹತ್ತು ದಿನಗಳಲ್ಲಿ ಭಾಗವತದ ಪ್ರವಚನವನ್ನು ನೀಡುತ್ತಿದ್ದರು. ಅವರೇ ಜ್ಞಾನಯಜ್ಞದ ಪ್ರವಚನ ಮಾಲಿಕೆಯ ಅಂತಿಮ ಪ್ರವಚನಕಾರರೂ ಕೂಡ. ಉಳಿದ 20 ದಿನಗಳಲ್ಲ ಬೇರೆ ಬೇರೆ ಊರುಗಳಿಂದ ಬಂದ ಪಂಡಿತರು ತಮ್ಮ ಪ್ರವಚನ ಸೇವೆಯನ್ನು ಸಮರ್ಪಿಸುತ್ತಿದ್ದರು. ಒಟ್ಟು ಆ ಜ್ಞಾನ ಯಜ್ಞದಲ್ಲಿ ಎಲ್ಲ ಪ್ರವಚನಕಾರರೂ ಸೇರಿ, ಭಾಗವತ, ಮಹಾಭಾರತ, ರಾಮಾಯಣ, ಭಗವದ್ಗೀತೆ, ವಿಷ್ಣುಸಹಸ್ರನಾಮಸ್ತೋತ್ರ ಭಾಗವತಸಾರೋದ್ಧಾರ, ಹರಿವಂಶ, ಪದ್ಮಪುರಾಣ ವಿಷ್ಣುಪುರಾಣ, ಹರಿಕಥಾಮೃತಸಾರ, ವಾಮನಪುರಾಣ ಮೊದಲಾದ ಅನೇಕ ಗ್ರಂಥಗಳ ಕುರಿತು ಪ್ರವಚನವನ್ನು ನೀಡಿದರು. ಕೆಲವು ವಿದ್ವಾಂಸರು 10 ದಿನ, ಕೆಲವರು 7ದಿನ, ಕೆಲವರು 5ದಿನಗಳ ಕಾಲ ಉಪನ್ಯಾಸಗಳನ್ನು ನೀಡಿದ್ದರು. ಪ್ರವಚನವನ್ನು ನೀಡಿದ ವಿದ್ವಾಂಸರಿಗೆಲ್ಲರಿಗೂ ಅಂದಿನ ದಿನಗಳಲ್ಲಿ ದಿನಕ್ಕೆ ನೂರು ರೂಪಾಯಿಗಳಂತೆ ಸಂಭಾವನೆಯನ್ನು ಶ್ರೀಪಾದರು ನೀಡುತ್ತಿದ್ದರು. ಜೊತೆಗೆ ಉಡುಪಿಗೆ ಬಂದು ಹೋಗುವ ವಾಹನದ ದಾರಿವೆಚ್ಚವನ್ನು ನೀಡುತ್ತಿದ್ದರು. ಶಾಲು, ಸನ್ಮಾನ ಪತ್ರಗಳೊಂದಿಗೆ ಸನ್ಮಾನಿಸುತ್ತಿದ್ದರು. ತನ್ಮೂಲಕ ವಿದ್ಯಾಪೋಷಣೆಯನ್ನು ಮಾಡುತ್ತಿದ್ದರು. ಅದನ್ನು ಭಗವಂತನ ಪೂಜೆಯೆಂದು ಭಾವಿಸುತ್ತಿದ್ದರು.

ಈ ವಿದ್ವಾಂಸರ ಪ್ರವಚನಗಳಲ್ಲದೇ ಪ್ರತಿನಿತ್ಯ ಪರ್ಯಾಯ ಶ್ರೀಪಾದರು ಗೀತೆಯ ಕುರಿತು ಪ್ರವಚನವನ್ನು ನೀಡುತ್ತಿದ್ದರು. ಅಲ್ಲದೆ ವಿಶೇಷ ಸಂದರ್ಭಗಳಲ್ಲಿ ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥರು, ಶ್ರೀಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥರು, ಶ್ರೀ ಅದಮಾರು ಮಠದ ಶ್ರೀ ವಿಬುಧೇಶತೀರ್ಥರು ಹಾಗೂ ಶ್ರೀ ವಿಶ್ವ ಪ್ರಿಯ ತೀರ್ಥರು, ಶ್ರೀ ಪುತ್ತಿಗೆ ಮಠದ ಶ್ರೀ ಸುಗುಣೇಂದ್ರ ತೀರ್ಥರು, ಶ್ರೀ ಪಲಿಮಾರು ಮಠದ ಶ್ರೀ ವಿದ್ಯಾಧೀಶ ತೀರ್ಥರು, ಶ್ರೀ ಭಂಡಾರಕೇರಿ ಮಠದ ಶ್ರೀ ವಿದ್ಯೇಶತೀರ್ಥರು, ಮೈಸೂರಿನ ಶ್ರೀದೇವೇಂದ್ರ ತೀರ್ಥರು ಹಾಗೂ ಪ್ರಯಾಗಕ್ಷೇತ್ರದ ಶ್ರೀ ವಿದ್ಯಾವಲ್ಲಭ ತೀರ್ಥರುಗಳೂ ಈ ಜ್ಞಾನಯಜ್ಞದ ಪ್ರವಚನ ಮಾಲಿಕೆಯಲ್ಲಿ ಪ್ರವಚನಗಳನ್ನು ನೀಡುತ್ತಿದ್ದರು.

ಇದೇ ರೀತಿಯಾಗಿ ನಿತ್ಯ ಸಂಜೆ 4-00 ರಿಂದ 5-00ರವರೆಗೆ ವಿದ್ವಾನ್ ಶ್ರೀ ಪಿ.ಕೆ. ಹರಿದಾಸಾ ಚಾರ್ಯರಿಂದ ಮಹಾಭಾರತ ಪ್ರವಚನವೂ ನಡೆಯುತ್ತಿತ್ತು. ಚಾತುರ್ಮಾಸ್ಯದ ಕಾಲದಲ್ಲಿ ಪ್ರತಿ ಏಕಾದಶೀ ತಿಥಿಯಂದು ರಾತ್ರಿ ಜಾಗರಣೆಯ ಪ್ರಯುಕ್ತ ಪುರಾಣ ವಾಚಸ್ಪತಿ ಶ್ರೀ ಭಂ ನಾರಾಯಣಾ ಚಾರ್ಯರಿಂದ ಭಾಗವತೋಕ್ತ ಉಪಾಖ್ಯಾನಗಳ ಪ್ರವಚನಗಳು ನಡೆಯುತ್ತಿದ್ದವು. ಹೀಗೆ ಆ ಎರಡು ವರ್ಷಗಳಲ್ಲಿ ಹೆಚ್ಚಿನ ಗಂಟೆಗಳ ಕಾಲ ಶ್ರೀಕೃಷ್ಣಮಠದಲ್ಲಿ ಪುರಾಣ-ಪ್ರವಚನಗಳ ಧ್ವನಿ ತರಂಗಗಳೇ ಚಲಿಸುತ್ತಿದ್ದವು.

ಈ ರೀತಿ ಅತ್ಯಂತ ಶ್ರೇಷ್ಠ ಮಟ್ಟದಲ್ಲಿ ಪ್ರವಚನ ಮಾಲಿಕೆಯನ್ನು ಯಶಸ್ವಿಯಾಗಿ ಆಯೋಜಿಸಿ ಅದನ್ನು 17-1-1988 ರಂದು ಶ್ರೀಮದಾಚಾರ್ಯರಿಗೆ ಹಾಗೂ ಅವರಂತರ್ಗತನಾದ ಶ್ರೀಕೃಷ್ಣನಿಗೆ ಅರ್ಪಿಸಿದರು. ಅವರ ನಂತರದ ಅದಮಾರು ಪರ್ಯಾಯದಲ್ಲಿ ಅವರ ಪ್ರಿಯ ಶಿಷ್ಯರಾದ ಶ್ರೀವಿಶ್ವಪ್ರಿಯತೀರ್ಥರು ಆ ಪ್ರವಚನ ಮಾಲಿಕೆಯನ್ನು ತಾವೇ ಮುಂದುವರೆಸಿದರು. ಆ ಮೂಲಕ ಗುರುಗಳ ಪ್ರೀತಿಗೆ ಪಾತ್ರರಾದರು.

ಈ ಪರ್ಯಾಯದ ವೈಶಿಷ್ಟಗಳಲ್ಲಿನ್ನೊಂದು 'ಜಪಯಜ್ಞ' ಕಾರ್ಯಕ್ರಮ. ಅದರ ಫಲ ಮಹತ್ತಮ. ಆದರೆ ಅದು ದೊರೆಯಲು ಅವಶ್ಯಬೇಕು ಶುದ್ಧಾಚಾರದ ನಿಯಮ. ಆ ಆಚಾರದ ಸಹಿತ ಜಪದಿಂದಲೇ ಪ್ರೀತನಾಗುವನಲು ಆ ಅಗಣಿತ ಮಹಾ ಮಹಿಮ. ಆಗ ಲೋಕಗಳಲ್ಲಿ ತೋರುವುದು ದುಃಖಕ್ಷೋಭೆಗಳ ನಿರ್ನಾಮ. ನೆಲೆಗೊಳ್ಳುವುದು ಶಾಶ್ವತ ಸುಖ ಕ್ಷೇಮ. ಅದಕ್ಕಾಗಿಯೇ ಆ ಜಪಯಜ್ಞವನ್ನು ನೆರವೇರಿಸಿದರು ಆ ಯತಿಕುಲ ಲಲಾಮ.

ಲೋಕ ಕಲ್ಯಾಣಕ್ಕಾಗಿ ಕೋಟಿ ಗಾಯತ್ರೀ ಮಂತ್ರ ಹಾಗೂ ಕೋಟಿ ಕೃಷ್ಣ ಷಡಕ್ಷರ ಮಂತ್ರವನ್ನು ಜಪಿಸುವ ಒಂದು ಮಹತ್ತರ ಕಾರ್ಯವನ್ನು ಶ್ರೀಪಾದರು ಪ್ರಾರಂಭಿಸಿದರು. ಅನೇಕ ನಿಷ್ಠಾವಂತ ಬ್ರಾಹ್ಮಣರನ್ನು ನೇಮಿಸಿದರು. ಶ್ರೀಕೃಷ್ಣನ ಸನ್ನಿಧಿಯಲ್ಲೇ ಎರಡು ಮಹಾಮಂತ್ರಗಳನ್ನು ಜಪಿಸುವಂತೇ ಆದೇಶಿಸಿದರು. 30-1-1987 ರಿಂದ 10-1-1988 ರ ವರೆಗೆ ಕೋಟಿ ಗಾಯತ್ರೀ ಜಪದ ಶತಾಂಶ ಹೋಮವನ್ನು ಹಾಗೂ ಕೋಟಿಕೃಷ್ಣ ಮಂತ್ರ ಜಪದ ಶತಾಂಶಹೋಮವನ್ನು ಋತ್ವಿಜರ ಮೂಲಕ ಮಾಡಿಸಿದರು. ಜಪವನ್ನು ಮಾಡಿದ ಬ್ರಾಹ್ಮಣರಿಗೂ ಹೋಮವನ್ನು ಮಾಡಿದ ಋತ್ವಿಜರಿಗೂ ಸಹಸ್ರಾರು ಸಹಸ್ರಾರು ಸಂಭಾವನೆಗಳನ್ನು ನೀಡಿದರು.

ಶ್ರೀಮದಾಚಾರ್ಯರ 750ನೆಯ ಜಯಂತಿ ಉತ್ಸವದ ಅಂಗವಾಗಿ ವಿದ್ವಾಂಸರ ಮೂಲಕ 750 ಬಾರಿ ಸರ್ವಮೂಲ ಗ್ರಂಥಗಳ ಪಾರಾಯಣವನ್ನು ಮಾಡಿಸಿದರು. ವೇದಪಾರಾಯಣ ಪಂಡಿತರಿಗೂ ಸಂಭಾವನೆಯನ್ನು ನೀಡಿದರು. ಈ ರೀತಿಯ ಪಾರಾಯಣ ಜಪಗಳನ್ನು ಶ್ರೀಕೃಷ್ಣನಿಗೆ ಅರ್ಪಿಸಿ ಲೋಕದ ಕ್ಷೇಮವನ್ನು ರಕ್ಷಿಸಿದರು.

ಶ್ರೀಪಾದರ ಪರ್ಯಾಯ ಎಲ್ಲಕ್ಕಿಂತ ಹೆಚ್ಚಾಗಿ ಮೆರೆಯಲು ಸ್ಫುಟವಾಗಿ ತೋರುವ ಕಾರಣ ಅವರಲ್ಲಿರುವ ಔದಾರ್ಯ, ಜನ ಶುಶ್ರೂಷೆ. ಮೊದಲಿನಿಂದಲೂ ಅನ್ನದಾನಕ್ಕೆ ಪ್ರಸಿದ್ಧವಾದುದು ಶ್ರೀಕೃಷ್ಣಮಠ. ಇಂದಿಗೂ ಅದೇ ಪರಿಪಾಠ ಶ್ರೀಪಾದರ ಪರ್ಯಾಯದಲ್ಲಿ ವ್ಯಾಪಕವಾಗಿ ನಡೆದ ಅನ್ನದಾನ ಬಹಳ ವಿಶಿಷ್ಟ. ಬಂದವರೆಲ್ಲಾ ಉಣಬೇಕೆನ್ನುವುದೇ ಶ್ರೀಪಾದರಿಗೆ ಇಷ್ಟ.

ವಿದ್ವಾಂಸರಿಗೆ ವಿಶಿಷ್ಟ ಅತಿಥಿಗಳಿಗೆ ಶ್ರೀಕೃಷ್ಣನ ಸೇವಾಕರ್ತೃಗಳಿಗೆ ಚೌಕಿಯಲ್ಲಿ ಶ್ರೀಪಾದರೊಡನೆ ಭೋಜನ ಕೂಟ. ಪುರೋಹಿತ , ತಂತ್ರಾಗಮ ತರಗತಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಮಹಾ ಪಾಠಶಾಲೆಯ ವಿದ್ಯಾರ್ಥಿಗಳ ಭೋಜನದ ಸ್ಥಳ ಮೃಷ್ಟಾನ್ನವೆಂಬ ವಿಭಾಗದ ಚೌಕಿಯ ಅಟ್ಟ. ಇತರ ಕಾಲೇಜುಗಳ ಬಡ ವಿದ್ಯಾರ್ಥಿಗಳಿಗೆ ಊರ ಅನಾಥರಿಗೆ ಭೋಜನ ಶಾಲೆಯಲ್ಲಿ ದೇವರ ಪ್ರಸಾದದ ಸವಿ ಊಟ. ಉಡುಪಿಯ ಕೃಷ್ಣನನ್ನು ನೋಡಲು ಬಂದ ಎಲ್ಲ ವರ್ಗದ ಭಕ್ತ ಸಮೂಹಕ್ಕೂ ನಿರಂತರವಾದ ಉಚಿತವಾದ ರುಚಿಯಾದ ಊಟ. ಊಟಕ್ಕೆ ಬರುವೆ ಎನ್ನುವ ಭಕುತನಿಗೆ ಶ್ರೀಪಾದರ ಪರ್ಯಾಯದಲ್ಲಿ ಕಾಣಸಿಗದು ಊಟಕ್ಕೆ ಬೇಡವೆನ್ನುವವರ ಕಾಟ ತಡೆಯುವವರ ಕಾಟ. ರಾತ್ರಿಯಲ್ಲೂ ಮಧ್ಯಾಹ್ನದಲ್ಲೂ ಕೃಷ್ಣಮಠದ ಒಳಗೆ ಎಲ್ಲೆಲ್ಲೂ ಅನ್ನದಾನದ ನೋಟ. ಇದನ್ನೇ ತುಂಬ ಬಯಸುವನೂ ಉಡುಪಿಯ ಕಡಗೋಲು ಪಿಡಿದ ಪುಟ್ಟ. ಈ ಉದಾರ ಅನ್ನದಾನದಿಂದ ತೃಪ್ತರಾದ ಭಕ್ತರು ನುಡಿದರು 'ಈ ಪರ್ಯಾಯ ಶ್ರೇಷ್ಠ'.

ಇಷ್ಟೇ ಅಲ್ಲದೇ ಶ್ರೀಪಾದರ ಅಗಾಧವಾದ ಔದಾರ್ಯದ ಇನ್ನೊಂದು ಮುಖ ಇಲ್ಲಿದೆ.

ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮ ಪರ್ಯಾಯಕ್ಕೂ ಮುಂಚಿತವಾಗಿಯೇ ಸರ್ವಮೂಲ ಪಾಠವನ್ನು ಘೋಷಿಸಿದ್ದರು. ಪಾಠಕ್ಕಾಗಿ ಜಿಜ್ಞಾಸು ಭಕ್ತರನ್ನು ಆಹ್ವಾನಿಸಿದ್ದರು. ಅದಕ್ಕಾಗಿ 30ಕ್ಕೂ ಅಧಿಕ ಭಕ್ತರು ಕುಟುಂಬ ಸಹಿತರಾಗಿಯೇ ಉಡುಪಿಯಲ್ಲಿರಲು ಸಂಕಲ್ಪಿಸಿದ್ದರು. ಇಂತಹ ಕುಟುಂಬಗಳ ವಸತಿಗಾಗಿ ಶ್ರೀಪಾದರು ಬಡಗು ಮಾಳಿಗೆಯ ಮೇಲೆ ಉತ್ತಮ ಕೊಠಡಿಗಳ ವ್ಯವಸ್ಥೆಯನ್ನು ಕಲ್ಪಿಸಿದ್ದರು. ವ್ಯವಸ್ಥೆಗಾಗಿ ಲಕ್ಷಾಂತರ ರೂಗಳನ್ನು ವ್ಯಯಿಸಿದರು. ಕೊಳಾಯಿ ನೀರು, ಶೌಚಾಲಯ, ಸ್ನಾನಗೃಹ ಅವರವರ ಕೊಠಡಿಗಳಲ್ಲಿ ವಿದ್ಯುದ್ವ್ಯಜನ, ವಿದ್ಯುದ್ದೀಪ ಮೊದಲಾದುವುಗಳ ವ್ಯವಸ್ಥೆಯನ್ನು ಏರ್ಪಡಿಸಿದರು. ಸರ್ವಮೂಲ ಪಾಠಕ್ಕಾಗಿ ಬಂದ ಜಿಜ್ಞಾಸು ಕುಟುಂಬಗಳ ದೈನಂದಿನ ಬೆಳಗಿನ ಉಪಹಾರ ಕಾಫೀ, ಹಾಲು, ಮೊಸರು ಇತ್ಯಾದಿ ಮಧ್ಯಾಹ್ನದ ಚೌಕಿ ಊಟ, ಪುನಃ ಸಾಯಂಕಾಲದ ಹಾಲು, ಕಾಫೀ ಇತ್ಯಾದಿ ಮತ್ತೆ ರಾತ್ರಿ ಊಟದವರಿಗೆ ಊಟ ಫಲಾಹಾರದವರಿಗೆ ಫಲಾಹಾರ ಎಂಬ ವ್ಯವಸ್ಥೆಯನ್ನು ನಿಗದಿಗೊಳಸಿದ್ದರು. ಈ ವ್ಯವಸ್ಥೆಯ ವೈಭೋಗವನ್ನು ಅನುಭವಿಸುತ್ತಿದ್ದವರು ಆ ಪಾಠದವರು ಮಾತ್ರವಲ್ಲ, ಆಗಾಗ ಅವರಲ್ಲಿಗೆ ಬರುತ್ತಿದ್ದ ಅಸಂಖ್ಯ ಸಂಬಂಧಿಕರೂ ಸೇರುತ್ತಿದ್ದರು. ಪಾಠದವರು ಏನನ್ನಾದರೂ ಬಯಸಿ ಉಗ್ರಾಣದಲ್ಲಿ ಕೇಳುತ್ತಿದ್ದರೂ ಉಗ್ರಾಣದ ಅಧಿಕಾರಿಗಳಾದ ಸ್ವಾಮಿ ನಿಷ್ಠ ಹಾಗೂ ಉದಾರಿಗಳಾದ ಬೆಳ್ಳರ್‌ಪಾಡಿ ಶ್ರೀಮಾಧವ ಭಟ್ ಅವರು ಅದನ್ನೆಲ್ಲಾ ನೀಡುತ್ತಿದ್ದರು. ಅಂತೂ ಊರು ಮನೆ ವಠಾರಗಳನ್ನು ಬಿಟ್ಟು ಪಾಠಕ್ಕಾಗಿ ಬಂದ ಭಕ್ತರು ನಿಶ್ಚಿಂತೆಯಿಂದ ಪಾಠ ಕೇಳಬೇಕು ಸಾಧನೆಯನ್ನು ಮಾಡಬೇಕು ಅವರಿಗೆ ಕೊರತೆ ಚಿಂತೆ ಇದ್ದಲ್ಲಿ ಸಾಧನೆ ಕುಂಠಿತವಾಗುವುದು ಹೀಗಾಗಿ ನಿಶ್ಚಿಂತ ಸಾಧಕರಾಗಲು, ಪಾಠ ನಿರ್ವಿಘ್ನವಾಗಿ ಸಾಗಲು ಯಾವ ಕೊರತೆಯೂ ಅವರಿಗೆ ತೋರಬಾರದು ಎಂಬ ಉದಾತ್ತ ಉದಾರ ಉದ್ದೇಶದಿಂದ ಶ್ರೀಪಾದರು ಇಂತಹ ವ್ಯವಸ್ಥೆಯನ್ನು ಕಲ್ಪಿಸಿದ್ದರು. ಪ್ರಾಯಃ ಈ ಶತಮಾನವಂತೂ ಅಂತಹ ಪರ್ಯಾಯದಂತೆ ಇನ್ನೊಂದು ಪರ್ಯಾಯವನ್ನು ಕಂಡಿಲ್ಲ.

ಇಷ್ಟೇ ಅಲ್ಲದೆ ಉಡುಪಿಯ ಆಸ್ಪತ್ರೆಗಳಲ್ಲಿ ಬಳಲುವ ಅನೇಕ ವಿಧ ರೋಗಿಗಳಿಗೂ ಪ್ರತಿನಿತ್ಯ ಎರಡೂ ಹೊತ್ತಿನಲ್ಲಿ ಉಚಿತವಾಗಿ ಭೋಜನವನ್ನು ಕಳುಹಿಸುವ ವ್ಯವಸ್ಥೆಯನ್ನು ಶ್ರೀಪಾದರು ಮಾಡಿದ್ದರು.

ಈ ರೀತಿ ಬಗೆಬಗೆಯ ಜೀವಿಗಳ ಯೋಗ್ಯತೆಗೆ ಅನುಗುಣವಾಗಿ ಅನುಕಂಪೆಯನ್ನೂ ಸ್ನೇಹವನ್ನೂ ಅನುಗ್ರಹವನ್ನೂ ತೋರಿಸಿ ಪಾಲಿಸಿ ತೃಪ್ತಿಪಡಿಸುವ ಔದಾರ್ಯ ಸಮದರ್ಶಿತ್ವ ಬುದ್ಧಿಗಳೇ ಮೂರ್ತಿಮತ್ತರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು.

ಶ್ರೀ ವಿದ್ಯಾಮಾನ್ಯ ತೀರ್ಥರ ದ್ವಿತೀಯ ಪರ್ಯಾಯ 4ತಿಂಗಳು ಮಾತ್ರ ವಿಶ್ರಾಂತಿಯ ಸಮಯ ಉಳಿದ ಎಂಟು ತಿಂಗಳೂ ಉನ್ನತ ವಿಶಿಷ್ಟ ಉತ್ಸವಮಯ.

ಉಡುಪಿ ಕೃಷ್ಣನ ಉತ್ಸವಗಳೆಲ್ಲವೂ ನೋಡಲು ಬಲು ಚೆನ್ನ ಕಾರಣ ಅವುಗಳೆಲ್ಲಾ ಎಲ್ಲೂ ಇರದ ವೈವಿಧ್ಯದ ತಾಣ. ವರ್ಷದಲ್ಲಿ ಅವನಿಗೆ ನಡೆದ ನಡೆಯುವ ಉತ್ಸವಗಳು ನಾನಾ. ಸಪ್ತೋತ್ಸವ, ಲಕ್ಷದೀಪೋತ್ಸವ, ವಸಂತೋತ್ಸವ, ಬ್ರಹ್ಮೋತ್ಸವ, ಗರುಡೋತ್ಸವ, ರಜತ ರಥೋತ್ಸವ, ಮಹಾ ಪೂಜಾ ರಥೋತ್ಸವ, ಸುವರ್ಣ ಪಾಲಕಿ ಉತ್ಸವ ಆದರೊಂದಿಗೆ ಶ್ರೀ ವಿದ್ಯಾಮಾನ್ಯ ತೀರ್ಥರು ಅರ್ಪಿಸಿದ ಚಿನ್ನದ ರಥೋತ್ಸವಗಳಿಂದ ನಿತ್ಯದಲಿ ವಿಜೃಂಭಿಸುತ್ತಿದ್ದವನು ಆ ಜಗಜ್ಜನ್ಮಾದಿ ಕಾರಣ. ಈ ವಿಶಿಷ್ಟ ಉತ್ಸವ ಮಾಲಿಕೆಯೂ ಶ್ರೀಪಾದರ ದ್ವಿತೀಯ ಪರ್ಯಾಯದ ಅದ್ವಿತೀಯತೆಗೆ ಕಾರಣ.

## 1. ಸಪ್ತೋತ್ಸವ :-

7 ದಿನಗಳಲ್ಲಿ ನಡೆಯುವ ಉತ್ಸವ. ಶ್ರೀಮದಾಚಾರ್ಯರು ಶ್ರೀಕೃಷ್ಣನನ್ನು ಮಕರ ಸಂಕ್ರಮಣದಂದು ಪ್ರತಿಷ್ಠಾಪಿಸಿದ ಮುಹೂರ್ತಕ್ಕನುಗುಣವಾಗಿ ನಡೆಯುವ ವಾರ್ಷಿಕ ಉತ್ಸವ. ಪ್ರಾರಂಭದ 5 ದಿನಗಳಲ್ಲಿ ತೆಪ್ಪೋತ್ಸವ ಹಾಗೂ ಗರುಡ ರಥದಲ್ಲಿ ಶ್ರೀಕೃಷ್ಣ ಮುಖ್ಯಪ್ರಾಣರನ್ನು ಕುಳ್ಳಿರಿಸಿ ಮಹಾಪೂಜಾ ರಥದಲ್ಲಿ ಅನಂತೇಶ್ವರ ಚಂದ್ರೇಶ್ವರರನ್ನು ಕುಳ್ಳಿರಿಸಿ ಎಳೆಯುವ ಉತ್ಸವ. 6ನೆಯ ದಿನ (ಮಕರ ಸಂಕ್ರಮಣದಂದು) ಮೂರು ರಥಗಳ ಭವ್ಯ ರಥೋತ್ಸವ. ಇದು ಕರ್ನಾಟಕದ ಕೀರ್ತಿಯನ್ನು ಹೆಚ್ಚಿಸಿದ ಉಡುಪಿಯ ವೈಭವ. ಮಹಾಪೂಜಾ ರಥದಲ್ಲಿ ಮುಖ್ಯ ಪ್ರಾಣದೇವ ಗರುಡ ರಥದಲ್ಲಿ ಚಂದ್ರೇಶ್ವರ ಸಹಿತನಾದ ಅನಂತೇಶ್ವರ ದೇವ ಮಧ್ಯದ ಭವ್ಯ ಬ್ರಹ್ಮ ರಥದಲ್ಲಿ ವಿರಾಜಮಾನನಾಗುವನು ನಮ್ಮ ದೇವಾದಿ ದೇವ. ಕೊನೆಯ ದಿನ ಚೂರ್ಣೋತ್ಸವ. ಅಂದು ಶ್ರೀಕೃಷ್ಣನು ರಥದಲ್ಲಿ ಕುಳಿತು ಭಕ್ತರಿಗೆ ಹಣ್ಣು ಫಲ, ಸುವರ್ಣಗಳ ಮೂಲಕ ವರಗಳನ್ನು ಸುರಿಸುವ ಜಗವನೆಲ್ಲಾ ಕಾವ.

ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನಾದ ಶ್ರೀಕೃಷ್ಣ ಪರಮಾತ್ಮಗೆ ಸಪ್ತಲೋಕಾಧಿಪತಿಗಳೂ ಒಂದೊಂದು ದಿನ ತಮ್ಮ ತಮ್ಮ ಸೇವೆಯನ್ನು ಸಲ್ಲಿಸುವ ಸಂಕೇತ ಈ ಉಡುಪಿಯ ಸಪ್ತೋತ್ಸವ.

ಪ್ರಾಯಃ ಈ ಉತ್ಸವವು ಪ್ರತಿ ಪರ್ಯಾಯದಲ್ಲೂ ಮಕರ ಸಂಕ್ರಮಣದ ಸಮಯದಲ್ಲಿ ತಪ್ಪದೇ ನಡೆಯುವುದು ಮಠವೇ ಅದನ್ನು ನಡೆಸುವುದು. ಆದರೆ ಶ್ರೀಕೃಷ್ಣ ಭಕ್ತರೂ ಈ ಸೇವೆಯನ್ನು ಸಲ್ಲಿಸಬಹುದು. ಆ ಸೇವೆಗೆ ಲಕ್ಷಾಂತರ

ರೂಗಳು ವ್ಯಯವಾಗಬಹುದು. ಆದರೂ ಪೇಜಾವರ ಶ್ರೀಪಾದರ ತೃತೀಯ ಪರ್ಯಾಯದಲ್ಲಿ ಅನೇಕ ಸಪ್ತೋತ್ಸವಗಳು ನಡೆದುವು. ಅದಕ್ಕಿಂತ ಹೆಚ್ಚಿನ ಸಪ್ತೋತ್ಸವ ಸೇವೆಗಳು ನಡೆದದ್ದು ಶ್ರೀ ವಿದ್ಯಾಮಾನ್ಯ ತೀರ್ಥರ ದ್ವಿತೀಯ ಪರ್ಯಾಯದಲ್ಲಿ. ಶ್ರೀಪಾದರ ಅನೇಕ ಭಕ್ತರು ಅನೇಕ ರೀತಿಯಲ್ಲಿ ಸೇವೆಯನ್ನು ಸಲ್ಲಿಸಿದರು ಅವರ ಪರ್ಯಾಯದ ಮಹಾ ಪರ್ವ ಕಾಲದಲ್ಲಿ ಈ ಮಹಾ ಸಪ್ತೋತ್ಸವ ಮಹಾ ಸೇವೆಯನ್ನು ಸಲ್ಲಿಸಿದ ಮಹಾ ಪುಣ್ಯ ಶಾಲಿಗಳು ಏಳು ಜನ ಭಕ್ತರು.

30-1-1987 ರಿಂದ 5-2-1987 ರವರೆಗೆ ವೈಕುಂಠವಾಸಿ ಪಂಡಿತ ಗುರುಗುಂಡಿಶ್ರೀರಾಮಾ ಚಾರ್ಯರ ಸುಪುತ್ರರಾದ ಮುಂಬೈ ಶ್ರೇಷ್ಠ ಉದ್ಯಮಿ ಗಳಾದ ಶ್ರೀಪಾದರ ಭಕ್ತರಾದ ಶ್ರೀಲಕ್ಷ್ಮೀಯಾದವಾ ಚಾರ್ಯರಿಂದ ಸಪ್ತೋತ್ಸವ ಸೇವೆಯೂ ನಡೆಯಿತು.

11-2-1987 ರಿಂದ 17-2-1987 ರವರೆಗೆ ಬೆಂಗಳೂರಿನ ಡಾ|| ಎಂ. ಕೆ. ಭಾರತೀ ರಮಣಾಚಾರ್ಯರಿಂದ ಸಪ್ತೋತ್ಸವ ಸೇವೆಯೂ ನಡೆಯಿತು. ಅವರು ಶ್ರೀಪಾದರ ಸರ್ವಮೂಲ ಪಾಠಕ್ಕಾಗಿ ಅಲ್ಲಿಯೇ ನೆಲಸಿದ ಭಕ್ತರು.

31-3-1987 ರಿಂದ 6-4-1987ರವರೆಗೆ ಶ್ರೀ ಕೆಂಮ್ತೂರು ಗುರುರಾಜ ಭಟ್ ಹಾಗೂ ಸುಪುತ್ರರಿಂದ ಸಪ್ತೋತ್ಸವ ಸೇವೆಯೂ ನಡೆಯಿತು. ಮಠದ ಶಿಷ್ಯರೂ ಆಗಿದ್ದು, ಶ್ರೀಪಾದರ ಅತ್ಯಂತ ಭಕ್ತರೂ ಹಾಗೂ ಹುಬ್ಬಳ್ಳಿಯ ಪ್ರಸಿದ್ಧಹೋಟೆಲ್ ಉದ್ಯಮಿಗಳು.

7-4-1987 ರಿಂದ 13-4-1987ರವರೆಗೆ ವೈಕುಂಠವಾಸಿ ಪಂಡಿತ ಶ್ರೀ ಕೊರ್ಲಹಳ್ಳಿ ಭೀಮಸೇನಾಚಾರ್ಯರ ಸುಪುತ್ರರಾದ ವಿದ್ವಾನ್ ಕೊರ್ಲಹಳ್ಳಿ ಜಯತೀರ್ಥಚಾರ್ಯರಿಂದ ಸಪ್ತೋತ್ಸವ ಸೇವೆಯು ನಡೆಯಿತು. ಶ್ರೀಪಾದರಲ್ಲಿಯೇ ಸುಧಾಂತ ವೇದಾಂತ ಅಧ್ಯಯನ ಮಾಡಿದ ವಿದ್ವಾಂಸರು. ಶ್ರೀಪಾದರ ಸರ್ವ ಮೂಲ ಪಾಠಕ್ಕಾಗಿಯೇ ಉಡುಪಿಯಲ್ಲಿ ನೆಲೆಸಿದರು.

17-4-1987 ರಿಂದ 23-4-1987ರವರೆಗೆ ಶ್ರೀ ಕೆ. ರಾಮಪ್ರಸಾದ ಭಟ್ ಇವರಿಂದ ಸಪ್ತೋತ್ಸವ ಸೇವೆಯು ನಡೆಯಿತು. ಶ್ರೀಪಾದರ ಅತ್ಯಂತ ಏಕಾಂತ ಭಕ್ತರಾದ ಇವರು ಮಾಧ್ವ ಸಿದ್ಧಾಂತದಲ್ಲಿ ಏಕಾದಶ್ಯಾದಿ ವ್ರತಾಚರಣೆಯಲ್ಲಿ ಅತ್ಯಂತ ಧೀಕ್ಷಾಬದ್ಧ ಭಕ್ತರು. ಮದ್ರಾಸಿನ ಪ್ರಸಿದ್ಧ ಉದ್ಯಮಿಗಳು.

15-5-1987 ರಿಂದ 21-5-1987ರವರೆಗೆ ಶ್ರೀ ಹೆಚ್. ಟಿ. ಮುರಳೀಧರ ರಾವ್ ಇವರಿಂದ ಸಪ್ತೋತ್ಸವ ಸೇವೆಯೂ ನಡೆಯಿತು. ಶ್ರೀಪಾದರ ಶ್ರೇಷ್ಠ ಭಕ್ತರಾದ ಇವರು ಧಾರ್ಮಿಕ ಶ್ರದ್ಧಾಳುಗಳು ವಿಜಯವಾಡದ ಉತ್ತಮ ಉದ್ಯಮಿಗಳು.

5-6-1987 ರಿಂದ 11-6-1987ರವರೆಗೆ ಶ್ರೀ ವಿದ್ಯಾಮಾನ್ಯ ತೀರ್ಥರ ಸರ್ವಮೂಲ ಪಾಠದ ಶಿಷ್ಯವರ್ಗದಿಂದ ಸಪ್ತೋತ್ಸವ ಸೇವೆಯು ನಡೆಯಿತು.

ಪರ್ಯಾಯ ಮಠದ ವತಿಯಿಂದ ನಡೆದ ಎರಡು ಸಪ್ತೋತ್ಸವಗಳನ್ನು ಬಿಟ್ಟು ಪ್ರತ್ಯೇಕ 7 ಸಪ್ತೋತ್ಸವಗಳು ನಡೆದವು. ಉಡುಪಿಯ ಇತಿಹಾಸದಲ್ಲೇ ವಿಶಿಷ್ಟ ದಾಖಲೆ ಆಯಿತು. ಈ 7 ಸಪ್ತೋತ್ಸವ ಸೇವೆಗಳಲ್ಲೂ ತೆಪ್ಪೋತ್ಸವ

ಮೊದಲು 5 ದಿನಗಳಲ್ಲಿ ಎರಡು ರಥೋತ್ಸವ 6ನೆಯ ದಿನ ಮೂರು ರಥೋತ್ಸವ 7 ನೆಯ ದಿನ ಚೂರ್ಣೋತ್ಸವ ಹಾಗೂ ಅವಭೃತ ಸ್ನಾನಗಳು ಜರುಗಿದವು.

## ದಾಖಲೆಗೊಂಡ ಅಖಂಡ ಉತ್ಸವಗಳು :-

ಶ್ರೀಕೃಷ್ಣನಿಗೆ ನಿತ್ಯವೂ ಉತ್ಸವ ನಡೆಯುತ್ತಿತ್ತು ಎಂಬ ಮಾತಿಗೆ ಈ ಅಖಂಡ ಉತ್ಸವ ಕಾರಣವಾಗಿತ್ತು.

ಮುಂಬೈಯಿಯ ಪ್ರಸಿದ್ಧ ಜೋತಿಷ್ಕರಾದ ಶ್ರೀ ಎಸ್.ಕೆ. ತಂತ್ರಿಗಳು ಪ್ರಾರಂಭದಲ್ಲಿ ಒಂದು ತಿಂಗಳ ಸುವರ್ಣ ಪಾಲಕಿ ಉತ್ಸವವನ್ನು ಮಾಡಿಸಿದರು. ನಿರಂತರವೂ ಅವರ ಹೆಸರಲ್ಲಿ ಶ್ರೀಕೃಷ್ಣ ಮುಖ್ಯಪ್ರಾಣರು ಬಂಗಾರದ ಪಲ್ಲಕ್ಕಿಯಲ್ಲಿ ಕುಳಿತು ವಿಜೃಂಭಿಸುತ್ತಿದ್ದರು.

ಒಂದು ತಿಂಗಳ ಅಖಂಡ ಬ್ರಹ್ಮೋತ್ಸವ ಸೇವೆಯನ್ನು ನೀಡಿದವರು ಮಹಾ ಸಮರ್ಥರೂ ಧಾರ್ಮಿಕ ಶ್ರದ್ಧಾಳುಗಳೂ ಶ್ರೀಪಾದರ ಅತ್ಯಂತ ಪ್ರೀತ್ಯಾಸ್ಪದ ವ್ಯಕ್ತಿಗಳೂ ಆದ ಶ್ರೀ ಕಡಂದಲೆ ಕೃಷ್ಣರಾವ್ ಅವರು ಒಂದು ದಿನದ ಬ್ರಹ್ಮೋತ್ಸವ ಸೇವೆಗೆ ಕನಿಷ್ಟ ಪಕ್ಷ 10,000 ರೂಪಾಯಿಗಳು. ಒಂದು ತಿಂಗಳಿಗೆ 3,00,000 ರೂಪಾಯಿಗಳು ಇಂತಹ ಬೃಹನ್ಮೊತ್ತದ ಸೇವೆಯನ್ನು ನೀಡಿ ವೈಭವದಿಂದ ಉತ್ಸವವನ್ನು ಮಾಡಿಸಿದ. ಶ್ರೀ ಕೆ. ಕೃಷ್ಣರಾವ್ ಅವರು ನಿಜಕ್ಕೂ ಧನ್ಯರು. ಈ ಪುಣ್ಯಾತ್ಮರ ನಿಮಿತ್ತದಿಂದ ಆ ಭಗವಂತ ಬ್ರಹ್ಮರಥದಲ್ಲಿ ವಿರಾಜಮಾನನಾಗುತ್ತಿದ್ದ.

ಧರ್ಮಭೂಷಣ ಕೆ. ಸೀತಾರಾಮರಾವ್ ಅವರ ಸುಪುತ್ರರಿಂದ ಶ್ರೀಕೃಷ್ಣನಿಗೆ ಅಖಂಡ ಮೂರು ತಿಂಗಳಗಳ ಉತ್ಸವಗಳು ನಡೆದವು. ಧಾರ್ಮಿಕ ಶೀಲರಾದ ಆ ಸುಪುತ್ರರ ಸೇವೆಯಿಂದ ಶ್ರೀಕೃಷ್ಣ ಮುಖ್ಯಪ್ರಾಣರು ಒಂದು ತಿಂಗಳು ರಜತ ರಥದಲ್ಲಿ, ಒಂದು ತಿಂಗಳು ಗರುಡ ರಥದಲ್ಲಿ, ಒಂದು ತಿಂಗಳು ಮಹಾ ಪೂಜಾ ರಥದಲ್ಲಿ ಮೆರೆದರು.

ಶ್ರೀಪಾದರು ಆಗ ತಾನೇ ನಿರ್ಮಿಸಿದ ಸುವರ್ಣ ರಥೋತ್ಸವವನ್ನು ಒಂದು ತಿಂಗಳು ಕಾಲ ಮಾಡಿಸಿದ ಮಹಾ ಭಕ್ತರು ಮಂಬೈಯಿಯ ಪ್ರಸಿದ್ಧ ಜ್ಯೋತಿಷ್ಕರೂ ಹಾಗೂ ಪುರೋಹಿತರೂ ಆದ ಶ್ರೀ ವೆರಣಂಕಿಲ ಕೃಷ್ಣಮೂರ್ತಿ ಭಟ್ ಅವರು. ಶ್ರೀಮದಾಚಾರ್ಯರ 750ನೇ ಜಯಂತಿಯ ಹಾಗೂ ಕೃಷ್ಣ ಪ್ರತಿಷ್ಠೆಯ ಸಂಕೇತವಾಗಿ 75ದಿನಗಳ ಕಾಲ ಸುವರ್ಣ ರಥದಲ್ಲಿ ಶ್ರೀಕೃಷ್ಣನನ್ನು ಕುಳ್ಳಿರಿಸಿ ನೋಡಿ ಎಳೆದು ಆನಂದಿಸಬೇಕು ಎನ್ನುವುದು ಶ್ರೀಪಾದರ ಸಂಕಲ್ಪವಾಗಿತ್ತು. ಅದಕ್ಕೆ ಅನುಗುಣವಾಗಿ ಈ ಭಕ್ತರ ಸೇವೆಯೂ ಸೇರಿತ್ತು. ಉತ್ಥಾನ ದ್ವಾದಶಿಯಿಂದ ಆರಂಭಗೊಂಡ ಈ ಸುವರ್ಣ ರಥೋತ್ಸವವೂ ಶ್ರೀಪಾದರ ಪರ್ಯಾಯ ಸಮಾಪ್ತಿಯವರೆಗೂ ನಿರಂತರ ನಡೆಯಿತು. ಸುವರ್ಣ ರಥೋತ್ಸವ ಸೇವೆಯನ್ನು ನೀಡಲು ಭಕ್ತಾದಿಗಳು ನೂರಾರು ಜನ ಬಂದರು. ಅಂತೂ ನಿರಂತರ ಎರಡೂವರೆ ತಿಂಗಳ ಕಾಲ ಶ್ರೀಕೃಷ್ಣ ಹೊನ್ನ ತೇರಲ್ಲಿ ಕುಳಿತು ಜಗಕೆ ಹರುಷವನ್ನಿತ್ತ. ಆ ದಿನಗಳಲ್ಲಿ ಸ್ವರ್ಣ ರಥೋತ್ಸವವನ್ನು ಕಣ್ಣಾರೆ ಕಂಡು ಧನ್ಯರಾದ ಲಕ್ಷಲಕ್ಷಾಂತರ ಜನರ ಭಕ್ತರ ರೋಮಾಂಚನ ಆನಂದ ಪುಣ್ಯ ಪ್ರಾಪ್ತಿಗಳ ಪೂರ್ಣ ಫಲ ಸ್ಥಿರವಾಗಿ ನಿಲ್ಲಬೇಕಾದುದು ಪಲಿಮಾರಿನ ಪುತ್ಥಳಿ ಶ್ರೀ ಶ್ರೀ ವಿದ್ಯಾಮಾನ್ಯ ಶ್ರೀಪಾದರ ಆ ಮಹಾ ಕೈಂಕರ್ಯದ ಮೇಲೆ ಅವರ ಮನೋ ದಿಗಂತದ ಭಾವುಕತೆಯ ಪರಮ ಸಿದ್ಧಿಯ ಮೇಲೆ ಅವರು ನೆಲೆಗೊಳಿಸಿದ ರಜತಪೀಠ ಪುರದ ಸುವರ್ಣ ಇತಿಹಾಸದ ಮೇಲೆ.

ಇದಲ್ಲದೆ ಬಿಡಿಬಿಡಿಯಾಗಿ ಉತ್ಸವಗಳ ಸೇವೆಯನ್ನು ನೀಡಿದ ಭಕ್ತರೂ ಸಾವಿರಾರು. ಈ ಉತ್ಸವ ಮಾಲೆಯನ್ನು ಕಂಡಾಗ ಇತಿಹಾಸ ದಾಖಲೆ ಯಾದ ಉತ್ಸವ ಗಳನ್ನೊಳಗೊಂಡ ಶ್ರೀಪಾದರ ದ್ವಿತೀಯ ಪರ್ಯಾಯ ಅದ್ವಿತೀಯವೆಂದೆನಿಸದೇ ಇರದು.

ಶ್ರಾವಣ ಮಾಸ ಜಡಿ ಮಳೆ ಸುರಿಯುತ ಜನಜೀವನದಲ್ಲಿ ಚೈತನ್ಯೋತ್ಸಾಹ ತುಂಬುವ ಸಂದರ್ಭ. ಈ ಸಂದರ್ಭದಲ್ಲಿ ಬರುವ ಶ್ರೀಕೃಷ್ಣಜನ್ಮಾಷ್ಟಮಿ ಮಳೆಗಾಲದ ವಿಶಿಷ್ಟ ಹಬ್ಬ. ಭಾರತದ ಆದ್ಯಂತಗಳಲ್ಲಿ ನಡೆಯುವ ಹಬ್ಬ. ಮುಖ್ಯವಾಗಿ ಶ್ರೀಕೃಷ್ಣನ ಅವತಾರ ಭೂಮಿಯಾದ ಮಧುರೆಯಲ್ಲಿ ವಿಶೇಷವಾಗಿ ಆಚರಿಸುವ ಹಬ್ಬ. 1987ರ ಆಗಸ್ಟ್ 16 ಶ್ರಾವಣ ಬಹುಳ ಅಷ್ಟಮಿ ದಿನದಂದು ದೇಶದ ಎಲ್ಲೆಡೆ ಆಚರಿಸಲ್ಪಟ್ಟ ಹಬ್ಬ.

ಆದರೆ ಪಡುಗಡಲ ತಡಿಯಾದ ಉಡುಪಿಯ ಶ್ರೀಮನ್ ಮಧ್ವಾಚಾರ್ಯ ಪ್ರತಿಷ್ಠಿತ ಕಡಗೋಲ ಪಿಡಿದ ಶ್ರೀಕೃಷ್ಣನ ಸನ್ನಿಧಿಯಲ್ಲಿ ಮಾತ್ರ 1987ರ ಸೆಪ್ಟೆಂಬರ್ 14ರಂದು ಶ್ರೀಕೃಷ್ಣ ಜಯಂತಿಯನ್ನು ವಿಧ್ಯುಕ್ತವಾಗಿ ಆಚರಿಸಲಾಯಿತು.

ಏನು ಕಾರಣ? ಎಂಬ ಪ್ರಶ್ನೆಯೇ! ಉತ್ತರವಿದೋ!

'ರೋಹಿಣ್ಯಾಮರ್ಧರಾತ್ರೇತು
ಯದಾ ಕಾಲಾಷ್ಟಮೀ ಭವೇತ್।
ಜಯಂತೀನಾಮ ಸಾಪ್ರೋಕ್ತಾ
ಸರ್ವಪಾಪ ಪ್ರಣಾಶಿನೀ ।
ಯಸ್ಯಾಂಜಾತೋ ಹರಿಃ ಸಾಕ್ಷಾತ್
ನಿಶೀಥೇ ಭಗವಾನ್ ಅಜಃ ॥'

ಇದು ಶ್ರೀಮದಾಚಾರ್ಯರ ಜಯಂತೀ ನಿರ್ಣಯದ ಮಾತು. ರೋಹಿಣೀ ನಕ್ಷತ್ರ ಯುಕ್ತವಾದ ಕೃಷ್ಣಪಕ್ಷದ ಅಷ್ಟಮಿಯ ಮಧ್ಯರಾತ್ರಿ ಕಾಲದಲ್ಲಿ ಶ್ರೀಕೃಷ್ಣನ ಅವತಾರವಾಯಿತು ಈ ದಿನವೂ ಶ್ರೀಕೃಷ್ಣಜಯಂತಿ ಎಂದೇ ಪ್ರಸಿದ್ಧವಾಯಿತು. ಇಂತಹ ಜಯಂತೀ ಯೋಗ ಇರುವಲ್ಲಿ ಅದನ್ನೇ ಆಚರಿಸಬೇಕೆಂಬುದು ಶಾಸ್ತ್ರೀಯ ನಿಯಮವಾಯಿತು. ಇದರಿಂದ ಆ ವರ್ಷ ಶ್ರಾವಣ ಕೃಷ್ಣ ಪಕ್ಷದ ಅಷ್ಟಮಿಯಂದು ರೋಹಿಣೀ ಯೋಗವಿಲ್ಲ ವಾಗಿತ್ತು. ಆ ರೋಹಿಣಿಯ ಯೋಗ ಭಾದ್ರಪದ ಮಾಸದ ಕೃಷ್ಣಪಕ್ಷದ ಅಷ್ಟಮಿಯಂದು ಬಂದಿತ್ತು. ಅದಕ್ಕಾಗಿ 1987 ರ 14ರಂದೇ (ಭಾದ್ರಪದ ಕೃಷ್ಣ ಅಷ್ಟಮಿಯಂದೇ) ಆಚರಿಸುವುದೆಂದು ಸಿದ್ಧಾಂತ ಮಾಡಲಾಯಿತು. ಈ ಸಿದ್ಧಾಂತದ ಸಂಪಾದನೆಗಾಗಿ, ಸಿದ್ಧಿಗಾಗಿ ಪರ್ಯಾಯ ಶ್ರೀಪಾದರ ನೇತೃತ್ವದಲ್ಲಿ ಎಲ್ಲ ಯತಿಗಳ ಹಾಗೂ ವಿದ್ವಾಂಸರ ಉಪಸ್ಥಿತಿಯಲ್ಲಿ ವಿಚಾರ ವಿಮರ್ಶೆಗಳನ್ನು ನಡೆಸಲಾಯಿತು.

ಅಂತೂ ಸೆಪ್ಟೆಂಬರ್ 14ರಂದು ಶ್ರೀಕೃಷ್ಣ ಜಯಂತಿ ಹಾಗೂ ಸೆಪ್ಟೆಂಬರ್ 15ರಂದು ಶ್ರೀಕೃಷ್ಣಲೀಲೋತ್ಸವ ವೆಂದು ಘೋಷಿಸಲಾಯಿತು. ಸೆಪ್ಟೆಂಬರ್ 14ರಂದು ಶ್ರೀಕೃಷ್ಣ ಮಠವನ್ನು ಸಂಪೂರ್ಣವಾಗಿ ವಿಧವಿಧ ಪುಷ್ಪ ಮಾಲೆಗಳಿಂದ ಅಲಂಕರಿಸಲಾಯಿತು. ಈ ಅಲಂಕಾರದಿಂದ ಶ್ರೀಕೃಷ್ಣ ಮಠದ ಗೋಡೆ, ಮಾಡು, ಕಂಬ ಕಾಣದಂತಾಗಿತ್ತು. ಮಹಾದ್ವಾರವನ್ನು ಪ್ರವೇಶಿಸಿದರೆ ಗಮಗಮಿಸುತ್ತಿತ್ತು. ರಥಬೀದಿಯಲ್ಲಿ ಅಲ್ಲಲ್ಲಿ ಮಂಟಪಗಳನ್ನು ಕಟ್ಟಲಾಯಿತು. ಆ ಮಂಟಪಗಳಲ್ಲಿ ಮಾವಿನ ತೋರಣ ಶೋಭಿಸುತ್ತಿತ್ತು. ಶ್ರೀಕೃಷ್ಣ ಮಠದ ಚಂದ್ರ ಶಾಲೆಯಲ್ಲಿ ಅನೇಕ ಭಕ್ತರ ಅಖಂಡ

ಭಜನೆಯಾಗುತ್ತಿತ್ತು. ಅಂದು ಉಪವಾಸವೂ ಆಚರಿಸಲ್ಪಟ್ಟಿತ್ತು. ಶ್ರೀಕೃಷ್ಣನಿಗೆ ಮಧುರೆಯ ಸೆರೆಮನೆಯಲ್ಲಿ ದೇವಕೀ ವಸುದೇವರ ಸುತನಾಗಿ ಅವತರಿಸಿದ ಚತುರ್ಭುಜ ಧಾರಿಯಾದ ಶ್ರೀಕೃಷ್ಣನ ಅಲಂಕಾರವನ್ನುಮಾಡಲಾಗಿತ್ತು. ಈ ಸುಂದರ ರೂಪವನ್ನು ನೋಡಲು ಹತ್ತಾರು ಸಾವಿರ ಭಕ್ತರ ಗುಂಪು ಸರದಿಯಂತೆ ದರ್ಶನಕ್ಕಾಗಿ ಪಾಳಿ ನಿಂತಿತ್ತು. ಆ ಪಾಳಿ ಬೆಳೆಯುತ್ತಲೇ ಇತ್ತು. ಸಂಜೆಯಾಯಿತು ರಾಜಾಂಗಣದ ಸಭಾಂಗಣದಲ್ಲಿ ಶ್ರೀಕೃಷ್ಣನ ಕುರಿತು ಪ್ರವಚನ ಆರಂಭವಾಯಿತು. ಶ್ರೀಪಾದರಿಂದ ರಾತ್ರಿ ಪೂಜೆಯೂ ಆಯಿತು. ರಾತ್ರಿ 9ಕ್ಕೆ ಸರಿಯಾಗಿ ಆಕಾಶವಾಣಿ ಕಲಾವಿದರಾದ ತಿರುಮಲ ತಿರುಪತಿ ದೇವಸ್ಥಾನದ ಆಸ್ಥಾನವಿದ್ವಾಂಸರಾದ ವಿಶೇಷವಾಗಿ ಮಾಧ್ವರಾದ ಶ್ರೀ ಪ್ರಪಂಚಂ ಸೀತಾರಾಮ್ ಅವರಿಂದ ಸುಮದುರ ವೇಣುವಾದನ ಸೇವೆ ನಡೆಯಿತು.

ರಾತ್ರಿ ಗಂಟೆ ಹನ್ನೊಂದಾಗಿತ್ತು ಚಂದ್ರೋದಯವಾಗಿತ್ತು. ಜಯಂತೀ ಯೋಗ ಪರಿಪೂರ್ಣವಾಗಿತ್ತು. ಪರ್ಯಾಯ ಶ್ರೀಪಾದರಿಂದ ಶ್ರೀಕೃಷ್ಣನಿಗೆ ಮಹಾಪೂಜೆಯಾಗುತ್ತಿತ್ತು. ಹತ್ತಾರು ಸಾವಿರ ಭಕ್ತರ ಗುಂಪು ಸೇರಿತ್ತು. ಶ್ರೀಕೃಷ್ಣನ ಪೂಜೆಯ ನಂತರದ ಪ್ರಧಾನ ಕಾರ್ಯ ಶ್ರೀಕೃಷ್ಣಾರ್ಘ್ಯ ಪ್ರದಾನವಾಗಿತ್ತು. ಮೊದಲಿಗೆ ಪರ್ಯಾಯ ಶ್ರೀಪಾದರಿಂದ ಹಾಗೂ ಎಲ್ಲ ಕಿರಿಯ ಶ್ರೀಪಾದರಿಂದ ಶ್ರೀಕೃಷ್ಣನಿಗೆ ಆ ಅರ್ಘ್ಯಪ್ರದಾನ ನೀಡಲ್ಪಟ್ಟಿತು. ಕೃಷ್ಣಾರ್ಘ್ಯದ ನಂತರ ಚಂದ್ರಾರ್ಘ್ಯ ಪ್ರಧಾನವೂ ಆಯಿತು. ಶ್ರೀಪಾದರ ನಂತರ ವಿದ್ವಾಂಸರ, ವಿದ್ಯಾರ್ಥಿಗಳ ಭಕ್ತರ ಸರದಿ ಪ್ರಕಾರದ ಅರ್ಘ್ಯ ಪ್ರದಾನವೂ ಆರಂಭಗೊಂಡಿತು. ಅರ್ಘ್ಯ ಪ್ರದಾನದ ಸಂದರ್ಭದಲ್ಲಿ 'ಜಾತಃ ಕಂಸವಧಾರ್ಥಾಯ ಭೂಭಾರ ಹರಣಾಯ ಚ । ಪಾಂಡವಾನಾಂ ಹಿತಾರ್ಥಾಯ ಧರ್ಮ ಸಂಸ್ಥಾಪನಾಯ ಚ । ಕೌರವಾಣಾಂ ವಿನಾಶನಾಯ ದೈತ್ಯಾನಾಂ ನಿಧನಾಯ ಚ ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ' ಎಂಬ ಶ್ಲೋಕ ಕೇಳುತ್ತಲೇ ಇತ್ತು. ಅರ್ಘ್ಯ ಪ್ರದಾನ ಮುಗಿದಾಗ ಮರುದಿನದ ಮೂರು ಗಂಟೆಯಾಗಿತ್ತು. ಶ್ರೀಕೃಷ್ಣ ಜಯಂತೀ ವ್ರತದ ಅಂಗವಾಗಿ ಉಪವಾಸ ಹಾಗೂ ಶ್ರೀಕೃಷ್ಣ ಪೂಜಾ ದರ್ಶನ ಹಾಗೂ ಅರ್ಘ್ಯ ಪ್ರದಾನಗಳಿಂದ ಭಕ್ತಸಮೂಹ ಕೃತಕೃತ್ಯವಾಯಿತು.

ಮರುದಿನ ಸೆಪ್ಟೆಂಬರ್ 15 ಸೂರ್ಯೋದಯ ವೇಳೆಯಲ್ಲೇ ಎಲ್ಲ ಪೂಜೆಗಳೂ ಮುಗಿದಿತ್ತು. ಭಕ್ತರ ಪಾರಣೆಯು ಆಗಿತ್ತು. ಎಲ್ಲೆಲ್ಲೂ ಮೊಸರು ಕುಡಿಕೆಯ ಹಬ್ಬದ ಸಂಭ್ರಮ ತೋರುತ್ತಿತ್ತು. ಎತ್ತ ನೋಡಿದರತ್ತ ಉಡುಪಿಯ ಬೀದಿ ಬೀದಿಗಳಲ್ಲಿ ಮನೆಮನೆಗಳ ಮುಂಭಾಗದಲ್ಲಿ ಹುಲಿ, ಸಿಂಹ, ಕರಡಿ, ಗೋಪ ಗೋಪಿಯರು ಇತ್ಯಾದಿ ವೇಷಗಳ ಕುಣಿತವೇ ಕಾಣುತ್ತಿತ್ತು. ಜೊತೆಯಲ್ಲಿ ಕಿವಿಗಡಚಿಕ್ಕುವ ವಾದ್ಯ ಮೇಳದ ಧ್ವನಿ ಎಲ್ಲ ದಿಕ್ಕುಗಳನ್ನೂ ಮುಟ್ಟಿತ್ತು.

ಕೃಷ್ಣಾಷ್ಟಮಿ ಅಥವಾ ಕೃಷ್ಣ ಜಯಂತಿ ಮೊಸರು ಕುಡಿಕೆ ಹಬ್ಬ ಬಂತೆಂದರೆ ಉಡುಪಿ ನಗರಕ್ಕೆ ಜೀವ ಬಂದಂತೆ ಜನರಿಗೆ ಉಲ್ಲಾಸದ ರೆಕ್ಕೆ ಬಲಿತಂತೆ ಕೃಷ್ಣ ಲೀಲೋತ್ಸವದಂದು ಉಡುಪಿಯ ಕೃಷ್ಣನಿಗೆ ಮೊಸರಿನ ಕುಡಿಕೆಯನ್ನು ಒಡೆಯುವ ಕೊಲನ್ನು ಕೊಟ್ಟು ಅಲಂಕಾರ ಮಾಡಲಾಗುತ್ತದೆ. ವಿಧ ವಿಧ ರೀತಿಯ ಉಂಡೆ, ಚಕ್ಕುಲಿ ಮೊದಲಾದ ಭಕ್ಷ್ಯಗಳು

ವಿಶೇಷವಾಗಿರುತ್ತವೆ. ಅವುಗಳ ವಿತರಣೆ ಭೋಜನದಂತೆ ಉತ್ಸವದಲ್ಲೂ ನಡೆಯುತ್ತದೆ. 1987 ರ ಸೆಪ್ಟೆಂಬರ್ 15 ರಂದು ಉಡುಪಿಯ ಪ್ರಸಿದ್ಧ ಮೊಸರು ಕುಡಿಕೆಯ ಉತ್ಸವ. ಅದು ಅಭೂತ ಪೂರ್ವ ಕಾರಣ ಸ್ವರ್ಣರಥದ ವಿಶೇಷ ಆಕರ್ಷಣೆಯ ವೈಭವ. ಗಂಟೆ ಎರಡಾಗುವಾಗಲೇ ನಾಲ್ಕು ಬೀದಿಗಳಲ್ಲಿ ಅಷ್ಟ ಮಠಗಳ ಮುಂಗಟ್ಟುಗಳಲ್ಲಿ ಕಿಕ್ಕಿರಿದು ಸೇರಿದ ಜನಸಂದಣಿ. ಪೇಟೆಯ ಅಂಗಡಿಗಳ ಮೇಲೂ ಜನರು ಕುಳಿತಿದ್ದರಿಂದ ಕಾಣದಾಗಿತ್ತು ಅಂಗಡಿಗಳ ಮೇಲ್ಛಾವಣಿ. ಪೇಟೆವೇಟೆ ಸುತ್ತಾಡುತ್ತಿದ್ದ ವೇಷಗಳ ಉತ್ಸವದಲ್ಲಿ ಪಾಲ್ಗೊಳ್ಳಲು ಶ್ರೀಕೃಷ್ಣಮಠದ ಮುಂದಿನ ಬೀದಿಯಲ್ಲಿ ಸೇರುತಿತ್ತು. ಇದರಿಂದ ಮೊದಲೇ ಸೇರಿದ್ದ ಬೃಹತ್ ಮೊತ್ತದ ಜನಸ್ತೋಮಕ್ಕೆ ಬಿಡ್ಡಿ ಸೇರಿದಂತಾಗಿತ್ತು. ಸ್ವರ್ಣ ರಥೋತ್ಸವ ಆಕರ್ಷಣೆಯ ಮೊಸರು ಕುಡಿಕೆ ಉತ್ಸವವನ್ನು ಕಂಡು ಆನಂದಿಸುವ ಕುತೂಹಲದಿಂದ ದೂರದೂರದ ಊರುಗಳಿಂದ ಹಳ್ಳಿಗಳಿಂದ ಉಡುಪಿಗೆ ಬಂದು ನಾಲ್ಕೂ ದಿಕ್ಕಿನ ಮಾರ್ಗಗಳಿಂದಲೂ ರಥಬೀದಿಯನ್ನು ಸೇರುವ ಜನಜಾಲವನ್ನು ಕಂಡಾಗ ಉಡುಪಿಯ ಪಕ್ಕದ ಕಡಲೇ ಉಕ್ಕಿ ಉಕ್ಕಿ ರಥ ಬೀದಿಯತ್ತ ಹರಿದು ಬಂದಂತೆ ಭಾಸವಾಗುತ್ತಿತ್ತು.

ಶ್ರೀಕೃಷ್ಣಮಠದ ಮಹಾದ್ವಾರದ ಮುಂದೆ ಸುವರ್ಣ ರಥ ಉತ್ಸವಕ್ಕೆ ಸಿದ್ಧವಾಗಿತ್ತು ಅಲಂಕೃತವಾಗಿತ್ತು. ಉತ್ಸವದ ಸೂಚಕವಾಗಿ ನಗಾರಿ ಹೊಡೆದಾಗ ಪರ್ಯಾಯ ಮಠಾಧೀಶ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ಪೇಜಾವರ ಶ್ರೀಪಾದರು ಹಾಗೂ ಕಿರಿಯ ಶ್ರೀಪಾದರು ಶ್ರೀಕೃಷ್ಣನ ಮೃತ್ತಿಕಾ ಮೂರ್ತಿಯನ್ನು ಚಿನ್ನದ ಪಲ್ಲಕ್ಕಿಯಲ್ಲಿರಿಸಿ ವೈಭವದಿಂದ ಸ್ವರ್ಣರಥದತ್ತ ಕೊಂಡೊಯ್ದರು. ಸ್ವರ್ಣ ರಥಾರೋಹಣ ಮಾಡುವ ಶ್ರೀಕೃಷ್ಣನ ಅಂದಿನ ಲೀಲಾ ಯಾತ್ರೆ ಅವಿಸ್ಮರಣೀಯವು ಅನಿರ್ವಚನೀಯವೂ ಆಗಿತ್ತು. ಶ್ರೀಕೃಷ್ಣನನ್ನು ರಥದಲ್ಲಿ ಕುಳ್ಳಿರಿಸಿ ಮಂಗಳಾರತಿಯನ್ನು ಶ್ರೀಪಾದರು ಮಾಡಿದಾಗ ಭಕ್ತ ಕೋಟಿ ಜಯಘೋಷ ಮಾಡಿತು. ನಂತರ ಭಕ್ತರು ರಥದ ಹಗ್ಗಕ್ಕೆ ಕೈಕೊಟ್ಟು ಎಳೆದಾಗ ಸ್ವರ್ಣರಥ ನಿಧಾನವಾಗಿ ಚಲಿಸತೊಡಗಿತು. ರಥದಮುಂದೆ ಪರ್ಯಾಯ ಶ್ರೀಪಾದರೇ ಮೊದಲಾದ ಯತಿಗಳ ಮಠದ ಆಸ್ಥಾನ ವಿದ್ವಾಂಸರ ಸಮೂಹ ಸಾಗುತ್ತಿತ್ತು ಅದರ ಎದುರು ವಾದ್ಯಗಳು ಬಿರುದಾವಳಿಗಳು ವಿಧವಿಧ ವೇಷಗಳು ಸಾಗುತಿದ್ದವು. ಇದಲ್ಲದೆ ಎದುರು ಅಲಂಕೃತ ಆನೆ ಕೃಷ್ಣಪ್ರಿಯ ರುಗ್ಮಿಣಿ.

ಹದಿನೇಳುವರೆ ಅಡಿ ಎತ್ತರದ ಸ್ವರ್ಣರಥಕ್ಕಿಂತ ನಾನೇನೂ ಕಡಿಮೆಯಲ್ಲ ಎಂಬಂತೆ ಸ್ವರ್ಣರಥದ ಮುಂಭಾಗದಲ್ಲಿ ಮರಕಾಲಿನಲ್ಲಿ ನಡೆಯುವ ಹೆಬ್ಬುಲಿಗಳು ಜನ ಸಾಗರದ ನಡುವೆ ಎತ್ತರಕ್ಕೆ ಎದ್ದು ಕಾಣುತ್ತಿದ್ದವು. ಉತ್ಸವದ ವಿಶೇಷ ಆಕರ್ಷಣೆಯಾಗಿತ್ತು. ಎಲ್ಲಿ ನೋಡಿದರೂ ಕಿಕ್ಕಿರಿದ ಜನಸ್ತೋಮದ ಕಪ್ಪು ತಲೆಗಳೇ ಕಾಣುತಿದ್ದವು. ಇದರ ಮಧ್ಯದಲ್ಲಿ ಚಲಿಸುವ ಥಳಥಳಿಸುವ ಸ್ವರ್ಣರಥದ ದೃಶ್ಯ ಅಭೂತ ಪೂರ್ವವೇ ಆಗಿತ್ತು.

ರಥಬೀದಿ ಉದ್ದಕ್ಕೂ ಅಲ್ಲಲ್ಲಿ ಕಂಬಗಳನ್ನು ನೆಟ್ಟು ಕಮಾನುಗಳನ್ನು ಮಂಟಪಗಳನ್ನು ಕಟ್ಟಲಾಗಿತ್ತು. ಶ್ರೀಕೃಷ್ಣನ ಬಾಲಲೀಲೆಯ ಸಂಕೇತವಾಗಿ ಮೊಸರಿನ ಮಡಿಕೆಗಳನ್ನು ತೂಗಾಡಿಸಲಾಗುತಿತ್ತು. ರಥ ಸಾಗಿ ಬರುತ್ತಿದ್ದಂತೆಯೇ ಗೋಪಾಲ ವೇಷಧಾರಿಗಳು ಉದ್ದುದ್ದ ಕೋಲುಗಳಿಂದ ಆ ಮಡಕೆಗಳನ್ನು ಕುಟ್ಟಿ ಒಡೆಯುವ ದೃಶ್ಯ

ಮನೋಹರವಾಗಿತ್ತು. ಸುವರ್ಣ ರಥ ತನ್ನ ಉಭಯ ಪಾರ್ಶ್ವಗಳಲ್ಲಿ ಬಂಗಾರದ ಬೃಹತ್ ಪತಾಕೆಗಳೆರಡನ್ನು ಹೊಂದಿತ್ತು. ಕೃಷ್ಣನು ಕುಳಿತ ನಂತರ ರಥಬೀದಿಗೆ ಪ್ರದಕ್ಷಿಣಾಕಾರವಾಗಿ ಚಲಿಸುತ್ತಾ ಕಾಣಿಯೂರು ಮಠ, ಸೋದೆಯ ಮಠ, ಪುತ್ತಿಗೆ ಮಠ, ಅದಮಾರು ಮಠ, ಪೇಜಾವರ ಮಠಗಳನ್ನು ದಾಟಿ ಪರ್ಯಾಯ ಮಠ, ಕೃಷ್ಣಾಪುರ ಮಠ, ಶಿರೂರು ಮಠಗಳ ಮುಂಭಾಗದಿಂದ ಸಾಗುತ್ತಿದ್ದ ಶ್ರೀಕೃಷ್ಣನನ್ನು ಕಂಡಾಗ ಭಗವಂತನನ್ನು ಹೊತ್ತ ಪಕ್ಷಿರಾಜ ಗರುಡನಂತೆ ಶೋಭಿಸುತ್ತಿತ್ತು. ಅಭೂತ ಪೂರ್ವವಾದ ಈ ದೃಶ್ಯವನ್ನು ಲಕ್ಷಾವಧಿ ಭಕ್ತ ಜನತೆ ಮೈ ಯೆಲ್ಲಾ ಕಣ್ಣಾಗಿ ನೋಡುತಿತ್ತು ಪುಳಕಿತವಾಗುತಿತ್ತು. ಶ್ರೀಕೃಷ್ಣನು ಸುವರ್ಣ ರಥದಲ್ಲಿ ಸಾಗಿ ಬರುತ್ತಿರಲು ಉಂಡೆ ಚಕ್ಕುಲಿ ಪ್ರಸಾದಗಳನ್ನು ನರೆದ ಭಕ್ತಸಾಗರಕ್ಕೆ ಎಸೆಯಲಾಗುತಿತ್ತು. ಹೀಗೆ ಎಸೆದ ಉಂಡೆ ಚಕ್ಕುಲಿ ಪ್ರಸಾದಗಳನ್ನು ಸ್ವೀಕರಿಸಲು ನಾ ಮುಂದು ತಾ ಮುಂದು ಎಂದು ಎತ್ತಿದ ಕೈಗಳನ್ನು ಕಾಣುವಾಗ ಸಾಗರದ ಮೇಲೆ ಅಲೆಗಳಲ್ಲಿ ಚಲಿಸುವ ಹೊಳೆಹೊಳೆವ ಮೀನುಗಳಂತೆ ಕಾಣುತಿತ್ತು.

ಕೊನೆಯದಾಗಿ ಕನಕನ ಕಿಂಡಿಯ ಮುಂದೆ ಸ್ವರ್ಣರಥ ಬಂದು ನಿಂತಿತ್ತು. ಅಲ್ಲಿಯೇ ಸನಿಹದಲ್ಲಿ ಅತ್ಯುನ್ನತ ಅಡಿಕೆಯ ಮರವನ್ನು ನೆಡಲಾಗಿತ್ತು. ಅದರ ತುದಿಯಲ್ಲಿ ಪಾರಿತೋಷಕವಾಗಿ , ಪಣವಾಗಿ ಒಂದು ಹಣದ ಗಂಟೊಂದನ್ನು ಕಟ್ಟಲಾಗಿತ್ತು. ಕಟ್ಟಿದ ಗಂಟನ್ನು ಗಿಟ್ಟಿಸಲು ಅಡಿಕೆಮರ ಹತ್ತುವ ಹತ್ತಿ ಜಾರುವ ಯುವಕರ ,ಮೇರೆ ಮೀರಿದ ಉತ್ಸಾಹ, ಸಾಹಸ ಅಸಾಮಾನ್ಯ. ಆ ಗುಂಪಿನಲ್ಲಿ ಹಣದ ಗಂಟನ್ನು ಗಿಟ್ಟಿಸಿದಾತನೇ ಬಹುಶಕ್ತಿಮಾನ್. ಈ ಶ್ರೀಕೃಷ್ಣನ ಲೀಲಾಯಾತ್ರೆ ಕೊನೆಗೊಳ್ಳುವಾಗ ಆ ಇನ ಇಳಿಯತೊಡಗಿದ್ದ. ಸುಮಾರು ಮೂರು ಗಂಟೆಗಳ ಕಾಲ ನಡೆದ ಅಭೂತ ಪೂರ್ವವಾದ ಕೃಷ್ಣ ಜಯಂತೀ ಸ್ವರ್ಣ ರಥೋತ್ಸವವನ್ನು ಸುಮಾರು ಲಕ್ಷಕ್ಕೆ ಸಮೀಪಿಸಿದ ಜನಸ್ತೋಮ ನೋಡಿತು ಭಕ್ತಿ ಉತ್ಸಾಹಗಳಿಂದ ನಲಿಯಿತು. ಜಾತಿಮತ ಲಿಂಗ ಭೇದವಿಲ್ಲದೆ ಶ್ರೀಕೃಷ್ಣನ ಲೀಲೋತ್ಸವವನ್ನು ಕಂಡು ಪುನೀತವಾಯಿತು. ಜುಲೈ 5 ರಂದು ನಡೆದ ಪ್ರಥಮ ಸ್ವರ್ಣ ರಥೋತ್ಸವದ ನಂತರ ನಡೆದ ಸೆಪ್ಟೆಂಬರ್ 15 ರ ಸುವರ್ಣ ರಥೋತ್ಸವದ ಮೊಸರು ಕುಡಿಕೆಯ ನವಿ ನೆನಪು ಜನಮನದಲ್ಲಿ ಚಿರಕಾಲ ಉಳಿಯುವಂತಾಯಿತು.

★★★

ಶ್ರೀಪಾದರ ಪರ್ಯಾಯದಲ್ಲಿ ದೈನಂದಿನ ಪ್ರವಚನಗಳಲ್ಲದೆ, ಇನ್ನೂ ಅನೇಕ ವಿಶಿಷ್ಟ ಕಾರ್ಯಕ್ರಮಗಳೂ ಜರುಗುತ್ತಿದ್ದವು. ಮಧ್ವನವಮೀ, ಮಧ್ವಜಯಂತಿ, ರಾಮನವಮೀ, ಶ್ರೀಟೀಕಾಚಾರ್ಯರ ಆರಾಧನೆ, ಶ್ರೀ ವ್ಯಾಸರಾಜರ ಆರಾಧನೆ, ಶ್ರೀವಾದಿರಾಜ ಆರಾಧನೆ, ಶ್ರೀರಾಘವೇಂದ್ರ ಸ್ವಾಮಿಗಳ ಆರಾಧನೆ ಮೊದಲಾದ ಅನೇಕ ವಿಶೇಷ ಪರ್ವ ದಿನಗಳಲ್ಲೂ ವಿಶಿಷ್ಟ ಸಭಾ ಕಾರ್ಯಕ್ರಮಗಳು, ವಿದ್ವದ್ಗೋಷ್ಠಿಗಳು ವಿಚಾರ ಸಂಕಿರಣಗಳು ನಡೆಯುತ್ತಿದ್ದವು. ಇವುಗಳೆಲ್ಲವೂ ಶ್ರೀಪಾದರಿಗೆ ಪ್ರಿಯವಾದವುಗಳೇ ಆಗಿದ್ದವು. ಆದರೂ ಅವುಗಳಿಗಿಂತ ಅಧಿಕ ಪ್ರಿಯವಾದ ಕಾರ್ಯಕ್ರಮಗಳು, ಕೆಲವು ನಡೆದವು. ಅವರ ಪ್ರಿಯ ವಿದ್ಯಾಶಿಷ್ಯರು ಮಾಡಿದ ಕಾರ್ಯಕ್ರಮಗಳು. ಲೌಕಿಕವಾಗದವುಗಳು. ಗುರುಗಳಿಗೆ ಅಮಿತಾನಂದವನ್ನೀಡಿದವುಗಳು. ನಾಲ್ಕು ಶಿಷ್ಯರ ನಾಲ್ಕು ನ್ಯಾಯಸುಧಾಪ್ರವಚನ ಮಂಗಲಗಳು.

ಶ್ರೀಪಾದರ ಬಳಿ ಹನ್ನೆರಡು ವರುಷಗಳ ಕಾಲ ಅಧ್ಯಯನ ಮಾಡಿ ಅವರ ಪೂರ್ಣಾನುಗ್ರಹ ಹಾಗೂ ವಿಶೇಷ ಪಾಂಡಿತ್ಯವನ್ನು ಪಡೆದ ಶ್ರೀ ಅದಮಾರು ಮಠದ ಶ್ರೀ ವಿಶ್ವಪ್ರಿಯ ತೀರ್ಥರು, ಶ್ರೀ ಪುತ್ತಿಗೆ ಮಠದ ಶ್ರೀ ಸುಗುಣೇಂದ್ರ ತೀರ್ಥರು, ಶ್ರೀ ಪಲಿಮಾರು ಮಠದ ಶ್ರೀ ವಿದ್ಯಾಧೀಶ ತೀರ್ಥರು ಹಾಗೂ ಶ್ರೀ ಭಂಡಾರಕೇರಿ ಮಠದ ಶ್ರೀವಿದ್ಯೇಶ ತೀರ್ಥರು, ತಮ್ಮ ಗುರುಗಳ ಆದೇಶದಂತೆ ಸ್ವಕೀಯ ಉತ್ಕಟ ಬಯಕೆಯಿಂದಲೂ ಪ್ರಥಮ ಬಾರಿ ಸುಧಾ ಪ್ರವಚನಗಳನ್ನು ಮಾಡಿದರು. ಆ ನಾಲ್ವರಲ್ಲಿ ಸುಧಾಧ್ಯಯನವನ್ನು ಮಾಡಬಲ್ಲ ಉತ್ತಮ ವಿದ್ಯಾರ್ಥಿಗಳನ್ನು ಶ್ರೀವಿಶ್ವೇಶತೀರ್ಥರು ಪೂರ್ಣಪ್ರಜ್ಞ ವಿದ್ಯಾಪೀಠದ ಅಂತಿಮ ವರ್ಷದ ವಿದ್ಯಾರ್ಥಿಗಳನ್ನು ದತ್ತು ನೀಡಿದರು. ಶ್ರೀ ಮುರಾರಿ ಆಚಾರ್ಯ, ಶ್ರೀನಾಗೇಂದ್ರ ಪ್ರಸಾದ್, ಬಿ.ಇ. ಶ್ರೀಕೃಷ್ಣರಾಜತಂತ್ರಿ ಎಂಬ ಮೂವರು ವಿದ್ಯಾರ್ಥಿಗಳು ಶ್ರೀವಿಶ್ವಪ್ರಿಯ ತೀರ್ಥರಲ್ಲಿ ಸುಧಾಧ್ಯಯನವನ್ನು ಮಾಡಿದರು. ಶ್ರೀ ಎನ್. ವೇಂಕಟೇಶ ರಾವ್, ಶ್ರೀ ರವೀಂದ್ರಕುಮಾರ್ ಎಂಬ ಇಬ್ಬರು ವಿದ್ಯಾರ್ಥಿಗಳು ಶ್ರೀಸುಗುಣೇಂದ್ರ ತೀರ್ಥರ ಬಳಿ ನ್ಯಾಯಸುಧೆಯನ್ನು ಕೇಳಿದರು. ಶ್ರೀ ಪಿ.ಪಿ. ಶ್ರೀಧರ ಉಪಾಧ್ಯಾಯ ಹಾಗೂ ಶ್ರೀ ಜಿ.ವಿ. ರಾಘವೇಂದ್ರ ಆಚಾರ್ಯ ಎಂಬ ವಿದ್ಯಾರ್ಥಿಗಳು ಶ್ರೀವಿದ್ಯಾಧೀಶ ತೀರ್ಥರ ಬಳಿ ಸುಧಾಧ್ಯಯನದ ಫಲವನ್ನು ಪಡೆದರು. ಶ್ರೀ ರಾಘವೇಂದ್ರ ಭಟ್ ಹಾಗೂ ಶ್ರೀನಾರಾಯಣ ಭಟ್ ಎಂಬ ವಿದ್ಯಾರ್ಥಿಗಳು ಶ್ರೀ ವಿದ್ಯೇಶ ತೀರ್ಥರಲ್ಲಿ ಸುಧೆಯನ್ನು ಅಭ್ಯಸಿಸಿದರು. ಪ್ರೌಢ ಪಾಂಡಿತ್ಯದ ಪ್ರಕಾಶದೊಂದಿಗೆ ನ್ಯಾಯಸುಧೆಯ ಪ್ರವಚನವನ್ನು ಈ ನಾಲ್ಕು ಯುವ ಯತಿಗಳು ನೀಡಿದ್ದಲ್ಲದೆ, ಆ ವಿದ್ಯಾರ್ಥಿಗಳಿಂದ ಪಾಠದ ಮರು ಚಿಂತನೆಯನ್ನೂ ಮಾಡಿಸುತ್ತಿದ್ದರು. ಸುಮಾರು ಎರಡು ವರ್ಷಗಳ ಕಾಲ ಸುಧಾಧ್ಯಯನ ಮಾಡಿದ ಈ ವಿದ್ಯಾರ್ಥಿಗಳಲ್ಲಿ ಶ್ರೀ ಶ್ರೀಧರ ಉಪಾಧ್ಯಾಯ ಶ್ರೀ ನಾರಾಯಣ ಭಟ್ ಎಂಬ ವಿದ್ಯಾರ್ಥಿಗಳು ಹಿರಿಯ ಶ್ರೀಪಾದರ ಬಳಿ ಪರೀಕ್ಷೆಯನ್ನಿತ್ತರು. ಪರೀಕ್ಷೆಯ ಫಲಿತಾಂಶ ಶ್ರೀಪಾದರ ಮಾತಲ್ಲಿತ್ತು. ಮುಖದಲ್ಲಿತ್ತು. ಅದು ಮುಖದ ಸಂತಸದ ನಗುವಾಗಿತ್ತು. ತಮ್ಮ ಶಿಷ್ಯರಶಿಷ್ಯರ (ಪ್ರಶಿಷ್ಯರ) ಸುಧಾನುವಾದ , ಉತ್ತಮ ಪರೀಕ್ಷಾಂಕಗಳಿಂದ ಮುಖ ಅರಳಿತ್ತು. ಅವರ ಮನಸ್ಸು ಅದನ್ನೇ ಬಯಸುತ್ತಿತ್ತು. ಅವರ ಮಾತು ಅದನ್ನೇ ನುಡಿಯುತ್ತಿತ್ತು. ಈ ಪರಮ ಗುರುಗಳ ಹರುಷದ ಫಲವಾಗಿ ಆ ಗುರುಗಳ ಸಾವಿರಾರು ರೂಗಳ ಜಯತೀರ್ಥ ಪಾರಿತೋಷಕ ವಿದ್ಯಾರ್ಥಿಗಳ ಕೈಸೇರಿತ್ತು.

ಇಂತಹ ವಿದ್ಯಾರ್ಥಿಗಳ ಅಧ್ಯಯನ ಪೂರ್ಣಗೊಂಡ ಸಮಯದಲ್ಲಿ ಮಂಗಲೋತ್ಸವ ಏರ್ಪಾಡಾಯಿತು. 5-2-87 ಹಾಗೂ 6-2-987 ರ ಎರಡು ದಿನಗಳಂದು ಈ ಎಲ್ಲ ವಿದ್ಯಾರ್ಥಿಗಳ ಸುಧಾನುವಾದವು ನಡೆಯಿತು. ಆ ಸುಧಾನುವಾದಗಳ ಸಂದರ್ಭದಲ್ಲಿ ನಾಡಿನಾದ್ಯಂತದಿಂದ ಬಂದ ವಿದ್ವಾಂಸರ ಸಮೂಹ, ಯತಿಗಳ ಸಂಘ ಸೇರಿತ್ತು. 7-2-87 ರಂದು ಮಧ್ವನವಮಿಯಾಗಿತ್ತು. ಅಂದು ಮೂರು ಸುಧಾಮಂಗಲಮಹೋತ್ಸವದ ಅಂಗವಾಗಿ ವಿದ್ಯಾರ್ಥಿಗಳ ಗುರುಗಳಾದ ಶ್ರೀ ವಿಶ್ವಪ್ರಿಯ ತೀರ್ಥರ, ಶ್ರೀ ಸುಗುಣೇಂದ್ರ ತೀರ್ಥರ, ಶ್ರೀ ವಿದ್ಯೇಶ ತೀರ್ಥರ ಅದ್ಭುತ ಸುಧಾನುವಾದವು ನಡೆಯಿತು. ಶ್ರೀ ವೇದವ್ಯಾಸ ಪೂಜೆಯಾಯಿತು. ವಿದ್ಯಾರ್ಥಿಗಳಿಂದ ಗುರು ಪೂಜೆಯೂ ನಡೆಯಿತು. ಈ ಸುಧಾಮಂಗಲವು ಶ್ರೀ ಅದಮಾರು ಶ್ರೀಪಾದರು , ಶ್ರೀ ಪುತ್ತಿಗೆ ಶ್ರೀಪಾದರು,

ಶ್ರೀ ಭಂಡಾರಕೇರಿ ಶ್ರೀಪಾದರು ತಾವು ಮೊದಲ ಬಾರಿಗೆ ಸುಧಾ ಗ್ರಂಥದ ಪಾಠವನ್ನು ಮಾಡಿ ತಮ್ಮ ಗುರುಗಳ ಸಮ್ಮುಖದಲ್ಲೇ ಮಂಗಲವನ್ನು ನಡೆಯಿಸಿ ಆ ಗುರುಗಳಿಗೆ ಅರ್ಪಿಸಿದ ಮಹೋನ್ನತ ಕಾಣಿಕೆಯಾಗಿತ್ತು. ಅನುಗ್ರಹ ಸಂದೇಶವನ್ನಿತ್ತ ಪರ್ಯಾಯ ಶ್ರೀಪಾದರು ತಮ್ಮ ಶಿಷ್ಯರ ಈ ಪ್ರಥಮ ಸುಧಾ ಮಂಗಲವೆಂಬ ಕಾಣಿಕೆಯಿಂದ ಅತ್ಯಂತ ಹರ್ಷಿತರಾಗಿ 'ಈ ಪಾಠ ಪ್ರವಚನಗಳು ನಿರಂತರವಾಗಿ ಹೀಗೆಯೇ ನಡೆಯಲಿ' ಎಂದು ಹೃದಯ ತುಂಬಿ ಹಾರೈಸಿದರು.

ಶ್ರೀಪಾದರ ಉತ್ತರಾಧಿಕಾರಿಗಳಾದ ಶ್ರೀ ವಿದ್ಯಾಧೀಶತೀರ್ಥರ ಪ್ರಥಮ ಸುಧಾಪ್ರವಚನ ಮಂಗಲೋತ್ಸವ 10-1-1988ರಂದು ನಡೆಯಿತು ವಿಶೇಷವಾಗಿ ವಿದ್ಯಾರ್ಥಿಗಳ ಸುಧಾನುವಾದದ ನಂತರ ಶ್ರೀ ವಿದ್ಯಾಮಾನ್ಯ ತೀರ್ಥರ ವಿಶಿಷ್ಟ ಅನುವಾದವೂ ನಡೆಯಿತು. ಆ ದಿನದಂದೇ ಶ್ರೀಪಾದರು ಪರ್ಯಾಯದ ಅವಧಿಯಲ್ಲಿ ನಡೆಸಿದ ಸಂಪೂರ್ಣ ಸರ್ವಮೂಲ ಗ್ರಂಥಗಳ ಹಾಗೂ ನ್ಯಾಯಸುಧೆಯ ಪ್ರವಚನಗಳ ಮಂಗಲೋತ್ಸವವೂ ನಡೆಯಿತು. ಶ್ರೀಪಾದರು ತಾವು ಹಾಗೂ ತಮ್ಮ ಶಿಷ್ಯರುಗಳು ನಡೆಸಿದ ಅಖಂಡ ಸರ್ವಮೂಲ ಪ್ರವಚನಗಳನ್ನು ಸರ್ವಮೂಲ ಪ್ರಣೇತೃಗಳಾದ ಶ್ರೀಮದಾಚಾರ್ಯರ ಪ್ರಿಯತಮನಾದ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಿಸಿದರು. ಇಂತಹ ಕಾರ್ಯಕ್ರಮಗಳೇ ಶ್ರೀಪಾದರಿಗೆ ಅತ್ಯಂತ ಇಷ್ಟ. ಇದಲ್ಲದೆ ಬೇರೆ ಬೇರೆ ವಿದ್ವಾಂಸರುಗಳು ಶ್ರೀಕೃಷ್ಣನ ಸನ್ನಿಧಿಯಲ್ಲಿ ತಾವು ಪಾಠ ಹೇಳಿದ ಗ್ರಂಥಗಳ ಮಂಗಲಗಳನ್ನೂ ನಡೆಸಿದರು.

ಶ್ರೀಪಾದರು ಎರಡು ವರ್ಷಗಳಿಂದ ನಿಂರತರವಾಗಿ ನಡೆದ ಜ್ಞಾನಯಜ್ಞದ ಪ್ರವಚನದ ಮಾಲಿಕೆಯನ್ನು 17-1-1988ರಂದು ಶ್ರೀಮಧ್ವಾಂತರ್ಗತ ಶ್ರೀಕೃಷ್ಣನಿಗೆ ಅರ್ಪಿಸಿದರು. ಈ ಪ್ರವಚನ ಮಾಲಿಕೆಯ ಅಂತಿಮ ಪ್ರವಚನ ಕುಸುಮ ವಿದ್ಯಾರತ್ನಾಕರ ಬನ್ನಂಜೆ ಗೋವಿಂದಾಚಾರ್ಯರ ಭಾಗವತ ಪ್ರವಚನವಾಗಿತ್ತು. ಈ ರೀತಿ ಜ್ಞಾನಿಪ್ರಿಯತಮನಾದ ಶ್ರೀಮಧ್ವೇಶನಿಗೆ ಪ್ರಿಯವಾಗುವಂತೆ ಜ್ಞಾನಸತ್ರವನ್ನು ನಡೆಸಿದ ಅದ್ವಿತೀಯ ಪರ್ಯಾಯವೆಂದು ಹೆಸರಾಗಿತ್ತು.

ಶ್ರೀಪಾದರ ದ್ವಿತೀಯ ಪರ್ಯಾಯದಲ್ಲಿ ಶ್ರೀಕೃಷ್ಣ ಶ್ರೀಮುಖ್ಯಪ್ರಾಣದೇವರ ಸಂದರ್ಶನಕ್ಕಾಗಿ ತಪಸ್ವಿಗಳಾದ ಶ್ರೇಷ್ಠ ವಿದ್ವಾಂಸರಾದ ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು, ಶ್ರೀ ಭೀಮನಕಟ್ಟೆ ಮಠಾಧೀಶರಾದ ಶ್ರೀ ಶ್ರೀ ರಘುಮಾನ್ಯ ತೀರ್ಥ ಶ್ರೀಪಾದಂಗಳವರು, ಶ್ರೀಶ್ರೀಪಾದರಾಜ ಮಠಾಧೀಶರಾದ ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥ ಶ್ರೀಪಾದಂಗಳವರು, ಮೊದಲಾದ ಅನೇಕ ಪೀಠಾಧೀಶರೂ ಆಗಮಿಸಿದ್ದರು. ಅವರೆಲ್ಲರ ವಾಸ್ತವ್ಯ ಹಾಗೂ ಸಂಸ್ಥಾನ ಪೂಜೆಗಳು ಶ್ರೀಕೃಷ್ಣಮಠದ ಚಂದ್ರಶಾಲೆಯಲ್ಲೇ ನಡೆದವು. ಶ್ರೀ ಉತ್ತರಾದಿ ಮಠದ ಬೃಹತ್ ವಜ್ರದ ಮಂಟಪ ಮೊದಲಾದ ಸಕಲ ವೈಭವಗಳೊಂದಿಗೆ ಶ್ರೀ ಸೀತಾರಾಮದೇವರ ಪೂಜೆ ನಡೆದಿತ್ತು. ಎಲ್ಲ ಸಂಸ್ಥಾನಾಧೀಶರರಿಗೂ ಪರ್ಯಾಯ ಮಠದ ವತಿಯಿಂದ ವಿಶಿಷ್ಟ ಸನ್ಮಾನ ಸತ್ಕಾರಗಳು ನಡೆದವು.

ದೇಶ ಪಾಲಕ ರಾಜಕೀಯ ಮುಖಂಡರುಗಳಲ್ಲಿ ಅಂದಿನ

ರಾಷ್ಟ್ರಪತಿ ಶ್ರೀ ಗ್ಯಾನೀ ಜೈಲ್ ಸಿಂಗ್ ಅವರು ಕರ್ನಾಟಕದ ರಾಜ್ಯಪಾಲ ಶ್ರೀ ಅಶೋಕನಾಥ್ ಬ್ಯಾನರ್ಜಿ, ಕರ್ನಾಟಕದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ, ಕರ್ನಾಟಕದ ಗೃಹಮಂತಿ ಶ್ರೀ ಆರ್. ಜಾಲಪ್ಪ ,ಧಾರ್ಮಿಕ ದತ್ತಿ ಸಚಿವ ಶ್ರೀ ಅಮರನಾಥ ಶೆಟ್ಟಿ, ಸಣ್ಣ ಉಳಿತಾಯ ಸಚಿವ ಶ್ರೀ ವೀರಣ್ಣ ಮೀನುಗಾರಿಕೆ ಸಚಿವ ಶ್ರೀ ರಘುಪತಿ, ಸಾರಿಗೆ ಸಚಿವ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಶಿಕ್ಷಣ ಸಚಿವ ಶ್ರೀ ಜೀವರಾಜ ಆಳ್ವ ಮೊದಲಾದ ಮಹನೀಯರು ಶ್ರೀಕೃಷ್ಣ ಮಠಕ್ಕೆ ಸಂದರ್ಶನವನ್ನು ನೀಡುತ್ತಿದ್ದರು. ಶ್ರೀಪಾದರ ಅನುಗ್ರಹವನ್ನು ಶ್ರೀಕೃಷ್ಣನ ಪ್ರಸಾದವನ್ನೂ ಸ್ವೀಕರಿಸುತಿದ್ದರು.

ಬೇರೆ ಬೇರೆ ನಗರಗಳಲ್ಲಿ ಸಚ್ಛಾಸ್ತ್ರಪಾಠ ಪ್ರವಚನಗಳನ್ನು ನಡೆಸುತ್ತಿರುವ ವಿದ್ವಾಂಸರನ್ನು ಸಮಾಜವನ್ನು ಸದಾಚಾರದಲ್ಲಿ ಕೊಂಡೊಯ್ಯುವ ಪುರೋಹಿತರನ್ನು ಬೇರೆ ಬೇರೆ ಸಂದರ್ಭಗಳಲ್ಲಿ ವಿಶೇಷವಾಗಿ ಅನುಗ್ರಹಿಸಿ ಸನ್ಮಾನಿಸಿದರು. ಅದೇ ರೀತಿ ಧಾರ್ಮಿಕ ಶ್ರದ್ಧೆಯುಳ್ಳವರಾಗಿ ಧರ್ಮಾಚರಣೆಯಲ್ಲಿ ರತರಾದ ಸಮಾಜದ ಧಾರ್ಮಿಕ ಕಾರ್ಯಗಳಿಗೆ ಪೋಷಕರಾದ ಅನೇಕ ಮಹನೀಯರನ್ನು ವಿಶೇಷವಾಗಿ ಸನ್ಮಾನಿಸಿದರು. ಅಲ್ಲದೆ ಅನೇಕ ವಿವಿಧ ಕಲಾಭಿಜ್ಞರನ್ನೂ ಕಲಾವಿದರನ್ನೂ ಸನ್ಮಾನಿಸಿದರು. ಹೀಗೆ ಶ್ರೀ ವಿದ್ಯಾಮಾನ್ಯ ತೀರ್ಥರ ದ್ವಿತೀಯ ಪರ್ಯಾಯದಲ್ಲಿ ಸನ್ಮಾನಿತರಾದ ಗಣ್ಯರ ಸಂಖ್ಯೆ ಎಣಿಸಲಾಗದಷ್ಟು ಈ ಸನ್ಮಾನ ಕಾರ್ಯಕ್ರಮವು ವಿದ್ಯೆಯ ಕಲೆಯ ರಕ್ಷಣೆಗಾಗಿ ಪ್ರೋತ್ಸಾಹಕ್ಕಾಗಿ ಶ್ರೀಪಾದರಿಗಿರುವ ಕಾಳಜಿಯನ್ನು ವ್ಯಕ್ತಪಡಿಸುವುದು.

ಶ್ರೀಪಾದರಿಗೆ ಶಾಸ್ತ್ರವಿಚಾರದಲ್ಲಿಯೇ ಅಧಿಕವಾದ ಆಸಕ್ತಿ, ಸಂಗೀತ ನಾಟಕಾದಿ ಮನೋರಂಜನ ಕಾರ್ಯಕ್ರಮಗಳಲ್ಲಿ ಅನಾಸಕ್ತಿ, ಆದರೂ ಅವರ ಎರಡನೆಯ ಪರ್ಯಾಯದಲ್ಲಿ ಶ್ರೀಕೃಷ್ಣ ಮಠದಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಇಲ್ಲವಾಗಿತ್ತು ಮಿತಿ. ಕಾರಣ, ಪ್ರತಿಯೊಂದು ರಂಗದವರು ವಿಧವಿಧ ಅಭಿರುಚಿಯುಳ್ಳವರು. ಅವರೆಲ್ಲ ಒಂದಲ್ಲ ಒಂದು ದೃಷ್ಟಿಯಿಂದ ಶ್ರೀಕೃಷ್ಣನ ಬಳಿ ಬರುವಂತಾಗಬೇಕು ಎಂಬ ಶ್ರೀಪಾದರ ಸಣ್ಣ ಯುಕ್ತಿ. ಅದಕ್ಕಿಂತ ಮಿಗಿಲಾಗಿ ಆ ವಿಧವಿಧ ಚೇತನರಲ್ಲಿ ನೆಲೆಸಿದ ಶ್ರೀಪಾದರ ಅಪಾರವಾದ ಪ್ರೀತಿ. ಈ ಪ್ರೀತಿಗೆ ಕಾರಣ , ''ನಾನಾ ಜನಸ್ಯ ಸುಶ್ರೂಷಾ ಕರ್ತವ್ಯಾ ಕರವನ್ಮಿತೇಃ'' ಎಂಬ ಮಾತಿನಂತೆ ಅನೇಕ ಜೀವರನ್ನು ತೃಪ್ತಿಪಡಿಸುವ ಮೂಲಕ ಅವರ ಅಂತರ್ಯಾಮಿಯಾದ ಭಗವಂತನನ್ನು ತೃಪ್ತಿಪಡಿಸುವುದು ,ತೆರಿಗೆ ನೀಡಿದಷ್ಟೇ ಖಡ್ಡಾಯವಾದ ಕರ್ತವ್ಯ ಎಂಬ ಶ್ರೀಕೃಷ್ಣನ ಗೀತಾನೀತಿ. ಇದನ್ನೇ ಸರ್ವದಾ ಸುತ್ತುತಿತ್ತು ಶ್ರೀಪಾದರ ಸದಾ ಜಾಗೃತ ಮತಿ. ಆದ್ದರಿಂದಲೇ ಅವರಿಂದ ನಡೆಯಿತು ಇಂತಹ ಉತ್ಕೃಷ್ಟ ಕೃತಿ.

ದಕ್ಷಿಣಾದಿ ಸಂಗೀತ ಉತ್ತರಾದಿ ಸಂಗೀತ, ಪೌರಾಣಿಕ ಐತಿಹಾಸಿಕ ನಾಟಕ, ಪೌರಾಣಿಕ ಯಕ್ಷಗಾನ, ಭರತನಾಟ್ಯ, ನೃತ್ಯರೂಪಕ ಹರಿಕಥೆ ಹೀಗೆ ಇದು ಶ್ರೀಕೃಷ್ಣನ ಸನ್ನಿಧಿಯಲ್ಲಿ ನಿರಂತರ ನಡೆದ ಕಾರ್ಯಕ್ರಮಗಳ ಮಹಾಪಂಕ್ತಿ. ಈ ಕಾರ್ಯಕ್ರಮಗಳಲ್ಲಿ ಅದ್ಭುತವಾಗಿರುತಿತ್ತು, ವಿಶಿಷ್ಟ ಕಲಾಭಿವ್ಯಕ್ತಿ. ಅದರ ನಂತರ ಶ್ರೀಪಾದರ ಅನುಗ್ರಹ ಮಂತ್ರಾಕ್ಷತೆ ಸಾವಿರಾರು ರೂಗಳ

ಸಂಭಾವನೆ, ಜೊತೆಯಲ್ಲಿ ಶ್ರೀಕೃಷ್ಣ ಮುಖ್ಯಪ್ರಾಣರ ಸಂದರ್ಶನದಿಂದ ಆ ಕಲಾವಿದರ ಮನದಲ್ಲಿ ಮೂಡುತಿತ್ತು ಮಿತಿ ಇರದ ತೃಪ್ತಿ. ಕಾರಣ, ಶ್ರೀಕೃಷ್ಣನಲ್ಲಿ ಹಾಗೂ ಶ್ರೀಪಾದರಲ್ಲಿ ಅವರಿಗೆ ಇರುವ ಪರಮ ಗೌರವ, ಭಕ್ತಿ.

ಈ ರೀತಿ 730 ದಿನಗಳ ಅಖಂಡ ಪರ್ಯಾಯದಲ್ಲಿ ಅನೇಕ ಚಟುವಟಿಕೆಗಳನ್ನು ನಡೆಸಿದ ಶ್ರೀಪಾದರ ಮೂಲ ಉದ್ದೇಶ ಸಮಾಜದಲ್ಲಿ ಜ್ಞಾನ, ಭಕ್ತಿಗಳ ಜಾಗೃತಿ. ಅಲ್ಲದೇ ಶ್ರೀಪಾದರು ಶ್ರೀಕೃಷ್ಣ ಮುಖ್ಯಪ್ರಾಣರನ್ನು ಜ್ಞಾನ ಭಕ್ತಿ ವಿರಕ್ತಿಪೂರ್ವಕವಾದ ಪೂಜೆ ನಮಸ್ಕಾರ ಪಾಠ ಪ್ರವಚನ ವಿದ್ವಾಂಸರ ಸನ್ಮಾನ, ಕಲಾಪೋಷಣ ಮೊದಲಾದ ಕಾರ್ಯಕ್ರಮಗಳಿಂದಲೇ ಕಳೆದರು ಆ ಎರಡು ವರುಷ ಪೂರ್ತಿ. ಇದನ್ನೇ ಕಂಡು ಪರಮ ಸಂತುಷ್ಟನಾದ, ಅವರಿಗೊಲಿದ ಆ ಚತುರ್ದಶ ಭುವನಾಧಿಪತಿ. ಶ್ರೀಮದಾಚಾರ್ಯರಿಗೂ ಶ್ರೀಪಾದರ ಸರ್ವಕಾರ್ಯಗಳಲ್ಲಿತ್ತು ಸಂಪೂರ್ಣ ಸಮ್ಮತಿ. ಹೀಗೆ ಶ್ರೀಹರಿವಾಯು ಗುರುಗಳೂ ಹಾಗೂ ಅವರ ಭಕ್ತರೂ ಮೆಚ್ಚಿಕೊಂಡ ಶ್ರೀಪಾದರ ಈ ದ್ವಿತೀಯ ಪರ್ಯಾಯಕ್ಕೆ ಅತ್ಯಂತ ಸೂಕ್ತವಾದುದು ಅದ್ವಿತೀಯತೆಯ ಕೀರ್ತಿ.



# ಕನಕರಿಗೊಲಿದವಗೆ

# ಕನಕತೊಟ್ಟಿಲು, ರಥ, ವಜ್ರಕಿರೀಟ

ನಿರಂತರ ಅಂತರಂಗದಲ್ಲಿ ಉಡುಪಿಯ ರಂಗನನ್ನು ಭಜಿಸುತ್ತಿದ್ದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು ಶ್ರೀಪಲಿಮಾರುಮಠಾಧಿಶರಾಗಿ 1969ರಿಂದ ಬಹಿರಂಗ ವಾಗಿಯೂ ಪೂಜಿಸಲಾರಂಭಿಸಿದರು. ಪೂಜಿಸಿ ಪರಿಪೂರಿತೇಷ್ಟಮನಸ್ಕರಾದರು. ಆ ಪೂಜಾಭಾಗ್ಯವನ್ನು ನೀಡಿದ ಆ ಕರುಣಾವಾರಿಧಿಗೆ, ನಿಷ್ಕಲ್ಮಷ ಸುದೃಢ ಭಕ್ತಿಯನ್ನಲ್ಲದೆ ಪ್ರತಿಯಾಗಿ ಏನನ್ನು ನೀಡಲು ಸಾಧ್ಯ? ಆತನಲ್ಲಿ ಆ ಭಕ್ತಿಯನ್ನೇ ತೋರಿದರು. ಮತ್ತೆಮತ್ತೆ ಅದನ್ನೇ ಕೇಳಿದರು, ಸರ್ವಸಮೃದ್ಧವಾದ ರಾಮರಾಜ್ಯದಲ್ಲಿ 'ಏನು ಬೇಕು' ಎಂದು ಶ್ರೀರಾಮಚಂದ್ರದೇವರು ಕೇಳಿದರೆ ''ನಿನ್ನ ಪಾದದಿ ಭಕ್ತಿಯು ಬೆಳೆಯ ಲಿ'' ಎಂದು ಕೇಳಿದ ಆ ಆಂಜನೇಯ ಸ್ವಾಮಿಯಂತೆ ಬದಲಾಗಿ ಬೇರಾವ ಭೌತಿಕ ಬಯಕೆಯನ್ನೂ ಮುಂದಿಡಲಿಲ್ಲ.

1970-1972 ರಲ್ಲಿ ಶ್ರೀಪಾದರ ಮೊದಲ ಶ್ರೀಕೃಷ್ಣಪೂಜಾ ಪರ್ಯಾಯ ಶ್ರೀಕೃಷ್ಣನಿಗೋ ಅದೊಂದು ಈ ಮಹಾಭಕ್ತನ ಪೂಜೆಯನ್ನು ಸ್ವೀಕರಿಸುವ ಅತ್ಯಂತ ಸಂಭ್ರಮದ ಸಮಯ. ಶ್ರೀಪಾದರು ಹೊಂದಿದರು ಮನದಲ್ಲೊಂದು ಮಹ ದಾಸೆಯ, ಆ ಆಸೆ 'ಆಗಬೇಕೊಂದು ಸುಂದರ ತೊಟ್ಟಿಲದ ಕಾರ್ಯ. ಅದೂ ಪೂರ್ಣ ಸುವರ್ಣಮಯ. ಅದರೊಳಗೆ ಕುಳಿತು ಲೋಲ್ಯಾಡಿ ವಿಹರಿಸಬೇಕು ಈ ಚೆಲ್ವ ಉಡುಪಿಯ ಕೃಷ್ಣರಾಯ.'

ಆ ಸುವರ್ಣ ತೊಟ್ಟಿಲಿನ ನಿರ್ಮಾಣಕ್ಕೆ ಭಾರೀಬೆಲೆಯ ಸುವರ್ಣದ ಅವಶ್ಯಕತೆಯಿತ್ತು. ಅಷ್ಟೊಂದು ಸಾಧ್ಯವೆ? ಎಂಬ ಪ್ರಶ್ನೆಯು ಏಳುವ ಮುಚೆಯೇ ಶ್ರೀಪಾದರಲ್ಲಿ ಒಂದು ನಿಶ್ಚಯವಿತ್ತು. ಅದು ತಮ್ಮ ಆಧಿಪತ್ಯದಲ್ಲಿರುವ ಶ್ರೀಭಂಡಾರಕೇರಿ ಮಠದ ಸುವರ್ಣಪೀಠವನ್ನೇ ಈ ತೊಟ್ಟಿಲಿಗಾಗಿ ವಿನಿಯೋಗಿಸುವುದಾಗಿತ್ತು. ಅವರನ್ನು ಅವರ ಈ ನಿಶ್ಚಯವನ್ನು ತಡೆವವರಾರು? ಅವರೇ ಆ ಮಠದ ಒಡೆಯರು. ಅಂತೂ ಶ್ರೀಪಾದರಿಗಿಂತಲೂ ಪೂರ್ವದಲ್ಲಿ ಇರದ ಅವರೇ ಸಂಪಾದಿಸಿದ ಶ್ರೀಭಂಡಾರಕೇರಿಮಠದ ಆ ಸುಂದರ ಸುವರ್ಣಪೀಠವು ಶ್ರೀಕೃಷ್ಣನ ತೊಟ್ಟಿಲಿಗಾಗಿ ಕರಗಿತ್ತು. ಮತ್ತೆ ತೊಟ್ಟಿಲಿನ ಅನೇಕ ಭಾಗಗಳಿಗಾಗಿ ಪರಿಣಮಿಸಿತು. ಇಷ್ಟಾದರೂ

ತೊಟ್ಟಿಲಿಗೆ ಮತ್ತಷ್ಟು ಚಿನ್ನದ ಅವಶ್ಯಕತೆಯಿತ್ತು. ಅದಕ್ಕಾಗಿ ಏನು ಮಾಡುವುದು? ಎಂಬ ಆಲೋಚನೆಯೊಂದಿಗೆ ಒಂದು ಉಪಾಯವೂ ತೋರಿತು. ಅದು ಶ್ರೀಕೃಷ್ಣಭಕ್ತರಿಂದ ಕಾಣಿಕೆ ಸ್ವೀಕರಿಸುವುದಾಗಿತ್ತು. ಅದಕ್ಕಾಗಿ ಶ್ರೀಕೃಷ್ಣಮಠದ ಮುಂಭಾಗದಲ್ಲಿ ಒಂದು ಫಲಕವಿತ್ತು. ಅದರಲ್ಲಿ ಹೀಗೆ ಬರೆದಿತ್ತು. 'ಯಾರಿಗೆ ಸಂತಾನವಿಲ್ಲವೋ ಅವರು ಶ್ರೀಕೃಷ್ಣನನ್ನು ತೂಗುವ ಬಂಗಾರದ ತೊಟ್ಟಿಲಿಗಾಗಿ ಕಾಣಿಕೆ ನೀಡಿರಿ ಶ್ರೀಕೃಷ್ಣನ ಕೃಪೆಗೆ ಪಾತ್ರರಾಗಿರಿ' ಎಂದಿತ್ತು. ದೇವಸ್ಥಾನಕ್ಕೆ ಬರುವ ಭಕ್ತರ ದೃಷ್ಟಿ ಫಲಕದ ಮೇಲೇ ಬಿತ್ತು. ಅವರ ಭಕ್ತಿಯ ಕಾಣಿಕೆ ಹುಂಡಿಯನ್ನು ಸೇರಿತು. ತೊಟ್ಟಿಲಿಗೆ ಬೇಕಾದ ಚಿನ್ನದ ಮೊತ್ತ ಪೂರ್ಣವಾಯಿತು. ಸುಮಾರು 10.ಕೆಜಿ ಭಾರದ ಚಿನ್ನದ ತೊಟ್ಟಿಲು ಮೈಸೂರಿನ ಚತುರ ಶಿಲ್ಪಿಗಳಿಂದ ನಿರ್ಮಿತವಾಗಿತ್ತು. ಅನೇಕ ವಿಧದ ಸುಂದರಕೆತ್ತನೆಗಳು, ಪುಟ್ಟ ಪುಟ್ಟ ಕಂಬಗಳು, ಒಳಭಾಗದಲ್ಲಿ ಸೀತಾರಾಮಚಂದ್ರ ಹಾಗೂ ಮುಂಭಾಗದಲ್ಲಿ ಉಡುಪಿಶ್ರೀಕೃಷ್ಣ ಉಬ್ಬುಚಿತ್ರಗಳನ್ನೊಳಗೊಂಡಿತು. ನೋಡುಗರ ಮನಸ್ಸನ್ನು, ನಯನಗಳನ್ನು ಸೆರೆಹಿಡಿಯುವಂತಾಯಿತು. ಅಂತೂ ತೊಟ್ಟಿಲು ತಯಾರಾಯಿತು. ಸುಮೂಹೂರ್ತದಲ್ಲಿ ಭಕ್ತರೆಲ್ಲರ ಸಮ್ಮುಖದಲ್ಲಿ ಶ್ರೀಕೃಷ್ಣನಿಗೆ ಸುವರ್ಣತೊಟ್ಟಿಲನ್ನು ಸಮರ್ಪಿಸಲಾಯಿತು. ವಿಶೇಷವೆಂದರೆ ಸುವರ್ಣ ತೊಟ್ಟಿಲಿಗಾಗಿ ಕಾಣಿಕೆ ನೀಡಿದ ಸಂತಾನರಹಿತರಾಗಿದ್ದ ದಂಪತಿಗಳ ಕಂಕುಳಲ್ಲಿ ಅವರ ಕಂದಮ್ಮ ಕುಳಿತಿತ್ತು. ಅದೂ ಅಪ್ಪ ಅಮ್ಮರೊಡನೆ ಉಡುಪಿಯ ಶ್ರೀಕೃಷ್ಣನು ಮೊದಲಬಾರಿ ಚಿನ್ನದ ತೊಟ್ಟಿಲಲ್ಲಿ ಕೂತು ಲೋಲಾಡುವ ಸೊಬಗನ್ನು ನೋಡುವ ಭಾಗ್ಯ ಶಾಲಿಯಾಗಿತ್ತು. ಆಶ್ಚರ್ಯವೆಂದರೆ ಶ್ರೀಕೃಷ್ಣನು ಚಿನ್ನದ ತೊಟ್ಟಿಲಲ್ಲಿ ಮಲಗಿ ತೂಗಿಸಿಕೊಳ್ಳುವ ಮುಂಚೆಯೇ ಆ ಕಂದಮ್ಮ ಭೂಮಿಗಿಳಿದು ತೊಟ್ಟಿಲನ್ನು ಹತ್ತಿ ಹೆತ್ತವರಿಂದ ತೂಗಿಸಿಕೊಳ್ಳುತ್ತಿತ್ತು. ಇದು ಶ್ರೀಪಾದರ ಆದೇಶದ ಮೇರೆಗೆ ಆ ದಂಪತಿಗಳು ಶ್ರೀಕೃಷ್ಣನಿಗೆ ನೀಡಿದ ಕಾಣಿಕೆಯ ಫಲವಾಗಿತ್ತು. ಬಾಡಿದ ಆ ದಂಪತಿಗಳ ಮುಖ ಅರಳಿತ್ತು. ನಗು ಬೀರಿತ್ತು. ಅವರ ಮನಸ್ಸು ಶ್ರೀಕೃಷ್ಣನನ್ನು ಹಾಗೂ ಶ್ರೀಪಾದರ ತಪಃಶಕ್ತಿಯನ್ನು ತನ್ಮಯತೆಯಿಂದ ಸ್ತುತಿಸುತ್ತಲೇ ಇತ್ತು.

ಅಂತೂ ಅಲ್ಲಿಯವರೆಗೆ ಬೆಳ್ಳಿಯ ತೊಟ್ಟಿಲಲ್ಲಿ ತೂಗಿ ಲೋಲ್ಯಾಡುತ್ತಿದ್ದ ಬಾಲಕೃಷ್ಣ ಶ್ರೀಪಾದರ ಭಕ್ತಿಯ ಫಲವಾಗಿ ಅಂದಿನಿಂದ ಅಂದದ ಕುಂದಣದ ತೊಟ್ಟಿಲಲ್ಲಿ ಕುಳಿತು ಅವರಿಂದ ತೂಗಿಸಿಕೊಳ್ಳುತ್ತ ಆನಂದ ಭರಿತನಾದನು. ಮಠದ ಭಾಗವತರು ತಾಳ ಪಿಡಿದು ಲಾಲಿ ಹಾಡಿದರು. ಈ ಮಹಾಭಾಗವತಪುರುಷರು ಕರಗಳಿಂದ ಸರಪಳಿಗಳನ್ನು ಹಿಡಿದು ಶ್ರೀಕೃಷ್ಣನು ಕುಳಿತ ಚಿನ್ನದ ತೊಟ್ಟಿಲನ್ನು ತೂಗಿದರು. ಮಗುವಿನ ತೊಟ್ಟಿಲನ್ನು ಮೃದುವಾಗಿ ತೂಗಿ ಆನಂದವನ್ನು ಅನುಭವಿಸಿದ ತಾಯಿಯಂತೆ ಶ್ರೀವಿದ್ಯಾಮಾನ್ಯತೀರ್ಥರೂ ಶ್ರೀಕೃಷ್ಣನನ್ನು ಭಾವಪೂರ್ಣರಾಗಿ ತೂಗಿದರು. ಆನಂದಪರವಶರಾದರು.

ಶ್ರೀಕೃಷ್ಣನ ಈ ಚಿನ್ನದ ತೊಟ್ಟಿಲು ಅವನ ಪ್ರಮುಖ ಸ್ಥಿರಾಸ್ತಿಯ ಪಂಕ್ತಿಯಲ್ಲಿ ಸೇರಿಕೊಂಡಿತು.

ಚಿನ್ನವೆಂದರೆ ಲೋಕವೇ ಬಾಯಿ ಬಿಡುವ ಕಾಲವಿದು. ಹಿಂದಿನ ಇತಿಹಾಸವನ್ನು ಮೆಲುಕು ಹಾಕಿದರೂ ಚಿನ್ನದ ಶೋಧಕ್ಕಾಗಿ ಮಾನವನು ಖಂಡಖಂಡಗಳಿಗೆ ಬೆಳೆಸಿದ

ಪ್ರಯಾಣ,ಪ್ರಯತ್ನ ತಿಳಿಯುವುದು. ಮನುಷ್ಯನಿಗೆ ಚಿನ್ನವೆಂದರೆ ಬಲು ಆಸೆ. ಅಂತಹ ಆಸೆಯನ್ನೇ ಮಣಗಟ್ಟಲೇ ಬಂಗಾರವನ್ನು ಶೇಖರಿಸಿ ಭಗವಂತನಿಗೆ ಅರ್ಪಿಸುವ ಆಸೆಯನ್ನಾಗಿ ಪರಿವರ್ತಿಸಿದ ಮಹಾನ್ ತ್ಯಾಗಿಗಳು ಶ್ರೀವಿದ್ಯಾಮಾನ್ಯತೀರ್ಥರು. ಅವರ ಆ ತ್ಯಾಗದ ಹಿಂದೆ ಅಗಾಧವಾದ ಅಚಲವಾದ ಭಕ್ತಿಯಿತ್ತು. ಭಕ್ತಿಯಿಂದ ಭಗವಂತನನ್ನು ಒಲಿಸಿ ಬದುಕಿನಲ್ಲಿ ಏನೆಲ್ಲ ಪಡೆಯಬಹುದು ಎಂಬುದನ್ನು ಸಾಬೀತುಪಡಿಸಿದರು..

ಶ್ರೀವಿದ್ಯಾಮಾನ್ಯತೀರ್ಥರ ಎರಡನೆಯ ಶ್ರೀಕೃಷ್ಣಪೂಜಾ ಪರ್ಯಾಯದ ಪ್ರಾರಂಭದ ಸಮಯ ಸಾವಿರದ ಒಂಬೈನೂರ ಎಂಭತ್ತಾರು. ಅದಕ್ಕೆ ಪೂರ್ವಭಾವಿಯಾಗಿ ಅವರು ಶ್ರೀವಿದ್ಯಾಧೀಶತೀರ್ಥರೊಡನೆ ಪರ್ಯಾಯ ಸಂಚಾರಕ್ಕಾಗಿ ಹೊರಟರು. ಭಾರತದ ಎಲ್ಲ ಕ್ಷೇತ್ರಗಳನ್ನೂ ಸಂದರ್ಶಿಸಿ ತಮಿಳುನಾಡಿನ ಅನೇಕ ಕ್ಷೇತ್ರಗಳನ್ನೂ ಸಂದರ್ಶಿಸಿದರು. ಪಳನಿ, ಸಮಯಪುರ ಮೊದಲಾದ ಕ್ಷೇತ್ರಗಳಲ್ಲಿದ್ದ ಸುವರ್ಣರಥಗಳನ್ನು ಅವಲೋಕಿಸಿದರು. 'ಸಾಮಾನ್ಯ ದೇವತೆಗಳಿಗೇ ಸುವರ್ಣರಥಗಳಿರುವಾಗ ಜಗದೊಡೆಯನಾದ ನಮ್ಮ ಶ್ರೀಕೃಷ್ಣನಿಗೆ ಸುವರ್ಣರಥವನ್ನು ಏಕೆ ಮಾಡಿಸಬಾರದು? ಎಂದು ಆಲೋಚಿಸಿದರು. ತಾತ್ಪರ್ಯನಿರ್ಣಯದ ಮುಖಾಂತರ ಶ್ರೀಮದಾ ಚಾರ್ಯರ ಶುಭಸಂದೇಶವನ್ನು ಸ್ವೀಕರಿಸಿದರು. ಅನಂತರ ಆ ಆಲೋಚನೆಯನ್ನು ತಮ್ಮ ಶಿಷ್ಯರ ಹಾಗೂ ಭಕ್ತರ ಮುಂದೆ ಅರುಹಿದರು.

ಮೊದಲು, ಆ ರಥಕ್ಕಾಗಿ ತಮ್ಮ ಕಾಣಿಕೆಯನ್ನು ಸಮರ್ಪಿಸಿದವರು. ಪಲಿಮಾರು ಉಭಯಶ್ರೀಪಾದರು. ಅವರ ನಂತರ ಸುವರ್ಣರಥಕ್ಕಾಗಿ ಕಾಣಿಕೆಯನ್ನು ಸಮರ್ಪಿಸಿದವರಲ್ಲಿ ಎರಡನೆಯವರಾದ ಮಹಾಭಕ್ತರು ಮದ್ರಾಸಿನ ಶ್ರೀರಾಮಪ್ರಸಾದ್ ಭಟ್ ಅವರು 25.000 ಅವರು ರೂಗಳ ಕಾಣಿಕೆಯನ್ನು ಸಮರ್ಪಿಸಿದರು. ಅದು ಶುಭಸೂಚನೆಯಾಯಿತು. ಅನಂತರದಲ್ಲಿ ಒಂದು ವ್ಯವಸ್ಥಿತವಾದ ರೀತಿಯಲ್ಲಿ ರಥನಿರ್ಮಾಣದ ದೇಣಿಗೆ ಸಂಗ್ರಹಕ್ಕೆ ರೂಪ ಕಲ್ಪನೆ ಮಾಡಲಾಯಿತು. ಆ ರಥದ ಪೂರ್ಣನಿರ್ಮಾಣದ ವೆಚ್ಚ ಸುಮಾರು ಒಂದು ಕೋಟಿ ಎಂದು ಅಂದಾಜಿಸಲಾಯಿತು. ಅದಕ್ಕಾಗಿ ದೇಶದ ಭಕ್ತರೆಲ್ಲರಿಂದಲೂ ಕಾಣಿಕೆಯನ್ನು ಸ್ವೀಕರಿಸುವದೆಂದು ತೀರ್ಮಾನಿಸಲಾಯಿತು. ಶ್ರೀಪಾದರ ಈ ತೀರ್ಮಾನದಲ್ಲಿ ಸಹಾಯಬೇಕೆಂಬ ಸ್ವಾರ್ಥಭಾವವಿಲ್ಲದೆ, ತಾನೊಬ್ಬನಲ್ಲದೇ ಎಲ್ಲರೂ ಶ್ರೀಕೃಷ್ಣನ ಸೇವೆ ಹಾಗೂ ಕೃಪೆಗೆ ಪಾತ್ರರಾಗಲಿ ಎಂಬ ಭಾವವಿತ್ತು.

ಕನಿಷ್ಠ ಪಕ್ಷದಲ್ಲಿ ಒಂದು ಗ್ರಾಂ ಬಂಗಾರದ ಅಂದಿನ ದರ 250 ರೂಗಳನ್ನು ಕಾಣಿಕೆಯನ್ನಾಗಿ ಸ್ವೀಕರಿಸಲು ಶ್ರೀಪಾದರು ಸಂಕಲ್ಪಿಸಿದರು. ಈ ಬಂಗಾರದ ರಥದ ಪ್ರಚಾರದೊಂದಿಗೆ ಎಲ್ಲ ಕಡೆಯಲ್ಲೂ ಸಂಚರಿಸಿದರು. 1986 ಜನವರಿ 18ರಂದು ತಮ್ಮ ದ್ವಿತೀಯ ಪರ್ಯಾಯವನ್ನು ಆರಂಭಿಸಿದರು. ಆಗ ಅವರಿಗಾಗಿತ್ತು ಎಪ್ಪತ್ತಮೂರರ ವಯಸ್ಸು. ಆದರೆ ಅವರಲ್ಲಿತ್ತು ಇಪ್ಪತ್ತಮೂರರ ಹುಮ್ಮಸ್ಸು. ಚಿನ್ನದ ರಥದ ನಿರ್ಮಾಣಕ್ಕೆ ಕೆಲವರ ಪ್ರಬಲ ವಿರೋಧ ತೋರಿ ಬಂದರೂ ಅಚಲವಾಗಿತ್ತು ಅವರ ಮನಸ್ಸು. ಏಕೆಂದರೆ ಅವರಲ್ಲಿ ಸದಾ ಸಂಚರಿಸುತ್ತಿತ್ತು ಶ್ರೀಮದಾಚಾರ್ಯರ ತೇಜಸ್ಸು.

ಅವರು ಚಿನ್ನದ ರಥವನ್ನು ಆವಂಭಿಸಿದಾಗ ''ಆಗಲಿ'' ಎಂದವರಿಗಿಂತ ಬೇಡ ಎಂದವರೇ ಹೆಚ್ಚು. ಏಕೆಂದರೆ

ಬೇಡವೆಂದವರ ಬುದ್ಧಿಗೆ ಎಟುಕದಾಗಿತ್ತು, ಆ ರಥದ ಖರ್ಚು. ಪತ್ರಿಕೆಗಳಲ್ಲಿ ಆರಂಭಗೊಂಡಿತು ವಿಚಾರವಾದಿಗಳೆಂಬ ಹಣೆಪಟ್ಟಿ ಹಚ್ಚಿಕೊಂಡ ಜನಗಳ ಮಾತಿನ ಅಚ್ಚು. ಹೀಯಾಳಿಸಿ ಬರೆದ ಬರೆವಣಿಗೆಗಳೇ ಹೆಚ್ಚು. ಕೆಲವರ ದೃಷ್ಟಿಯಲ್ಲಿ ಶ್ರೀಪಾದರಿಗೆ ಎಪ್ಪತ್ತರ ಅರಳು ಮರುಳಿನ ಹುಚ್ಚು. ಇದಕ್ಕೆಲ್ಲ ಕಾರಣವೇನೆಂದರೆ ಶ್ರೀಪಾದರ ಉಚ್ಚತಮ ವ್ಯಕ್ತಿತ್ವವನ್ನು ಕಾಣಲಾಗದ ಆ ನೀಚರಲ್ಲಿ ಅಡಗಿದ್ದ ಅಗಾಧವಾದ ಹೊಟ್ಟೆಕಿಚ್ಚು. ಆದರೆ ಯಾರೇನೆಂದರೂ ಉಡುಪಿಯ ಯಾದವವೀರನಿಗೆ ಮಾತ್ರ ಈ ಯತಿಕುಲತಿಲಕರೇ, ಅವರ ಕೆಲಸಗಳೇ ಅಚ್ಚುಮೆಚ್ಚು.

ಭಕ್ತರು ರಥಕ್ಕಾಗಿ ಕಾಣಿಕೆಯನ್ನು ನೀಡಲಾರಂಭಿಸಿದರು. ಆದರೆ ಅಂದಿನವರೆಗೂ ತಮ್ಮಲ್ಲಿರದ ಸಮಾಜಸೇವಾ ಮನೋಭಾವವನ್ನು ಕೆಲವರು ತೋರಿಸಲಾ ರಂಭಿಸಿದರು. 'ಕೋಟಿಗಟ್ಟಲೆ ಬೆಲೆಬಾಳುವ ರಥವೇಕೆ? ಆ ಹಣವನ್ನೇ ಶಿಕ್ಷಣಕ್ಕಾಗಿ, ದೀನಜನರ ರಕ್ಷಣೆಗಾಗಿ, ಆರೋಗ್ಯಕೇಂದ್ರ ಸ್ಥಾಪನೆಗಳಿಗಾಗಿ ವಿನಿಯೋಗ ಮಾಡುವ ಮೂಲಕ ದೇಶಸೇವೆಯನ್ನೇಕೆ ಮಾಡುಬಾರದು?' ಎಂದೆಲ್ಲ ಗೊಣಗಲಾರಂಭಿಸಿದರು. ಅಂತಹ ಮಾತುಗಳೇ ಬಲವಾಗಿ ಕೇಳಿ ಬಂದವು. ಆದರೂ ಕುಗ್ಗದಾಗಿತ್ತು, ವಿಚಲಿತವಾಗದಾಗಿತ್ತು ಶ್ರೀಪಾದರ ಮನವು. ತಮ್ಮ ತಮ್ಮ ಹೆಂಡಿರು ಮಕ್ಕಳ ದೇಹದ ಮೇಲೆ ಚಿನ್ನದಾಭರಣಗಳನ್ನಿಟ್ಟು ನೋಡಿ ಮುದ ಪಡುವ ಜನಗಳ ಬಾಯಲ್ಲೀಗ ಬರಲಾರಂಭಿಸಿತು ದೇಶಸೇವೆಯ ಕುರಿತಾದ ಉದ್ದುದ್ದ ಉಪನ್ಯಾಸವು.

'ಜಗದ್ ವೃಕ್ಷದ ಬೇರಾದ ಭಗವಂತನನ್ನು ಬಂಗಾರದ ರಥದಲ್ಲಿ ಕುಳ್ಳಿರಿಸಬೇಕು. ಅವನ ಕೃಪೆ ಈ ಜಗದ ಮೇಲೆ ನಿರಂತರವಾಗಿರಬೇಕು' ಎಂದು ಶ್ರೀವಿದ್ಯಾಮಾನ್ಯ ತೀರ್ಥರ ಧ್ಯೇಯ. ಅದು ಸಿದ್ಧಿಸುವವರೆಗೆ ಬಿಡರು ಆರಂಭಿಸಿದ ಆ ಕಾರ್ಯ. ಎಪ್ಪತ್ತನಾಲ್ಕಾದರೇನು ಅವರ ಪ್ರಾಯ ಅವರಲ್ಲಿತ್ತು ಇಪ್ಪತ್ತನಾಲ್ಕರ ಯುವಕರಲ್ಲೂ ಇರದ ಆತ್ಮಸ್ಥೈರ್ಯ. ಅದಕ್ಕೆ ಕಾರಣ ಅವರ ಪಾಠಪ್ರವಚನಗಳ ನೈರಂತರ್ಯ ಹಾಗೂ ನೈಷ್ಠಿಕ ಬ್ರಹ್ಮಚರ್ಯ. ಆದ್ದರಿಂದಲೇ ಅವರದು, ಎಲ್ಲವೂ ಸುವರ್ಣಮಯ ಕಾರ್ಯ.

ಒಂದೆಡೆ ಬುದ್ಧಿಗೇಡಿಗಳ ಬೊಗಳೆಗಳ ಉಪಟಳ. ಮತ್ತೊಂದೆಡೆ ಅದಕ್ಕೆ ಪೂರಕವಾಗಿದ್ದ ಪರಮತೀಯರ ಜಗಳ. ಇದರಿಂದ ಶ್ರೀಪಾದರ ಶಿಷ್ಯರ ಮನದೊಳಗೆ ಕಳವಳ. ಇಷ್ಟಾದರೂ ಶ್ರೀಪಾದರಿಗಿದ್ದ ತಾಳ್ಮೆ ಬಹಳ. ಏಕೆಂದರೆ 'ಖಂಡಿತವಾಗಿಯೂ ರಕ್ಷಿಸುವವನು ಆ ಗೋವಳ.' ಇದು ಶ್ರೀಪಾದರ ಮನದಂತರಾಳ. ಪತ್ರಿಕೆಗಳಲ್ಲಿ ಶ್ರೀಗಳವರು ನೀಡುತ್ತಿದ್ದ ಅದ್ವೈತ ಖಂಡನಾತ್ಮಕ ಹೇಳಿಕೆಗಳಿಂದ ಮಾಧ್ವ ಜನತೆಗೆ ಸಂತೋಷ. ಆದರೆ ಪರಮತಾನುಯಾಯಿಗಳಲ್ಲಿ ಆಗ್ರಹದ ರೋಷ. ಜೊತೆಯಲ್ಲಿ ರಥದ ಕುರಿತಾಗಿ ವಿಚಾರ ವಾದಿಗಳುಂಟು ಮಾಡಿದ ಕ್ಲೇಶ. ಒಟ್ಟಿನಲ್ಲಿ ಗೊಂದಲಮಯ ವಾತಾವರಣ. ಆದರೂ ಶ್ರೀಪಾದರ ಮನಸ್ಸಿನಿಂದ ಸರಿಯದು ಸ್ವರ್ಣರಥನಿರ್ಮಾಣ. ಶ್ರೀವಿದ್ಯಾಮಾನ್ಯ ತೀರ್ಥಶ್ರೀಪಾದರಿಂದಲೇ ಹೊನ್ನ ತೇರನ್ನೇರಬೇಕೆಂದು ಪಾರ್ಥಸಾರಥಿಯ ಮನದಾಶಾ. ಅದಕ್ಕೆ ಅನುಗುಣವಾಗಿ ಕಾರ್ಯರೂಪದಲ್ಲಿ ಬಂತು ಶ್ರೀಪಾದರ ಆದೇಶ.

ಶ್ರೀಕೃಷ್ಣನ ಸುವರ್ಣರಥದ ನಿರ್ಮಾಣಕ್ಕಾಗಿ ಕುಶಲ

ಶಿಲ್ಪಿಗಳನ್ನು ವಿಚಾರಿಸಲಾಯಿತು. ಅದಕ್ಕಾಗಿ ತಮಿಳುನಾಡಿನ ಕರಕುಶಲ ಕೈಗಾರಿಕಾ ಅಭಿವೃದ್ಧಿ ನಿಗಮದ ಕಾರ್ಯಕರ್ತರನ್ನು ಸಂಪರ್ಕಿಸಲಾಯಿತು. ಅವರ ಮಾಹಿತಿಯ ಪ್ರಕಾರ ಮರದ ರಥ ನಿರ್ಮಾಣಮಾಡಿ ಅದಕ್ಕೆ ಬಂಗಾರದ ತಗಡನ್ನು ಹೊದಿಸುವುದು. ಅಥವಾ ತಾಮ್ರದಲ್ಲಿ ಕುಸುರಿ ಕೆಲಸವನ್ನು ಮಾಡಿ ತಾಮ್ರಕ್ಕೆ ಬಂಗಾರದ ದ್ರಾವಣವನ್ನು ಲೇಪಿಸುವುದು. ಅದಲ್ಲದಿದ್ದರೆ ತಾಮ್ರಕ್ಕೆ ಪಾದರಸದ ಸಹಾಯದಿಂದ ಚಿನ್ನದ ಹಾಳೆಗಳನ್ನು ಪದರವದರ್‌ವಾಗಿ ಅಂಟಿಸುವುದು. ಈ ಯಾವ ಪ್ರಕಾರದಲ್ಲೂ ರಥದ ವೆಚ್ಚ ಹೆಚ್ಚಾಗುವುದು. ಚಿನ್ನದ ತಗಡನ್ನೇ ಅಳವಡಿಸಿದರೇ 1.5 ಕೋಟಿಯಿಂದ 2 ಕೋಟಿ ರೂಪಾಯಿಯ ವೆಚ್ಚವಾಗಬಹುದು. ಅಲ್ಲದೇ ಕದಿಯುವದಕ್ಕೆ ಅವಕಾಶವೂ ಹೆಚ್ಚು ಅದಕ್ಕಾಗಿ ರಕ್ಷಣೆಯ ಜವಾಬ್ದಾರಿಯೂ ಹೆಚ್ಚು. ಬಂಗಾರದ ದ್ರಾವಣವನ್ನು ಲೆಪಿಸಿದರೆ 50 ಲಕ್ಷರೂಪಾಯಿಗಳೇ ಸಾಕು. ರಕ್ಷಣೆಯ ಭಾರವೂ ಕಡಿಮೆ. ಇನ್ನು ಮೂರನೆಯ ವಿಧಾನದಲ್ಲಿ 1 ಕೋಟಿ ಖರ್ಚು ಅನಿವಾರ್ಯವಾದೀತು. ಈ ಮೂರರಲ್ಲಿ ಯಾವುದನ್ನು ಅನುಸರಿಸಬೇಕು ಎಂಬುದೇ ಸಮಸ್ಯೆಯಾಗಿತ್ತು. ಆದರೆ ಶ್ರೀವಿದ್ಯಾಮಾನ್ಯತೀರ್ಥರು ಶ್ರೀಕೃಷ್ಣನ ಮುಂಭಾಗದಲ್ಲಿ ಚೀಟಿಗಳನ್ನು ಹಾಕಿ ನಿರ್ಣಯವನ್ನು ಕೈಗೊಂಡರು. ಚಿನ್ನದ ಹಾಳೆಗಳನ್ನೇ ತಾಮ್ರದ ಕುಸುರಿ ಕೆಲಸದ ಮೇಲೆ ಹೊದಿಸಬೇಕೆಂದು ಶ್ರೀಕೃಷ್ಣನ ನಿರ್ಣಯವಾಗಿತ್ತು. ಕೇವಲ ಬಂಗಾರದ ದ್ರಾವಣವನ್ನು ಲೇಪಿಸಿದರೆ 'ರೋಲ್ಡ್ ಗೋಲ್ಡ್' ರಥವನ್ನು ನಿರ್ಮಿಸಿ ಶ್ರೀಕೃಷ್ಣನಿಗೆ ಹರಕೆಸಂದಾಯ ಮಾಡಿದರೆಂಬ ಅಪವಾದ ಈ ಮಹಾಯತಿಗೆ ಬಂದೀತು ಎಂಬ ಭಾವನೆಯಿಂದ ಮತ್ತು ಖರ್ಚಿನ ಹಾಗೂ ರಕ್ಷಣೆಯ ಭಾರವೂ ಈ ಮಹಾಯತಿಗೆ ಆಗಬಾರದು ಎಂಬ ಭಾವನೆಯಿಂದಲೂ ಆ ಯದುಕುಲ ಲಲಾಮ ತನ್ನ ನಿರ್ಣಯವನ್ನು ಸೂಚಿಸಿದನು. ರಥದ ವೆಚ್ಚವನ್ನು ನಿರ್ಣಯಿಸಬೇಕಾದರೆ ರಥದ ಗಾತ್ರ ವಿನ್ಯಾಸಗಳ ನಿಶ್ಚಯವೂ ಆಗಬೇಕಿತ್ತು. ಶ್ರೀಕೃಷ್ಣಮಠದ ಒಳಗಿನ ಪೌಳಿಯಲ್ಲಿ ರಥವೆಳೆಯುವುದಾದರೆ ರಥದ ಎತ್ತರ ಸುಮಾರು 8 ಅಡಿಸಾಕು ಇದರಿಂದ ಖರ್ಚು ಕಡಿಮೆ ರಕ್ಷಣೆಯೂ ಸುಲಭ. ರಥಬೀದಿಯಲ್ಲಿ ರಥವನ್ನು ಎಳೆಯುವುದಾದರೆ ಬೃಹದ್ರಥವನ್ನು ನಿರ್ಮಿಸ ಬೇಕಾದೀತು. ಅದರ ವೆಚ್ಚ ರಕ್ಷಣೆ ಎಲ್ಲವೂ ಅಧಿಕ. ಈ ಸಮಸ್ಯೆಯಿಂದ ಮಠದ ಪರಿವಾರ ಹಾಗೂ ಶ್ರೀಪಾದರ ಶಿಷ್ಯವರ್ಗದಲ್ಲಿ ಒಂದು ನಿಶ್ಚಯಮೂಡಿತ್ತು ಅದು ಶ್ರೀಕೃಷ್ಣಮಠದ ಒಳ ಪೌಳಿಯಲ್ಲಿ ಎಳೆಯಬಹುದಾದ ರಥವಾಗಿತ್ತು. ಆದರೆ ಶ್ರೀಪಾದರ ಮನಸ್ಸಿಗೆ ಹಿಡಿಸದಾಗಿತ್ತು. ಅದಕ್ಕಾಗಿ ಅವರು ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯವನ್ನು ಪ್ರಶ್ನಿಸಿದರು. 'ಶ್ರೀಕೃಷ್ಣನಿಗೆ ಅರ್ಪಿಸಬೇಕಾದ ರಥ ಸಣ್ಣ ಪ್ರಮಾಣದಲ್ಲಿರಬೇಕೆ? ಅಥವಾ ಬೃಹತ್ ಪ್ರಮಾಣದಲ್ಲಿರಬೇಕೆ?' ಎಂದು ಪ್ರಶ್ನಿಸಿದರು. ಪ್ರಶ್ನೆಗೆ ಉತ್ತರವಾಗಿ ''ಕಂಸ ನಡೆಸಿದ ದೇವಕೀ ವಸುದೇವರ ಶೋಭಾಯಾತ್ರೆಯ ಸನ್ನಿವೇಶ ಬಂದಿತು. ಶ್ರೀಪಾದರ ಮನಸ್ಸಿನಲ್ಲಿ ಗೆಲುವು ಮೂಡಿತು. ಏಕೆಂದರೆ ಬೀದಿಯಲ್ಲಿ ಚಲಿಸುವ ಬೃಹದ್ರಥವೇ ಶ್ರೀಕೃಷ್ಣನಿಗೆ ಅರ್ಪಣೀಯ ವಾಗಬೇಕು ಎಂಬುದೇ ಶ್ರೀಮದಾಚಾರ್ಯರ ಅಭಿಮತವಾಗಿತ್ತು. ಅದೇ ಶ್ರೀವಿದ್ಯಾಮಾನ್ಯತೀರ್ಥರ ಹೆಬ್ಬಯಕೆಯೂ ಆಗಿತ್ತು.

ಈ ರೀತಿ ಶ್ರೀಕೃಷ್ಣ ಶ್ರೀಮದಾಚಾರ್ಯರ ಪ್ರೇರಣೆ ಯಂತೆ ಸುಮಾರು 14 ಅಡಿ ಎತ್ತರದ ರಥವನ್ನು

ನಿರ್ಮಿಸುವುದು ಅದರ ಮೇಲೆ ತಾಮ್ರದ ಕುಸುರಿಯ ಮುಚ್ಚಿಗೆ ಅದಕ್ಕೆ ಚಿನ್ನದ ಹಾಳೆಗಳ ಹೊದಿಕೆ. ಹೀಗೆ ಸುವರ್ಣರಥವನ್ನು ನಿರ್ಮಿಸುವುದೆಂದು ತೀರ್ಮಾನಿಸಿದರು. ಈ ನಿರ್ಮಾಣದ ಅಂದಾಜು ವೆಚ್ಚ ಸುಮಾರು 1 ಕೋಟಿ ರೂಪಾಯಿಗಳು.

ಸುವರ್ಣ ರಥದ ನಿರ್ಮಾಣದ ಮೊದಲ ಹಂತ ರಥದ ರೂಪ ವಿನ್ಯಾಸದ ಚಿತ್ರಣ. ಆ ಕೆಲಸವನ್ನು ಖ್ಯಾತ ಕಲಾವಿದ ಶ್ರೀ ಕೆ. ಡಿಗಾರ್ ಅವರಿಗೆ ನೀಡಲಾಯಿತು. ಅವರು ಶ್ರೀಪಾದರ ಮನಸ್ಸಿನಲ್ಲಿ ಕಲ್ಪಿತವಾದ ಸೊಬಗಿನ ರಥದ ರೇಖಾಚಿತ್ರವನ್ನು ಬರೆದರು. ಶ್ರೀಪಾದರಿಗೆ ನೀಡಿದರು. ಈ ಚಿತ್ರವೇ ದೇಣಿಗೆಯ ಕರಪತ್ರಗಳಲ್ಲಿ ಮುದ್ರಿತವಾಯಿತು. ಭಕ್ತಕೋಟಿಯ ಕರಗಳನ್ನು ಸೇರಿತು ಕಾಣಿಕೆ ಬರಲಾರಂಭಿಸಿತು. ಕೆಲವು ಭಕ್ತರು ಬಂಗಾರವನ್ನೇ ನೀಡಿ ಧನ್ಯತೆಯನ್ನು ಹೊಂದುತ್ತಿದ್ದರು. ಕಾಣಿಕೆಯನ್ನು ಹಣದ ರೂಪದಲ್ಲಾಗಲಿ ಅಥವಾ ಚಿನ್ನದ ರೂಪದಲ್ಲಾಗಲಿ ನೀಡಿದ ಭಕ್ತರು ತಪ್ಪದೆ ರಶೀದಿಯನ್ನು ಪಡೆಯುತ್ತಿದ್ದರು. ಎಂದೂ ಹಣವನ್ನು ಕಣ್ಣೆತ್ತಿನೋಡದ, ಮುಟ್ಟದ ಶ್ರೀವಿದ್ಯಾಮಾನ್ಯತೀರ್ಥರು ಶ್ರೀಕೃಷ್ಣನ ಸ್ವರ್ಣರಥಕ್ಕಾಗಿ ಬರುವ ಹಣವನ್ನು ತಮ್ಮ ಕಂಗಳಲ್ಲೇ, ಕರಗಳಲ್ಲೇ ಸ್ವೀಕರಿಸುತ್ತಿದ್ದರು.

1986ರ ಏಪ್ರಿಲ್ ತಿಂಗಳಿನಲ್ಲಿ ತಮಿಳುನಾಡಿನ ''ಪೂಂಪುಹಾರ್ ಕರಕುಶಲ ಕೈಗಾರಿಕಾ ನಿಗಮ' ಎಂಬ ಸಂಸ್ಥೆಗೆ ಈ ಸುವರ್ಣರಥದ ನಿರ್ಮಾಣ ಕಾರ್ಯವನ್ನು ವಹಿಸಿ ಕೊಡಲಾಯಿತು. ಶ್ರೀರಾಮನವಮಿ ದಿನದ ಸುಮೂಹೂರ್ತದಲ್ಲಿ ರಥದ ಮರದ ಕೆಲಸಕ್ಕೆ ಮುಹೂರ್ತಮಾಡಿದರು. ಏಪ್ರಿಲ್ ಜೂನ್ ತಿಂಗಳಲ್ಲಿ ಶ್ರೀರತ್ನಸ್ವಾಮಿಯವರ ನೇತೃತ್ವದಲ್ಲಿ 12 ಜನ ಕಾರ್ಯಕರ್ತರು ಮರದ ಕೆಲಸ ಮಾಡಲು ಉಡುಪಿಗೆ ಬಂದರು. ರಥದ ಕುಸುರಿ ಕೆಲಸಗಳೆಲ್ಲವೂ ತಾಮ್ರದಲ್ಲಿಯೇ ಮಾಡಲಿರುವುದರಿಂದ ಮರದ ಕೆಲಸ ಸುಗಮವಾಗಿ ಸಾಗಿತು. ರಥದ ಸ್ಕೆಲಿಟನ್‌ಮಾತ್ರ ರಚಿಸಬೇಕಿದ್ದರೂ ಅತ್ಯಂತ ಶ್ರದ್ಧೆಯಿಂದ ಕೆಲಸವನ್ನು ಮಾಡಿ ರಥವನ್ನು ನಿರ್ಮಿಸಿದರು. ರಥದ ಭಾಗಗಳು ಒಂದರ ನಂತರ ಒಂದರಂತೆ ಸಿದ್ಧಗೊಂಡವು. 4 ಚಕ್ರಗಳು, ವ್ಯಾಘ್ರಮುಖ, ಚೌಕಪಟ್ಟಿ, ವೃತ್ತಗಳು, ಚಿಕ್ಕ ಪದ್ಮದಳಗಳು, ಕಂಠವೃತ್ತ, ದೊಡ್ಡ ಪದ್ಮದಳಗಳು ಹೂವಿನ ತೋರಣ, ಕಂಬಗಳು ಅವುಗಳ ಮೇಲೆ ಇಳಿಮಾಡು, ಅದರ ಮೇಲೆ ಗೋಪುರ ಹಾಗೂ ಶ್ರೀಕೃಷ್ಣನು ಕುಳಿತುಕೊಳ್ಳುವ ಸಿಂಹಾಸನ ಹೀಗೆ ಎಲ್ಲವೂ ಸಿದ್ಧವಾದವು.

ಈ ರಥಕ್ಕೆ ಅಗತ್ಯವಾದ ತೇಗದ ಮರವನ್ನು ಕರ್ನಾಟಕ ಘನಸರ್ಕಾರವು ಉಚಿತವಾಗಿ ನೀಡಿತು.ಸುವರ್ಣ ರಥದ ನಿರ್ಮಾಣದ ಮೂರನೆಯ ಹಂತ ತಾಮ್ರದ ಕೆಲಸ. 1987ರ ಜನವರಿಯಲ್ಲಿ ಶ್ರೀ ಕುಮಾರಮಂಗಳಂ ಅವರ ಮುಂದಾಳು ತನದಲ್ಲಿ 8ಜನರು ತಾಮ್ರದ ಕೆಲಸವನ್ನು ಆರಂಭಿಸಿದರು. ರಥದ ಚಕ್ರದಿಂದ ಹಿಡಿದು ರಥದ ಛತ್ರದವರೆಗೂ ಎಲ್ಲ ಭಾಗಗಳನ್ನು ತಾಮ್ರದಿಂದ ಮುಚ್ಚಬೇಕಿತ್ತು. ಮುಚ್ಚುವ ತಾಮ್ರದಲ್ಲಿ ನವಿರಾದ ಕುಸುರಿ ಕೆಲಸಗಳನ್ನು ಮಾಡಬೇಕಿತ್ತು. ಆ ಕೆಲಸಕ್ಕಾಗಿ ಬಹಳಷ್ಟು ತಾಮ್ರಬೇಕಿತ್ತು. ಆ ತಾಮ್ರವೂ ಮುಂಬಯಿಯ ಪ್ರಸಿದ್ಧ ಉದ್ಯಮಿಗಳಾದ, ಶ್ರೀಪಾದರ ವಿಶೇಷ ಭಕ್ತರಾದ ಶ್ರೀ ಕೆ. ಯಾದವಾಚಾರ್ಯರಿಂದ ಬಂದಿತ್ತು. ಅದೂ ಅವರ ಸೇವೆಯಾಗಿತ್ತು. ತಾಮ್ರದ ಕೆಲಸ ಭರದಿಂದ ಸಾಗಿತು.

ಎದ್ದು ಕಾಣುವ ವ್ಯಾಘ್ರ ಮುಖಗಳು, ಮಹಾಭಾರತ ರಾಮಾಯಣಗಳ ಸನ್ನಿವೇಶಗಳನ್ನು ಪ್ರತಿಬಿಂಬಿಸುವ ಚಿತ್ರದ ತಗಡುಗಳು, ಅಲಂಕಾರದ ರನಗುಂಡುಗಳು. ಓಲಾಡುವ ಅಶ್ವತ್ಥದ ಎಲಗಳೂ, ಶ್ರೀಕೃಷ್ಣನನ್ನು ಕುಳ್ಳಿರಿಸುವ ವ್ಯಾಘ್ರಮುಖದ ಪ್ರಭಾವಳಿ ಅದರ ಮೇಲ್ಭಾವಣಿಯಲ್ಲಿ ನೇವಂತಿಗೆಯ ಹೂ, ಆರು ಕಂಬಗಳಿಗೆ ತಿರುಪಿದ ಬಾಳೆದಂಡಿನ ವಿನ್ಯಾಸ, ಅವುಗಳ ಮೇಲೆ ನಿಂತಿರುವ ಇಳಿಮಾಡು, ಅದರ ಮೇಲಿನ ಗೋಪುರದ ಕೆಳಗೆ, ಕಂಠಭಾಗದ ತಗಡಿನಲ್ಲಿ ಉಡುಪಿ ಅಷ್ಟಮಠಗಳ ಪಟ್ಟದ ದೇವರುಗಳ ಚಿತ್ರಗಳೂ, ಸುಂದರವಾದ 3 ಅಡಿ ಎತ್ತರದ ಛತ್ರ, ಅದರ ಮೇಲೆ ಬಾಳೆಯ ಹೂ, ಛತ್ರದ ವೃತ್ತದಲ್ಲಿ ನೇತಾಡುವ ಅಶ್ವತ್ಥದ ಎಲೆಗಳೂ, ಅಲಂಕಾರದ 6 ಕನ್ನಡಿ ಹೂಗಳೂ, ಎರಡು ಪತಾಕೆಗಳೂ ಹೀಗೆ ರಥದ ಬಿಡಿ ಭಾಗಗಳು ಒಂದೊಂದಾಗಿ ಸಿದ್ಧಗೊಂಡವು.

ತಾಮ್ರದ ತಗಡುಗಳ ಮೇಲೆ ಬಂಗಾರದ ಹಾಳೆಗಳನ್ನು ಅಂಟಿಸುವ ಮೊದಲು ತಾಮ್ರದ ಹೊದಿಕೆಗಳು ಸ್ವಚ್ಛವಾಗಬೇಕು. ಅದಕ್ಕಾಗಿ ಎರಡು ಯಂತ್ರಗಳನ್ನು ಜೋಡಿಸಬೇಕು. ಬಂಗಾರದ ಹಾಳೆಗಳು ಆಗಬೇಕಾದರೆ ಬಂಗಾರದ ಸಣ್ಣ ಸಣ್ಣ ತುಣುಕುಗಳನ್ನು ಒಂಟೆಗಳ ಚರ್ಮಗಳ ಹಾಳೆಗಳುಳ್ಳ ಚೀಲದಲ್ಲಿಟ್ಟು ಬಡಿಯಬೇಕು. ಇಂತಹ ಕೆಲಸಮಾಡುವ ಜನರು ಕುಳಿತು ಬಡಿಯುವುದಕ್ಕಾಗಿ ಒಂದು ಶಾಲೆ ನಿರ್ಮಾಣವಾಗಬೇಕು. ಬಂಗಾರದ ಗಟ್ಟಿಯನ್ನು ತೆಳ್ಳಗಿನ ಪಟ್ಟಿಯನ್ನಾಗಿಸಿ ರಿಬ್ಬನ್‌ಗಳನ್ನಾಗಿಸುವ ಯಂತ್ರವನ್ನು ಸ್ಥಾಪಿಸಬೇಕು. ಬಂಗಾರದ ಹಾಳೆಗಳನ್ನು ತಾಮ್ರದ ತಗಡುಗಳ ಮೇಲೆ ಪಾದರಸದ ಮೂಲಕ ಅಂಟಿಸಲು ಮತ್ತು ಅವುಗಳನ್ನು ಕಾಯಿಸುವದಕ್ಕಾಗಿ ಸ್ಥಳ ಆಗಬೇಕು. ಬೆಂಕಿಯಲ್ಲಿ ಕಾಯಿಸಿದ ಆ ತಗಡುಗಳನ್ನು ತಿಕ್ಕಿ ತಿಕ್ಕಿ ಹೊಳವು ಬರುವಂತೆ ಮಾಡಲು ಒಂದು ಸ್ಥಳ ಬೇಕು. ಹೀಗೆ ಒಂದೇ, ಎರಡೇ ಎಲ್ಲ ಸಿದ್ಧತೆಗಳೂ ಆದವು.

1987 ರ ಮೇ ತಿಂಗಳ ಕೊನೆಯ ವಾರದಲ್ಲಿ ಶ್ರೀ ಆರ್. ಪಿಚ್ಚೈ ಹಾಗೂ 24 ಜನರು ಬಂಗಾರದ ಕೆಲಸವನ್ನು ಆರಂಭಿಸಿದರು. ಶ್ರೀಪಾದರಿಗೆ ಬಂದ ಚಿನ್ನವು ಆಭರಣರೂಪದಲ್ಲಿದ್ದುದರಿಂದ ಅದೆಲ್ಲವನ್ನೂ ಪುತ್ಥಳಿ ಬಂಗಾರವನ್ನಾಗಿ ಮಾರ್ಪಡಿಸಲಾಯಿತು. ಬಂಗಾರದ ಗಟ್ಟಿಗಳನ್ನು ಯಂತ್ರದ ಮೂಲಕ ಉದ್ದುದ್ದದ ಪಟ್ಟಿಗಳನ್ನಾಗಿಸಿ ನಂತರ ಅತಿ ತೆಳ್ಳಗಿನ ರಿಬ್ಬನ್ ಗಳನ್ನಾಗಿ ಮಾಡಲಾಯಿತು. ಯಂತ್ರದ ಮೂಲಕ ಅರ್ಧ ಇಂಚು ಅಗಲದಷ್ಟು ತೆಳ್ಳಗಿನ ರಿಬ್ಬನ್‌ಗಳನ್ನಾಗಿಸಲು ಎಷ್ಟು ಸಾಧ್ಯವೋ ಅಷ್ಟು ತೆಳ್ಳಗೆ ಮಾಡಲಾಯಿತು. ಆ ರಿಬ್ಬನ್‌ಗಳನ್ನು 35 ಗ್ರಾಂ ತೂಕದ ಪ್ರತ್ಯೇಕ ಕಟ್ಟುಗಳನ್ನಾಗಿ ಮಾಡಿ ಆ ಕಟ್ಟುಗಳನ್ನು ಗುದ್ದಿ ಉದ್ದುದ್ದ ತೆಳ್ಳಗಿನ ಹಾಳೆಗಳನ್ನು ಮಾಡುವ ಕುಶಲ ಕರ್ಮಿಗಳಿಗೆ ನೀಡಲಾಯಿತು.

ಈ 35 ಗ್ರಾಂ ಚಿನ್ನವನ್ನು ಅರ್ಧ ಇಂಚು ಚಚ್ಚೌಕದ 165 ತುಂಡುಗಳನ್ನಾಗಿ ಮಾಡಿ ಒಂಟೆಯ ಚರ್ಮದಿಂದ ರಚಿಸಿದ ಅತಿ ತೆಳ್ಳಗಿನ ಪುಟಗಳುಳ್ಳ ಪುಸ್ತಕದ ಒಳಗೆ ಎರಡೆರಡು ಹಾಳೆಗಳ ಮಧ್ಯದಲ್ಲಿ ಈ ಚೌಕದ ಬಂಗಾರದ ತುಂಡನ್ನು ಇಡಲಾಗುತ್ತಿತ್ತು. ಕುಶಲ ಕರ್ಮಿಗಳು ಆ ಬಂಗಾರವಿರುವ ಒಂಟೆಯ ಚೀಲಗಳನ್ನು ಎಡಬಿಡದೆ ಮೂರು ಘಂಟೆಗೆ ಕಡಿಮೆ ಇಲ್ಲದೆ ಸುತ್ತಿಯಿಂದ ಬಡೆಯುತ್ತಿದ್ದರು. ಈ ಹೊಡೆತದಿಂದ ಚರ್ಮದ ನಡುವಿನಲ್ಲಿ ಉಂಟಾದ ಶಾಕದಿಂದ ಅರ್ಧ ಇಂಚು ಉದ್ದಗಲದ ಬಂಗಾರದ

ತುಂಡು ನಾಲ್ಕು ಇಂಚಿನ ಹಾಳೆಯಾಗಿ ಪರಿಣಮಿಸುತ್ತಿತ್ತು. ಈ ಬಂಗಾರದ ಹಾಳೆಗಳನ್ನು ಟಿಶ್ಯೂ ಪೇಪರಿನ ಪುಸ್ತಕಗಳ ಮಧ್ಯದಲ್ಲಿ ಇಡಲಾಗುತ್ತಿತ್ತು. ಬಂಗಾರದ ಹಾಳೆಗಳನ್ನು ಇಡುವ ಮುಂಚೆಯೇ ಟಿಶ್ಯೂ ಪೇಪರಿನ ಪುಸ್ತಕದ ತೂಕವನ್ನು ನೋಡಲಾಗುತ್ತಿತ್ತು. ಬಂಗಾರವು ಇಟ್ಟ ನಂತರವೂ ನೋಡಲಾಗುತ್ತಿತ್ತು. ಬಂಗಾರವು ಅಸ್ತವ್ಯಸ್ತವಾಗದಂತೆ ಬಹು ಎಚ್ಚರಿಕೆಯನ್ನು ವಹಿಸಲಾಗಿತ್ತು.

8 ಜನರು ಬಂಗಾರದ ಹಾಳೆಗಳನ್ನು ಮಾಡುವ ಕೆಲಸದಲ್ಲಿ ನಿಯುಕ್ತರಾಗಿದ್ದರು. ಒಬ್ಬೊಬ್ಬರೂ ಒಂದೊಂದು ಬಾರಿ 35 ಗ್ರಾಂ ನಂತೆ ದಿನವೊಂದಕ್ಕೆ 165 ಗ್ರಾಂ ಬಂಗಾರವನ್ನು ಹಾಳೆಗಳನ್ನಾಗಿ ಮಾಡುತ್ತಿದ್ದರು. ಆದ್ದರಿಂದ ದಿನಕ್ಕೆ 840 ಗ್ರಾಂ ಬಂಗಾರವನ್ನು ಮಾತ್ರ ಹಾಳೆಗಳನ್ನಾಗಿ ಮಾಡಲು ಸಾಧ್ಯವಾಗುತ್ತಿತ್ತು. ಆರಂಭದ ಕೆಲವು ದಿನಗಳಲ್ಲಿ ನಿಧಾನದ ಪ್ರಗತಿ ಇದ್ದುದರಿಂದ ನಿಗದಿತ ಸಮಯದಲ್ಲಿ ಕೆಲಸ ಮುಗಿಯುವುದು ಕಷ್ಟವೆಂದೆನಿಸಿತು. ಅದಕ್ಕಾಗಿ ಒಮ್ಮೆಗೆ 50 ಗ್ರಾಂ ಚಿನ್ನದ ಹಾಳೆಗಳನ್ನು ಮಾಡುವ ಕುಶಲ ಕರ್ಮಿಗಳನ್ನು ಕರೆಯಿಸಲಾಯಿತು. ಕೆಲಸದ ವೇಗ ಅಧಿಕವಾಯಿತು. ಜೂನ್ ತಿಂಗಳ ಕೊನೆಯ ಭಾಗದಲ್ಲಿ 25 ಕೆಜಿ ಪುತ್ಥಳಿ ಬಂಗಾರವೂ ಹಾಳೆಗಳಾಗಿ ಟಿಶ್ಯೂ ಪೇಪರಿನ ಪುಸ್ತಕಗಳ ಒಳಗೆ ಸೇರಿತು. ಬಂಗಾರದ ರಥವನ್ನು ಯಾವಾಗ ಸೇರಿಯೇನು ಎಂದು ತವಕಿಸುತ್ತಾ ಕುಳಿತಿತ್ತು.

ತಾಮ್ರದ ತಗಡುಗಳನ್ನು ನೈಟ್ರಿಕ್ ಆ್ಯಸಿಡ್ ದ್ರಾವಣದಿಂದ ನೊರೆಕಾಯಿಗಳಿಂದ ಯಂತ್ರದಲ್ಲಿರುವ ಹಿತ್ತಾಳೆಯ ಬ್ರಷ್ ಗಳಿಂದ ತೊಳೆಯಲಾಯಿತು. ತೊಳೆದು ಶುಭ್ರವಾದ ತಾಮ್ರದ ತಗಡುಗಳಿಗೆ ಪಾದರಸದ ಸಹಾಯದಿಂದ ಬಂಗಾರದ ಹಾಳೆಗಳನ್ನು ಜೋಡಿಸಲಾಯಿತು. ಒಂದೊಂದು ತಾಮ್ರದ ತಗಡಿನ ಪ್ರತಿಯೊಂದು ಭಾಗಕ್ಕೂ ಹತ್ತು ಹಾಳೆಗಳಿಗೆ ಕಡಿಮೆಯಿಲ್ಲದೆ ಬಂಗಾರದ ಹಾಳೆಗಳನ್ನು ಅಂಟಿಸಲಾಯಿತು. ಬೆಳ್ಳಿಯ ಬಣ್ಣವನ್ನು ಹೊಂದಿದ ತಗಡುಗಳನ್ನು ಚೆನ್ನಾಗಿ ತಿಕ್ಕಿ ತೊಳೆದು ಉರಿಯುವ ಬೆಂಕಿಯಲ್ಲಿ ಸುಡಲಾಯಿತು. ಸುಟ್ಟಾಗ ಪಾದರಸವೆಲ್ಲ ಕರಗುತ್ತಿತ್ತು. ತಾಮ್ರಕ್ಕೆ ಚಿನ್ನವು ಚೆನ್ನಾಗಿ ಅಂಟಿಕೊಳ್ಳುತ್ತಿತ್ತು. ಬಂಗಾರದ ವರ್ಣವು ಕಂಗೊಳಿಸುತ್ತಿತ್ತು. ಹೀಗೆ ಚಕ್ರದಿಂದ ಛತ್ರದವರೆಗಿನ ರಥದ ಎಲ್ಲ ಭಾಗಗಳು ಬಂಗಾರತನವನ್ನು ಹೊಂದಿದವು.

ಬಂಗಾರದ ಹಾಳೆಗಳನ್ನು ಹೊಂದಿದ ತಗಡುಗಳಿಗೆ ಹೊಳಪು ಬರುವುದಕ್ಕಾಗಿ ಚೂಪಲ್ಲದ ಉಳಿಗಳಿಂದ ತಿಕ್ಕಲಾಗುತ್ತಿತ್ತು. ಈ ಕೆಲಸಕ್ಕೋಸ್ಕರವೇ 8 ಜನ ಪರಿಣಿತರು ನಿಯುಕ್ತರಾಗಿದ್ದರು. ಬಹಳ ಹೊತ್ತು ತಿಕ್ಕಿದಾಗ ಬಂಗಾರದ ಸೊಬಗು ಬಯಲಾಗುತ್ತಿತ್ತು.

ಹೀಗೆ ಎಲ್ಲಿ ನೋಡಿದರಲ್ಲಿ ಶ್ರೀಕೃಷ್ಣನ ರಥದ ನಿರ್ಮಾಣದ ಕಾರ್ಯ ವೈಖರಿ ಕಂಡು ಬರುತ್ತಿತ್ತು. ಶ್ರೀಕೃಷ್ಣ ಮಠದ ಬಡಗುಮಾಳಿಗೆ, ವಸಂತಮಹಲ್, ರಾಜಾಂಗಣಕ್ಕೆ ಹೋಗುವ ಮಾರ್ಗ, ರಾಜಾಂಗಣಗಳಲ್ಲಿ ಬಂಗಾರದ ರಥದ ಬೇರೆ ಬೇರೆ ಕಾರ್ಯಗಳೇ ನಡೆಯುತ್ತಿದ್ದವು. ಶ್ರೀಕೃಷ್ಣನ ದರ್ಶನಕ್ಕಾಗಿ ಬಂದ ಭಕ್ತರನ್ನೆಲ್ಲ ಈ ಕಾರ್ಯಗಳು ಆಕರ್ಷಿಸುತ್ತಿದ್ದವು. ಗುಂಪುಗುಂಪಾಗಿ ನಿಂತು ಅಪರೂಪದ ಮಾದರಿಯ ಈ ಕಾರ್ಯವನ್ನು ನೋಡಿ ಭಕ್ತರ ಕಂಗಳು ಸಂತಸ ಪಡುತ್ತಿದ್ದವು. ಊರಿನವರು ಪರ ಊರಿನವರು ಎಲ್ಲರೂ ನೋಡಿದರು. ನೋಡಿ ಸಂತಸ ಪಟ್ಟರು. ಶ್ರೀಪಾದರಿಗೆ ತಮ್ಮ ಕಾಣಿಕೆಯನ್ನು

ಸಮರ್ಪಿಸಿದರು. ''ಸುವರ್ಣರಥ'' ಎಂಬ ಕಾರ್ಯ ಅಸಾಧ್ಯ ಎಂದು ನುಡಿದವರೇ ಈಗ ಅದಕ್ಕೆ ಕಾಣಿಕೆಯನ್ನು ನೀಡಲಾರಂಭಿಸಿದರು. ಅವರಿಗೆ ಈ ಶ್ರೀಕೃಷ್ಣ ಮಠದ ಆಸುಪಾಸಿನಲ್ಲಿ ಕೇಳಿ ಬರುತ್ತಿದ್ದ ರಥ ನಿರ್ಮಾಣದ ಶಬ್ದಗಳೇ ಸಾಧ್ಯತೆಯನ್ನು ಸ್ಪಷ್ಟಪಡಿಸಿದವು.

ಶ್ರೀಕೃಷ್ಣಮಠದ ಕೆಲವು ಕಡೆ ಬಡಿಯುವ 'ಪಟ್ ಪಟ್' ಎಂಬ ಶಬ್ದವಾದರೆ ಇನ್ನೊಂದು ಕಡೆ ಯಂತ್ರದ ಚಕ್ರ ತಿರುಗುವ 'ಕಿರ್'ಎಂಬ ಶಬ್ದ. ಮತ್ತೊಂದು ಕಡೆ ಬಂಗಾರದ ಪುಸ್ತಕಗಳನ್ನು ತೂಕಮಾಡುವ ತಕ್ಕಡಿ ಹಾಗೂ ತೂಕದ ಕಲ್ಲುಗಳ ಶಬ್ದ. ಮತ್ತೊಂದು ಕಡೆಗೆ ತಗಡುಗಳನ್ನು ಸುಡುವ ಅಗ್ನಿಯ ಕಿಡಿಗಳ 'ಚಟ್ ಚಟ್'ಶಬ್ದ. ಪಾದರಸ ಕರಗಿಹೋಗುವಾಗ ಅದರ ವಾಯುರೂಪದ ಒಂದು ವಿಚಿತ್ರವಾದ ವಾಸನೆ. ಮತ್ತೊಂದು ಕಡೆ ಪಾದರಸ ಕರಗಿಸಿದನಂತರ ತಿಕ್ಕಿ ಹೊಳಪು ಬರುವುದಕ್ಕಾಗಿ ತೀಡುವ ಶಬ್ದ. ಬಡಗುಮಾಳಿಗೆಯ ಮಹಡಿಗಳಲ್ಲಿ ಕಿರಿಯ ಶ್ರೀಪಾದರೆಲ್ಲರು ಹಾಗೂ ಹಿರಿಯ ಯತಿ ಶ್ರೀವಿದ್ಯಾಮಾನ್ಯತೀರ್ಥರು ಪಾಠ ಹೇಳುವ ಶಬ್ದ. ದೇವರ ಗುಡಿಯಲ್ಲಿ ಘಂಟೆಗಳ ಶಬ್ದ. ಪುರಾಣ ಪಾರಾಯಣಗಳ ಶಬ್ದ. ಭಕ್ತರ ಭಜನೆಯ ಶಬ್ದ. ಅಂತೂ ಶ್ರೀಕೃಷ್ಣಮಠದಲ್ಲಿ ಎಲ್ಲಿಹೋದರೂ ಶಬ್ದವೇ ಶಬ್ದ. ಅನ್ನಬ್ರಹ್ಮನಾದ ಶ್ರೀಕೃಷ್ಣ ಶಬ್ದಬ್ರಹ್ಮನೂ ಆದಂತಿದ್ದ.

ಬಂಗಾರತನವನ್ನು ಪಡೆದ ತಗಡುಗಳು ಒಂದೊಂದಾಗಿ ರಥದ ಭಾಗಗಳನ್ನು ಮುಚ್ಚಿದವು. ಸ್ಥಿರವಾಗಿ ರಥದಲ್ಲಿ ಕುಳಿತವು. ಶ್ರೀಕೃಷ್ಣನ ರಥ ಯಾತ್ರೆಗೆ ಅಣಿಯಾದವು.

ಸುವರ್ಣರಥ ಸಮರ್ಪಣೆಯ ಮುಹೂರ್ತಕ್ಕೆ ಇನ್ನೂ ಹದಿನೈದು ದಿನಗಳಿದ್ದವು. ಆಗ ಪೂರ್ವಭಾವಿಯಾಗಿ ವ್ಯವಸ್ಥೆಗಳು ಆರಂಭಗೊಂಡವು. ಸುವ್ಯವಸ್ಥೆಯ ದೃಷ್ಟಿಯಿಂದ ಊರ ಹಿರಿಯರ ಶಿಷ್ಯರ ಸಮಾವೇಶವನ್ನು ಮಾಡಲಾಯಿತು. ಆ ಸಮಯದಲ್ಲಿ ಶ್ರೀಪಾದರು 'ರಥಬೀದಿಯ ದಕ್ಷಿಣಬೀದಿಯಲ್ಲಿರುವ ಪುತ್ತಿಗೆ ಮಠದಿಂದ ಪೇಜಾವರ ಮಠದ ವರೆಗೆ ದೊಡ್ಡದಾದ ಪೆಂಡಾಲನ್ನು ಹಾಕಬೇಕು. ಅದರ ಮೇಲೆ ಮಳೆಯ ನೀರು ಒಳಗೆ ಇಳಿಯದಂತೆ ತಾಡಪತ್ರಿಗಳನ್ನು ಹಾಕಬೇಕು. ಬೀದಿ ನೀರು ಸಭಾ ಮಂಟಪದ ಒಳಗೆ ಬರದಂತೆ ಸುತ್ತ ಅಡ್ಡ ನಾಲ್ಕು ಅಡಿಯ ಗೋಡೆಯನ್ನು ಕಟ್ಟಬೇಕು. ಪುತ್ತಿಗೆ ಮಠದ ಎದುರಿನಲ್ಲಿ ಪಶ್ಚಿಮಾಭಿಮುಖವಾಗಿ ಎಡಬಲಗಳಲ್ಲಿ ಎರಡು ವೇದಿಕೆಗಳನ್ನೂ ನಿರ್ಮಾಣ ಮಾಡಬೇಕು. ಅವುಗಳ ಮಧ್ಯದಲ್ಲಿಯೇ ರಥ ಬಂದು ನಿಲ್ಲಬೇಕು. ಆಗಲೇ ಸಭಾಕಾರ್ಯಕ್ರಮ ನಡೆಯಬೇಕು. ಕಾರ್ಯಕ್ರಮ ಮುಗಿದನಂತರ ಸುವರ್ಣರಥವೂ ಸಭಾಮಂಟಪದ ಮಧ್ಯದಲ್ಲಿಯೇ ಹಾಯ್ದು ಹೋಗಬೇಕು. ಅದಕ್ಕಾಗಿ ಸಭಾ ಮಂಟಪವು ಸುಮಾರು 30 ಅಡಿ ಎತ್ತರವಾಗಿ ರಬೇಕು' ಎಂದು ಹೇಳಿದರು. ಇವರ ಮಾತಿಗೆ ಜನರ ನಿಷೇಧ ಯಥಾಪ್ರಕಾರವಾಗಿತ್ತು. ಎಷ್ಟು ಖರ್ಚು? ಬೀದಿಗೆ ಇಷ್ಟು ಎತ್ತರದ ಚಪ್ಪರವನ್ನು ಹಾಕಲು ಸಾಧ್ಯವೇ? ಮಳೆಯ ನೀರು ಒಳಗೆ ಬಾರದೆ ಬಿಟ್ಟೀತೇ? ಎಂದೆಲ್ಲ ಅಸಂಭಾವನಾ ಪ್ರಶ್ನೆಗಳು ಪುಂಕಾನುಪುಂಕವಾಗಿ ಬಂದವು. ಹಿರಿಯ ಇಂಜಿನಿಯರುಗಳಿಂದ 'ಈ ಕಾರ್ಯ ಅಸಂಭಾವಿತ ಬೇಡ' ಎಂದು ಶ್ರೀಪಾದರ ಬಳಿ ಹೇಳಿಸಿದರು. ಆದರೆ ಈ ಮಹಾ ಇಂಜಿನಿಯರ್ ಕೇಳಲಿಲ್ಲ. ಶ್ರೀಪಾದರು ಅಚಲವಾಗಿದ್ದರು. ಬೇಡವೆಂದ ಇಂಜಿನೀಯರ್ ಗೇ ಆ ಕೆಲಸವನ್ನು ವಹಿಸಿಕೊಟ್ಟರು. ಚಪ್ಪರ ಹಾಕುವುದರ ಖರ್ಚು 50 ಸಾವಿರ ರೂಪಾಯಿಗಳು.

ಮರದ ರಥ ನಿರ್ಮಾಣವಾದಾಗ ರಥದ ಒಟ್ಟು ಎತ್ತರ 14 ಅಡಿ ದೇವರನ್ನಿಡುವ ಪ್ರಭಾವಳಿ ಇರುವ ಎತ್ತರ 6ಅಡಿ ಅದರಲ್ಲಿ ಶ್ರೀಕೃಷ್ಣನನ್ನು ಕುಳ್ಳಿರಿಸಿದರೆ ಉತ್ಸವವನ್ನು ಕಾಣಲು ಬಂದ ದೂರದ ಭಕುತನಿಗೆ ದೇವರು ನರಿಯಾಗಿ ಕಾಣಿಸರು. ಮತ್ತು ರಥವು ಎತ್ತರವಾದಷ್ಟೂ ಭವ್ಯತೆಯನ್ನು ಹೊಂದುವುದು ಎಂಬ ಎರಡು ಉದ್ದೇಶಗಳಿಂದ ಈ ಸುವರ್ಣರಥಕ್ಕೆ ಚಕ್ರಗಳಿಂದ ಕೂಡಿದ ವೇದಿಕೆಯೊಂದನ್ನು ನಿರ್ಮಿಸಲು ಶ್ರೀಗಳವರು ಬಯಸಿದರು. ಆ ವೇದಿಕೆಯನ್ನು ಕೋಟೇಶ್ವರದ ಶ್ರೀ ಲಕ್ಷ್ಮೀನಾರಾಯಣ ಆಚಾರ್ಯರು ಸರಾಗವಾಗಿ ಚಲಿಸುವ ಚಕ್ರಗಳನ್ನು ಹೊಂದಿದ ಮತ್ತು ವೇಗನಿರೋಧಕಗಳನ್ನು ಹೊಂದಿದ 10 ಅಡಿ ವಿಸ್ತೀರ್ಣದ ವೇದಿಕೆಯನ್ನು ನಿರ್ಮಿಸಿದರು. ಅದರ ಎತ್ತರ 3.5 ಅಡಿ. ಈ ವೇದಿಕೆಯ ಮೇಲೆ ಬಂಗಾರದ ರಥವನ್ನು ಸ್ಥಿರಗೊಳಿಸಲಾಯಿತು. ಆ ಮರದ ವೇದಿಕೆಗೆ ಬೆಳ್ಳಿಯ ಮುಚ್ಚಿಗೆ ಹಾಕಲು ಶ್ರೀಪಾದರು ಇಚ್ಛಿಸಿದರು. ಸುಮಾರು 70 ಕೆಜಿ ಬೆಳ್ಳಿಯ ತಗಡುಗಳಲ್ಲಿ ಶ್ರೀಕೃಷ್ಣನ ಲೀಲೆಗಳನ್ನು ಚಿತ್ರಿಸಲಾಯಿತು. ಆ ತಗಡುಗಳನ್ನು ವೇದಿಕೆಗೆ ಹೊದಿಸಲಾಯಿತು. ಅಲಂಕರಿಸಲಾಯಿತು.

ಸುವರ್ಣರಥದ ಚಲನೆಯ ಪರೀಕ್ಷೆಗಾಗಿ ಮತ್ತೂ ಉದ್ಘಾಟನೆಯ ಸಿದ್ಧತೆಗಾಗಿ ರಥವನ್ನು ರಾಜಾಂಗಣದಿಂದ ಶ್ರೀಕೃಷ್ಣ ಮಠದ ಮಹಾದ್ವಾರದವರೆಗೆ ಎಳೆದು ತರಲಾಯಿತು. ಆಗ ಸಮಯ ರಾತ್ರಿ ಘಂಟೆ ಹನ್ನೊಂದಾಗಿತ್ತು. ಜುಲೈ ತಿಂಗಳ 5ನೆಯ ದಿನಾಂಕ ಪ್ರವೇಶಿಸಲು ಒಂದೇ ಘಂಟೆ ಉಳಿದಿತ್ತು. ಮರುದಿನದ ಉದ್ಘಾಟನೆಗಾಗಿ ರಥದ ಶುದ್ಧಿಗಾಗಿ ಹೋಮಹವನಗಳನ್ನು ಮಾಡಬೇಕಿತ್ತು. ಅದಕ್ಕಾಗಿ ವಿಶೇಷ ತಂತ್ರಜ್ಞರ ಸಿದ್ಧತೆ ನಡೆದಿತ್ತು. ಅಲ್ಲಿಯವರೆಗೆ ಪೂಂ ಪುಹಾರ್ ಸಂಸ್ಥೆಯ ಕಾರ್ಯಕರ್ತರ ವಶದಲ್ಲಿದ್ದ ಸುವರ್ಣರಥ ಪುರೋಹಿತರ ಅಧೀನವಾಯಿತು. ವಾಸ್ತು ಹೋಮಾದಿಗಳು ರಕ್ಷಾಬಂಧನಾದಿಗಳು ಸಾಂಗವಾಗಿ ಜರುಗಿದವು. ಅವುಗಳೆಲ್ಲ ಮುಗಿಯುವ ಹೊತ್ತು ಮುಗಿಲಲ್ಲಿ ರವಿಕಿರಣ ಮೂಡಿತ್ತು.

ಅಂದು ಉಡುಪಿಯ ಇತಿಹಾಸದಲ್ಲಿ ಮಾತ್ರವಲ್ಲ ಸಮಗ್ರ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರ ಗಳಿಂದ ಬರೆದು ಇಡಬೇಕಾದ ಸುದಿನ. ಅದು 1987 ಜುಲೈ ತಿಂಗಳ ದಿನಾಂಕ 5. ಪ್ರಭವ ಸಂವತ್ಸರದ ಆಷಾಢ ಶುದ್ಧ ನವಮಿಯಂದು ಉಡುಪಿಯ ಮುದ್ದು ಕೃಷ್ಣನನ್ನು ಹೊನ್ನತೇರಿನಲ್ಲಿ ಕುಳ್ಳಿರಿಸಿ ಮೆರೆಯಿಸುವ ಶ್ರೀವಿದ್ಯಾಮಾನ್ಯತೀರ್ಥರ ಕನಸು ನನಸಾದ ದಿವಸವದು. ಅಡಿಯಿಂದ ಮುಡಿಯವರೆಗೂ ಸುವರ್ಣಾತ್ಮಕವಾದ ಸುಮಾರು ಹದಿನೇಳುವರೆ ಅಡಿ ಎತ್ತರದ ಬೃಹತ್ ಪ್ರಮಾಣದ ಭಾರತದ ಏಕಮಾತ್ರ ಸುವರ್ಣರಥ ಎಂಬ ಹೆಗ್ಗಳಿಕೆಯನ್ನು ಕರ್ನಾಟಕ ರಾಜ್ಯವು ಪಡೆದ ಸುದಿನವದು.

ಅಂದು ಉಡುಪಿ ಊರ ಹಾಗೂ ಪರಊರ ಭಕ್ತಜನ ಸಮೂಹದಿಂದ ತುಂಬಿತ್ತು. ಎಲ್ಲಿ ನೋಡಿದರೂ ಸಂಭ್ರಮದ ಸಡಗರವೇ ಕುಣಿದಾಡುತ್ತಿತ್ತು. ಮುಂಜಾವಿನ ಮಂಜಿನಲ್ಲಿ ಮಂಜುಳ ಧ್ವನಿಯೊಂದು ಮೊಳಗುತ್ತಿತ್ತು. ಇಡೀಯ ಪರಿಸರವನ್ನು ಸವಿಮಯವಾಗಿಸಿತು. ಆ ನಿನಾದ ಡಾ ॥ ಮುನಿರತ್ನಂ ಹಾಗೂ ಬಳಗದವರ ನಾದಸ್ವರ ವಾದನದ ಇಂಪಾಗಿತ್ತು. ಉಡುಪಿಯ ನಾಲ್ಕು ಬೀದಿಗಳಲ್ಲಿಯೂ ಮಧುರಸ್ವರವು ಕೇಳಿಸುವುದಕ್ಕಾಗಿ ವಿಶೇಷಧ್ವನಿವರ್ಧಕಗಳ ವ್ಯವಸ್ಥೆಯಿತ್ತು. ಬಡಗು ಬೀದಿಯ ಪುತ್ತಿಗೆ ಮಠದಿಂದ ಪೇಜಾವರ ಮಠದ ಮುಂಭಾಗ

ದವರೆಗೂ ಚಾಚಿಕೊಂಡಿರುವಂತೆ ವಿಶಾಲವಾಗಿ ನಿರ್ಮಿಸಲಾಗಿದ್ದ ಬೃಹತ್ ಪ್ರಮಾಣದ ಟಾರ್ಪಾಲಿನ್ ಛಾವಣಿಯ ಸಭಾಮಂದಿರ ಸಿದ್ಧವಾಗಿತ್ತು. ಸಭಾಮಂದಿರದ ಎಡಬಲ ಪಾರ್ಶ್ವಗಳಲ್ಲಿ ಸುಂದರ ಬೃಹತ್ ವೇದಿಕೆಗಳನ್ನು ನಿರ್ಮಿಸಲಾಗಿತ್ತು. ಈ ಸಭಾಮಂದಿರದ ಹೆಸರು 'ಸುವರ್ಣಮಂಟಪ' ಎಂದಾಗಿತ್ತು. ಈ ಸುವರ್ಣ ಮಂಟಪವೇ ರಥ ಸಮರ್ಪಣೆಯ ಸಮಾರಂಭದ ವೈಭವವನ್ನು ಎತ್ತಿ ಸಾರುತ್ತಿತ್ತು. ಶ್ರೀಕೃಷ್ಣಮಠದ ಮಹಾದ್ವಾರದಲ್ಲಿ ನಿಲ್ಲಿಸಲಾಗಿದ್ದ ಸುವರ್ಣರಥಕ್ಕೆ ವೇದಮೂರ್ತಿ ಶ್ರೀಹರಿಕೃಷ್ಣ ತಂತ್ರಿಗಳ ನೇತೃತ್ವದ ಪುರೋಹಿತ ಸಮೂಹವೂ ಶಾಸ್ತ್ರೋಕ್ತ ನವಗ್ರಹಾದಿ ಹೋಮಗಳನ್ನು ನಡೆಸುವುದರಲ್ಲಿ ಮಗ್ನವಾಗಿತ್ತು.

ಶ್ರೀಕೃಷ್ಣನಿಗೆ ಮಹಾಪೂಜೆಯನ್ನು ಸಲ್ಲಿಸಿದ ಶ್ರೀವಿದ್ಯಾಮಾನ್ಯತೀರ್ಥರು, ಉತ್ಸವ ಮೂರ್ತಿಯಲ್ಲಿ ಸನ್ನಿಹಿತನಾದ ಶ್ರೀಕೃಷ್ಣನನ್ನು ಸುವರ್ಣಪಲ್ಲಕ್ಕಿಯಲ್ಲಿ ಕುಳ್ಳಿರಿಸಿದರು. ಮಂಗಳವಾದ್ಯಗಳು ಮೊಳಗಿದವು. ವೇದಜ್ಞರ ವೇದಘೋಷ ಆರಂಭಗೊಂಡಿತು. ಅಷ್ಟು ಹೊತ್ತಿಗೆ ಸುವರ್ಣಥವು ಪುರೋಹಿತರಿಂದ ಸಂಸ್ಕಾರಗಳನ್ನು ಹೊಂದಿ ಶ್ರೀಕೃಷ್ಣನ ವಾಹನವಾಗುವ ಅರ್ಹತೆಯನ್ನು ಪಡೆದಿತ್ತು. ಶ್ರೀಕೃಷ್ಣ, ಭಕ್ತಾಗ್ರಣಿ ವಾಯುದೇವರೊಂದಿಗೆ ಹಾಗೂ ಪರ್ಯಾಯಶ್ರೀಪಾದರು ಹತ್ತಾರು ಶ್ರೀಪಾದರೊಂದಿಗೆ ಸುವರ್ಣರಥದ ಕಡೆಗೆ ಆಗಮಿಸಿದನು. ಆ ಸಮಯ ಪೂರ್ವಾಹ್ನದ ಹತ್ತು ಹದಿನೈದರ ಸುಮಹೂರ್ತ. ಶ್ರೀವಿದ್ಯಾಮಾನ್ಯತೀರ್ಥರ ಮನೋರಥದಲ್ಲಿದ್ದ ಉಡುಪಿಯ ಚೆಲುವ ಚೆನ್ನಿಗ ಅವರ ಸಹಾಯದಿಂದ ಚಿನ್ನದ ರಥವನ್ನು ಹತ್ತತೊಡಗಿದ. ದಟ್ಟವಾದ ಮೋಡಗಳು ತುಂಬಿದ ಮುಗಿಲಿನಿಂದ ನೀರು ಇಳಿಯಲಾರಂಭಿಸಿತು. ಎಷ್ಟು ನೀರು? ತುಂತುರು ಮಾತ್ರ. ಎಷ್ಟು ಹೊತ್ತು ಕ್ಷಣಮಾತ್ರ ಮತ್ತೆ ಆಕಾಶದಿಂದ ಇಳಿಯಲಿಲ್ಲ. ಆದರೆ ನೆರೆದವರ ನಯನಗಳಿಂದ ಧಾರಾಕಾರ ನೀರು ಇಳಿಯಿತು. ಶ್ರೀವಿದ್ಯಾಮಾನ್ಯ ತೀರ್ಥರು ತಮ್ಮ ಹೃದಯ ಮಂಟಪದಲ್ಲಿ ವಿರಾಜಿಸುವ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಅವನನ್ನು ಸುವರ್ಣರಥಕ್ಕೆ ಏರಿಸಿ ಸುವರ್ಣಸಿಂಹಾಸನದಲ್ಲಿ ಕುಳ್ಳಿರಿಸಿದರು. ಭಗವಂತನ ಪ್ರಿಯ ಪುತ್ರರಾದ ಶ್ರೀಮುಖ್ಯಪ್ರಾಣ ದೇವರನ್ನು ಶ್ರೀಕೃಷ್ಣನ ಬಲಬದಿಯ ಆಸನದಲ್ಲಿ ಕುಳ್ಳಿರಿಸಿದರು. ಆಗ ರಥದ ಸುತ್ತಮುತ್ತಕಿಕ್ಕಿರಿದು ನೆರೆದಿದ್ದ ಭಕ್ತನಾಗರದಿಂದ ಜಯಕಾರ 'ಗೋವಿಂದಾ ಗೋವಿಂದಾ' ಎಂಬ ಘೋಷಣೆಗಳು ಹಾಗೂ ಆನಂದದ ಕರತಾಡನಗಳ ಶಬ್ದವು ಮುಗಿಲನ್ನು ಮುಟ್ಟಿತು ಭಕ್ತರ ಹೃದಯದಿಂದ ತುಂಬಿ ಬಂದಿತು. ಗಂಟಲು ಬಿಗಿಯಿತು. ಕಣ್ಣು ಆನಂದ ಬಾಷ್ಪಗಳನ್ನು ಸುರಿಸಿತು. ಛಾಯಾ ಗ್ರಾಹಕರು, ವೀಡಿಯೋಗ್ರಾಹಕರು ಹರಿಸುತ್ತಿದ್ದ ಮಿಂಚಿನಂತಹ ಬೆಳಕಿನಿಂದಲೂ ಚಿನ್ನದ ರಥ ಥಳಥಳಿಸುತ್ತಿತ್ತು.

ಶ್ರೀಪಾದರೆಲ್ಲರೂ ಶ್ರೀಕೃಷ್ಣನನ್ನು ಅರ್ಚಿಸಿ ಭಕ್ತಿ ಪರವಶರಾಗಿ ಮಂಗಳಾರತಿಗಳನ್ನು ಬೆಳಗಿ ಭಾವುಕರ ಭಾವುಕತನವನ್ನು ಇನ್ನಷ್ಟು ಚಿಮ್ಮಿಸಿದರು. ಶ್ರೀಕೃಷ್ಣಮಠದ ಸುತ್ತಲೂ ರಥಬೀದಿಯಲ್ಲಿ ಎಲ್ಲಿ ನೋಡಿದರೂ ಸುವರ್ಣ ರಥವನ್ನು ಕಾಣುವ ತವಕದಿಂದ ಬಂದು ಅವನನ್ನು ಕಂಡು ಆನಂದ ತುಂದಿಲರಾದ ಭಕ್ತರ ಕಪ್ಪುಮಂಡೆಗಳೇ ಕಾಣುತ್ತಿದ್ದವು. ಸಾಸಿವೆ ಬಿದ್ದರೂ ಕಾಣದಷ್ಟು ಸಂದಣಿ

ಸೇರಿತ್ತು. ಈ ದೃಶ್ಯ ಎಂತಹವನ ಮನಸ್ಸನ್ನೂ ಕರಗಿಸುವಂತಿತ್ತು. ಮೈ ರೋಮಾಂಚನವಾಗುತ್ತಿತ್ತು.

ಸ್ವಚ್ಛವಾದ ಆಗಸದಲ್ಲಿ ಮತ್ತೆ ದಟ್ಟ ಮೋಡಗಳು ಸೇರಿದವು. ಮಳೆಯ ಭೀತಿಯನ್ನುಂಟು ಮಾಡಿದ್ದವು. ಆದರೆ ಅಂತಹ ಮಳೆಯುಬರಲಿಲ್ಲ. ಕೇವಲ ತುಂತುರು ಹನಿಗಳು ಮಾತ್ರ ಉದುರಿದವು. ಏನಿರಬಹುದು ? ದೇವತೆಗಳು ವರೋಕ್ಷಪ್ರಿಯರೆನಿಸಿದವರು ಆದರೂ ಸಾತ್ವಿಕಗುಣ ಸಂವೃದ್ಧಗೊಂಡ ಶ್ರೀಕೃಷ್ಣನ ಈ ಉತ್ಸವದ ಸಂಭ್ರಮವನ್ನು ಕಂಡು ಪ್ರತಿಕ್ರಿಯಿಸದೇ ಇರಲಾಗಲಿಲ್ಲ. ಹೂಮಳೆಗೆರೆದೇ ಬಿಟ್ಟರು. ಅಂದರೆ ಭಾವುಕರ ದೃಷ್ಟಿಯಲ್ಲಿ ಇದು ದೇವತೆಗಳ ಪುಷ್ಪವೃಷ್ಟಿ.

ಕಿಕ್ಕಿರಿದ ಜನಸಂದಣಿಯಲ್ಲಿ ಒಕ್ಕೊರಳಿನ ಗೋವಿಂದನ ಸಂಕೀರ್ತಿಯಲ್ಲಿ ಯತಿಶಿಖಾಮಣಿಗಳ ಸಮ್ಮುಖದಲ್ಲಿ ಹಿರಿಯ ರಾಜಕಾರಣಿಗಳ ಸಮಾವೇಶದಲ್ಲಿ ಉಡುಪಿ ಶ್ರೀಕೃಷ್ಣನಿಗೆ ಸುವರ್ಣರಥವು ಸಮರ್ಪಿತವಾಯಿತು. ಸುವರ್ಣರಥವನ್ನು ಏರಿದ ಶ್ರೀಕೃಷ್ಣ ಮುಖ್ಯಪ್ರಾಣರನ್ನು ಭಕ್ತಿ ಪುರಸ್ಸರವಾಗಿ ಸ್ತುತಿಸುತ್ತಾ ಸುವರ್ಣಮಂಟಪದೆಡೆಗೆ ಕರೆದೊಯ್ಯಲಾಯಿತು. ತನ್ನ ಸಹಜ ಸೌಂದರ್ಯದ ಜೊತೆಯಲ್ಲಿ ಪುಷ್ಪಾಲಂಕಾರದಿಂದ ಇನ್ನಷ್ಟು ರಮಣೀಯವಾಗಿ ತೋರುತ್ತಿದ್ದ ಸುವರ್ಣರಥವು ಆಗತಾನೆ ಕ್ಷೀರಸಾಗರದಿಂದ ಎದ್ದು ಬಂದ ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನನ್ನು ವರಿಸುವುದಕ್ಕಾಗಿ ಆವನೆಡೆಗೆ 'ಹೆಜ್ಜೆಯ ಮೇಲೆ ಹೆಜ್ಜಯನಿಕ್ಕುತ' ಸಾಗುವಂತೆ ಸಾಗಿ ಬಳಕುತ್ತಾ ಸುವರ್ಣಮಂಟಪವನ್ನು ಪ್ರವೇಶಿಸಿತು. ಹೊನ್ನಿಗದಿರನ ಬೆಳಕಿನಿಂದ ಹೊನ್ನತೇರು ನೊಡಲು ಬಲು ಚೆನ್ನಾಗಿತ್ತು. ಲಕ್ಷೋಪಲಕ್ಷ ಭಕ್ತರ ಕಣ್ಣುಗಳು ಮಿಟುಕಿಸದೇ ಹೊನ್ನ ತೇರನ್ನು ಅವಲೋಕಿಸುತ್ತಿದ್ದವು. ಮುಂಟಪವನ್ನು ಪ್ರವೇಶಿಸಿದ ಕ್ಷಣ ಅಲ್ಲಿ ನೆರೆದಿದ್ದ ಭಕ್ತಸಾಗರದ ಹರ್ಷೋದ್ಗಾರ ಆಗಸವನ್ನು ಮುಟ್ಟಿತು.

ಅಷ್ಟೊಂದು ಬೃಹತ್ತಾದ ಮಂಟಪವೂ ಭಕ್ತಸ್ತೋಮದಿಂದ ತುಂಬಿಹೋಗಿತ್ತು. ಸಭಾ ಮಂಟವದ ಎಡ ಬಲ ಬದಿಗಳಲ್ಲಿ ಎತ್ತರದ ವೇದಿಕೆಗಳು ಶೋಭಿಸುತ್ತಿದ್ದವು. ಬಲಬದಿಯ ವೇದಿಕೆಯಲ್ಲಿ ಶ್ರೀಪಾದರುಗಳು ಆಸೀನರಾದರು. ಪರ್ಯಾಯ ಶ್ರೀಪಲಿಮಾರುಮಠದ ಶ್ರೀವಿದ್ಯಾಮಾನ್ಯ ತೀರ್ಥರು, ಶ್ರೀಮದುತ್ತರಾದಿಮಠದ ಶ್ರೀಸತ್ಯಪ್ರಮೋದ ತೀರ್ಥರು, ಶ್ರೀಪೇಜಾವರಮಠದ ಶ್ರೀವಿಶ್ವೇಶ ತೀರ್ಥರು, ಶ್ರೀಅದಮಾರುಮಠದ ಶ್ರೀವಿಬುಧೇಶ ತೀರ್ಥರು, ಶ್ರೀಅದಮಾರು ಮಠದ (ಕಿರಿಯ) ಶ್ರೀವಿಶ್ವಪ್ರಿಯತೀರ್ಥರು, ಶ್ರೀಪುತ್ತಿಗೆಮಠದ ಸುಗುಣೇಂದ್ರತೀರ್ಥರು, ಶ್ರೀಪಲಿಮಾರು ಮಠದ (ಕಿರಿಯ) ಶ್ರೀವಿದ್ಯಾಧೀಶ ತೀರ್ಥರು, ಶ್ರೀಭೀಮನ ಕಟ್ಟೆ ಮಠದ ಶ್ರೀರಘುಮಾನ್ಯತೀರ್ಥರು, ಶ್ರೀ ಭಂಡಾರಕೇರಿ ಮಠದ ಶ್ರೀವಿದ್ಯೇಶ ತೀರ್ಥರು. ಪಡುಬಿದ್ರಿಯ ಶ್ರೀವಿದ್ಯಾಪತಿತೀರ್ಥರು, ಮೈಸೂರಿನ ಶ್ರೀದೇವೇಂದ್ರತೀರ್ಥರು, ಹಾಗೂ ಬನ್ನಂಜೆ ಶ್ರೀರಾಘವೇಂದ್ರತೀರ್ಥರು ಹೀಗೆ ಮಠಾಧಿಪತಿಗಳು, ಸನ್ಯಾಸಿಗಳು ಸುವರ್ಣಾತ್ಮಕಳಾದ ಲಕ್ಷ್ಮೀದೇವಿಗೆ ಶ್ರೀಹರಿಯ ಜೊತೆ ವಿವಾಹ ಮಹೋತ್ಸವದಂತೆ ನಡೆಯಲಿರುವ ಆ ಸಮಾರಂಭದಲ್ಲಿ ವರನಾದ ಶ್ರೀಕೃಷ್ಣನ ಕಡೆಯವರೋ ಎಂಬಂತೆ ಬಲ ವೇದಿಕೆಯಲ್ಲಿ ಅಲಂಕರಿಸಿದ್ದರು. ಆ ವೇದಿಕೆಯ ಉತ್ತರ ಬದಿಯಲ್ಲಿ ಉದ್ದಕ್ಕೆ ಮತ್ತೊಂದು ವೇದಿಕೆಯನ್ನು ನಿರ್ಮಿಸಲಾಗಿತ್ತು.

ಅದರಲ್ಲಿ ಪ್ರಭುಶಕ್ತಿ ಮತ್ತು ಆರ್ಥಿಕಶಕ್ತಿಯನ್ನು ಸಂಕೇತಿಸುವ ರಾಜ್ಯಸರ್ಕಾರದ ಮಂತ್ರಿಗಳು, ಬೇರೆಬೇರೆ ದೇವಸ್ಥಾನದ ಧರ್ಮದರ್ಶಿಗಳು ಬ್ಯಾಂಕುಗಳ ಚೇರ್ಮನ್ನಳು, ಎಂಡೋಮೆಂಟ್ ಕಮಿಷನರ್ ಮುಂತಾದವರು ಲಕ್ಷ್ಮೀರೂಪದ ವಧುವಿನ ಕಡೆಯವರೋ ಎಂಬಂತೆ ಆಸೀನರಾಗಿದ್ದರು. ಸಭಾ ಮಂಟಪದ ಎಡಬದಿಯ ವೇದಿಕೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿತ್ತು. ಈ ಎರುಡು ವೇದಿಕೆಗಳ ಮಧ್ಯದಲ್ಲಿ ಸುವರ್ಣರಥವು ಶ್ರೀಕೃಷ್ಣಮುಖ್ಯಪ್ರಾಣರಿಂದೊಡಗೂಡಿ ಶೋಭಿಸುತ್ತಿತ್ತು.

ಸುವರ್ಣರಥ ಉದ್ಘಾಟನಾ ಹಾಗೂ ಸಮರ್ಪಣಾ ಸಮಾರಂಭವು ವೇದಘೋಷದೊಂದಿಗೆ ಪ್ರಾರಂಭ ವಾಯಿತು. ವೇದ ಘೋಷದ ನಂತರ ವೇಣುನಾದ ಪ್ರಿಯನಾದ ಶ್ರೀಕೃಷ್ಣನಿಗೆ ವೇಣುವಾದನ ಸಮರ್ಪಣೆಯು ನಡೆಯಿತು. ಎಡಗಡೆಯ ವೇದಿಕಯಲ್ಲಿ ಡಾ|| ಪ್ರಪಂಚಂ ಸೀತಾರಾಂ ಅವರು ತಮ್ಮ ಅದ್ಭುತ ಸುಮಧುರ ವೇಣುವಾದನ ಸೇವಯನ್ನು ಸಮರ್ಪಿಸಿದರು. ಸಭಾ ಕಾರ್ಯಕ್ರಮದ ಅಧ್ಯಕ್ಷರು ಪೇಜಾವರಮಠದ ಶ್ರೀವಿಶ್ವೇಶತೀರ್ಥರಾಗಿದ್ದರು. ಸಭಾ ಕಾರ್ಯಕ್ರಮದ ನಿರ್ವಾಹಕರು ಶ್ರೀ ಉದ್ಯಾವರ ಮಾಧವಾಚಾರ್ಯರು.

ಸಭೆಯಲ್ಲಿ ಉಪಸ್ಥಿತರಾದ ಎಲ್ಲ ಶ್ರೀಪಾದರನ್ನೂ, ಇತರ ಮಹನೀಯರನ್ನು , ಭಕ್ತಜನತೆಯನ್ನೂ ಸ್ವಾಗತಿಸಿದ ಬನ್ನಂಜೆ ಗೋವಿಂದಾಚಾರ್ಯರು ಸುವರ್ಣರಥ ನಿರ್ಮಾಣದ ಹಾಗೂ ಸಮರ್ಪಣೆಯ ಔಚಿತ್ಯವನ್ನು ಸಮರ್ಥಿಸಿದರು. ಅಲ್ಲದೆ 'ಉಡುಪಿಯ ಆಸುಪಾಸಿನಲ್ಲಿ ಮಳೆಯ ಸುಳಿವೇ ಇಲ್ಲದಾಗ ಉಡುಪಿಯಲ್ಲಿ ಹಿಂದಾಗಲೀ ಮತ್ತೆ ಆಗಲಿ ಬರದೆ ಸುವರ್ಣರಥವನ್ನು ಸಮರ್ಪಿಸುವ ಸುಮುಹೂರ್ತದಲ್ಲಷ್ಟೇ ಕಾರ್ಯಕ್ರಮಕ್ಕೆ ತೊಂದರೆ ಯಾಗದಂತೆ ತುಂತುರುಹನಿ ಮಾತ್ರ ಉದುರಿದುದು ಈ ಸಮಾರಂಭ ಶ್ರೀಕೃಷ್ಣನ ಚಿತ್ತಕ್ಕೆ ಬಂದಿದೆ.' ಎಂಬುದಕ್ಕೆ ಉತ್ತಮ ಸಾಕ್ಷಿಯಾಗಿದೆ ಎಂದು ಬಣ್ಣಿಸಿದರು. ಸುವರ್ಣರಥಕ್ಕಾಗಿ ನಿಧಿಯ ಸಂಗ್ರಹದಲ್ಲಿ ಹಾಗೂ ಸುವರ್ಣರಥ ಸಮರ್ಪಣೆಯ ಚಟುವಟಿಕೆ ಗಳಲ್ಲೂ ಸಕ್ರಿಯವಾಗಿ ಭಾಗವಹಿಸಿದ್ದ ಬೆಂಗಳೂರಿನ ಚಾರ್ಟೆಂಡ್ ಅಕೌಂಟೆಂಟ್ ಶ್ರೀ ಕೆ. ವಿ. ಆಚಾರ್ಯರು ಉತ್ಸವದ ಯಶಸ್ಸನು ಕೋರಿ ಕಳುಹಿಸಿದ ಮಹನೀಯರ ಸಂದೇಶಗಳನ್ನು ವಾಚಿಸಿದರು.

ಆ ಸಮಾರಂಭದ ಸೂತ್ರಧಾರಿಗಳಾದ ಶ್ರೀಶ್ರೀವಿದ್ಯಾ ಮಾನ್ಯತೀರ್ಥರು 'ಈ ಸಮಾರಂಭ ವೆಂದರೆ ಬಂಗಾರಕ್ಕೆ ಅಭಿಮಾನಿನಿಯಾದ ಲಕ್ಷ್ಮೀ ದೇವಿಗೂ ಮತ್ತು ಸುವರ್ಣರಥಾರೂಢನಾದ ಶ್ರೀಕೃಷ್ಣನಿಗೂ ನಡೆದ ವಿವಾಹ ಮಹೋತ್ಸವವೆಂದು ಅನುಸಂಧಾನಿಸಬೇಕು. ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನಾದ ಶ್ರೀಕೃಷ್ಣನಿಗೆ ಸುವರ್ಣರಥವೇ ಸಮುಚಿತವಾದದ್ದು. 'ಹಿರಣ್ಯೇನ ಸವಿತಾ ರಥೇನ ದೇವ್ರೋ ಯಾತಿ ಭುವನಾನಿ ಪಶ್ಯನ್' ಎಂದು ವೇದವಾಕ್ಯವು ಬೋಧಿಸುವಂತೆ ಸೂರ್ಯನಾರಾಯಣನು ಸುವರ್ಣರಥವನ್ನೇರಿ ಜಗತ್ತಿನ ಮೇಲೆ ಕೃಪಾದೃಷ್ಟಿಯನ್ನು ಬೀರುತ್ತಾ ರಕ್ಷಿಸುತ್ತಿರುವನು ಎಂಬ ಸಂದೇಶವನ್ನು ಈ ಶ್ರೀಕೃಷ್ಣನ ಸುವರ್ಣ ರಥಾರೋಹಣದಿಂದ ನಾವು ಅನುಸಂಧಾನಿ ಸಬೇಕು. ಮತ್ತು ಸುವರ್ಣರಥ ಸಮರ್ಪಣವೆಂದರೆ, ಅಸ್ವತಂತ್ರರಾದ ನಾವೇ ಒಂದು ಸುವರ್ಣರಥ ಅದನ್ನು ಆ ಭಗವಂತನಿಗೆ ಸಮರ್ಪಿಸುವುದೇ ಅಂದರೆ ನಮ್ಮನ್ನು ಭಗವಂತನಿಗೆ

ಸಮರ್ಪಿಸಿಕೊಳ್ಳುವುದೇ ಈ ಸ್ವರ್ಣರಥಾರ್ಪಣೆಯ ಅಧ್ಯಾತ್ಮಸಂದೇಶ. ನಾನು ಒಬ್ಬನೇ ಈ ಮಹಾಕಾರ್ಯದ ಕಾರಣಪುರುಷನಲ್ಲ ನಿಮಿತ್ತಮಾತ್ರ . ಇಷ್ಟು ದೊಡ್ಡದಾದ ಕಾರ್ಯಕ್ಕೆ ಮುಖ್ಯವಾದ ಕಾರಣ ಶ್ರೀಕೃಷ್ಣನ ಕರುಣೆ ಶ್ರೀಕೃಷ್ಣಭಕ್ತರ ಭಕ್ತಿ ಹಾಗೂ ಆ ಭಕ್ತಿಯಿಂದ ದೊರೆತ ಸಹಕಾರ. ಈ ಎಲ್ಲದರಿಂದ ನಿಗದಿತ ಸಮಯದಲ್ಲಿ ಸ್ವರ್ಣರಥವು ಸಂಪೂರ್ಣಗೊಳ್ಳಲು ಸಾಧ್ಯವಾಯಿತು. ಎಲ್ಲವೂ ಶ್ರೀಕೃಷ್ಣನ ಮಹಿಮೆ. ಭಕ್ತರ ಸಮರ್ಪಣೆಯ ಸುವರ್ಣರಥವನ್ನು ಸ್ವೀಕರಿಸುವ ಪರಮಾತ್ಮನಿಂದ ದೇಶದಲ್ಲಿ ಸುಖಸಮೃದ್ಧಿ ಶಾಂತಿಗಳು ನೆಲೆಸುವಂತಾಗಲಿ' ಎಂದು ಹಾರೈಸುತ್ತಾ ಸಂದೇಶವನ್ನಿತ್ತರು.

ಸಭೆಯಲ್ಲಿ ಉಪಸ್ಥಿತರಾದ ಶ್ರೀಉತ್ತರಾದಿಮಠದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದರು'ರಥಸ್ಥಂ ಶ್ರೀಪತಿಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ' ಎಂಬ ಶ್ರೀಮದಾ ಚಾರ್ಯರ ಮಾತು, ಮುಕ್ತಿಗಳಿಸಲು ರಥಸ್ಥನಾದ ಭಗವಂತನನ್ನು ಕಾಣಬೇಕು ಎಂಬ ತತ್ವವನ್ನು ಸಾರುವುದು. ಈ ಸುವರ್ಣರಥದಲ್ಲಿ ಕುಳಿತ ಶ್ರೀಕೃಷ್ಣನನ್ನು ನೋಡುವಂತೆ ನಮ್ಮ ದೇಹವೆಂಬ ರಥದ ಹೃದಯಮಂಟಪದಲ್ಲಿಯೂ ಶ್ರೀಕೃಷ್ಣನನ್ನು ಕುಳ್ಳಿರಿಸಿ ಭಜಿಸಿ ಆನಂದಿಸಬೇಕು. ಇದರಿಂದ ಮೋಕ್ಷಸಾಧ್ಯ. ಎಂಬ ಅನುಸಂಧಾನವನ್ನು ಈ ಸುವರ್ಣರಥಸಮರ್ಪಣೆ ಕಾರ್ಯಕ್ರಮವೂ ನೆನಪಿಸುವುದು' ಎಂದು ಅನುಗ್ರಹಭಾಷಣವನ್ನಿತ್ತರು.

ಅದಮಾರು ಮಠದ ಶ್ರೀವಿಬುಧೇಶತೀರ್ಥಶ್ರೀಪಾದರು ಅನುಗ್ರಹ ವಚನವನ್ನು ನೀಡುತ್ತಾ 'ಭಕ್ತಾಗ್ರೇಸರ ಶ್ರೀಶ್ರೀವಿದ್ಯಾಮಾನ್ಯತೀರ್ಥರಲ್ಲಿ ಸಮರ್ಪಿಸಿದ ಕಾಣಿಕೆ ಖಂಡಿತವಾಗಿಯೂ ಭಗವಂತನಿಗೆ ತಲುಪುವುದು. ಎಂಬ ದೃಢವಿಶ್ವಾಸ ಭಕ್ತರ ಹೃದಯದಲ್ಲಿ ನೆಲೆಸಿದೆ. ಆದ್ದರಿಂದಲೇ ಆ ಭಕ್ತರ ಸೇವಾ ಸಹಕಾರಗಳಿಂದಲೇ ಇಷ್ಟು ಬೃಹತ್ತಾದ ಸಾಧನೆಯನ್ನು ಶ್ರೀಪಾದರು ನಡೆಸುವಂತಾಯಿತು. ಪ್ರಾಮಾಣಿಕತೆ ಹಾಗೂ ಶ್ರದ್ಧೆ ಇವೆರಡಿದ್ದರೆ ಇಡೀ ಭಾರತವನ್ನೇ ಸ್ವರ್ಣಮಯವನ್ನಾಗಿಸಬಹುದು. ಅಚಲಭಕ್ತಿ ದೃಢನಿಷ್ಠೆ ಅರ್ಪಣಾ ಮನೋಭಾವಗಳೇ ಸುವರ್ಣ ರಥನಿರ್ಮಾಣದ ಮೂಲಸಾಧನಗಳು. ಕೇವಲ ಎರಡೇ ವರ್ಷದಲ್ಲಿ ಭಕ್ತರ ವಿಶ್ವಾಸದಿಂದ,' ಸಹಕಾರದಿಂದ ಸುವರ್ಣರಥವನ್ನು ಶ್ರೀವಿದ್ಯಾಮಾನ್ಯತೀರ್ಥರು ನಿರ್ಮಿಸಿದರೆಂದರೇ ಐದು ವರ್ಷದ ಅವಧಿಯುಳ್ಳ ರಾಜಕಾರಣಿಗಳಿಗೆ ಪ್ರಜೆಗಳ ವಿಶ್ವಾಸವನ್ನು ಗಳಿಸಿ ಚಿನ್ನದ ರಾಷ್ಟ್ರವನ್ನೇಕೆ ನಿರ್ಮಿಸಲಾಗದು?'ಎಂದು ಸವಾಲೆಸೆದರು.

ಕೊನೆಯ ಭಾಷಣ, ಅಧ್ಯಕ್ಷಸ್ಥಾನದಲ್ಲಿರುವ ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರಿಂದ ಬಂದಿತು. 'ಆಪಾದನಖಾತ್ ಸರ್ವ ಏವ ಹಿರಣ್ಮಯಃ' ಎಂಬ ಮಾತಿನಂತೆ ಭಗವಂತನು ಅಡಿಯಿಂದ ಮುಡಿಯವರೆಗೆ ಸುವರ್ಣ ಮಯನು ಅಂತೆಯೇ ಉಡುಪಿಯ ಸುವರ್ಣರಥವೂ ಆಗಿದೆ. ಈ ರಥದ ಬಾಹ್ಯಮೌಲ್ಯಕ್ಕಿಂತಲೂ ಆ ಸಮರ್ಪಣೆಯ ಹಿನ್ನಲೆಯಲ್ಲಿರುವ ಪ್ರೇಮ, ತ್ಯಾಗ ಭಾವನೆಗಳಿಂದ ಆಂತರಿಕ ಮೌಲ್ಯ ಅಧಿಕವಾದುದು. ಮರದಬುಡಕ್ಕೆ ಹಾಕಿದ ನೀರಿನ ಫಲ ಮರದ ಕೊಂಬೆ ರೆಂಬೆಗಳಿಗೆಲ್ಲಾ ತಲುಪುವಂತೆ ಜಗದ್ವೃಕ್ಷದ ಮೂಲ ಬೇರಾದ ಭಗವಂತನಿಗೆ ಸಮರ್ಪಿಸಿದ್ದು ಊರ್ಧ್ವಮೂಲ ಎನಿಸುವ ಪ್ರಪಂಚಕ್ಕೆ ತಲುಪುವುದು. ಶ್ರೀವಿದ್ಯಾರಣ್ಯರು ವಿಜಯನಗರದಲ್ಲಿ ಸುವರ್ಣವೃಷ್ಟಿಗೆರೆದಿದ್ದ ಇತಿಹಾಸದಂತೆ ಶ್ರೀವಿದ್ಯಾಮಾನ್ಯತೀರ್ಥರು ಭವ್ಯಕರ್ನಾಟಕ ರಾಜ್ಯದಲ್ಲಿ ಸುವರ್ಣರಥವನ್ನು ನಿರ್ಮಿಸಿದ್ದು ದಾಖಲಾರ್ಹವಾಗಲಿದೆ' ಎಂದು ಅನುಗ್ರಹ ವಚನವಿತ್ತರು.

ನಂತರ ಶ್ರೀಕೃಷ್ಣನ ರಥಕ್ಕಾಗಿ ತೇಗಿನ ಮರವನ್ನು ಉಚಿತವಾಗಿ ನೀಡಿದ್ದಲ್ಲದೆ ಸುವರ್ಣರಥಕ್ಕಾಗಿ ಮತ್ತೆ 5 ಲಕ್ಷರೂಪಾಯಿಗಳ ಚೆಕ್ಕನ್ನು ಕರ್ನಾಟಕರಾಜ್ಯಸರ್ಕಾರದ ಪರವಾಗಿ ಕರ್ನಾಟಕದ ದತ್ತಿ ಮತ್ತು ಧಾರ್ಮಿಕ ಸಚಿವ ಶ್ರೀಅಮರನಾಥ ಶೆಟ್ಟಿ ಯವರು ಸಮರ್ಪಿಸಿದರು. ಮತ್ತು 'ಸುವರ್ಣರಥ ನಿರ್ಮಾಣದಿಂದಾಗಿ ಉಡುಪಿ ಇನ್ನಷ್ಟು ಭಕ್ತರ ಆಕರ್ಷಣೆಗೆ ಕಾರಣವಾಗಬಲ್ಲದು. ಪ್ರಸಿದ್ಧ ಪ್ರೇಕ್ಷಣೀಯ ಸ್ಥಳವಾಗಬಲ್ಲದು' ಎಂದು ನುಡಿದರು. ಬಳಿಕ ಶಿಕ್ಷಣಸಚಿವ ಶ್ರೀ ದೇವರಾಜ ಆಳ್ವ, ಮೀನುಗಾರಿಕಾ ಸಚಿವ ಶ್ರೀರಘುಪತಿ, ಸಣ್ಣಉಳಿತಾಯ ಖಾತೆಯ ಸಚಿವ ಶ್ರೀವೀರಣ್ಣಮೊದಲಾದವರು ತಮ್ಮ ಸುವರ್ಣರಥದ ಬಗ್ಗೆ ತಮ್ಮ ಹೆಮ್ಮೆಯ ಭಾವವನ್ನು ವ್ಯಕ್ತಪಡಿಸಿ ತಮ್ಮ ತಮ್ಮ ವೈಯಕ್ತಿಕ ಹತ್ತು ಕಾಣಿಕೆ ಹತ್ತು ಸಾವಿರ ರೂಗಳ ಕಾಣಿಕೆಯನ್ನು ನೀಡಿದರು.

ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀವೀರೇಂದ್ರ ಹೆಗಡೆಯವರು ಸುವರ್ಣರಥಕ್ಕಾಗಿ ಒಂದು ಲಕ್ಷ ರೂಪಾಯಿಯ ಕಾಣಿಕೆಯನ್ನು ನೀಡಿದರು. ''ಭಕ್ತಜನರು ಪುಣ್ಯದ ಖಾತೆ ಬರಿದಾಗದಂತೆ ಎಚ್ಚರಿಕೆಯಿಂದಿದ್ದು ಇಂತಹ ಪುಣ್ಯಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು'' ಎಂದು ನುಡಿದರು.

ಉಪನ್ಯಾಸಗಳ ನಂತರ ಚಿನ್ನದರಥದ ಯೋಜಕ ಶ್ರೀವಿದ್ಯಾಮಾನ್ಯತೀರ್ಥರ ಸಾರ್ಥಕ ಯೋಜನೆಯ ಪ್ರತೀಕವಾಗಿ ಪೇಜಾವರಮಠದ ಶ್ರೀವಿಶ್ವೇಶತೀರ್ಥರು ಅವರಿಗೆ ಚಿನ್ನದ ನಾಣ್ಯಗಳ ಸುವರ್ಣವೃಷ್ಟಿಗೈದರು.

ಈ ಮಹಾಗುರುಗಳ ಸುವರ್ಣಾಭಿಷೇಕದ ಸಂದರ್ಭದಲ್ಲಿ ಎಲ್ಲ ಶ್ರೀಪಾದರು ತುಂಬು ಹೃದಯದಿಂದ ಭಾಗ ವಹಿಸಿದರು. ಚಿನ್ನದ ರಥದ ಶಿಲ್ಪಿಗಳಿಗೆ ಹಾಗೂ ಸಮಾರಂಭದ ಮುಖ್ಯ ಅತಿಥಿಗಳಿಗೆ ಸನ್ಮಾನ ನಡೆಯಿತು. ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ನಿರ್ಮಿಸಿದ ಎಡಬದಿಯ ವೇದಿಕೆಯಲ್ಲಿ ಯಕ್ಷಗಾನವೇಷಪ್ರದರ್ಶನ, ನವಿಲು ಕುಣಿತ, ಮುಂತಾದ ಮನೋಹರ ಕಾರ್ಯಕ್ರಮಗಳು ನಡೆಯುತ್ತಿದ್ದವು. ಈ ವಾತಾವರಣ ದಿಂದ ಸ್ಫೂರ್ತಿಗೊಂಡ ಅನೇಕ ಮಹನೀ ಯರು ಸುವರ್ಣರಥಕ್ಕಾಗಿ ತಮ್ಮ ಕಾಣಿಕೆಯನ್ನು ಸಮರ್ಪಿಸುತ್ತಲೇ ಇದ್ದರು. ಕಾರ್ಯಕ್ರಮದ ಕೊನೆಯಲ್ಲಿ ಉದ್ಯಾವರ ಶ್ರೀಮಾಧವಾಚಾರ್ಯರೇ ಧನ್ಯವಾದವನ್ನು ಸಮರ್ಪಿಸಿದರು.

ಧನ್ಯವಾದದ ಬಳಿಕ ಶ್ರೀವಿದ್ಯಾಮಾನ್ಯತೀರ್ಥರು ಸುವರ್ಣರಥಾರೂಢ ಶ್ರೀಕೃಷ್ಣಮುಖ್ಯಪ್ರಾಣದೇವರಿಗೆ ಭಕ್ತಸಮ್ಮುಖದಲ್ಲಿ ಆರತಿಯನ್ನು ಬೆಳಗಿದರು. ಭಕ್ತರ ಗೋವಿಂದ ಘೋಷ ಗಗನವನ್ನು ಮುಟ್ಟಿತ್ತು. ಆಗ ಸುವರ್ಣರಥ ಉದ್ಘಾಟನಾ ಸಮರ್ಪಣ ಸಮಾರಂಭದ ಸಭಾ ಕಾರ್ಯಕ್ರಮ ಅಲ್ಲಿಗೆ ಸಮಾಪ್ತವಾಗಿತ್ತು. ಆಗ ಸಮಯ 2-15 ಗಂಟೆಯಾಗಿತ್ತು. 10-15ರಿಂದ 2-15ದರ ವರೆಗಿನ ನಾಲ್ಕು ಗಂಟೆಗಳ ಕಾಲಭಕ್ತರೆಲ್ಲರೂ ಶಾಂತರಾಗಿ ಕುಳಿತಿದ್ದರು. ಸುವರ್ಣಮಂಟಪ ದೇವಲೋಕದ ಸುಧರ್ಮಸಭೆಯಂತೆ ಇದ್ದಿತು. ಈ ಕಾರ್ಯಕ್ರಮ ಎಷ್ಟು ಶ್ರೇಷ್ಠವಾಗಿತ್ತೆಂದರೆ ಪೆಂಡಾಲ್ ಹಾಕುವುದು ಬೇಡ ಮಂಟಪಹಾಕುವುದು ಬೇಡವೆಂದವರೇ ಈ ಕಾರ್ಯಕ್ರಮಗಳೆಲ್ಲವೂ ಬಹಳ ಸುಂದರವಾಗಿ ಮೂಡಿಬಂದವು ಎಂದು ಪ್ರಶಂಶಿಸಿದರು.

ಮತ್ತೆ ಮಂಟಪದಿಂದ ಹೊರಟಿತು ಸುವರ್ಣರಥ ಮತ್ತೆ

ಮೊಳಗಿತು 'ಗೋವಿಂದಾ ಗೋವಿಂದಾ'ಎಂಬ ಭಕ್ತರ ಧ್ವನಿ ಜನಸಾಗರದ ನಡುವೆ ನಿಧಾನಗತಿಯಲ್ಲಿ ಸುವರ್ಣರಥವು ಒಂದೊಂದೇ ಬೀದಿಯನ್ನು ಕ್ರಮಿಸಿ ಶ್ರೀಕೃಷ್ಣಮಠದ ಮಹಾದ್ವಾರವನ್ನು ತಲುಪಿತು.

ನಂತರ ಶ್ರೀಕೃಷ್ಣಭಕ್ತಸಾಗರಕ್ಕೆ ಸುಗ್ರಾಸ ಶ್ರೀಕೃಷ್ಣ ನೈವೇದ್ಯದ ಭೋಜನ ನಡೆಯಿತು. ಭಕ್ತನ ಕಣ್ಣುಗಳೂ ಖುಷಿಪಟ್ಟವು. ಅವರ ಮನವು ಮುದಪಟ್ಟವು. ಅವರ ಉದರವೂ ಆನಂದ ಭರಿತವಾಯಿತು. ಒಟ್ಟಿನಲ್ಲಿ ಆ ಮಹೋತ್ಸವಕ್ಕೆ ಆಗಮಿಸಿದ ಎಲ್ಲ ಭಕ್ತರೂ ತೃಪ್ತಿಪಟ್ಟರು. ಅಂದು ರಾತ್ರಿ ಮಣಿಪಾಲದ ಸ್ವರ್ಣಾಯಕ್ಷಗಾನ ಮಂಡಳಿಯ ಸದಸ್ಯರಿಂದ 'ಶ್ರೀಕೃಷ್ಣಚರಿತ'ಎಂಬ ಯಕ್ಷಗಾನ ಬಯಲಾಟವು ನಡೆಯಿತು.

ಸುವರ್ಣರಥದಂತಹ ಅತ್ಯದ್ಭುತ ಹಾಗೂ ಮನೋಹರ ವಸ್ತುವನ್ನು ಭಗವಂತನಿಗೆ ಸಮರ್ಪಿಸಲು ಅಗತ್ಯವಾದ ಭಾವುಕತೆಗೆ ವೈಭವಕ್ಕೆ ಪೋಷಕವಾದ ಆ ಸಮಾರಂಭ ಸುವರ್ಣಸಮಾರಂಭವೇ ಎಂದೆನಿಸಿತು. ವೈಭವದ ಆ ಉತ್ಸವವು ನೋಡುಗ ಭಕ್ತರಿಗೆ ಎಂದೆಂದೂ ಮರೆಯಲಾಗದ ಚಿರಸ್ಮರಣೀಯ ಸನ್ನಿವೇಶವಾಗಿ ಉಳಿಯಿತು.

★★★

ಶ್ರೀಕೃಷ್ಣನ ಸುವರ್ಣರಥ ನಿರ್ಮಾಣವು ಪರಿಪೂರ್ಣವಾದರೂ ರಥಕ್ಕಾಗಿ ಭಕ್ತರು ಕಳುಹಿಸುತ್ತಿದ್ದ ಕಾಣಿಕೆ ಪ್ರವಾಹೋಪಾದಿಯಲಿ ಬರಹತ್ತಿತು. ರಥ ಬೇಡವೆಂದವರ, ಶ್ರೀಪಾದರನ್ನು ಬೈಯ್ದವರ ಕಾಣಿಕೆಯೂ ಶ್ರೀಪಾದರನ್ನು ತಲುಪಿತು. ಚಿನ್ನದ ರಥಕ್ಕಾಗಿ ಶ್ರೀಪಾದರು ಮಾಡಿದ್ದ ನಾಲ್ಕು ಬ್ಯಾಂಕುಗಳಲ್ಲಿ ಮಾಡಿದ್ದ ಅರವತ್ತು ಲಕ್ಷರೂಪಾಯಿಗಳ ಸಾಲವೂ ತೀರಿತು. ಆದರೂ ಕಾಣಿಕೆಯ ಬರೋಣದರಲ್ಲಿ ಇಳಿತದ ಕಾಣ್ಕೆಯೇ ಇಲ್ಲವಾಯಿತು. ಶ್ರೀಕೃಷ್ಣನಿಗೆ ಚಿನ್ನದ ರಥವಾಯಿತು. ಕುದುರೆಯಾಯಿತು ಎಲ್ಲವೂ ಆಯಿತು. ಆದರೂ ಬರುತ್ತಲೇ ಇದ್ದ ಆ ಭಾರಿ ಕಾಣಿಕೆಯಿಂದ ಏನು ಮಾಡುವುದು? ಎಂಬ ಚಿಂತೆಯೂ ಶ್ರೀಪಾದರಲ್ಲಿತ್ತು. ಆದರೆ ಆ ಚಿಂತೆ ಅವರಿಗೆ ಬಾಧಕವಾಗದಾಗಿತ್ತು. ಬದಲಾಗಿ ಸಂತೋಷದಾಯಕವಾಗಿತ್ತು. 1988ರ ಜನವರಿ 17ಕ್ಕೆ ಶ್ರೀಪಾದರ ದ್ವಿತೀಯ ಪರ್ಯಾಯವೂ ಮುಗಿದಿತ್ತು. ಶ್ರೀಪಾದರು ಪರ್ಯಾಯ ಪೀಠದಿಂದ ಇಳಿದರೂ ಸಂಚಾರದಲ್ಲಿ ರಥಕ್ಕಾಗಿಯೇ ಕಾಣಿಕೆಯನ್ನು ಸ್ವೀಕರಿಸಬೇಕಿತ್ತು. ಏಕೆಂದರೆ ರಥನಿರ್ಮಾಣದ ಮುನ್ನ ನೀಡಲಾಗದ ಕಾಣಿಕೆಯನ್ನು ಈಗಲಾದರೂ ಈ ಸುವರ್ಣಯತಿಗಳ ಅಮೃತ ಹಸ್ತದಲ್ಲಿಯೇ ನೀಡಬೇಕೆಂಬ ಬಯಕೆ ಜನಗಳ ಮನದಾಳದಲ್ಲಿತ್ತು. ಅಂತೂ ಪರ್ಯಾಯ ಮುಗಿದರೂ ರಥ ಮುಗಿದರೂ ಮತ್ತೆ ರಥದ ಹೆಸರಿನಲ್ಲಿ ಲಕ್ಷರೂಪಾಯಿಗಳಿಗೂ ಅಧಿಕವಾದ ಕಾಣಿಕೆ ಹಾಗೂ (ಒಂದು) 1ಕೆಜಿ ಚಿನ್ನಸೇರಿತ್ತು. ಅದನ್ನು ಸ್ವಾರ್ಥಕ್ಕಾಗಿ ತಮ್ಮ ಮಠಗಳಿಗೇ ಉಪಯೋಗಿಸದೆ ಪ್ರಾಮಾಣಿಕವಾಗಿ ಅದನ್ನು ಶ್ರೀಕೃಷ್ಣನಿಗೆ ಶಾಶ್ವತವಾಗಿ ಸಮರ್ಪಿಸುವ ಮಹದಾಸೆ ಶ್ರೀಪಾದರಿಗಿತ್ತು. ಕಾರಣ ಅದು ಶ್ರೀಕೃಷ್ಣಭಕ್ತರು ಬಹು ಪ್ರೀತಿಯಿಂದ ಶ್ರೀಕೃಷ್ಣನಿಗಾಗಿಯೇ ನೀಡಿದ ಕಾಣಿಕೆ ಎಂಬ ಭಾವನೆ ಅವರಲ್ಲಿ ದೃಢವಾಗಿತ್ತು.

ಆ 1ಕೆಜಿ ಚಿನ್ನದಿಂದ ಹಾಗೂ ಆ ಲಕ್ಷರೂಪಾಯಿಗಳ ಕಾಣಿಕೆಯಿಂದ ಬಂಡವಾಳದಿಂದ ಮತ್ತೆ ಬೇರೆಬೇರೆ ಭಕ್ತರ ಸಹಕಾರದಿಂದ ಶ್ರೀಕೃಷ್ಣನಿಗೆ ವಜ್ರಖಚಿತ

ಕಿರೀಟವೊಂದನ್ನುಸಮರ್ಪಿಸುವ ಹೆಬ್ಬಯಕೆ ಶ್ರೀಪಾದರ ಮನದಲ್ಲಿ ಮೂಡಿತು. ಗರಿಬಿಚ್ಚಿತು. ಅದಕ್ಕೆ ಅನುಸಾರಿಯಾಗಿ ತಾತ್ಪರ್ಯನಿರ್ಣಯದಿಂದ ಗರುಡದೇವರ ಕಿರೀಟ ಸಮರ್ಪಣೆಯ ಸಂದೇಶವೇ ಬಂದಿತು. ಶ್ರೀಪಾದರವಜ್ರಕಿರೀಟ ನಿರ್ಮಾಣದೇಣಿಗೆಗೆ ಸಂಗ್ರಹಕ್ಕಾಗಿ ಪ್ರವೃತ್ತಿಯು ಪ್ರಬಲವಾಯಿತು. ಸುಮಾರು ಮೂರು ಸಾವಿರಕ್ಕೂ ಅಧಿಕ ವಜ್ರಗಳು ಸೇರಿಕೊಳ್ಳುವ ಕಿರೀಟದ ರೂಪವಿನ್ಯಾಸದ ಚಿತ್ರವೂ ತಯಾರಾಯಿತು. ಕರಪತ್ರವೂ ಅಚ್ಚಾಯಿತು. ಭಕ್ತರ ಕಾಣಿಕೆ ಬರಲಾರಂಭಿಸಿತು. ಆದರೆ.

ಯಥಾ ಪ್ರಕಾರವಾಗಿ ಜನಗಳ ಹೀನವಚನಗಳ ಕೆಲಸ ಆರಂಭಗೊಂಡಿತು. ಅಷ್ಟೇ ಅಲ್ಲದೆ ಈ ಬಾರಿ ಪ್ರಾಯಃ ಬೇರಾರಿಗೂ ಕಿರೀಟ ನಿರ್ಮಾಣದ ಪೂರ್ಣತೆಯ ಭರವಸೆ ಇರಲಿಲ್ಲ. ಶ್ರೀಪಾದರೊಬ್ಬರನ್ನು ಹೊರತು. ಕಾರಣ ಶ್ರೀಕೃಷ್ಣನಿಗೆ ಸ್ಥಿರಕಾಣಿಕೆಯನ್ನು ಅರ್ಪಿಸಬೇಕಾದರೆ ಪರ್ಯಾಯಸ್ಥರಿಗೆ ಮಾತ್ರ ಸುಲಭವಾಗುತ್ತಿತ್ತು. ಪರ್ಯಾಯದಲ್ಲಿದ್ದಾಗ ಭಕ್ತರ ಕಾಣಿಕೆಯ ಪ್ರವಾಹಕ್ಕೆ ಇರುವುದಿಲ್ಲ ಕುತ್ತು. ಆದರೆ ಪರ್ಯಾಯದಿಂದ ಎದ್ದಮೇಲೆ ಏನಾದರು ಶ್ರೀಕೃಷ್ಣಿನಿಗೆ ಅರ್ಪಿಸಬೇಕೆಂದರೆ ಅದು ಸುಲಭದ ಮಾತಲ್ಲವಾಗಿತ್ತು. ಮತ್ತು ಶ್ರೀಪಾದರೇ ಒಂದು ವರ್ಷದ ಹಿಂದೆ ರಥಕ್ಕಾಗಿ ಭಕ್ತರ ಕಾಣಿಕೆಯನ್ನೇ ಸ್ವೀಕರಿಸಿದ್ದು ಪ್ರಸಿದ್ಧವಾಗಿತ್ತು. ಆದ್ದರಿಂದ ಪದೇಪದೇ ಅದೇ ಭಕ್ತರನ್ನೇ ಕಾಣಿಕೆಗಾಗಿ ಕೇಳಲು ಸಾಧ್ಯವೇ? ಕಿರೀಟವು ಪೂರ್ಣಗೊಳ್ಳುವ ಕಾರ್ಯವೇ? ಎಂಬುದು ಭಕ್ತರ ಹಾಗೂ ಶಿಷ್ಯರ ಆತಂಕ. ಆದರೆ ಶ್ರೀಪಾದರು ಮಾತ್ರ ದೃಢನಿಶ್ಚಯದ ಭಾವುಕ ಅದಕ್ಕೊಂದು ಚಿಕ್ಕ ಜ್ಞಾಪಕ. ಶ್ರೀಪಾದರು ವಜ್ರದ ಕಿರೀಟದ ವಿಚಾರವನ್ನು ಮದ್ರಾಸಿನ ಶ್ರೀ ರಾಮಪ್ರಸಾದರಿಗೆ ದೂರವಾಣಿಯ ಮುಖಾಂತರ ತಿಳಿಸಿದರು. ಆಗ ಉತ್ಸಾಹಿ ತರುಣ ಭಕ್ತರಾದ ರಾಮಪ್ರಸಾದರು ತತ್ಕ್ಷಣದಲ್ಲಿ ಬೇಡವೆನ್ನಲಾಗದೇ 'ಸ್ವಾಮಿ ಸಧ್ಯಕ್ಕೆ ಅದು ಸ್ವಲ್ಪ ಕಷ್ಟವಲ್ಲವೇ ಎಂದು ರಾಗ ಎಳೆದರು. ಆದರೆ ಥಟ್ಟನೆ ಶ್ರೀಪಾದರು 'ಮುಖ್ಯ ಪ್ರಾಣದೇವರಿದ್ದಾರಲ್ಲಾ' ಎಂದರು. ಅವರ ಆ ಹೇಳಿಕೆಯಲ್ಲಿ ದಾರ್ಢ್ಯ ಉಕ್ಕುತ್ತಿತ್ತು. ಹೀಗೆ ಯಾರು ಏನೆಂದರೂ ಪ್ರಾಣದೇವರ ಅನುಗ್ರದಿಂದ ಹಾಗೂ ಸ್ವಪ್ರಯತ್ನದಿಂದ ಶ್ರೀಕೃಷ್ಣನ ವಜ್ರ ಕಿರೀಟದೇಣಿಗೆಯ ಸಂಗ್ರಹಕ್ಕಾಗಿ ಹೊರಟರು.

ಒಬ್ಬೊಬ್ಬ ಭಕ್ತನೂ ಕನಿಷ್ಠ ಪಕ್ಷದಲ್ಲಿ 500 ರೂಪಾಯಿಯನ್ನು ನಿಡಬಹುದಾಗಿತ್ತು. ಅದಕ್ಕೆ ಮಿಗಿಲಾಗಿ ಎಷ್ಟೂ ಕೊಡಬಹುದಿತ್ತು. 500 ನಿಂದ 5.000, 50.0001,00,000 ಹೀಗೆ ಹೆಚ್ಚುತ್ತಾ ಒಂದು ಲಕ್ಷ ಎರಡು ಲಕ್ಷಗಳನ್ನೂ ಕಾಣಿಕೆಯಾಗಿ ನೀಡಿದ ಭಕ್ತರಿದ್ದಾರೆ. ವಜ್ರಕಿರೀಟಕ್ಕಾಗಿ ಅತ್ಯಂತ ಗರಿಷ್ಠ ಪ್ರಮಾಣದಲ್ಲಿ 5,00,000 ರೂಪಾಯಿಗಳನ್ನು ಕಾಣಿಕೆಯನ್ನಾಗಿತ್ತ ಶ್ರೀಪಾದರ ಮಹಾಭಕ್ತರು ಶ್ರೀಕಡಂದಲೆ ಕೃಷ್ಣಭಟ್ಟರು. ಕಾಣಿಕೆಯನ್ನಲ್ಲದೆ ವಜ್ರಗಳನ್ನೂ ನೀಡುವ ಭಕ್ತರು ಅನೇಕರು. ಸಂಗ್ರಹ ಬಲಗೊಂಡಿತು.

ಕಿರೀಟದಲ್ಲಿರುವ ಒಂದೊಂದು ವಜ್ರವೂ ಅತ್ಯುತ್ತಮವಜ್ರವಾಗಿರಬೇಕು ಎಂದು ಶ್ರೀಪಾದರ ಆಶಯವಾಗಿತ್ತು. ಅದಕ್ಕಾಗಿ ಮುಂಬೈ ನಗರದ ನರಮನ್ ಪಾಯಿಂಟ್ ಚರ್ನಿರೋಡ್ ನಲ್ಲಿರುವ 'ಸಮೀರ್

ಡೈಮಂಡ್ ಕಂಪೆನಿ' ಎಂಬ ಸಂಸ್ಥೆಯನ್ನು ಸಂಪರ್ಕಿಸಲಾಯಿತು. ವಿಶೇಷವೆಂದರೆ ಅಲ್ಲಿರುವ ನಿರ್ದೇಶಕರು ತೌಳವ ಕನ್ನಡಿಗರೇ ಆಗಿದ್ದರು. ಅಷ್ಟೇ ಅಲ್ಲದೆ ಅವರು ಶ್ರೀಪಾದರ ಭಕ್ತರೂಆಗಿದ್ದ ಶ್ರೀಕೃಷ್ಣಮೂರ್ತಿ ಆಚಾರ್ಯರು. ಅವರ ನೇತೃತ್ವದಲ್ಲಿ ಅತ್ಯಂತ ಉಚ್ಚತಮ ಮೊದಲ ದರ್ಜೆಯ ವಜ್ರಗಳನ್ನು ಖರೀದಿಸಿ ಕಿರೀಟ ನಿರ್ಮಾಣದ ಜವಾಬ್ದಾರಿಯನ್ನು ಆ ಸಂಸ್ಥೆಗೆ ನೀಡಲಾಯಿತು. ಭಕ್ತರು ನೀಡಿದ್ದ ಒಂದು ಕೇಜಿ ಚಿನ್ನಕ್ಕೆ ಮತ್ತಷ್ಟು ಚಿನ್ನವನ್ನು ಸೇರಿಸಿದರು. ಆ ಚಿನ್ನದ ಜೊತೆ ಶ್ರೀಪಾದರ ಕಂಠದಲ್ಲಿದ್ದ ಉತ್ತಮ ಚಿನ್ನದ ತುಳಸಿಮಣಿ ಸರವೂ ಸೇರಿತು.

ಶೀಘ್ರದಲ್ಲಿ ಕಿರೀಟ ನಿರ್ಮಾಣವಾಗುವುದಕ್ಕಾಗಿ ವಜ್ರಗಳ ಖರೀದಿಗಾಗಿ ಮತ್ತೆ ಬ್ಯಾಂಕ್ ಗಳ ಬಳಿ ಸಾಲ ಪಡೆಯಲಾಯಿತು. ಕಿರೀಟದ ನಿರ್ಮಾಣ ಆರಂಭಗೊಂಡಿತು. ಅದಕ್ಕಾಗಿ ಶ್ರೀಪಾದರು ಮುಂಬೈ ನಗರದಲ್ಲೇ ಅಂಧೇರಿಯ ಅದಮಾರು ಮಠದಲ್ಲಿ ಸುಮಾರು 7ತಿಂಗಳ ಕಾಲ ವಾಸವಾಗಿದ್ದರು. ಅಂತೂ ಕೊನೆಗೆ ಸೂಕ್ಷ್ಮರೀತಿಯ ಪರಿಶೀಲನಾದಿಗಳೊಂದಿಗೆ ಖಚಿತಪಡಿಸಿದ ಅತ್ಯುತ್ತಮ ಮೂರು ಸಾವಿರ ವಜ್ರಗಳನ್ನು ಒಳಗೊಂಡ ಹಾಗೂ ಎರಡು ರಾಜಮಣಿ ವಜ್ರಗಳನ್ನೊಳಗೊಂಡ ಕಿರೀಟದಲ್ಲಿ ಸಾಲುಗಳಿಗಾಗಿ ಉತ್ತಮ ಪಚ್ಚೆ ಕಲ್ಲುಗಳನ್ನೂ ಜೋಡಿಸಲಾಯಿತು. ಕೇವಲ ಕಿರೀಟವು ಸರಿಯಾಗದೆಂದು ಅದರ ಜತೆಯಲ್ಲಿ ಕರ್ಣಕುಂಡಲ ಲಲಾಟ ಪಟ್ಟಿಗಳನ್ನೂವಜ್ರಪೂರ್ಣವಾಗಿ ನಿರ್ಮಿಸಲಾಯಿತು.

1989 ಡಿಸೆಂಬರ್ ತಿಂಗಳೊಳಗಾಗಿ ಕಿರೀಟವನ್ನು ಪೂರ್ಣಗೊಳಿಸಿ ನೀಡಬೇಕೆಂದು ಶ್ರೀಪಾದರ ಆದೇಶವಾಗಿತ್ತು. ಅದಕ್ಕೆ ಆ ಕಂಪೆನಿ ಬದ್ಧಾಗಿತ್ತು. ಅದೇ ರೀತಿ ನವೆಂಬರ್ ತಿಂಗಳಿಗೆ ಸರಿಯಾಗಿ ಕಿರೀಟ ಪೂರ್ಣಗೊಂಡಿತು. ಕೊನೆಗೂ ಶ್ರೀಪಾದರ ಸಂಕಲ್ಪಪ್ರಯತ್ನಗಳ ಫಲವಾಗಿ ವಜ್ರಖಚಿತಮುಕುಟ, ಕರ್ಣಕುಂಡಲ ಲಲಾಟ ಪಟ್ಟಿಗಳೂ ಸಿದ್ಧಗೊಂಡವು. ಅವುಗಳನ್ನು ಉತ್ಥಾನ ದ್ವಾದಶಿಯ ಅನಂತದ ಸುಮುಹೂರ್ತದಲ್ಲಿ ಉಡುಪಿಯ ಲಕ್ಷದೀಪೋತ್ಸವದ ಸಂದರ್ಭದಲ್ಲಿ ಶ್ರೀಕೃಷ್ಣನಿಗೆ ಸಮರ್ಪಿಸಬೇಕು ಅದೂ ತಮ್ಮ ಪ್ರಿಯಶಿಷ್ಯ ಪರ್ಯಾಯ ಪೀಠಾಧೀಶ ಶ್ರೀಅದಮಾರು ಮಠದ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರ ಅಮೃತಹಸ್ತದಿಂದಲೇ ಸಮರ್ಪಿಸಬೇಕೆಂದು ಶ್ರೀಪಾದರ ಮನದಾಸೆ ತಮ್ಮ ನಲ್ಮೆಯ ಶಿಷ್ಯರಿಗೆ ಕಿರೀಟ ಸಮರ್ಪಣೆಯ ಶಾಶ್ವತಕೀರ್ತಿ ಬರಬೇಕೆಂಬ ಅವರ ಆಶಯವೋ? ಅಥವಾ ತಮ್ಮ ಶಿಷ್ಯರು ಪರ್ಯಾಯ ಪೀಠಸ್ಥರಾದ್ದರಿಂದ ಅವರಲ್ಲಿ ಶ್ರೀಮದಾಚಾರ್ಯರೇ ಇರುವುದರಿಂದ ಅವರೇ ಶ್ರೀಕೃಷ್ಣನಿಗೆ ಕಿರೀಟವನ್ನು ಸಮರ್ಪಿಸಿದಂತಾಗುವುದು ಎಂಬ ಅನುಸಂಧಾನವೋ? ಎರಡೂ ಹೌದು. ಸಮರ್ಪಣೆಯ ಆದಿನ ಸನಿಹವಾಯಿತು ಉಡುಪಿಯಲ್ಲಿ ಮತ್ತೆ ಚಿನ್ನದ ರಥದ ಸಂದರ್ಭದ ಸಡಗರ ಮರುಕಳಿಸಿತು.

ವಜ್ರಕಿರೀಟ ಕರ್ಣಕುಂಡಲ ಲಲಾಟಪಟ್ಟಿಗಳು ವಿಶೇಷ ರಕ್ಷಣೆಯೊಂದಿಗೆ ಉಡುಪಿಯ ಶ್ರೀಪಲಿಮಾರು ಮಠಕ್ಕೆ ಆಗಮಿಸಿದವು. ಅವುಗಳ ಆಗಮನದ ಸುದ್ದಿ ಜನರ ಕಿವಿ ಮುಟ್ಟಿತು. ಉಡುಪಿಯ ಜನರಿಗೆ ಅವುಗಳನ್ನು ನೋಡುವ ತವಕ ಕಾರಣ, ತಮ್ಮ ಊರಿನ ದೇವರಿಗೆ ಕೋಟಿಬೆಲೆಯ ಚಿನ್ನದ ತೇರನರ್ಪಿಸಿದ ಸ್ವಾಮಿಗಳೇ ಮತ್ತೆ ಅಷ್ಟೇ ವೆಚ್ಚದ ವಜ್ರಕಿರೀಟವನ್ನು ಮಾಡಿಸಿದ್ದನ್ನು ನೋಡುವ

ಸಾತ್ವಿಕಕೌತುಕ ಕೆಲವು ಜನರಿಗೆ ಇತ್ತು. ಈ ಸ್ವಾಮಿಗಳು ಮಾಡಿಸಿದ ವಜ್ರಕಿರೀಟ ಹೇಗಿದೆ ನೋಡೋಣ ಎಂಬ ಕುಹಕ ದೃಷ್ಟಿ ಮತ್ತೆ ಕೆಲವರಿಗೆ ಇತ್ತು. ಹೀಗೆ ಈರ್ವಗೆಯ ಜನರೂ ಕಿರೀಟವನ್ನು ನೋಡಲು ಪಲಿಮಾರು ಮಠಕ್ಕೆ ಬಂದರು. ಬಂದವರು ಒಬ್ಬರೋ ಇಬ್ಬರೋ ಅಲ್ಲ ಹತ್ತಾರು ಸಾವಿರ ಜನರು ಪಲಿಮಾರು ಮಠದಲ್ಲಿ ಸೇರಿದ ಜನ ಸಂದಣಿಯಲ್ಲಿ ಕಿರೀಟದ ಕಾವಲಿಗಾಗಿ ಹಾಗೂ ಸರದಿ ನೇಮದ ಪ್ರಕಾರ ಕಿರೀಟವನ್ನು ಜನರು ನೋಡುವ ವ್ಯವಸ್ಥೆಯನ್ನು ಮಾಡಲು ಪೋಲೀಸರ ಸಹಾಯ ಬೇಕಾಯಿತು. ಅಂದು ಏಕಾದಶಿಯಾದ್ದರಿಂದ ಊಟೋಪಚಾರಗಳ ಸಮಯವೂ ಈ ಕಿರೀಟದ ವಿವರಣೆಗೆ ಬಹಳ ಉಪಯುಕ್ತವಾಯಿತು. ಬಂದ ಜನರಿಗೆಲ್ಲರಿಗೂ ಪ್ರತಿಯೊಬ್ಬರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಕಿರೀಟವನ್ನು ತೋರಿಸಿ ಅದರ ಮಾಹಿತಿಯನ್ನು ಶ್ರೀಪಾದರೇ ನೀಡುತ್ತಿದ್ದರು. ಕಿರೀಟವನ್ನು ನೋಡಲು ಬಂದ ಜನರು ನೋಡಿ ಸುಮ್ಮನೆ ಹೊರಟು ಹೋದರೆ! ಇಲ್ಲ. ತಮ್ಮ ಜೇಬುಗಳಿಂದ ತೆಗೆದ ಯಥಾಶಕ್ತಿ ಕಾಣಿಕೆಯನ್ನು ಸಮರ್ಪಿಸಿದರು. ಈ ಕಾಣಿಕೆಯನ್ನು ಅರ್ಪಿಸಿದವರಲ್ಲಿ ಕುಹಕದೃಷ್ಟಿಯಿಂದ ಬಂದವರೂ ಸೇರಿದ್ದರೂ. ಕಾರಣ ಅವರಿಗೆ ಆ ವಜ್ರಖಚಿತ ಕಿರೀಟದ ಪೂರ್ಣಕಲ್ಪನೆ ಬಂದಿದ್ದೇ ಆವಾಗ. ಶ್ರೀಪಾದರ ಸಫಲಪ್ರಯತ್ನದ ಅದಕ್ಕೂ ಮಿಗಿಲಾಗಿ ಅವರ ತಪಶ್ಶಕ್ತಿಯ ಅರಿವು ಆಗಿದ್ದೇ ಆವಾಗ. ರಾತ್ರಿ ಕುಳಿತು ಬೆಳಗಿನಿಂದ ಸುರಿದ ಆ ಕಾಣಿಕೆಯನ್ನು ಲೆಕ್ಕಮಾಡಿದರೆ ಮೊತ್ತ ಒಂದು ಲಕ್ಷರೂಗಳನ್ನೂ ಮೀರಿತ್ತು. ಹೇಗಿದೆ! ಕುಳಿತಲ್ಲೇ ಅನಾಯಾಸವಾಗಿ ಲಕ್ಷಾಂತರ ರೂಪಾಯಿಗಳ ಸಂಪಾದನೆ. ಶ್ರೀಪಾದರು ಅದಕ್ಕಾಗಿ ಕೂತವರಲ್ಲ ಅದನ್ನು ಎಣಿಸಿದವರೂ ಅಲ್ಲ ಅದೇ ಅವರನ್ನು ಹಿಂಬಾಲಿಸಿ ಬಂತು. ಪತ್ರಿಕಾ ಕರ್ತರ ಸಮೂಹವೂ ಪಲಿಮಾರು ಮಠಕ್ಕೆ ಧಾವಿಸಿ ಬಂದಿತು. ಕಿರೀಟದ ಮಾಹಿತಿಯನ್ನು ಸಂಗ್ರಹಿಸುವ ಹಾಗೂ ಜನತೆಗೆ ತಿಳಿಸುವ ಅತೀವ ಉತ್ಸಾಹ ಆ ಪತ್ರಕರ್ತರಿಗಿತ್ತು. ಅಂತೂ ಚಿನ್ನದ ರಥ, ವಜ್ರದಕಿರೀಟಗಳ ಆರಂಭದ ಹಂತದಲ್ಲಿ ಮೂಗು ಮುರಿದು ಬೆರಳು ತೋರಿಸಿ ಶ್ರೀಪಾದರನ್ನು ಬೈಯ್ದ ಜನರೇ ತಮ್ಮ ಮೂಗಿನ ಮೇಲೆ ಬೆರಳಿಟ್ಟು ಅಚ್ಚರಿಪಡುವಂತಾಯಿತು.

10-11-1989 ರ ಮುಸ್ಸಂಜೆಯ ಹೊತ್ತಿನಲ್ಲಿ ಉಡುಪಿಯ ಜೋಡುಕಟ್ಟೆಯಿಂದ ಮೆರವಣಿಗೆಯ ಏರ್ಪಾಡಾಗಿತ್ತು. ಮೆರವಣಿಗೆಗಾಗಿ ಟ್ಯಾಬೋ ಒಂದನ್ನು ಅಲಂಕರಿಸಿ ಸುಂದರ ಮಂಟಪವನ್ನು ನಿರ್ಮಿಸಲಾಗಿತ್ತು. ಅದರಲ್ಲಿ ಶ್ರೀಮಧ್ವಾಚಾರ್ಯರ ಸುಂದರ ಶಿಲಾವಿಗ್ರಹ ಹಾಗೂ ವಜ್ರಕಿರೀಟಗಳನ್ನಿಡಲಾಗಿತ್ತು. ಪುಷ್ಪಾಲಂಕೃತ ವಾಹನದ ಮುಂದೆ ಶ್ರೀವಿದ್ಯಾಮಾನ್ಯತೀರ್ಥರು ಹಾಗೂ ಇತರ ಶ್ರೀಪಾದರ ಸಾನ್ನಿಧ್ಯವಿತ್ತು. ಅವರ ಮುಂದೆ ಅನೇಕ ಭಜನಾ ಮಂಡಳಿಗಳ ಭಜನೆಯಾಗುತ್ತಿತ್ತು. ಅದರ ಎದುರು ಸುಸ್ವರ ನಾದಸ್ವರಾದಿ ವಾದ್ಯವೃಂದ ಮೊಳಗುತ್ತಿತ್ತು. ಅದಕ್ಕೂ ಮುಂದೆ ಸ್ಕೌಟ್ ವಿದ್ಯಾರ್ಥಿಗಳ ಪಥಸಂಚಲನದ ಶಿಸ್ತು ಮೆರವಣಿಗೆಯ ಪ್ರಾರಂಭದಲ್ಲಿ ಬ್ಯಾಂಡ್ ಸೆಟ್ ಬೃಹದಾಕಾರದ ತಟ್ಟೀರಾಯಗಳ, ಬಿರುದಾವಳಿಗಳ ಸಮೂಹ ಸಾಗುತ್ತಿತ್ತು. ವೈಭವೋಪೇತ ಮೆರವಣಿಗೆಯಲ್ಲಿ ಭಕ್ತವೃಂದ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೇರಿತ್ತು.

ಮರುದಿನ 11-11-1989 ಬೆಳಿಗ್ಗೆ ಮತ್ತೊಮ್ಮೆ ಚಿನ್ನದರಥದಲ್ಲಿ ಶ್ರೀಕೃಷ್ಣನ ಶಿರವನ್ನೇರುವ ಕಿರೀಟದ

ಶೋಭಾಯಾತ್ರೆ, ಈ ಯಾತ್ರೆಯಲ್ಲಿ ಪರ್ಯಾಯ ಶ್ರೀಪಾದರೂ ಸೇರಿ ಎಲ್ಲ ಶ್ರೀಪಾದರೂ ಭಕ್ತರೂ ಸೇರಿದ್ದರು. ರಥಬೀದಿ ಪ್ರದಕ್ಷಿಣೆ ಬಂದ ಈ ಮೆರವಣಿಗೆಯ ನಂತರ ವಜ್ರಕಿರೀಟವು ಕೃಷ್ಣಮಠವನ್ನು ಪ್ರವೇಶಿಸಿತು. ಪರ್ಯಾಯ ಶ್ರೀಅದಮಾರು ಮಠದ ಶ್ರೀವಿಶ್ವಪ್ರಿಯತೀರ್ಥರು ಹಾಗೂ ಶ್ರೀ ವಿದ್ಯಾಮಾನ್ಯಶ್ರೀಪಾದರು ಮಧ್ವಸರೋವರದಲ್ಲಿ ಮಿಂದು ಬಂದರು . ಶ್ರೀವಿಶ್ವಪ್ರಿಯತೀರ್ಥರು ತಮ್ಮ ವಿದ್ಯಾಗುರುಗಳ ಅಪೇಕ್ಷೆಯ ಮೇರೆಗೆ ಎಲ್ಲ ಶ್ರೀಪಾದರ ಉಪಸ್ಥಿತಿಯಲ್ಲಿ ವಜ್ರಕಿರೀಟವನ್ನು ಶ್ರೀಕೃಷ್ಣನಿಗೆ ತೊಡಿಸಿದರು ಸಮರ್ಪಿಸಿದರು. ಶ್ರೀಕೃಷ್ಣನನ್ನು ವಿವಿಧ ಭಂಗಿಗಳಲ್ಲಿ ಸುಂದರವಾಗಿ ಅಲಂಕರಿಸುವ ನೈಪುಣ್ಯವನ್ನು ಹೊಂದಿರುವ ಶ್ರೀ ವಿಶ್ವಪ್ರಿಯತೀರ್ಥರು ಕಿರೀಟವನ್ನು ತೊಡಿಸಿದರು ನಂತರ ಆರ್ತಿ ಬೆಳಗಿದರು. ಶ್ರೀವಿದ್ಯಾಮಾನ್ಯತೀರ್ಥರು, ಶ್ರೀಮದಾಚಾರ್ಯರೇ ಶ್ರೀಕೃಷ್ಣನಿಗೆ ಕಿರೀಟವನ್ನು ಅರ್ಪಿಸಿದ ಆನಂದವನ್ನು ಅನುಭವಿಸಿದರು. ಅವರೂ ಆರತಿ ಬೆಳಗಿದರು.

ಆಚತುರ್ದಶ ಭುವನಾಧಿಪತಿಯಾದ ಶ್ರೀಕೃಷ್ಣನು ಸಾಮಾನ್ಯಕಿರೀಟವನ್ನಾಗಲಿ, ಮುಂಡಾಸನ್ನಾಗಲೀ, ಪೇಟವನ್ನಾಗಲೀ, ಧರಿಸಬಾರದು. ಅವನ ತಲೆಯ ಮೇಲೆ ಅಮೂಲ್ಯ ಕಿರೀಟ ಶೋಭಿಸಬೇಕು. ಅದನ್ನು ನೋಡಿ ಭಕ್ತರು ಆನಂದಿಸಬೇಕು ಎಂಬ ಶ್ರೀಪಾದರ ಬಯಕೆ ಪೂರ್ಣವಾಯಿತು. ಕೋಟಿ ಬೆಲೆಬಾಳುವ ವಜ್ರಕಿರೀಟ ಉಡುಪಿ ಕಿಟ್ಟಪ್ಪನ ತಲೆಯಲ್ಲಿ ಬಹಳ ಸರಿಯಾಗಿ ಕುಳಿತಿತು. ಆಳತೆ ಸರಿಯಾಗಿತ್ತು. ಕರ್ಣಕುಂಡಲಗಳೂ ಸರಿಯಾಗಿದ್ದವು. ಆದರೆ ಲಲಾಟಪಟ್ಟಿ ಮಾತ್ರ ಸರಿಯಾಗಿ ಕುಳಿತುಕೊಳ್ಳಲಿಲ್ಲ. ಅದಮಾರು ಶ್ರೀಪಾದರು ಎಷ್ಟು ಪ್ರಯತ್ನ ಪಟ್ಟರೂ ಸರಿಯಾಗಲಿಲ್ಲ ಏನು ಮಾಡುವುದೆಂದು ಎಲ್ಲರಿಗೂ ಚಿಂತೆಯಾಯಿತು. ಅದನ್ನು ಕರಗಿಸಿ ಮತ್ತೆ ಲಲಾಟಪಟ್ಟಿಯನ್ನು ಮಾಡಿಸಿದರೆ ಆಗುವ ವ್ಯರ್ಥವ್ಯಯ ಶ್ರೀವಿದ್ಯಾಮಾನ್ಯತೀರ್ಥರಿಗೆ ಹಿಡಿಸಲಿಲ್ಲ. ಅದಕ್ಕೆ ಅವರು 'ಆ ಲಲಾಟವಟ್ಟಿಯನ್ನು ಶ್ರೀಕೃಷ್ಣನ ಸೊಂಟದಲ್ಲಿಟ್ಟು ನೋಡಿರಿ' ಎಂದು ನುಡಿದರು. ಆಗ ಶ್ರೀವಿಶ್ವಪ್ರಿಯ ತೀರ್ಥರು ಅದನ್ನು ಸೊಂಟದಲ್ಲಿಟ್ಟರೆ ಆ ಅಳತೆಯನ್ನು ನೋಡಿಯೇ ಮಾಡಿಸಿದಷ್ಟು ಸರಿಯಾಗಿತ್ತು. ಅಂತೂ ಲಲಾಟ ಪಟ್ಟಿ ಸೊಂಟವಟ್ಟಿಯಾಯಿತು. ಆಗ ಪಲಿಮಾರು ಶ್ರೀಪಾದರು ಅದು ಹಾಗೆಯೇ ಇರಲಿ. ಲಲಾಟ ಪಟ್ಟಿಯನ್ನು ಪ್ರತ್ಯೇಕವಾಗಿ ಮಾಡಿಸೋಣ ಎಂದರು. (ಕೆಲವು ದಿನಗಳ ನಂತರ ಹೊಸದಾದ ವಜ್ರಖಚಿತ ಲಲಾಟವಟ್ಟಿಯೂ ಸಮರ್ಪಿತವಾಯಿತು) ಶ್ರೀಕೃಷ್ಣನಿಗೆ ಕೇವಲ ಕಿರೀಟ ಕರ್ಣಕುಂಡಲ ಲಲಾಟಪಟ್ಟಿಮಾತ್ರ ಸಾಕಾಗಲಿಲ್ಲ ಸೊಂಟಪಟ್ಟಿಯೂ ಬೇಕಿತ್ತು. ಅದಕ್ಕೆ ಇಂತಹ ಚಮತ್ಕಾರವನ್ನು ತೋರಿಸಿದ ಎಂದ ಭಾವುಕರ ಹೃದಯ ಮುದಪಟ್ಟಿತು.

ಸಂಜೆಯ ವೇಳೆಯಲ್ಲಿ ರಾಜಾಂಗಣಸಭಾಂಗಣದಲ್ಲಿ ವಜ್ರಕಿರೀಟದ ಸಮರ್ಪಣ ಸಮಾರಂಭದ ಅಂಗವಾಗಿ ಸಭಾಕಾರ್ಯಕ್ರಮ ನಡೆಯಿತು. ಪರ್ಯಾಯ ಶ್ರೀಅದಮಾರು ಮಠದ ಶ್ರೀವಿಬುಧೇಶತೀರ್ಥ ಶ್ರೀಪಾದರು, ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು, ಶ್ರೀಪೇಜಾವರಮಠದ ಶ್ರೀವಿಶ್ವೇಶತೀರ್ಥ ಶ್ರೀಪಾದರು. ಶ್ರೀಸುಬ್ರಹ್ಮಣ್ಯಮಠಾಧೀಶರು, ಶ್ರೀಪುತ್ತಿಗೆ ಮಠಾಧೀಶರು, ಪಲಿಮಾರು ಕಿರಿಯ ಶ್ರೀಪಾದರು,

ಭಂಡಾರಕೇರಿ ಕಿರಿಯ ಶ್ರೀಪಾದರು, ಪೇಜಾವರ ಕಿರಿಯ ಶ್ರೀಪಾದರು ಉಪಸ್ಥಿತರಿದ್ದರು. ಸಭಾಧ್ಯಕ್ಷರಾಗಿದ್ದ ಶ್ರೀವಿಶ್ವಪ್ರಿಯ ತೀರ್ಥರು 'ಶ್ರೀಕೃಷ್ಣನಿಗೆ ವಜ್ರಕಿರೀಟವನ್ನು ಸಮರ್ಪಿಸುವ ನಮ್ಮ ಸುಯೋಗ ಪೂಜ್ಯಗುರುಗಳು ಮಾಡಿದ ಪೂರ್ಣಅನುಗ್ರಹ ಅದು ಸದಾ ನಮ್ಮಲ್ಲಿರಬೇಕು' ಎಂದು ನುಡಿದರು. ಶ್ರೀವಿದ್ಯಾಮಾನ್ಯತೀರ್ಥರು "ಭಕ್ತರ ಸಹಕಾರದಿಂದಲೇ ಈ ಕಿರೀಟವು ನಿರ್ಮಿತವಾಗಿದೆ ಆ ಎಲ್ಲ ಭಕ್ತರಿಗೂ ಶ್ರೀಕೃಷ್ಣಮುಖ್ಯಪ್ರಾಣರ ಅನುಗ್ರಹವಿರಲಿ. ಈ ಕಿರೀಟವು ನಮ್ಮ ಶಿಷ್ಯರ ಪರ್ಯಾಯದಲ್ಲೇ ಶ್ರೀಕೃಷ್ಣನಿಗೆ ಸಮರ್ಪಿತವಾಯಿತೆಂದು ಸಂತಸವಾಗುತ್ತಿದೆ ಎಂದು ನುಡಿದರು. ಆನಂತರದಲ್ಲಿ ಎಲ್ಲ ಶ್ರೀಪಾದರೂ ಸಂದೇಶವನ್ನಿತ್ತರು.

ಆ ಬಳಿಕವಿಶೇಷ ದಾನಿಗಳೆಲ್ಲರಿಗೂ ಅನುಗ್ರಹ ಮಂತ್ರಾಕ್ಷತೆ, ಪ್ರಸಾದಗಳನ್ನು ನೀಡಿ ಸನ್ಮಾನಿಸಲಾಯಿತು. ವಜ್ರಕಿರೀಟ ನಿರ್ಮಿಸಲು ಸಹಾಯಕರಾಗಿದ್ದ ಶ್ರೀಕೃಷ್ಣಮೂರ್ತಿ ಆಚಾರ್ಯರನ್ನು ಹಾಗೂ ಸಮೀರ್ ಡೈಮಂಡ್ ಕಂಪೆನಿಯ ಮಾಲಿಕರನ್ನುಸನ್ಮಾನಿಸಲಾಯಿತು. ರಾತ್ರಿ ಸುವರ್ಣರಥೋತ್ಸವವು ನಡೆಸು, ಶ್ರೀಸುಬ್ರಹ್ಮಣ್ಯ ಮಠಾಧೀಶರಿಂದ ಭಕ್ತಿಗಾನ ಸಂಗೀತ ಕಾರ್ಯಕ್ರಮ ನಡೆಯಿತು.

ಹೀಗೆ ಅತ್ಯುತ್ತಮ, ಭಾರಿ ಬೆಲೆಬಾಳುವ ವಜ್ರಗಳನ್ನೊಳಗೊಂಡ ಸುಂದರ ಮುಕುಟವು ಶ್ರೀಕೃಷ್ಣನ ಶಿರದಲ್ಲಿ ಕಂಗೊಳಿಸಿತು. ಶ್ರೀವಿದ್ಯಾಮಾನ್ಯತೀರ್ಥರ ಮಹಾಸಾಧನೆಯಿಂದ ಉಡುಪಿಯ ಇತಿಹಾಸಕ್ಕೆ ವಜ್ರದ ಮೆರಗು ಬಂದಿತು.



# ''ಮಠದ್ವಯಾಧಿಪತ್ಯದ ಸಾರ್ಥಕ್ಯ''

ವೇದ, ವೇದಾಂತಗಳ ವಾಸ್ತವ ತತ್ತ್ವವನ್ನು ಮನಗಂಡ ಹಾಗೂ ಜಗತ್ತಿಗೆ ತೋರಿದ, ಸಾತ್ವಿಕರನ್ನು ಉದ್ಧರಿಸಿದ ಉತ್ಕೃಷ್ಟ ದಾರ್ಶನಿಕರು ತ್ರೈಲೋಕ್ಯಗುರುಗಳಾದ ಶ್ರೀಮನ್ಮಧ್ವಾಚಾರ್ಯರು. ಅವರು ಶಂಕರ, ರಾಮಾನುಜ ಮೊದಲಾದ ದಾರ್ಶನಿಕರು ತಮ್ಮ ತಮ್ಮ ಅಭಿಪ್ರಾಯಗಳನ್ನು ತತ್ವಗಳನ್ನು ಬಹಳ ವ್ಯಾಪಕವಾಗಿ ಪ್ರಚಾರಮಾಡಿದ್ದರು. ಅದಕ್ಕೆ ವಿರುದ್ಧವಾಗಿ, ಪ್ರಾಮಾಣಿಕತೆ ಹಾಗೂ ಧೈರ್ಯಗಳಿಂದ ದ್ವೈತ ಸತ್ಯತೆಯನ್ನು ತೋರಿದವರು. ಪ್ರಸ್ಥಾನ ತ್ರಯಗಳ ಅಧ್ಯಯನದಲ್ಲಿ ನವಜಾಗೃತಿಯನ್ನುಂಟು ಮಾಡಿದವರು. ಕೆಲವು ಜ್ಞಾನಪಿಪಾಸುಗಳು ಅವರ ಅದ್ಭುತ ವಾಕ್ಸರಣಿಗೆ ಹಾಗೂ ವಾಸ್ತವ ಸಿದ್ಧಾಂತ ಪ್ರತಿಪಾದನೆಗೆ, ಹರುಷದಿಂದ ವಶರಾದರು. ಆಚಾರ್ಯರನ್ನು ಗುರು ಗಳನ್ನಾಗಿ ಅಂಗೀಕರಿಸಿದರು. ಅವರನ್ನೇ ಅನುಕರಿಸಿದರು. ಅಂತಹವರು ಅನೇಕರು ಅಸಂಖ್ಯರು. ಆ ಶಿಷ್ಯಕೋಟಿಯಲ್ಲಿ ಯತಿಗಳು, ಗೃಹಸ್ಥರು ಹಾಗೂ ಬ್ರಹ್ಮಚಾರಿಗಳೂ ಹೀಗೆ ಎಲ್ಲರೂ ಇದ್ದರು. ಆಚಾರ್ಯರು ಆ ಯತಿಶಿಷ್ಯಕೂಟದಲ್ಲಿ ಎಂಟು ಮಂದಿ ಸಾಧಕರನ್ನು ತಮ್ಮ ಆರಾಧ್ಯ ಮೂರುತಿಯಾದ ಉಡುಪಿ ಶ್ರೀಕೃಷ್ಣನ ಪೂಜೆಗಾಗಿ ನೆಲೆಗೊಳಿಸಿದರು. ಆ ಯತಿಗಳ ಪರಂಪರೆಯೇ ಇಂದು ನಾವು ಕಾಣುವ ಉಡುಪಿಯ ಪ್ರಸಿದ್ಧ ಅಷ್ಟಮಠಗಳು, ಆ ಎಂಟು ಮಠಗಳ ಮೊದಲ ಯತಿಗಳು.

1) ಶ್ರೀಪಲಿಮಾರು ಮಠದ ಶ್ರೀಹೃಷೀಕೇಶತೀರ್ಥರು.

2) ಶ್ರೀಅದಮಾರು ಮಠದ ಶ್ರೀನರಸಿಂಹತೀರ್ಥರು.

3) ಶ್ರೀಕೃಷ್ಣಾಪುರ ಮಠದ ಶ್ರೀಜನಾರ್ದನತೀರ್ಥರು.

4) ಶ್ರೀಪುತ್ತಿಗೆ ಮಠದ ಶ್ರೀಉಪೇಂದ್ರತೀರ್ಥರು.

5) ಶ್ರೀಶೀರೂರು ಮಠದ ಶ್ರೀವಾಮನತೀರ್ಥರು.

6) ಶ್ರೀಸೋದೆ ಮಠದ ಶ್ರೀವಿಷ್ಣುತೀರ್ಥರು.

7) ಶ್ರೀಕಾಣಿಯೂರು ಮಠದ ಶ್ರೀರಾಮತೀರ್ಥರು.

8) ಶ್ರೀಪೇಜಾವರ ಮಠದ ಶ್ರೀಅಧೋಕ್ಷಜತೀರ್ಥರು.

## ಶ್ರೀಪಲಿಮಾರು ಮಠದ ಪರಂಪರೆ

### ಶ್ರೀಹೃಷೀಕೇಶತೀರ್ಥರು.

ಈ ಅಷ್ಟ ಯತಿಕೂಟದಲ್ಲಿ ಮೊದಲಿಗರು, ಆಶ್ರಮಜ್ಯೇಷ್ಠರು ಶ್ರೀಹೃಷೀಕೇಶತೀರ್ಥರು. ಶ್ರೀಮದಾ ಚಾರ್ಯರಿಂದ ಶ್ರೀಲಕ್ಷ್ಮಣ, ಆಂಜನೇಯ, ಸೀತಾರಾಮಚಂದ್ರ ದೇವರುಗಳ ಸುಂದರ ವಿಗ್ರಹಗಳನ್ನು ಉಪಾಸನೆಗಾಗಿ ಸ್ವೀಕರಿಸಿದವರು. ಇವರನ್ನು ಶ್ರೀನಾರಾಯಣಪಂಡಿತಾ ಚಾರ್ಯರು ಶ್ರೀಮದಾ ಚಾರ್ಯರ 'ನಿಜಶಿಷ್ಯಪ್ರವರ' ಎಂದು ಬಣ್ಣಿಸಿದರು. ಈ ಮಾತಿಗೆ ಅವರ ಆಶ್ರಮಜ್ಯೇಷ್ಠತೇ ಮಾತ್ರ ನಿಮಿತ್ತವಲ್ಲ. ಅವರಲ್ಲಿದ್ದ ಆಚಾರ್ಯರ ಪ್ರೀತಿಯ ಆಧಿಕ್ಯವೂ ಕೂಡ. ಅವರು ಆಚಾರ್ಯರು ರಚಿಸಿರುವ ಸಕಲಗ್ರಂಥಗಳನ್ನೂ ಬರೆದು ರಕ್ಷಣೆ ಮಾಡಿದ ಮಹಾತ್ಮರು. ಶ್ರೀಮದಾ ಚಾರ್ಯರ ಭಾಗವತ ಪ್ರವಚನಕಾಲದಲ್ಲಿ ತಮ್ಮ ಕಂಠದ ಮಾಧುರ್ಯಸಿರಿಯಿಂದ ಭಾಗವತಶ್ಲೋಕಗಳನ್ನು ಹಾಡುತ್ತಿದ್ದರು. ಹೀಗೆ ಅನೇಕವಿಧದಿಂದ ಗುರುಪ್ರೀತಿ ಪಾತ್ರರಾದವರು. ಅವರೊಂದು ವಿರೋಧಿ ಸಂವತ್ಸರದ ಮಾಘ ಶುದ್ಧರಥಸಪ್ತಮಿ ದಿನದಂದು, ತ್ರಿವೇಣಿಸಂಗಮದ ಪ್ರಯಾಗದಲ್ಲಿ ಮಾಧವನನ್ನು ಧ್ಯಾನಿಸುತ್ತ ತಮ್ಮ ಇಹ ಲೋಕದ ಯಾತ್ರೆಯನ್ನು ಪೂರ್ಣಗೊಳಿಸಿದರು. ಶ್ರೀಹರಿಯ ಪದವನ್ನೈದಿದರು. ಇದರ ಬಗ್ಗೆ ಶ್ರೀ ಪಲಿಮಾರು ಮಠದ ಹಳೆಯ ತಾಡವಾಲೆಯ ದಾಖಲೆ, ನೀಡುವ ಮಾಹಿತಿ–

ವಿರೋಧಿಮಾಲಾರ್ಜುನ ಸಪ್ತಮೀ ತಿಥೌ
ವರೋ ಹೃಷೀಕೇಶ ಮುನಿಸ್ತಪಸ್ವಿನಾಮ್ ।
ಪುರುಪ್ರಬೋಧಾರ್ಯಕರಾಬ್ಜಸಂಭವೋ
ಧರಾಸುತೇಶಾಂಘ್ರಿಸರೋಜಮೇಯಿವಾನ್ 'ಎಂದು

ಶ್ರೀಮದಾಚಾರ್ಯರ ಕರದಿಂದಲೇ ನೇರವಾಗಿ ತುರೀಯಾಶ್ರಮವನ್ನು ಸ್ವೀಕರಿಸಿದ ಈ ಪೂಜ್ಯಪುರುಷ ರಿಂದ ಇಂದಿನ ತನಕ ಹರಿದು ಬಂದ ಈ ಪಾವನ ಪರಂಪರೆಯಲ್ಲಿ ಮಿಂಚಿದ ಒಬ್ಬೊಬ್ಬ ಯತಿಗಳೂ ಮಾಧ್ವ ಮಂದಿರದ ಇತಿಹಾಸದಲ್ಲಿ ಒಂದೊಂದು ನಂದಾದೀಪ. ಶ್ರೀಮದಾ ಚಾರ್ಯರಿಂದ ಇಂದಿನವರೆಗೆ 7 ಶತಕಗಳಲ್ಲಿ ಈ ಪೀಠವನ್ನು ಅಲಂಕರಿಸಿದವರು 28 ಮಂದಿ ಯತಿ ಪುಂಗವರು. ಇಪ್ಪತ್ತೊಂಭತ್ತನೆಯವರು ಶ್ರೀಶ್ರೀವಿದ್ಯಾ ಮಾನ್ಯತೀರ್ಥರು. ಅವರ ಉತ್ತರಾಧಿಕಾರಿ ಗಳಾದ ಶ್ರೀಶ್ರೀವಿದ್ಯಾಧೀಶ ತೀರ್ಥರು ಮೂವತ್ತನೆಯವರು. ಅವರು ಆಚರಿಸುತ್ತಿರುವ ತಮ್ಮ ಗುರುಗಳ ಈ ಪ್ರಥಮ ಆರಾಧನಾ ಮಹೋತ್ಸವ ಸಂದರ್ಭದಲ್ಲಿ ಈ ಪೀಠದ ಪರಂಪರೆಯ ಕುರಿತಾಗಿ ಕಿಂಚಿತ್ತಾದರೂ ತಿಳಿಯುವುದು ಸಮುಚಿತವಾದುದು. ಆ ಯತಿಪುಂಗವರ ಪುಣ್ಯಸ್ಮರಣೆ ನಮ್ಮನ್ನು ಉದ್ಧರನ್ನಾಗಿಸಬಲ್ಲದು.

### 2. ಶ್ರೀಸಮಾತ್ಮೇಶ ತೀರ್ಥರು.

ಶ್ರೀಹೃಷೀಕೇಶತೀರ್ಥರಿಂದ ಆಶ್ರಮದೀಕ್ಷೆ ಪಡೆದು ಈ ಪೀಠವನ್ನೇರಿದ ಭಾಗ್ಯ ಇವರದು. 'ಸಮಾತ್ಮಾ ಸಮ್ಮಿತಃ ಸಮಃ' ಎಂದು ಭಗವಂತನ ಸಹಸ್ರನಾಮಗಳಲ್ಲೊಂದು. ಅದರೊಂದಿಗೆ ತಮ್ಮ ಹೆಸರಿನ ಒಂದಂಶವಾದ 'ಈಶ' ಪದವನ್ನು ಸೇರಿಸಿ ಈ ಶಿಷ್ಯರಿಗೆ ಆಶ್ರಮ ನೀಡಿದ ಮಹಾಗುರುಗಳು ಶ್ರೀಹೃಷೀಕೇಶತೀರ್ಥರು. ಸಮಾತ್ಮನಾದ ಭಗವಂತನು ಇವರಿಗೆ ಈಶ ಹಾಗೂ ಎಲ್ಲೆಡೆಯಲ್ಲಿ ಸಮದೃಷ್ಟಿಯನ್ನು ಹೊಂದಿದ ಸಮಾತ್ಮರಾದ

ಈ ಸಾಧಕರಿಗೆ ಈಶ ಹೀಗೆ ಉಭಯವಿಧದಲ್ಲೂ ಇವರ ಹೆಸರು ಅನ್ವರ್ಥವಾಯಿತು.

ಇವರು ತಮ್ಮ ಗುರುಗಳಂತೆ ಪೂರ್ಣ ಅಂತರ್ಮುಖಿಗಳಾಗಿ ಭಗವಂತನನ್ನು ಧ್ಯಾನಿಸುತ್ತಾ ಜೀವನ ಕಳೆದು ಪರಾಭವ ಸಂವತ್ಸರದ ಶ್ರಾವಣ ಶುಕ್ಲ ಬಿದಿಗೆಯಂದು ಕೃಷ್ಣಾನದೀ ತೀರದಲ್ಲಿ ಶ್ರೀಕೃಷ್ಣನ ಪಾದವನ್ನು ಸೇರಿದರು.

## 3.ಶ್ರೀಸಂಭವತೀರ್ಥರು.

ಪರಂಪರೆಯಲ್ಲಿ ಮೂರನೆಯವರು. ಇವರ ನಾಮವೂ ವಿಷ್ಣುಸಹಸ್ರನಾಮಗಳಲ್ಲಿ ಒಂದು. ತಮ್ಮ ಗುರುಗಳಾದ ಶ್ರೀಸಮಾತ್ಮೇಶತೀರ್ಥರ ನಂತರ ಸುಮಾರು ಹದಿನೇಳು ವರ್ಷಗಳ ಕಾಲ ಈ ಪೀಠವನ್ನು ಅಲಂಕರಿಸಿದ್ದರು. ಸಚ್ಛಾಸ್ತ್ರಪಾಠ-ಪ್ರವಚನ ಹಾಗೂ ಭಗವದರ್ಚನಾದಿ ಗಳಿಂದಲೇ ಸಾರ್ಥಕವಾಗಿ ಬಾಳಿದರು. ಶುಕ್ಲಸಂವತ್ಸರದ ವೈಶಾಖ ಶುದ್ಧ ಪಂಚಮಿಯಂದು ಅಯೋಧ್ಯೆಯಲ್ಲಿ ಶ್ರೀರಾಮನ ಪಾದವನ್ನು ಸೇರಿದರು.

## 4. ಶ್ರೀಅಪರಾಜಿತತೀರ್ಥರು.

ಪರಂಪರೆಯ ನಾಲ್ಕನೆಯ ಯತಿಗಳು. 'ಅಪರಾಜಿತ' ವೆನ್ನುವುದೂ ವಿಷ್ಣುಸಹಸ್ರನಾಮ ಗಳಲ್ಲೊಂದು. ಪಾಠ ಪ್ರವಚನ ಅರ್ಚನ ಧ್ಯಾನಗಳೊಂದಿಗೆ ಜೀವನವನ್ನು ಕಳೆದು 30 ವರ್ಷಗಳವರೆಗೆ ಮಠವನ್ನಾಳಿದರು. ವಿರೋಧಿ ಸಂವತ್ಸರದ ಮಾಘ ಶುದ್ಧ ಸಪ್ತಮಿಯಂದೇ ಗೋದಾವರಿ ತಟದಲ್ಲಿ ವೃಂದವನಸ್ಥರಾದರು.

## 5. ಶ್ರೀವಿದ್ಯಾಮೂರ್ತಿತೀರ್ಥರು.

ಪರಂಪರೆಯ ಐದನೆಯ ಯತಿಗಳಾದ ಇವರು ಸಾರ್ಥಕನಾಮರು. ಘನವಿದ್ವತ್ತಿನ ಮೂರ್ತಿಯಾಗಿದ್ದರು. ಶ್ರೀಮಟ್ಟೀಕಾಕೃತ್ಪಾದರ ಸಮಕಾಲಿಕರು. ಅನೇಕ ಬಾರಿ ದುರ್ವಾದಿಗಳನ್ನು ವಾದದಲ್ಲಿ ಸೋಲಿಸಿಜಯಶೀಲರಾದ ಬಗ್ಗೆ ಅನೇಕ ದಾಖಲೆಗಳುಂಟು. ಶ್ರೀಮಜ್ಜಯತೀರ್ಥರೂ ಹಾಗೂ ಇವರು, ಜೊತೆಯಾಗಿ ಶ್ರೀಮದಾಚಾರ್ಯರ ತತ್ವವನ್ನು ಪ್ರಚಾರಮಾಡಿರಬೇಕು. ಹನ್ನೊಂದು ವರ್ಷಗಳ ಕಾಲ ಪೀಠವನ್ನಾಳಿದ ಇವರು ಪ್ಲವ ಸಂವತ್ಸರದ ವೈಶಾಖ ಶುದ್ಧ ಅಷ್ಟಮೀ ದಿನದಂದು ಮಳಖೇಡದಲ್ಲಿ ಕೇಶವನ ಪಾದವನ್ನು ಸೇರಿದರು.

## 6. ಶ್ರೀರಾಜರಾಜೇಶ್ವರತೀರ್ಥರು.

ಶ್ರೀವಿದ್ಯಾಮೂರ್ತಿತೀರ್ಥರು ತಮ್ಮ ಗುರು ಶ್ರೀಅಪರಾಜಿತ ತೀರ್ಥರು ಪೀಠದಲ್ಲಿರುವಾಗಲೇ ಇನ್ನೋರ್ವ ವಟುವಿಗೆ ಆಶ್ರಮನೀಡಿದ್ದರು. ಗುರು-ಪರಮಗುರುಗಳ ಕೀರ್ತಿಗೆ ಒಪ್ಪಕೊಡುವ ಸ್ವಾಭಾವಿಕ ಪಾಂಡಿತ್ಯವುಳ್ಳವರು ಶ್ರೀರಾಜರಾಜೇಶ್ವರತೀರ್ಥರು. ಮಾಧ್ವರ ಮನೆಮನೆಗಳಲ್ಲಿ ಮುಂಜಾವಿನಲ್ಲಿ ಮಂಗಲಕಾರ್ಯಗಳಲ್ಲಿ ಪಠಿಸುವ 'ಮಂಗಲಾಷ್ಟಕ' ವನ್ನು ರಚಿಸಿದ ಕಾವ್ಯಋಷಿಗಳು. ಕಾಳಿದಾಸನ 'ಮೇಘಸಂದೇಶ' ವೇದಾಂತದೇಶಿಕರ 'ಹಂಸಸಂದೇಶ' ದಂತೆ 'ರಾಮಸಂದೇಶ' ಎಂಬ ಅದ್ಭುತ ಕಾವ್ಯವನ್ನು ರಚಿಸಿದರು. ಕಾವ್ಯಸಾಗರದಲ್ಲಿ ಲೀಲಾಜಾಲ ವಾಗಿ ಈಜಾಡಿದವರು. ನ್ಯಾಯಶಾಸ್ತ್ರಗಳಲ್ಲೂ ಎದುರಿಲ್ಲದ ವಾಕ್ಪಟು ಪಂಡಿತರು. ಪುಟ್ಟ ಯತಿಗಳ ಶ್ರೇಷ್ಠ ವಿದ್ವತ್ತು ಕವಿತ್ವ ಗಳನ್ನು ಕಂಡು

ಅನೇಕ ರಾಜರು ಇವರನ್ನು ಸತ್ಕರಿಸಿ ಅನೇಕ ಜಹಗೀರುಗಳನ್ನು ಶ್ರೀಪಲಿಮಾರು ಮಠಕ್ಕೆ ಅರ್ಪಿಸಿರುವುದು ದಾಖಲೆಯಾಗಿದೆ. ಆ ಮಠದ ಸಂಪತ್ತಿನ ಅರ್ಧಾಂಶವು ಶ್ರೀರಾಜರಾಜೇಶ್ವರತೀರ್ಥರಪ್ರತಿಭೆಯ ಫಲವಾಗಿದೆ. ಅದಕ್ಕೊಂದು ಪುಟ್ಟ ದೃಷ್ಟಾಂತ ಕಾಂತಾವರದ ಮಠ.

ಪಟ್ಟವನ್ನೇರುವ ಮುಂಚೆಯೇ ಗುರುಗಳ ಸನ್ನಿಧಿಯಲ್ಲಿ ಬೌದ್ಧಿಕ ಹಾಗೂ ಭೌತಿಕ ಸಂಪತ್ತನ್ನು ಶ್ರೀರಾಮನಿಗೆ ಅರ್ಪಿಸಿ ಅತೀ ಕಿರಿಯ ವಯಸ್ಸಿನಲ್ಲೇ ಅವನ ಪದವನ್ನು ಸೇರಿದರು. ಆ ದಿನದ ದಾಖಲೆ ದೊರತಿಲ್ಲವೆಂಬುದು ಸಮಾಜದ ದುರದೃಷ್ಟಸಂಗತಿ. ಅವರು ಅತಿ ಅಕಾಲದಲ್ಲೇ ಸಮಾಜ ದಿಂದ ದೂರವಾದರೂ ಅವರ ಕೃತಿಗಳು ಇನ್ನೂ ಸ್ಥಿರವಾಗಿವೆ. ಮುಂದೆಯೂ ಆಗುವುವು. ಅವರ ವೃಂದಾವನ ಪಲಿಮಾರು ಗ್ರಾಮದ ಮಠದ ಪವಿತ್ರವರಿಸರದಲ್ಲಿದೆ. ಅವರ ಅಗಲಿಕೆಯಿಂದ ಅತ್ಯಂತದುಃಖಿತರಾದ ಶ್ರೀವಿದ್ಯಾಮೂರ್ತಿತೀರ್ಥರು ಇನ್ನೋರ್ವ ವಿದ್ವಾಂಸರಿಗೆ ಆಶ್ರಮ ನೀಡಿದರು. ಅವರು.

## 7. ಶ್ರೀಶ್ರೀನಿಧಿತೀರ್ಥರು.

ಇವರು ಮಠದ ಪರಂಪರೆಯಲ್ಲಿ ಏಳನೆಯವರು ಗುರುಗಳ ಅನುಗ್ರಹ ಹಾಗೂ ಸಾಧನೆಗಳಿಂದ ವಿದ್ಯಾಪರಿಣತಿಯನ್ನು ತಮ್ಮಲ್ಲಿ ಅಳವಡಿಸಿಕೊಂಡವರು. ನಿರಂತರ ಪಾಠ ಪ್ರವಚನಗಳಲ್ಲಿ ರತರಾದವರು. ಹದಿನೆಂಟು ವರುಷಗಳ ಕಾಲ ಶ್ರೀರಾಮನನ್ನು ಅರ್ಚಿಸಿ ಶುಕ್ಲ ಸಂವತ್ಸರ ಆಷಾಢ ಶುದ್ಧ ಷಷ್ಠಿಯಂದು ಜಗನ್ನಾಥಪುರಿಯಲ್ಲಿ ಜಗದೊಡೆಯನ ಪದವನ್ನೈದಿದರು.

## 8. ಶ್ರೀವಿದ್ಯೇಶತೀರ್ಥರು.

ಪರಂಪರೆಯ ಎಂಟನೆಯ ಯತಿಗಳು. ಪಾಠ ಪ್ರವಚನಗಳನ್ನು ನಡೆಸುತ್ತಾ ಭಕ್ತಿಯಿಂದ ರಾಮಾರ್ಚನವನ್ನು ನಡೆಸುತ್ತಾ ಭಗವಂತನನ್ನು ಒಲಿಸಿಕೊಂಡವರು. ಸುಮಾರು 47 ವರುಷಗಳ ವರೆಗೆ ಪೀಠವನ್ನಾಳಿ ಪ್ರಮಾಥಿನಾಮ ಸಂವತ್ಸರದ ಶ್ರಾವಣಮಾಸದ ಶುಕ್ಲಪಕ್ಷದ ಸಪ್ತಮೀಯಂದು ರಾಮೇಶ್ವರಕ್ಷೇತ್ರದಲ್ಲಿ ರಾಮನಾಥನ ಪಾದವನ್ನು ಸೇರಿದರು.

## 9.ಶ್ರೀಶ್ರೀವಲ್ಲಭತೀರ್ಥರು.

ಒಂಬತ್ತನೆಯ ಯತಿಗಳಾದ ಇವರು, ಉಪವಾಸಾದಿಗಳಿಂದ ದೇಹದಂಡನೆಯನ್ನು ಮಾಡುತ್ತಾ ನೈಷ್ಠಿಕ ತಪಸ್ವಿಜೀವನವನ್ನು ಕಳೆದರು. ಬ್ರಾಹ್ಮಣದೇಹವು ತಪಸ್ಸಿಗಾಗಿ ಹೊರತು ಕ್ಷುದ್ರಸುಖಕ್ಕಾಗಿ ಅಲ್ಲ ಎಂಬ ಧೋರಣೆಯ ನೈಷ್ಠಿಕ ಜೀವನ ಅವರದು. ಸುಮಾರು ಮೂವತ್ತೆಂಟು ವರ್ಷಗಳ ಕಾಲ ಪೀಠವನ್ನಾಳಿ ಜಯ ಸಂವತ್ಸರದ ಪುಷ್ಯ ಮಾಸ ಶುದ್ಧ ಪ್ರತಿಪದೆಯಂದು ಪಲಿಮಾರುಗ್ರಾಮದ ಮಠದಲ್ಲಿ ವೇದವ್ಯಾಸದೇವರ ಪದವನ್ನುಸೇರಿದರು.

## 10. ಶ್ರೀಜಗದ್ಭೂಷಣತೀರ್ಥರು.

ಹತ್ತನೆಯ ಯತಿಗಳಾದ ಇವರು ಸಕಲತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಭಕ್ತಿಪ್ರಸಾರವನ್ನು ಮಾಡುತ್ತಾ ಜೀವನವನ್ನು ಸಾಗಿಸಿದವರು. ಹತ್ತು ವರ್ಷಗಳ ಕಾಲ ಪೀಠವನ್ನಾಳಿ ಶೋಭನ ಸಂವತ್ಸರದ ಚೈತ್ರಶುದ್ಧ ದ್ವಾದಶಿಯಂದು ತಿರುಪತಿಯಲ್ಲಿ ಶ್ರೀಶ್ರೀನಿವಾಸನ ಪದವನ್ನುಸೇರಿದರು.

## 11. ಶ್ರೀರಾಮಚಂದ್ರತೀರ್ಥರು.

ಗುರುಪೀಠಿಗೆಯಲ್ಲಿ ಹನ್ನೊಂದನೆಯವರು. ವಾದದಲ್ಲಿ ವಾದಿಗಳನ್ನು ಸೋಲಿಸಿ ಮಧ್ವಸಿದ್ಧಾಂತದ ವಿಜಯ ಪತಾಕೆಯನ್ನು ಬಾನೆತ್ತರಕ್ಕೆ ಹಾರಿಸಿದ ಘನವಿದ್ವಾಂಸರು. ಅವರಿದ್ದ ಕಾಲದಲ್ಲಿ ವ್ಯಾಸರಾಜರು, ವಾದಿರಾಜರು ವಿಜಯೀಂದ್ರರೇ ಮೊದಲಾದ ಮಹಾನುಭಾವರೂ ವಿಜೃಂಭಿಸುತ್ತಿದ್ದರು. ಎರಡು ದಶಕಗಳ ಕಾಲ ಪೀಠದಲ್ಲಿ ವಿರಾಜಮಾನರಾಗಿ ದುರ್ಮುಖ ಸಂವತ್ಸರದ ಕಾರ್ತಿಕ ಬಹುಳ ಚತುರ್ದಶಿಯಂದು ಭೀಮರಥಿತೀರದ ಪಂಢರಪುರದಲ್ಲಿ ಪಾಂಡುರಂಗನ ಪಾದವನ್ನುಸೇರಿದರು.

## 12. ಶ್ರೀವಿದ್ಯಾನಿಧಿತೀರ್ಥರು.

ಹನ್ನೆರಡನೆಯ ಯತಿಗಳಾಗಿವ ಇವರು ಗುರುಗಳಿಗೆ ತಕ್ಕ ಶಿಷ್ಯರಾಗಿದ್ದರು ಎಲ್ಲಶಾಸ್ತ್ರಗಳಲ್ಲೂ ಅಸದೃಶಪಾಂಡಿತ್ಯ ವುಳ್ಳವರು.ತಮ್ಮ ಜೀವನದ ಹೆಚ್ಚಿನ ಜೀವನವನ್ನು ಶಾಸ್ತ್ರಪಾಠ ಪ್ರವಚನಗಳಲ್ಲಿಯೇ ಕಳೆದವರು. ಹನ್ನೆರಡು ವರ್ಷಗಳ ಕಾಲ ಪೀಠವನ್ನಾಳಿ ಶ್ರೀಮುಖ ಸಂವತ್ಸರದ ವೈಶಾಖ ಪೂರ್ಣಿಮೆಯಂದು ಪಲಿಮಾರು ಗ್ರಾಮದ ಮಠದಲ್ಲಿಯೇ ಬಾದರಾಯಣನ ಪಾದಾರವಿಂದವನ್ನು ಹೊಂದಿದರು.

## 13 ಶ್ರೀಸುರೇಶತೀರ್ಥರು

ಪರಂಪರೆಯ ಹದಿಮೂರನೆಯ ಯತಿಗಳು. ಕಾಷ್ಠಮೌನದಂಥ ಕಠಿಣ ತಪಶ್ಚರ್ಯೆಯಲ್ಲಿ ತಮ್ಮ ಜೀವನವನ್ನುಕಳೆದರು. ಹದಿನಾರು ವರ್ಷಗಳ ಕಾಲ ಪೀಠ ವನ್ನಲಂಕರಿಸಿ ವಿರೋಧಿಸಂವತ್ಸರದ ಜ್ಯೇಷ್ಠ ಬಹುಳ ಪಂಚಮಿಯಂದು ಪಲಿಮಾರು ಗ್ರಾಮದ ಮಠದಲ್ಲಿಯೇ ಭಗವಂತನ ಪಾದವನ್ನುಸೇರಿದರು.

## 14. ಶ್ರೀರಾಘವೇಂದ್ರತೀರ್ಥರು.

ಹದಿನಾಲ್ಕನೆಯ ಯತಿವರರು. ತಮ್ಮ ಗುರುಗಳಂತೆ ಮಹಾಕರ್ಮಠರಿದ್ದರು. ಚಾಂದ್ರಾಯಣಾದಿ ವ್ರತಗಳು ನಿತ್ಯಕರ್ಮಗಳಂತಾಗಿದ್ದವು. ಸದಾ ಪಾಠ ಪ್ರವಚನ ಶೀಲರಾದ ಇವರು ಎಂಟು ಭಾರಿ ನ್ಯಾಯಸುಧಾಪಾಠ ಮಾಡಿಮಂಗಲವನ್ನು ಮಾಡಿದ ಮಹಾಜ್ಞಾನಿಗಳು. ಹದಿಮೂರು ವರ್ಷಗಳ ಕಾಲ ಪೀಠವನ್ನಾಳಿ ಶುಭಕೃತ್ ಸಂವತ್ಸರದ ಮಾಘಶುದ್ಧ ಅಷ್ಟಮೀ(ಭೀಷ್ಮಾಷ್ಟಮೀ) ಯಂದು ಕಾವೇರಿತೀರದಲ್ಲಿ ಶ್ರೀರಂಗಕ್ಷೇತ್ರದಲ್ಲಿ ಶ್ರೀರಂಗನಾಥನ ಚರಣವನ್ನುಸೇರಿದರು.

## 15. ಶ್ರೀರಘುನಂದನತೀರ್ಥರು.

ಪರಂಪರೆಯಲ್ಲಿ ಹದಿನೈದನೆಯವರು. ಇವರು ಪಾಠಪ್ರವಚನದಲ್ಲಿಗುರುಗಳನ್ನುಮೀರಿಸಿ ಒಂಬತ್ತುಬಾರಿ ಸುಧಾಮಂಗಲ ಮಾಡಿದ ಮಹಾಪಂಡಿತರು. ಇವರ ಪೀಠಾಧಿಪತ್ಯದ ಕಾಲ ಒಂಬತ್ತು ವರುಷಮಾತ್ರ. ಪ್ರಮಾಧಿ ಸಂವತ್ಸರದ ಭಾದ್ರಪದಶುದ್ಧನವಮಿಯಂದು ಪಲಿಮಾರಿನಲ್ಲಿ ಶ್ರೀರಾಮಚರಣವನ್ನುಹೊಂದಿದರು.

## 16 ಶ್ರೀವಿದ್ಯಾಪತಿತೀರ್ಥರು.

ಪರಂಪರೆಯಲ್ಲಿ ಹದಿನಾರನೆಯವರು. ತಮ್ಮ ಜೀವಿತದ ಹೆಚ್ಚಿನ ಸಮಯವನ್ನು ಮತಪ್ರಸಾರ ಹಾಗೂ ತೀರ್ಥಯಾತ್ರೆಯಲ್ಲಿ ಕಳೆದರು. ಅವರು ಪೀಠವನ್ನಾಳಿದ ಅವಧಿ ಇಪ್ಪತ್ತೇಳು ವರ್ಷ. ಪ್ರಜೋತ್ಪತ್ತಿ ಸಂವತ್ಸರದ

ವೈಶಾಖ ಶುಕ್ಲ ಸಪ್ತಮೀಯಂದು ಗಂಗಾ ತೀರದ ಕಾಶಿಯಲ್ಲಿ ಬಿಂದುಮಾಧವನ ಪಾದವನ್ನು ಹೊಂದಿದರು.

## 17. ಶ್ರೀ ರಘುಪತಿತೀರ್ಥರು.

ಪರಂಪರೆಯಲ್ಲಿ ಹದಿನೇಳನೆಯ ಯತಿಗಳಾದ ಇವರು ಆರು ಬಾರಿ ಸುಧಾಮಂಗಲವನ್ನು ನಡೆಸಿದ ದಾಖಲೆ ಮಠದಲ್ಲಿದೆ. ಒಟ್ಟು ಹದಿನೇಳು ವರ್ಷಗಳ ಕಾಲ ಪೀಠವನ್ನಾಳಿ ಸರ್ವಧಾರಿ ಸಂವತ್ಸರದ ಜ್ಯೇಷ್ಠ ಬಹುಳ ದ್ವಿತೀಯಾ ದಿನದಂದು ಗಂಗಾತಡಿಯ ಹರಿದ್ವಾರದಲ್ಲಿ ಹರಿಮಂದಿರವನ್ನು ಸೇರಿದರು.

## 18. ಶ್ರೀರಘುನಾಥತೀರ್ಥರು.

ಪರಂಪರೆಯ ಹದಿನೆಂಟನೆಯ ಯತಿಗಳಾದ ಇವರು ತುಂಬ ಕಠಿಣವಾದ ತಪಸ್ವಿಜೀವನವನ್ನು ನಡೆಸಿದವರು. ಅತ್ಯಂತ ಸಂಭ್ರಮದ ಪರ್ಯಾಯವೆಂದರೆ ರಘುನಾಥತೀರ್ಥರ ಪರ್ಯಾಯವೆಂಬ ಕೀರ್ತಿಯನ್ನು ಪಡೆದವರು. ಸುಮಾರು ಮೂವತ್ತೆರಡು ವರ್ಷಕಾಲ ಪೀಠವನ್ನಾಳಿ ರಕ್ತಾಕ್ಷಿ ಸಂವತ್ಸರದ ಚೈತ್ರ ಶುದ್ಧ ರಾಮನವಮಿಯಂದು ತಮ್ಮ ಆರಾಧ್ಯ ಶ್ರೀರಾಮನನ್ನು ಪೂಜಿಸಿ ದ್ವಾರಕಾಕ್ಷೇತ್ರದಲ್ಲಿ ತ್ರಿವಿಕ್ರಮ ಶ್ರೀಕೃಷ್ಣನ ಪಾದವನ್ನು ಸೇರಿದರು.

## 19. ಶ್ರೀ ರಘೂತ್ತಮತೀರ್ಥರು.

ಪರಂಪರೆಯಲ್ಲಿ ಹತ್ತೊಂಬತ್ತನೆಯವರು. ಅವರು ಅಸದೃಶ ಪಂಡಿತರು. ದೇಶದಾದ್ಯಂತ ಸಂಚರಿಸಿ ಅಲ್ಲಲ್ಲಿ ಪಂಡಿತರನ್ನು ಆಹ್ವಾನಿಸಿ ವಾಕ್ಯಾರ್ಥದಲ್ಲಿ ಸೋಲಿಸಿ ಗೆದ್ದವರು. ಆಸೇತುಹಿಮಾಚಲತೀರ್ಥಯಾತ್ರಾಸಂದರ್ಶನ ಮಾಡಿದವರು. ತಮ್ಮ ಶಿಷ್ಯರಾದ ಶ್ರೀರಾಮಭದ್ರತೀರ್ಥರಿಗಷ್ಟೇ ಅಲ್ಲದೇ ಪ್ರಶಿಷ್ಯರಾದ ಶ್ರೀರಘುವರ್ಯತೀರ್ಥರಿಗೆ ಕೂಡ ತಾವೇ ಪಾಠ ಹೇಳಿ ತರಬೇತಿಗೊಳಿಸಿದವರು.ಏಕಕಾಲದಲ್ಲಿ ಈ ಮೂವರು ಯತಿಶ್ರೇಷ್ಠರು ಈ ಮಠವನ್ನು ಅಲಂಕರಿಸಿದ್ದರು. ಮೂವತ್ತೆರಡು ವರ್ಷಗಳ ಕಾಲ ಪೀಠವನ್ನಾಳಿದ ಶ್ರೀರಘೂತ್ತಮತೀರ್ಥರು ದುರ್ಮುಖಿ ಸಂವತ್ಸರದ ಮಾಘ ಶುದ್ಧ ಪಂಚಮಿಯಂದು ಪಲಿಮಾರು ಹಳ್ಳಿಯ ಮಠದಲ್ಲಿ ಶ್ರೀವೇದವ್ಯಾಸದೇವರ ಪದವನ್ನೈದಿದರು.

## 20. ಶ್ರೀರಾಮಭದ್ರತೀರ್ಥರು.

ಇಪ್ಪತ್ತನೆಯ ಯತಿಗಳಾದ ಇವರು ಗುರುಗಳಂತೆ ಅಸದೃಶವಿದ್ವಾಂಸರು. ದೇಶಸಂಚಾರ ಕಾಲದಲ್ಲಿ ತಮ್ಮ ವಿದ್ವತ್ತಿನಿಂದ ರಾಜಸನ್ಮಾನಗಳನ್ನು ಸಂಪಾದಿಸಿದವರು. ಹದಿನಾರು ಬಾರಿ ಸುಧಾ ಪ್ರವಚನ ಮಂಗಲವನ್ನು ಮಾಡಿದವರು. ಇವರ ಪ್ರಖರ ಪಾಂಡಿತ್ಯಕ್ಕೆ ಬೆದರಿದ ವಾದಿಗಳ ಸ್ಥಿತಿಯನ್ನು ವರ್ಣಿಸುತ್ತಾ ಗುರುಗಳನ್ನು ಸ್ತೋತ್ರಮಾಡಿದ ಶ್ರೀರಘುವರ್ಯತೀರ್ಥರು.

ಶ್ರೀರಾಮಭದ್ರಗುರವೇ ಶತ್ರುಪಕ್ಷಾದಭೀರವೇ ।
ದುರ್ವಾದಿಭೂಭೃತ್ಸ್ವರವೇ ಸತ್ಕಲ್ಪತರವೇ ನಮಃ ॥

ಎಂದು ನಮಸ್ಕರಿಸಿರುವರು. ಶ್ರೀರಾಮಭದ್ರತೀರ್ಥರು ಹನ್ನೆರಡು ವರ್ಷಗಳ ಕಾಲ ಪೀಠವನ್ನಾಳಿ ಕೀಲಕ ಸಂವತ್ಸರದ ಆಶ್ವಯುಜ ಪೂರ್ಣಿಮೆಯಂದು ಪಲಿಮಾರು ಗ್ರಾಮದ ಮಠದಲ್ಲಿ ಶ್ರೀರಾಮಪಾದವನ್ನು ಸೇರಿದರು.

## 21. ಶ್ರೀರಘುವರ್ಯತೀರ್ಥರು.

ಪರಂಪರೆಯಲ್ಲಿ ಇಪ್ಪತ್ತೊಂದನೆಯವರು. ಹದಿನಾರನೇಯ ವಯಸ್ಸಿನಲ್ಲಿಯೇ ಸಕಲಶಾಸ್ತ್ರವಿದ್ವಾಂಸರಾದವರು. 'ರಘುನಾಥವಿಜಯ' ವೆಂಬ ಛಂದೋಗ್ರಂಥವನ್ನು ರಚಿಸಿದರು. ಕಾಶಿಯ ವಾದಿಗಳನ್ನು ಜಯಿಸಿ ವಿದ್ಯಾಸಿಂಹಾಸನವನ್ನೇರಿದರು. ಶ್ರೀನಾರಾಯಣ ಪಂಡಿತಾ ಚಾರ್ಯರ 'ಪ್ರಮೇಯನವಮಾಲಿಕಾ' ಎಂಬ ಗ್ರಂಥಕ್ಕೆ ವ್ಯಾಖ್ಯಾನ ಬರೆದರು. ಅದು ಶ್ರೀಪಲಿಮಾರು ಮಠದಿಂದ ಪ್ರಕಟಗೊಂಡಿತು. ಅದೇ ರೀತಿ ಅನೇಕ ಕಾವ್ಯಗಳನ್ನು ರಚಿಸಿರುವರು. ಶ್ರೀಹೃಷೀಕೇಶತೀರ್ಥರು ಬರೆದಿಟ್ಟ ಸರ್ವಮೂಲಗ್ರಂಥಗಳ ತಾಡವಾಲೆ ಪುಸ್ತಕಗಳು ಜೀರ್ಣವಾಗುವ ಸಂದರ್ಭದಲ್ಲಿ ಅದರ ಪ್ರತಿಯನ್ನು ತೆಗೆದಿಟ್ಟು. ಮಹದುಪಕಾರಮಾಡಿರುವರು. ಸುಮಾರು ನಾಲ್ಕುವರೆ ದಶಕಗಳ ಕಾಲ ಪೀಠವನ್ನಾಳಿದ ಶ್ರೀರಘುವರ್ಯತೀರ್ಥರು ತಮ್ಮ ಗುರು ಪರಮಗುರುಗಳಂತೆ ನಂದನ ಸಂವತ್ಸರದ ಶ್ರಾವಣ ಶುದ್ಧ ಪಂಚಮೀಯಂದು ಪಲಿಮಾರಿನ ಮಠದಲ್ಲಿ ರಘುವರನ ಪಾದ ಸೇರಿದರು.

## 22. ಶ್ರೀರಘುಪುಂಗವತೀರ್ಥರು

ಇಪ್ಪತ್ತೆರಡನೆಯ ಯತಿಗಳಾದ ಇವರು ಭಕ್ತಿ ವಿರಕ್ತಿಗಳಿಂದ ಭಗವಂತನನ್ನು ಒಲಿಸಿಕೊಂಡವರು. ಪಲಿಮಾರು ಗ್ರಾಮದ ಜೀರ್ಣವಾದ ಮಠವನ್ನು ನವೀಕರಿಸಿದರು. ಆ ಮಠವು 250 ವರ್ಷಗಳಷ್ಟು ಹಿಂದಿನದು. ಅದರ ಜೀರ್ಣೋದ್ಧಾರವು ಶ್ರೀರಘುಪುಂಗವತೀರ್ಥರಿಂದ ನಡೆಯಿತೆಂಬುದಕ್ಕೆ ಮಠದಲ್ಲಿರುವ ದಾಖಲೆ.

ರಘುಪುಂಗವಧಾಮೇದಂ
ರಘುಪುಂಗವಯೋಗಿನಾ ।
ರಘುಪುಂಗವಸಂಪ್ರೀತ್ಯೈ
ಪಿಂಗಲಾಬ್ದೇ ನವೀಕೃತಮ್ ॥

ಎನ್ನುತ್ತದೆ. ಶ್ರೀರಘುಪುಂಗವತೀರ್ಥರು ಪ್ರಮೋದ ಸಂವತ್ಸರದ ಭಾದ್ರಪದ ಶುದ್ಧಷಷ್ಠಿಯಂದು ಕಾಂತಾವರದ ಪಲಿಮಾರಿನ ಮಠದಲ್ಲಿ ನರಸಿಂಹನ ಚರಣವನ್ನು ಸೇರಿದರು.

## 23. ಶ್ರೀರಘುವರತೀರ್ಥರು.

ಇಪ್ಪತ್ತಮೂರನೆಯ ಯತಿಗಳಾದ ಇವರು ಶಾಸ್ತ್ರಪ್ರವಚನ ವ್ರತಾನುಷ್ಠಾನಗಳಲ್ಲಿಯೇ ಕಾಲ ಕಳೆದರು. ಹದಿನೈದು ವರುಷಗಳ ಕಾಲ ಈ ಪೀಠದಲ್ಲಿದ್ದು ಪಾರ್ಥಿವ ಸಂವತ್ಸರದ ಆಶ್ವಯುಜ ಶುದ್ಧ ಅಷ್ಟಮಿಯಂದು ಪಲಿಮಾರಿನಲ್ಲಿ ಭಗವಂತನನ್ನು ಸೇರಿದರು.

## 24. ಶ್ರೀರಘುಪ್ರವೀರ ತೀರ್ಥರು 'ಹುಲಿ ಕೊಂದ ಸ್ವಾಮಿಗಳು'

ಪರಂಪರೆಯ ಇಪ್ಪತ್ತನಾಲ್ಕನೆಯವರಾದ ಇವರ ತಪಶ್ಶಕ್ತಿ ಎಲ್ಲೆಲ್ಲೂ ಮನೆಮಾತಾಗಿತ್ತು. ಮಂತ್ರಸಿದ್ಧ, ಯೋಗಸಿದ್ಧ ಪುರುಷರು. ಘಟಿಕಾಚಲ ಪ್ರಾಣದೇವರ ಉಪಾಸನೆಯ ಸಿದ್ಧಿಯಿಂದ ಸಕಲಶಾಸ್ತ್ರಗಳ ಸಾರವನ್ನೂ ಕಂಡವರು. ಪಲಿಮಾರಿನಲ್ಲಿ ಆಂಜನೇಯನನ್ನು ಸ್ಥಾಪಿಸಿದರು. ಹತ್ತಾರು ಬಾರಿ ಸುಧಾ, ಚಂದ್ರಿಕಾದಿಗ್ರಂಥಗಳ ಪ್ರವಚನ ಮಂಗಲವನ್ನು ಮಾಡಿದವರು. ಇವರಿಗೆ ಎಲ್ಲೆಲ್ಲೂ ರಾಜಸನ್ಮಾನ. ಜಯಪತ್ರ, ಛತ್ರಚಾಮರ ಮೊದಲಾದ

ವುಗಳು ಇದ್ದವು. ಮಂತ್ರಸಿದ್ಧಿಯ ಫಲವಾಗಿ ಇವರ ಬಾಯಿಂದ ಹೊರಹೊಮ್ಮಿದ ಹನುಮದ್, ಭೀಮಮಧ್ವಾಷ್ಟೋತ್ತರ ಶತನಾಮಸ್ತೋತ್ರಗಳು ಮಂತ್ರತುಲ್ಯವಾಗಿವೆ.

ಇವರ ತಪಶ್ಶಕ್ತಿಗೆ ಒಂದು ನಿದರ್ಶನ. ಇವರ ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣಮಠದಲ್ಲಿ 'ನರ್ಮದೆ' ಎಂಬ ಹಸು ಹುಲಿರಾಯನ ಬಾಯಿಗೆ ತುತ್ತಾಯಿತು.ಅದು ಶ್ರೀರಘುಪ್ರವೀರತೀರ್ಥರ ಅತಿ ಮೋಕೆಯ ಹಸುವಾಗಿತ್ತು. ಶ್ರೀಕೃಷ್ಣನ ಪಂಚಾಮೃತಕ್ಕೆ ಅದೇ ಹಾಲನ್ನೆರೆದು ನೀಡುತ್ತಿತ್ತು. ಅದು ಇಲ್ಲವಾಗಿತ್ತು. ಅದರಿಂದ ಶ್ರೀರಘುಪ್ರವೀರತೀರ್ಥರ ಮನಸ್ಸು ವ್ಯಥೆಗೊಳಗಾಯಿತು. ಮುನಿಯಿತು. ಅವರು ಪದ್ಮಾಸನದಲ್ಲಿ ಕುಳಿತೇಬಿಟ್ಟರು. ಸೂರ್ಯ ಮೇಲೇರಿದರೂ ಶ್ರೀಗಳು ಮಾತ್ರ ಪೂಜೆಗೇಳಲಿಲ್ಲ. ನಡುಬಿಸಿಲಿನ ಕಾಲದಲ್ಲಿ ನರ್ಮದೆಯನ್ನು ಕೊಂದ ವ್ಯಾಘ್ರರಾಜ ರಥಬೀದಿಯಲ್ಲಿ ಕಾಣಿಸಿಕೊಂಡಿತು. ನೇರ ಕೃಷ್ಣಮಠದ ಗೋಪುರದ ಬಳಿ ಬಂದು ಬಿದ್ದು ಕೊಂಡಿತು. ವಿಲಿ ವಿಲಿ ಒದ್ದಾಡಿತು. ಅತ್ತಿತ್ತ ಹೊರಳಾಡಿತು. ಮರುಕ್ಷಣದಲ್ಲಿ ಚೇಷ್ಟೆಯಿಲ್ಲದೆ ಬಿದ್ದಿತು. ನೋಡಿದರೆ, ಅದು ಸತ್ತಿತ್ತು. ನರ್ಮದೆಯನ್ನು ಕೊಂದ ಹುಲಿಗೆ ತಕ್ಕ ಶಾಸ್ತಿಯಾಯಿತು. ಶ್ರೀಕೃಷ್ಣನಿಗೆ ಪೂಜೆಯಾಯಿತು. ಅಂದಿನಿಂದ ಜನರು ಶ್ರೀರಘುಪ್ರವೀರತೀರ್ಥರನ್ನು 'ಹುಲಿಕೊಂದ ಸ್ವಾಮಿಗಳು' ಎಂದೇ ಕರೆಯತೊಡಗಿದರು. ಇವರ ಇಂತಹ ಪವಾಡಗಳು ಅದೆಷ್ಟೋ

ಹೀಗೆ ಯೋಗಸಿದ್ಧಿಯಿಂದ ಮೂರುದಶಕದವರೆಗೆ ಈ ಪೀಠದಲ್ಲಿ ವಿರಾಜಮಾನರಾಗಿ ರಾಕ್ಷಸ ಸಂವತ್ಸರದ ಶ್ರಾವಣ ಬಹುಳ ಬಿದಿಗೆ ದಿನದಂದು ಉಡುಪಿಯಲ್ಲಿ ಶ್ರೀಕೃಷ್ಣನ ಪದಾರವಿಂದವನ್ನು ಹೊಂದಿದರು.

## 25. ಶ್ರೀರಘುಭೂಷಣತೀರ್ಥರು

ಈ ಯತಿ ಪರಂಪರೆಯಲ್ಲಿ ಇಪ್ಪತ್ತೈದನೆಯವರು. ಶಾಸ್ತ್ರಗಳಲ್ಲಿ ಅಸದೃಶ ಪಂಡಿತರಿದ್ದಂತೆ ಸ್ವಯಂ ಪ್ರತಿಭೆಯ ಕವಿಗಳೂ ಆಗಿದ್ದರು. ಸುಮಾರು ಆರು ದಶಕದಷ್ಟು ಯತಿ ಜೀವನವನ್ನು ನಡೆಸಿದ ಇವರು ನಾಲ್ಕು ಶ್ರೀಕೃಷ್ಣಪೂಜಾ ಪರ್ಯಾಯಗಳನ್ನು ಸಾಟಿಯಿಲ್ಲದಂತೆ ಸಂಭ್ರಮದಿಂದ ನಡೆಸಿದ ಕೀರ್ತಿವಂತರು. ಕ್ರೋಧಿ ಸಂವತ್ಸರದ ಆಷಾಢ ಬಹುಳ ತೃತೀಯಾದಿನದಂದು ಉಡುಪಿಯಲ್ಲಿಯೇ ಯದುಕುಲತಿಲಕನ ಪಾದವನ್ನೈದಿದರು.

## 26. ಶ್ರೀರಘುರತ್ನತೀರ್ಥರು.

ಇಪ್ಪತ್ತಾರನೆಯಯತಿಗಳಿವರು. ಸರ್ವಮೂಲಮೊದಲಾದ ಅನೇಕಗ್ರಂಥಗಳನ್ನು ಕ್ರೋಢೀಕರಣಮಾಡಿ ರಕ್ಷಿಸಿದವರು ಮಠದ ಗುರುಪರಂಪರೆಯನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಬರೆದಿಟ್ಟವರು. ನಾಲ್ಕು ದಶಕಗಳ ಕಾಲ ಪೀಠವನ್ನಾಳಿ ಸ್ವರ್ಭಾನು ಸಂವತ್ಸರದ ವೈಶಾಖಶುದ್ಧ ಚತುರ್ದಶಿಯಂದು ಪಲಿಮಾರು ಮಠದಲ್ಲಿ ಶ್ರೀಕಾಂತನ ಪದವನ್ನುಸೇರಿದರು.

## 27. ಶ್ರೀರಘುಪ್ರಿಯತೀರ್ಥರು.

ಉಡುಪಿಯ ಐತಿಹಾಸಿಕ ಪುರುಷರಾದ ದಿಗ್ದಂತ ಪಂಡಿತರಾದ ಅದಮಾರು ಮಠದ ಶ್ರೀವಿಬುಧಪ್ರಿಯತೀರ್ಥರಿಂದ ಆಶ್ರಮಪಡೆದು ಪಲಿಮಾರು ಪೀಠವನ್ನೇರಿದ ಶ್ರೀರಘುಪ್ರಿಯತೀರ್ಥರು,

ಪರಂಪರೆಯ ಇಪ್ಪತ್ತೇಳನೆಯ ಯತಿಗಳು. ಇಂದು ನಾವು ಶ್ರೀಕೃಷ್ಣಮಠದಲ್ಲಿ ಕಾಣುವ ವಾಸ್ತುರಚನೆ ಶ್ರೀರಘುಪ್ರಿಯತೀರ್ಥರ ಕಲ್ಪನೆ. ಪ್ರಯತ್ನ. ಅವರ ಪ್ರಭಾವ ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತ ವಾಗಿರದೇ ಕೇರಳದಲ್ಲಿಯೂ ಬೇರೂರಿತ್ತು. 32 ವರುಷಗಳ ಕಾಲ ಪೀಠವನ್ನಾಳಿ ರಾಕ್ಷಸ ಸಂವತ್ಸರದ ಚೈತ್ರ ಶುದ್ಧ ಪಂಚಮಿಯಂದು ಪಲಿಮಾರಿನಲ್ಲಿ ಶ್ರೀರಾಮನ ಪಾದವನ್ನುಸೇರಿದರು.

## 28. ಶ್ರೀರಘುಮಾನ್ಯತೀರ್ಥರು

ಪರಂಪರೆಯಲ್ಲಿ ಇಪ್ಪತ್ತೆಂಟನೆಯವರಾದ ಇವರೂ, ಶ್ರೀವಿಬುಧಪ್ರಿಯತೀರ್ಥರಿಂದಲೇ ಆಶ್ರಮ ಪಡೆದವರು. ತಮ್ಮ ಹತ್ತೊಂಬತ್ತನೆಯ ವಯಸ್ಸಿನಲ್ಲಿಯೇ ಪ್ರಥಮಪರ್ಯಾಯವನ್ನು ಅಭೂತಪೂರ್ವವಾಗಿ ಮಾಡಿದರು. ಪಲಿಮಾರನ್ನು ಜಿಲ್ಲೆಯಲ್ಲೇ ಅತ್ಯಂತ ಸುಂದರವಾದ ಆದರ್ಶವಾದ ಗ್ರಾಮವನ್ನಾಗಿ ಪರಿವರ್ತಿಸಿದ ಕೀರ್ತಿ ಇವರಿಗೇ ಮೀಸಲು. ವಿದ್ಯಾಭ್ಯಾಸದ ಸೌಕರ್ಯವಿಲ್ಲದೆ ನಾಕ್ಷರತೆಯಿಂದ ವಂಚಿತರಾಗಿದ್ದ ಬಾಲಕರಿಗಾಗಿ ಅವರು ಅಂದು ಆರಂಭಮಾಡಿದ್ದ ಶಿಕ್ಷಣಕೇಂದ್ರವು ಇಂದು ಉನ್ನತ ಮಟ್ಟದ ಹೈಸ್ಕೂಲಾಗಿ ಬೆಳೆದು ನಿಂತಿದೆ. ತೀರ್ಥಕ್ಷೇತ್ರಸಂಚಾರ ಮಾಡಿದ ಇವರು ತಮ್ಮ ಮಠದ ಆರಾಧ್ಯದೈವ ಶ್ರೀರಾಮನಿಗೆ ಬಂಗಾರದ ಪೀಠವನ್ನು ಮಾಡಿಸಿ ಸಮರ್ಪಿಸಿದರು.

ಹೊರನಾಡಿನ ಜನತೆ ಉಡುಪಿಯನ್ನು ತಿಳಿಯಲು ಇಂಗ್ಲಿಷ್, ಕನ್ನಡ, ತಮಿಳು ಭಾಷೆಗಳಲ್ಲಿ ಉಡುಪಿಯ ಚರಿತ್ರೆಯನ್ನು ಮೊದಲ ಬಾರಿಗೆ ಪ್ರಕಟಮಾಡಿದ ದೂರದರ್ಶಿಗಳು ಇವರು. ಉಡುಪಿಗೆ ಆಗಮಿಸಿದ ಯಾತ್ರಿಕರಿಗೆ ಮಠದಿಂದ ವಸತಿವ್ಯವಸ್ಥೆ ಇವರಿಂದಲೇ ಆರಂಭಗೊಂಡಿತು. ಕಲಾವಿದರು. ಸಂಗೀತಗಾರರು, ಸಾಹಿತ್ಯರಸಿಕರೆಲ್ಲ ಕೃಷ್ಣಮಠದ ವೇದಿಕೆಯನ್ನೇರಿದ್ದು ಇವರ ಕಾಲದಲ್ಲಿ. ಕೃಷ್ಣಮಠವು ವಿದ್ಯುದ್ದೀಪಗಳಿಂದ ಒಳಹೊರಗೆಲ್ಲ ಬೆಳಗಿದ್ದು ಇವರಿಂದ. ಮೈಸೂರಿನ ಮಹಾರಾಜರಾದ ಶ್ರೀಜಯ ಚಾಮರಾಜ ಒಡೆಯರು, ಪುಣೆಯ ಶ್ರೀ ಬೇಟಿ ನಾರಾಯಣ ಮಹಾರಾಜರೇ ಮೊದಲಾದ ಅವರ ಮನೆತನದ ಮಂದಿ ಇವರ ಪರ್ಯಾಯದಲ್ಲಿ ಉಡುಪಿಗೆ ಭೇಟಿಯಿತ್ತರು. ಮೈಸೂರಿನ ಅರಮನೆಯಲ್ಲಿ ಸತ್ಕಾರ ಹಾಗೂ ಪೂಜೆಗಳನ್ನು ಸ್ವೀಕರಿಸಿದ ಉಡುಪಿಯ ಶ್ರೀಗಳವರಲ್ಲಿ ಇವರು ಮೊದಲಿಗರು.

ಇವರಿಂದ ಉಡುಪಿಯ ಪಲಿಮಾರು ಮಠ ನವೀಕೃತವಾಗಿ ಕಲಾಮಯವಾಯಿತು. ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯ ಹೆಮ್ಮೆಯ ಮಹಾಸೌಧವೂ ಇವರ ಪ್ರಯತ್ನದ ಫಲವೇ. ಹೀಗೆ ಉಡುಪಿಯಲ್ಲಿ ಹೊಸ ಚೈತನ್ಯವನ್ನು ತುಂಬಿ ಮೂರು ದಶಕಗಳಕಾಲ ಪೀಠವನ್ನಾಳಿದ ಶ್ರೀರಘುಮಾನ್ಯತೀರ್ಥರು ಸರ್ವಜಿತ್ ಸಂವತ್ಸರದ ಮಾರ್ಗಶೀರ್ಷ ಶುದ್ಧ ಪ್ರತಿಪದೆಯಂದು ಘಟಿಕಾಚಲದಲ್ಲಿ ಶ್ರೀನರಸಿಂಹನಪದವನ್ನೇರಿದರು. ಇವರ ಆಶ್ರಮ ಗುರುಗಳಾದ ಶ್ರೀವಿಬುಧ ಪ್ರಿಯತೀರ್ಥರ ಪಕ್ಕದಲ್ಲೇ ಇವರ ವೃಂದಾವನವಿದೆ.

## 29. ಶ್ರೀವಿದ್ಯಾಮಾನ್ಯತೀರ್ಥರು.

ಶ್ರೀರಘುಮಾನ್ಯತೀರ್ಥರ ನಂತರ ಯತಿ ಪರಂಪರೆಯಲ್ಲಿ ಸೇರ್ಪಡೆ ಗೊಂಡವರು ಶ್ರೀವಿದ್ಯಾಮಾನ್ಯತೀರ್ಥರು.

ಅವರು ಮೂಲತಃ ಶ್ರೀಭಂಡಾರಕೇರಿ ಮಠಾಧೀಶರಾದರೂ ಶ್ರೀಪಲಿಮಾರು ಮಠದ ಶ್ರೀರಘುವಲ್ಲಭತೀರ್ಥರು 1969 ರ ಸೌಮ್ಯ ಸಂವತ್ಸರದ ಮಾಘಮಾಸ ಶುದ್ಧ ಪ್ರತಿಪದೆಯಂದು ಆರಾಧ್ಯಮೂರುತಿ ಶ್ರೀಆಂಜನೇಯ ಲಕ್ಷ್ಮಣಸಹಿತರಾದ ಶ್ರೀಸೀತಾರಾಮರನ್ನುಪಲಿಮಾರು ಮಠಾಧಿಪತ್ಯವನ್ನು (ಶಂಖೋದಕದಿಂದ ಪಟ್ಟಾಭಿಷೇಕಮಾಡಿ) ಶ್ರೀವಿದ್ಯಾಮಾನ್ಯತೀರ್ಥರಿಗೆ ಧಾರೆಯೆರಿದಿತ್ತರು. ಅಂತೂ ಶ್ರೀರಘುಪ್ರಿಯತೀರ್ಥರು,ಶ್ರೀರಘುಮಾನ್ಯತೀರ್ಥರಂತೆ ಶ್ರೀವಿಬುಧಪ್ರಿಯತೀರ್ಥರ ಆಶ್ರಮಶಿಷ್ಯರಾದ ಶ್ರೀವಿದ್ಯಾಮಾನ್ಯತೀರ್ಥರೂ ಪಲಿಮಾರುಮಠಾಧಿಪತಿ ಗಳಾದರು. ಮಾಧ್ವಸಮಾಜಕ್ಕೆ ಮರೆಯಲಾಗದ ಬಹು ದೊಡ್ಡ ಕೊಡುಗೆ ಯನ್ನಿತ್ತರು. ಅಂದಿನಿಂದ ಶ್ರೀವಿದ್ಯಾಮಾನ್ಯತೀರ್ಥರು ಶ್ರೀ ಪಲಿಮಾರುಮಠದ ಪರಂಪರೆಯಲ್ಲಿ ಅಧಿಕೃತವಾಗಿ ಇಪ್ಪತ್ತೊಂಬತ್ತನೆಯ ವರಾಗಿರುತ್ತಾರೆ.

ಆ ಮಹಾತಪಸ್ವಿಗಳ ಕುರಿತಾಗಿ ಎಷ್ಟು ಹೇಳಿದರೂ ಅದು ಅಲ್ಪವಾದೀತು. ಅಲ್ಪ ಹೇಳಿದರೂ ಬೃಹತ್ತಾದೀತು. ಎಷ್ಟಾದರೂ ಸರಿ ಎಂತಾದರೂ ಸರಿ, ಆ ಮಹಿಮೆಯನ್ನು ಅರಿಯುವುದಕ್ಕಾಗಿಯೇ ಈ ಪ್ರಯತ್ನ.

ಆ ಮಹಾಚೈತನ್ಯದ ಚಿಲುಮೆಯಂತಿರುವ ಶ್ರೀವಿದ್ಯಾಧೀಶತೀರ್ಥರು ಈ ಪಲಿಮಾರು ಮಠದ ಯತಿಪರಂಪರೆಯ ಮೂವತ್ತನೆಯ ಯತಿಗಳಾಗುವರು. ಇವರ ವೈಶಿಷ್ಟ್ಯವೂ ಗುರುಗಳ ಮಹಿಮಾವರ್ಣನೆಯಲ್ಲಿ ವ್ಯಕ್ತವಾಗುವುದು.



## ಶ್ರೀಭಂಡಾರಕೇರಿಮಠದ ಪರಂಪರೆ

ಶ್ರೀಅಚ್ಯುತಪ್ರಜ್ಞತೀರ್ಥರಿಂದ ಸಂನ್ಯಾಸವನ್ನು ಸ್ವೀಕರಿಸಿ ಶ್ರೀಮದಾಚಾರ್ಯರ ಶಿಷ್ಯತ್ವವಹಿಸಿ, ಅವರ ಅತಿಪ್ರಿಯಶಿಷ್ಯರೆನಿಸಿದವರು ಶ್ರೀಸತ್ಯತೀರ್ಥರು. ಅವರ ಪರಂಪರೆಯೇ ಶ್ರೀಭಂಡಾರಕೇರಿ ಮಠವೆಂದು ಪ್ರಸಿದ್ಧವಾಯಿತು.

ಶ್ರೀನಾರಾಯಣಪಂಡಿತಾಚಾರ್ಯರು ಶ್ರೀಸತ್ಯತೀರ್ಥ ಕುರಿತು ಅನೇಕ ಮಾಹಿತಿಗಳನ್ನಿತ್ತು, ಅವರಲ್ಲಿ ಶ್ರೀಮದಾಚಾರ್ಯರ ಅನುಗ್ರಹ ಎಷ್ಟಿತ್ತೆಂಬುದನ್ನುಸೂಚಿಸಿರುವರು.

ಸರ್ವಮೂಲ ಗ್ರಂಥಗಳನ್ನು ರಚಿಸಿದ ಶ್ರೀಮದಾಚಾರ್ಯರಿಗೆ ಅತಿಪ್ರಿಯವಾದ ಗ್ರಂಥ 'ಐತರೇಯೋಪನಿಷತ್ತು'. ಅದರ ಬಗ್ಗೆ ಅವರಿಗಿರುವ ಒಲವು ಅವರ ನುಡಿಯಿಂದಲೇ ವ್ಯಕ್ತವಾಗುತ್ತದೆ.

ಮಹಾಭೂತಿಶ್ರುತಿಸ್ತ್ವೇಷಾ ಮಹಾಭೂತಿರ್ಯತೋ ಹರಿಃ।

ವಿಶೇಷೇಣಾತ್ರ ಕಥಿತಃ ಸರ್ವಜ್ಞಃ ಶಾಶ್ವತಃ ಪ್ರಭುಃ ॥

ಋಗ್ಭಾಷ್ಯ

ಈ ಉಪನಿಷತ್ತನ್ನು ಆ ತ್ರೈಲೋಕ್ಯಗುರುಗಳ ವದನಾರವಿಂದದಿಂದ ಮೂರುಬಾರಿ ಶ್ರವಣಮಾಡಿ ಮನದಲ್ಲಿ ನೆಲೆಗೊಳಿಸಿ ಅನುಸಂಧಾನಮಾಡಿದ ಮಹಾಸಾಧಕೋತ್ತಮರು.

ಒಂದು ಬಾರಿ ಶ್ರೀಮದಾಚಾರ್ಯರು ಬದರಿಕಾಶ್ರಮದಿಂದ ಉತ್ತರ ಬದರಿಯಲ್ಲಿರುವ ಭಗವಂತನನ್ನು ಸಂದರ್ಶಿಸಲು ಹೊರಟಾಗ ಆ ಗುರುಗಳ ವಿರಹವನ್ನು ತಾಳಲಾರದೆ ಅವರ ಬೆನ್ನು ಹಿಡಿದು ಸಾಗಲು

ಪ್ರಯತ್ನಿಸಿದವರು ಶ್ರೀಸತ್ಯ ತೀರ್ಥರು. ಶ್ರೀಮದಾಚಾರ್ಯರು ಸಾಗುತ್ತಿದ್ದ ಹಿಮ ಗಿರಿಯ ಮಾರ್ಗ ಬಲು ದುರ್ಗಮವಾಗಿತ್ತು. ಅದು ಅವರಿಗೆ ಅತಿಸುಲಭವಾಗಿತ್ತು. ಆದರೆ ಶ್ರೀಸತ್ಯತೀರ್ಥರಿಗೆ ಅಸಾಧ್ಯ ವಾಗಿತ್ತು. ಆದರೂ ಶ್ರೀಸತ್ಯತೀರ್ಥರ ಸಾಹಸ ನಿಲ್ಲದಾಗಿತ್ತು. ಅಷ್ಟೊತ್ತಿಗೆ ಕತ್ತಲಾಗುತ್ತ ಬಂತು. ಶ್ರೀಸತ್ಯತೀರ್ಥರಸ್ಥಿತಿ ಅತಂತ್ರವಾದಂತಾಯಿತು. ಅತ್ತಗುರುಗಳನ್ನುಸಮೀಪಿಸಲಾಗಲಿಲ್ಲ. ಇತ್ತ ಮಿತ್ರವೃಂದದ ಹತ್ತಿರವಿರುವಂತಾ ಗಲಿಲ್ಲ. ದೈತ್ಯಾಕಾರದ ಬೆಟ್ಟಗಳ ನಡುವೆ ಸುಸ್ತಾಗಿ ಬರುತ್ತಿದ್ದ ಶಿಷ್ಯಶ್ರೀಸತ್ಯತೀರ್ಥರನ್ನುಕಂಡ ಶ್ರೀಮದಾಚಾರ್ಯರು ಕ್ಷಣದೊಳಗೆ ಅವರನ್ನು ಉಳಿದ ಶಿಷ್ಯರ ಮಧ್ಯದಲ್ಲಿರುವಂತೆ ಮಾಡಿದರು. ಈ ರೀತಿ ಆಚಾರ್ಯರ ಅದ್ಭುತಮಹಿಮೆಯನ್ನು ಅನುಗ್ರಹವನ್ನು ಅನುಭವಿಸಿದ ಶಿಷ್ಯಶ್ರೇಷ್ಠರು ಶ್ರೀಸತ್ಯತೀರ್ಥರು.

ಇನ್ನೊಂದು ಬಾರಿ ಶ್ರೀಮದಾಚಾರ್ಯರು ಬದರಿಕಾಶ್ರಮಕ್ಕೆ ಹೊರಟಾಗ ಶ್ರೀಸತ್ಯತೀರ್ಥರು ಶ್ರೀಮದಾಚಾರ್ಯರ ದೇವರ ಪೆಟ್ಟಿಗೆಯನ್ನು ಹೊತ್ತುಕೊಂಡು ಸಾಗುತ್ತಿದ್ದರು. ಆಗ ರಾಕ್ಷಸನೋರ್ವ ಶ್ರೀಸತ್ಯತೀರ್ಥರನ್ನು ಕೊಲ್ಲುವ ದುರುದ್ದೇಶದಿಂದ ಹುಲಿವೇಷವನ್ನು ಧರಿಸಿ ಹಿಡಿಯ ಬಂದನು ಆಗ ಶಿಷ್ಯನ ಮೇಲಿನ ಮಮತೆಯಿಂದ ಶ್ರೀಮದಾಚಾರ್ಯರು ತಮ್ಮ ಕೈಯಿಂದಲೇ ಆ ಹುಲಿಯನ್ನು ನಿವಾರಿಸಿ ಶಿಷ್ಯಶ್ರೀಸತ್ಯ ತೀರ್ಥರನ್ನು ಪೊರೆದರು.

ಲೋಕಪಾವನಿ ಗಂಗೆಯ ತಟದಲ್ಲಿ ಲೋಕಪತಿ ಶ್ರೀಮನ್ನಾರಾಯಣನಮಂದಿರವನ್ನುನಿರ್ಮಿಸಿ, ಅಲ್ಲಿನಿತ್ಯ ಅನ್ನದಾನ ಉತ್ಸವಗಳನ್ನು ಮಾಡಿದರೆ ಎಷ್ಟು ಪುಣ್ಯವಿದೆಯೋ ಅದಕ್ಕಿಂತಲೂ ಅಧಿಕವಾದ ಪುಣ್ಯವು ಶ್ರೀಮದಾಚಾರ್ಯರ ಭಾಷ್ಯದಲ್ಲಿರುವ ಒಂದು ಅಕ್ಷರವನ್ನು ಭಕ್ತಿಪುರಸ್ಸರವಾಗಿ ಬರೆದರೂ ಲಭಿಸುವುದು. ಅಂತಹ ಶ್ರೇಷ್ಠಗ್ರಂಥವನ್ನು ಆಚಾರ್ಯರು ಬೋಧಿಸುವಾಗ ಬರೆದ ಮಹಾಫಲ ಭಾಗಿಗಳು ಶ್ರೀಸತ್ಯತೀರ್ಥರು. ಒಂದು ರೀತಿಯಲ್ಲಿ ಇವರ ಕುರಿತು ಹೇಳುವಾದಾದರೆ ಶ್ರೀರಾಮನ ಬೆನ್ನು ಬಿಡದೆ ಅನುಸರಿಸಿ ಸೇವೆಮಾಡಿದ ಲಕ್ಷ್ಮಣನಂತೆ ಶ್ರೀಮದಾ ಚಾರ್ಯರನ್ನು ಅನುಸರಿಸಿ ಅವರ ಅನುಗ್ರಹವನ್ನು ಸಂಪಾದಿಸಿದ ಮಹಾನುಭಾವರು.

ಶ್ರೀಮದಾಚಾರ್ಯರಿಂದ ಶ್ರೀಲಕ್ಷ್ಮಣಸಹಿತರಾದ ಶ್ರೀಕೋದಂಡರಾಮಚಂದ್ರದೇವರನ್ನು ಪಡೆದು ಸತ್ಸಿದ್ಧಾಂತಪ್ರಚಾರಕ್ಕಾಗಿ ದೀಕ್ಷಾಬದ್ಧರಾಗಿ ಜೀವನವನ್ನು ಸವೆಸಿದವರು. ಅವರ ಪರಂಪರೆಯೇ ಭಾರತದ ಉದ್ದಗಲದಲ್ಲಿ ಮಾಧ್ವತತ್ವಪ್ರಕಾಶವಾಗುವಂತೆ ಮಾಡಿತು. ಅದರ ನಂದಾದೀಪ ಶ್ರೀಸತ್ಯತೀರ್ಥರು। ಅವರ ಪರಂಪರೆಯನ್ನು ಬೆಳಗಿದ ಮಹಾನ್ ತಪಸ್ವಿಗಳ ಮಾಲೆಯನ್ನು ತಿಳಿಯ ಹೊರಟರೆ ನಮಗೆ ದೊರಕುವ ಮಾಹಿತಿ ಕೆಲವೇ ಕೆಲವು.

ಶ್ರೀಸತ್ಯತೀರ್ಥರ ನಂತರ ಈ ಪರಂಪರೆಯಲ್ಲಿ ಪ್ರಸಿದ್ಧರಾದ ಯತಿಗಳಲ್ಲಿಸುರೋತ್ತಮತೀರ್ಥರೊಬ್ಬರು। ಅವರು ಶ್ರೀಮದ್ವಾದಿರಾಜಶ್ರೀಮಚ್ಚರಣರ ಪೂರ್ವಾಶ್ರಮ ಅನುಜರು. ಇವರು ಯುಕ್ತಿಮಲ್ಲಿಕಾ ಗ್ರಂಥಕ್ಕೆ ವ್ಯಾಖ್ಯಾನವನ್ನು, ಶ್ರೀಮದಾಚಾರ್ಯರ ತಮ್ಮರಾದ ಶ್ರೀವಿಷ್ಣುತೀರ್ಥರ ಸಂನ್ಯಾಸಪದ್ಧತಿಗೆ ವ್ಯಾಖ್ಯಾನವನ್ನು ಶ್ರೀವಾದಿರಾಜರ ಪಾಷಂಡಮತಖಂಡನವೆಂಬ ಗ್ರಂಥಕ್ಕೆ

ವ್ಯಾಖ್ಯಾನವನ್ನು ಬರೆದ ಮಹಾವಿದ್ವಾಂಸರು. ಇವರ ವೃಂದಾವನವು ಭಂಡಾರಕೇರಿಗ್ರಾಮದ ಶ್ರೀಮಠದಲ್ಲಿದೆ. ಇವರಂತೆ ಶ್ರೀಮದಾಚಾರ್ಯರ ವಾಙ್ಮಯಸೇವೆಯನ್ನು ಮಾಡಿದ ಈ ಯತಿಪರಂಪರೆಯ ಒಬ್ಬೊಬ್ಬ ಯತಿಗಳೂ ಮಿನುಗುನಕ್ಷತ್ರಗಳೇ. ಅವರೆಲ್ಲರ ಮಾಹಿತಿಯನ್ನೀಡುವ ದಾಖಲೆಗಳು ದೊರಕದೆ ಅವರೆಲ್ಲರನ್ನು ತಿಳಿಯುವ ವಿಷಯದಲ್ಲಿ ನಾವೆಲ್ಲ ಕುರುಡರಾಗುವಂತಾಗಿದೆ. ಅದೊಂದು ದೌರ್ಭಾಗ್ಯ. ಆದರೂ ಅವರೆಲ್ಲರ ಚೈತನ್ಯದ ಮೂರ್ತಿಯಂತೆ ನಮ್ಮೆಲ್ಲರ ಕಣ್ಮುಂದೆ ನಡೆದಾಡಿ ಅನುಗ್ರಹಿಸಿದ ಶ್ರೀಶ್ರೀವಿದ್ಯಾಮಾನ್ಯತೀರ್ಥರ ಮಹಿಮೆಯನ್ನು, ತಿಳಿದು, ಅವರೆಲ್ಲರನ್ನೂ ಸ್ಮರಿಸಿ ಕೃತಾರ್ಥರಾಗಬೇಕು.

ಅದಕ್ಕಾಗಿ ಶ್ರೀಭಂಡಾರಕೇರಿಮಠದ ಪರಂಪರೆಯ ಯತಿಶ್ರೇಷ್ಠರ ನಾಮಗಳನ್ನು ತಿಳಿಯೋಣ.

## ಶ್ರೀಭಂಡಾರಕೇರಿ ಮಠದ ಯತಿಪರಂಪರೆ

### ಶ್ರೀಅಚ್ಯುತಪ್ರಜ್ಞತೀರ್ಥರು

### ಶ್ರೀಪೂರ್ಣಪ್ರಜ್ಞತೀರ್ಥರು

1. ಶ್ರೀಸತ್ಯತೀರ್ಥರು.
2. ಶ್ರೀವಿದ್ಯಾಧೀಶತೀರ್ಥರು.
3. ಶ್ರೀವಿಶ್ವಮೂರ್ತಿತೀರ್ಥರು
4. ಶ್ರೀಗದಾಧರ ತೀರ್ಥರು.
5. ಶ್ರೀವೇದಾಂತತೀರ್ಥರು.
6. ಶ್ರೀರಘುಪೇಂದ್ರತೀರ್ಥರು.
7. ಶ್ರೀರಘುನಾಥತೀರ್ಥರು.
8. ಶ್ರೀಹಿರಣ್ಯನಾಭತೀರ್ಥರು.
9. ಶ್ರೀರಘುರಾಮತೀರ್ಥರು.
10. ಶ್ರೀ ದಾಮೋದರತೀರ್ಥರು
11. ಶ್ರೀರಘುವಲ್ಲಭತೀರ್ಥರು.
12. ಶ್ರೀಸುರೋತ್ತಮತೀರ್ಥರು.
13. ಶ್ರೀವಿಷ್ಣೋತ್ತಮತೀರ್ಥರು.
14. ಶ್ರೀರಾಜಾಧಿರಾಜತೀರ್ಥರು.
15. ಶ್ರೀರಾಘವೇಂದ್ರತೀರ್ಥರು.
16. ಶ್ರೀರಘುಭೂಷಣತೀರ್ಥರು.
17. ಶ್ರೀರಘುವರ್ಯತೀರ್ಥರು.
18. ಶ್ರೀರಘುಪುಂಗವತೀರ್ಥರು.
19. ಶ್ರೀರಘೂತ್ತಮತೀರ್ಥರು.
20. ಶ್ರೀರಾಮಚಂದ್ರತೀರ್ಥರು.
21. ಶ್ರೀರಘುಪತಿತೀರ್ಥರು.
22. ಶ್ರೀರಾಜವರ್ಯತೀರ್ಥರು.
23. ಶ್ರೀರಘುರಾಜೇಂದ್ರತೀರ್ಥರು.
24. ಶ್ರೀರಾಜವಂದ್ಯತೀರ್ಥರು.
25. ಶ್ರೀವಿದ್ಯಾರಾಜೇಂದ್ರತೀರ್ಥರು.
26. ಶ್ರೀವಿದ್ಯಾಧಿರಾಜತೀರ್ಥರು.

27. ಶ್ರೀವಿದ್ಯಾಸಾಗರತೀರ್ಥರು.

28. ಶ್ರೀವಿದ್ಯಾನಿಧಿತೀರ್ಥರು

29. ಶ್ರೀವಿದ್ಯಾಸಮುದ್ರತೀರ್ಥರು

30. ಶ್ರೀವಿದ್ಯಾವಾರಿಧಿತೀರ್ಥರು

31. ಶ್ರೀವಿದ್ಯಾರ್ಣವತೀರ್ಥರು

32ನೆಯವರು ಶ್ರೀವಿದ್ಯಾಮಾನ್ಯತೀರ್ಥರು. ಅವರನಂತರ ಈಗ ಆ ಪೀಠವನ್ನಾಳುವ ಜ್ಞಾನಿವರೇಣ್ಯ, ತಪಸ್ವಿಯತಿಶ್ರೇಷ್ಠರು ಶ್ರೀ ವಿದ್ಯೇಶತೀರ್ಥರು. ಅವರು 33 ನೆಯವರು. ಅವರ ವೈಶಿಷ್ಟ್ಯವು ಗುರುಗಳ ಕಥಾಮೃತದಲ್ಲಿ ಅಡಕವಾಗಿದೆ.

★★★

## ಸಾರ್ಥಕ್ಯ

ಈ ರೀತಿ ಶ್ರೀಮದಾಚಾರ್ಯರ ಅಚ್ಚುಮೆಚ್ಚಿನ ಶಿಷ್ಯರೀರ್ವರ ಪರಂಪರೆಯ ಪೀಠಗಳನ್ನಾಳಿದ ಸೌಭಾಗ್ಯ ಶ್ರೀಶ್ರೀವಿದ್ಯಾ ಮಾನ್ಯತೀರ್ಥರದು. ಅಷ್ಟೇ ಅಲ್ಲ ಆ ಸೌಭಾಗ್ಯವನ್ನುಸಾರ್ಥಕಪಡಿಸಿಕೊಂಡವರೂ ಹೌದು.

ಶ್ರೀವಿದ್ಯಾಮಾನ್ಯತೀರ್ಥರ ಅತ್ಯಂತ ಭಕ್ತರಾಗಿದ್ದ ಗದುಗಿನ ದಿ॥ ನಾರಾಯಣರಾಯರು ಉತ್ತರ ಭಾರತದಲ್ಲಿ ಮಾಧ್ವಸಿದ್ಧಾಂತದ ಪ್ರಸಾರಕ್ಕಾಗಿ ಸಂಚರಿಸಲು ಶ್ರೀವಿದ್ಯಾಮಾನ್ಯತೀರ್ಥರಿಗೆ ಆ ಸಂಚಾರದ ಖರ್ಚನ್ನು ನೀಡಲು ಬಯಸಿದರು.ಆದರೆ ಶ್ರೀಪಾದರು ಅದನ್ನು ಅಷ್ಟಾಗಿ ಅನುಮೋದಿಸಲಿಲ್ಲ. ಕಾರಣ ಶ್ರೀಪಾದರ ಆಶಯ ಬೇರೆಯೇ ಆಗಿತ್ತು. ಅದು 'ಸರ್ವಮೂಲಗ್ರಂಥ ಪ್ರಕಾಶನ' ಆ ಸಂಚಾರಕ್ಕಿಂತ ಪ್ರಕಾಶನವೇ ಮುಖ್ಯವಾಗಿತ್ತು. ಶ್ರೀಹೃಷೀಕೇಶತೀರ್ಥರು ಬರೆದಿಟ್ಟ ಸರ್ವಮೂಲ ಹಸ್ತಪ್ರತಿಯು ಶ್ರೀಪಲಿಮಾರು ಮಠದಲ್ಲಿತ್ತು. ಅದು ಜನರ ಕಂಗಳಿಗೆ ಗೋಚರಿಸಿರಲಿಲ್ಲ. ಸಾಧಕ ಜಿಜ್ಞಾಸುಗಳ ಬುದ್ಧಿಗೆ ವಿಷಯವಾಗಿರಲಿಲ್ಲ. ಹೀಗಾಗಿ ಅದನ್ನು ಮುದ್ರಿಸುವುದು ಅತ್ಯಗತ್ಯವಾಗಿತ್ತು. ಆ ಮುದ್ರಣಕಾರ್ಯದಲ್ಲಿ ಭಂಡಾರಕೇರಿ ಶ್ರೀಪಾದರಾದ ಶ್ರೀವಿದ್ಯಾಮಾನ್ಯತೀರ್ಥರಿಗೆ ಅತ್ಯಾದರವಿತ್ತು. ಆ ಆದರದ ಫಲ ಸರ್ವಮೂಲಗ್ರಂಥಗಳ ಆಕಾರವನ್ನು ಪಡೆಯಿತು. ಅಂತೂ ಭಂಡಾರಕೇರಿ ಶ್ರೀಪಾದರ ಮಹದಾಸೆ ಮೂಡಿ ಬಂತು. ಎಲ್ಲ ಮಾಧ್ವಜಿಜ್ಞಾಸುಗಳೂ ಶ್ರೀಮದಾಚಾರ್ಯರ ಗ್ರಂಥಗಳ ಅವಲೋಕನ ಅಧ್ಯಯನ, ಅನುಸಂಧಾನಗಳನ್ನು ಗೈಯ್ಯಲು ಅನುಕೂಲವಾಯಿತು. ಶ್ರೀಮದಾಚಾರ್ಯರ ಗ್ರಂಥಗಳನ್ನು ಬರೆದಿಟ್ಟು ಅನುಗ್ರಹಿಸಿದ ಶ್ರೀಹೃಷೀಕೇಶತೀರ್ಥರಿಗೆ ಇಂದಿನ ಮಾಧ್ವಜನತೆ ಚಿರಋಣಿಯಾದಂತೆ, ಅದನ್ನು ಮುದ್ರಣ ಮಾಡಿಸಿ ಎಲ್ಲರಿಗೂ ತಲುಪಿಸಿದ ಶ್ರೀವಿದ್ಯಾ ಮಾನ್ಯತೀರ್ಥರಿಗೂ ನಿರಂತರದ ಆಭಾರಿಯೆನಿಸಿತು.

ಹೀಗೆ ಶ್ರೀವಿದ್ಯಾಮಾನ್ಯತೀರ್ಥರು ಈ ಗ್ರಂಥ ಪ್ರಕಾಶನದ ಮುಖಾಂತರ ಶ್ರೀಹೃಷೀಕೇಶತೀರ್ಥರ, ಶ್ರೀಮದಾ ಚಾರ್ಯರ ಹಾಗೂ ಭಗವಂತನ ಸೇವೆ ಮಾಡಿದ್ದಲ್ಲದೆ, ಅಖಂಡವಾಗಿ ಅಹರ್ನಿಶಿಯಾಗಿ ಸರ್ವಮೂಲಗ್ರಂಥಗಳ ಟೀಕಾ ಟಿಪ್ಪಣಿಗಳ ಪಾಠಪ್ರವಚನಗಳನ್ನು ಮಾಡಿದ ಮುನಿಗಳು. ಈ ಮಹಾಸತ್ಕಾರ್ಯದಿಂದ ಆ ಶ್ರೀ ಹೃಷೀಕೇಶತೀರ್ಥರು ಶ್ರೀಮದಾಚಾರ್ಯರು ಹಾಗೂ ಶ್ರೀಕೃಷ್ಣನು ಈ

ಮೂವರೂ ಅವರನ್ನು ಪೂರ್ಣವಾಗಿ ಹರಸಿದರು. ಅದರ ಫಲವಾಗಿಯೇ ಭಂಡಾರಕೇರಿ ಮಠಾಧಿಪತಿಗಳಾದ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಶ್ರೀಹೃಷೀಕೇಶ ತೀರ್ಥರ ಸಂಸ್ಥಾನವಾದ ಶ್ರೀಪಲಿಮಾರು ಮಠದ ಅಧಿಪತಿಗಳೇ ಆಗಿ ಪ್ರಸಿದ್ಧರಾದರು. ಸರ್ವಮೂಲ ಪಾಠಪ್ರವಚನಗಳು ವಿಜೃಂಭಿಸಿದ ಎರಡು ಪರ್ಯಾಯಗಳನ್ನು ನಡೆಸಿದರು.

1969ರ ಪೂರ್ವದಲ್ಲಿಯೇ 1925ರಿಂದ ಶ್ರೀಮದಾಚಾರ್ಯರ ಪ್ರಿಯಶಿಷ್ಯರಾದ ಶ್ರೀಸತ್ಯತೀರ್ಥ ಪರಂಪರೆಯನ್ನು ಆಳುತ್ತಮೆರೆದವರು ಶ್ರೀವಿದ್ಯಾ ಮಾನ್ಯತೀರ್ಥರು. ಆ ಪರಂಪರೆಯನ್ನು ಬೆಳಗಿದ ಅಪಾರ ಮಹಿಮೋಪೇತರಾದ ಜ್ಞಾನಿವರೇಣ್ಯ ಎಲ್ಲ ಯತಿಶ್ರೇಷ್ಠರ ಮಾಹಿತಿ ನಮಗೆ ದೊರಕದಿರುವುದು ವಿಷಾದದ ಸಂಗತಿ, ಆದರೂ ಅವರೆಲ್ಲರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವಂಥ (ಶ್ರೀವಿದ್ಯಾಮಾನ್ಯತೀರ್ಥರು) ವ್ಯಕ್ತಿ ಅವರ ಆ ಪೀಠದಲ್ಲಿ ಕುಳಿತಿರುವದನ್ನು ಕಂಡಾಗ, ಅವರೆಲ್ಲರ ಗರಿಮೆಯ ಅರಿವಾಗುವುದು. ವಿಷಾದವು ಮರೆಯಾಗಿ ಮುದವು ಎದುರಾಗುವುದು.

ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯವನ್ನು ಬರೆದಿಟ್ಟ ಶ್ರೀಸತ್ಯತೀರ್ಥರ ಪರಂಪರೆಯಲ್ಲಿ ಬಂದ ಶ್ರೀವಿದ್ಯಾ ಮಾನ್ಯತೀರ್ಥರು, 1986 ರಲ್ಲಿ ತಮ್ಮ ದ್ವಿತೀಯ ಪರ್ಯಾಯ ಕಾಲದಲ್ಲಿ ಬ್ರಹ್ಮಸೂತ್ರ ಭಾಷ್ಯವನ್ನು ಬೆಳ್ಳಿಯ ತಗಡುಗಳಲ್ಲಿ ಸುಂದರವಾಗಿ ಬರೆಯಿಸಿಟ್ಟರು. ಈ ಕಾರ್ಯದ ಉದ್ದೇಶ ಎರಡು ಒಂದು ಗ್ರಂಥದ ಶಾಶ್ವತವಾದ ಉಳಿವು ಇನ್ನೊಂದು ಆಚಾರ್ಯರ ಪ್ರತೀಕದಂತಿರುವ ಆ ಗ್ರಂಥದ ಪೂಜೆ. ಕೇವಲ ಬೆಳ್ಳಿಯಲ್ಲಿ ಬರೆಯಿಸಿದ್ದಲ್ಲದೆ ತಮ್ಮ ಜೀವನದುದ್ದಕ್ಕೂ ಆ ಭಾಷ್ಯದ ವ್ಯಾಖ್ಯಾನಗಳ ಪಾಠ ಪ್ರ ವಚನಗಳನ್ನು ನಡೆಸಿದರು. ಅಷ್ಟೇ ಅಲ್ಲದೆ ತಮ್ಮಂತೆ ಸರ್ವಮೂಲ ಗ್ರಂಥಗಳ, ಟೀಕಾ ಟಿಪ್ಪಣಿಗಳ ಪಾಠ ಪ್ರವಚನಗಳನ್ನು ನಡೆಸುವ ಪಂಡಿತಶಿಷ್ಯರ ಮಂಡಲಿಗಳನ್ನೇ ನಿರ್ಮಿಸಿದರು. ವಿಶೇಷವಾಗಿ ತಮ್ಮ ಈ ಎರಡೂ ಮಹಾಪರಂಪರೆಗಳಿಗೆ ಅತ್ಯಂತ ಯೋಗ್ಯರಾದ ಉತ್ತರಾಧಿಕಾರಿಗಳನ್ನು ನೇಮಕವಾಡಿದರು. ಶ್ರೀಪಲಿಮಾರುಮಠಕ್ಕೆ ಶ್ರೀವಿದ್ಯಾಧೀಶತೀರ್ಥರು. ಹಾಗೂ ಶ್ರೀಭಂಡಾರಕೇರಿ ಮಠಕ್ಕೆ ಶ್ರೀವಿದ್ಯೇಶತೀರ್ಥರು ಈ ಇಬ್ಬರೂ ಶಿಷ್ಯರೂ ಸಮರ್ಥವಾಗಿ ಸರ್ವಮೂಲಗ್ರಂಥಗಳ ಪ್ರವಚನಗಳನ್ನು ನಡೆಸುವವರು. ಇವರಿಬ್ಬರಲ್ಲಿಯೂ ಆ ಅಸದೃಶ ಜ್ಞಾನಸಂಪತ್ತನ್ನು ತುಂಬಿ ಹರಿಸಿದವರು. ಎರಡು ಮಠಗಳ ಯತಿ ಪರಂಪರೆಯ ಅಧಿಪತಿಗಳಾದ ಶ್ರೀಶ್ರೀವಿದ್ಯಾ ಮಾನ್ಯತೀರ್ಥರು.

ಅಷ್ಟೇ ಅಲ್ಲದೆ ಅವರ ಅಂತಿಮ ದಿನಗಳ ಅವಧಿಯಲ್ಲಿ ಅವರು ಬ್ರಹ್ಮಸೂತ್ರಭಾಷ್ಯದ ಪಾರಾಯಣವನ್ನು ಶ್ರವಣ ಮಾಡುತ್ತಿದ್ದರು. ವಿಶೇಷವಾಗಿ ಫಲಾಧ್ಯಯವನ್ನು. ಆ ಪಾರಾಯಣದ ಸೌಭಾಗ್ಯ ನನ್ನದಾಗಿತ್ತು. ಹೀಗೆ ಕೊನೆಯುಸಿರಿನವೆಗೂ ಸರ್ವಮೂಲಗ್ರಂಥಗಳ ಅಧ್ಯಯನ, ಅನುಸಂಧಾನಗಳನ್ನು ಮಾಡಿದ ಶ್ರೀಹೃಷೀಕೇಶ ತೀರ್ಥರ ಹಾಗೂ ಶ್ರೀಸತ್ಯತೀರ್ಥರ ಪರಂಪರೆಯುಗಳ ಸಾರ್ಥಕ ಅಧಿಪತಿಗಳು ಶ್ರೀಶ್ರೀವಿದ್ಯಾಮಾನ್ಯತೀರ್ಥರು. ★



★★★

# ಉತ್ತರಾಧಿಕಾರಿಗಳಸ್ವೀಕಾರ ಸಾರ್ಥಕತೆಯ ತೃಪ್ತಿ

ಶ್ರೀಮದಾಚಾರ್ಯರ ಪರಂಪರೆ ಮುಂದುವರೆಯಲು ಎಲ್ಲ ಮಠಗಳಲ್ಲೂ ಉತ್ತರಾಧಿಕಾರಿಗಳನ್ನು ಸ್ವೀಕರಿಸುವುದು ಸರ್ವವಿದಿತ ಸಾಮಾನ್ಯವಾಗಿ ಪೀಠಾಧಿಪತಿಗಳ ಅಂತಿಮ ಅವಸ್ಥೆಯಲ್ಲೋ ಅಥವಾ ಬೃಂದಾವನ ಪ್ರವೇಶದ ನಂತರವೋ ಉತ್ತಾರಾಧಿಕಾರಿಗಳು ನೇಮಕವಾಗುವುದನ್ನು ನಾವು ಕಾಣುತ್ತೇವೆ. ಆದರೆ, ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ತಾವು ಆಳುವ ಎರಡು ಭವ್ಯ ಪರಂಪರೆಗಳನ್ನು ಉತ್ತಮ ರೀತಿಯಲ್ಲಿ ಮುಂದು ವರೆಸಿಕೊಂಡು ಹೋಗುವ ಸಮರ್ಥ ವ್ಯಕ್ತಿಗಳನ್ನು ಆಯ್ಕೆ ಮಾಡಲು ಬಯಸಿದರು. ಕಾರಣ, ತಮ್ಮ ಕಂಗಳೆದುರಿನಲ್ಲಿಯೇ ಅವರನ್ನು ತರಬೇತಿಗೊಳಿಸಿ, ಎರಡೂ ಮಠಗಳ ಪ್ರಾಚೀನ ಶಾಸ್ತ್ರ ಹಾಗೂ ಸಂಪ್ರದಾಯಗಳನ್ನು ರಕ್ಷಿಸುವ ಸಾಮರ್ಥ್ಯವನ್ನು ತುಂಬುವುದು ಉದ್ದೇಶವಾಗಿತ್ತು.

ಇಂದಿನ ಪರಿಸರದಲ್ಲಿ ಬಾಲಸಂನ್ಯಾಸ ಅಷ್ಟೊಂದು ಪ್ರಶಸ್ತವಲ್ಲವೆಂಬ ಆಲೋಚನೆಯುಳ್ಳ ಶ್ರೀಪಾದರು ತಮ್ಮೆರಡು ಪೀಠಗಳಿಗೂ ಸದೃಢ, ಯೋಗ್ಯ, ಯುವಕರಿಬ್ಬರನ್ನು ಆಯ್ಕೆ ಮಾಡಿದರು. ಆ ಯೋಗ್ಯತೆ - ಸದಾಚಾರ, ವಿರಕ್ತಿ, ಉತ್ತಮ ವಿದ್ವತ್ತು.

**ಶ್ರೀಪಲಿಮಾರು ಮಠದ ಉತ್ತರಾಧಿಕಾರಿಗಳ ಆಯ್ಕೆ:** ತಮ್ಮಲ್ಲಿಯೇ ಅನೇಕ ವರ್ಷಗಳಿಂದ ವ್ಯಾಕರಣ, ನ್ಯಾಯ, ವೇದಾಂತಗಳನ್ನು ಅಭ್ಯಸಿಸುತ್ತಿದ್ದ ಉತ್ತಮ ಪ್ರತಿಭಾನ್ವಿತ ಓರ್ವ ವಿದ್ಯಾರ್ಥಿ ಶ್ರೀ ಶಿಬರೂರು ರಮೇಶ ತಂತ್ರಿ. ಇವರನ್ನು ಶ್ರೀ ಪಲಿಮಾರು ಮಠದ ಉತ್ತರಾಧಿಕಾರಿಗಳನ್ನಾಗಿ ಸ್ವೀಕರಿಸಲು ಬಯಸಿದರು. 1979ರಲ್ಲಿ ಅದಮಾರು ಗ್ರಾಮದ ಶ್ರೀಅದಮಾರು ಮಠದಲ್ಲಿ ಶ್ರೀ ರಮೇಶತಂತ್ರಿಗಳಿಗೆ ಸಂನ್ಯಾಸಾಶ್ರಮವನ್ನು ನೀಡಿ 'ಶ್ರೀವಿದ್ಯಾಧೀಶತೀರ್ಥ' ಎಂಬ ನಾಮಕರಣವನ್ನು ಮಾಡಿದರು. ಈ ಸಂದರ್ಭದಲ್ಲಿ ಶ್ರೀಅದಮಾರು ಮಠದ ಶ್ರೀ ವಿಬುಧೇಶತೀರ್ಥರು ಹಾಗೂ ಶ್ರೀ ವಿಶ್ವಪ್ರಿಯತೀರ್ಥರೂ ಪುತ್ತಿಗೆ ಮಠದ ಶ್ರೀ ಸುಗುಣೇಂದ್ರತೀರ್ಥರೂ ಉಪಸ್ಥಿತರಿದ್ದರು.

ಆಶ್ರಮದ ಬಳಿಕ ವಿಶೇಷ ಗ್ರಂಥಗಳ ಪಾಠಗಳನ್ನು ಮಾಡಿ, ವಾತ್ಸಲ್ಯವನ್ನು ಬೀರಿ ಪೋಷಿಸಿದರು. ಈ ಉತ್ತರಾಧಿಕಾರಿಗಳ ಬಗ್ಗೆ ಅವರ ಭಾವನೆ ಹೇಗೆಂಬುದನ್ನು ನೋಡೋಣ -

ಪ್ರಾಯಃ ಉತ್ತರಾಧಿಕಾರಿಗಳ ಬಗ್ಗೆ ಗುರುಗಳಿಗೆ ಅಥವಾ ಮಕ್ಕಳ ಬಗ್ಗೆ ತಂದೆ ತಾಯಿಗಳಿಗೆ ಒಳ್ಳೆಯ ಭಾವನೆಯಿರುವುದು ಕಾಲ ಇದಲ್ಲ. ಅರ್ಥಾತ್ ಅವರಿಗೆ ಮಕ್ಕಳ/ಶಿಷ್ಯರ ನಡತೆ ಹಿಡಿಸದು. ಇಂತಹ ಸಮಯದಲ್ಲಿ ಉತ್ತರಾಧಿಕಾರಿಗಳು ಯೋಗ್ಯರಾಗಿ ದೊರಕಲು ಯೋಗ ಅವಶ್ಯಕ. ಆ ಯೋಗ ಶ್ರೀ ವಿದ್ಯಾಮಾನ್ಯತೀರ್ಥರಿಗಿತ್ತು. ಶ್ರೀ ವಿದ್ಯಾಧೀಶತೀರ್ಥರ ಬಗ್ಗೆ ಪೂರ್ಣ ತೃಪ್ತಿಯಿತ್ತು. ಅದು ಒಂದು ಘಟನೆಯಿಂದ ವ್ಯಕ್ತವಾಯಿತು.

ಶ್ರೀ ವಿದ್ಯಾಧೀಶತೀರ್ಥರ ಎರಡನೆಯ ಸುಧಾಮಂಗಲದ ಶುಭಸಂದರ್ಭ. ಆಗ ಅವರ ಸುಧಾನುವಾದದ ನಂತರ ಶ್ರೀ ವಿದ್ಯಾಮಾನ್ಯತೀರ್ಥರು ಅನುಗ್ರಹ ಸಂದೇಶವನ್ನೀಡುತ್ತಾ 'ಇಂತಹ ವಿಷಯದಲ್ಲಿ ನೀವು ತಿದ್ದಿಕೊಳ್ಳಬೇಕು ಎಂದು ವಿದ್ಯಾಧೀಶತೀರ್ಥರಿಗೆ ಹೇಳುವ ಅವಕಾಶ ನಮಗೆ ದೊರೆತಿಲ್ಲ. ಯಾವ ವಿಷಯದಲ್ಲಿಯೂ ತಪ್ಪಾಗಿ ನಡೆಯುವ ಸ್ವಭಾವ ಅವರದಲ್ಲ. ನಮಗೆ ಬಹಳ ಸಂತೋಷವಾಗಿದೆ.' ಎಂದು ನುಡಿಯುತ್ತಾ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ ಕಂಠಗದ್ಗದಿತವಾಯಿತು. ಕಂಗಳಲ್ಲಿ ಆನಂದವಿಳಿಯಿತು. ಅಂದರೆ ಗುರುಗಳ ಮನಸ್ಸಿಗೆ ಅನುಸಾರಿಯಾಗಿ ಪಾಠ-ಪ್ರವಚನ ಜಪ-ಪೂಜೆ, ನಡೆ-ನುಡಿಗಳೆಲ್ಲಲ್ಲ ಜಾಗರೂಕರಾಗಿ ವಿನಮ್ರರಾಗಿ ನಡೆದ ಶ್ರೀವಿದ್ಯಾಧೀಶತೀರ್ಥರಿಗೆ ಇದೊಂದು ಗುರುಗಳ ಪ್ರಶಸ್ತಿ ಸಾಕು. ಇದನ್ನು ಗಮನಿಸಿದಾಗ ಯೋಗ್ಯ ಗುರುಗಳಿಗೆ ಯೋಗ್ಯ ಶಿಷ್ಯರು ದೊರಕಿದ್ದು ಎಷ್ಟು ಅರ್ಥಪೂರ್ಣವಾಯಿತು ಎಂದು ಮನದಟ್ಟಾಗುವುದು.

**ಶ್ರೀ ಭಂಡಾರಕೇರಿ ಮಠದ ಉತ್ತರಾಧಿಕಾರಿಗಳ ಆಯ್ಕೆ:** ಶ್ರೀ ವಿದ್ಯಾಮಾನ್ಯತೀರ್ಥರು ಬಂದ ಮೊದಲ ಮಠ ಶ್ರೀಭಂಡಾರಕೇರಿ ಮಠದ ಉತ್ತರಾಧಿಕಾರಿಗಳು ಶ್ರೀ ಶ್ರೀ ವಿದ್ಯೇಶತೀರ್ಥರು.

ಶ್ರೀಭಂಡಾರಕೇರಿ ಮಠಕ್ಕೂ ಉತ್ತಮ ಉತ್ತರಾಧಿಕಾರಿಗಳನ್ನು ಸ್ವೀಕರಿಸಲು ಶ್ರೀಪಾದರು ಅಭ್ಯರ್ಥಿಗಾಗಿ ಅರಸಿದರು. ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ 10 ವರ್ಷಗಳಿಂದ ತರ್ಕ, ವ್ಯಾಕರಣ, ವೇದಾಂತಗ್ರಂಥಗಳನ್ನು ಅಧ್ಯಯನ ಮಾಡಿ ಶ್ರೀವಿಶ್ವೇಶತೀರ್ಥರ ಬಳಿಯಲ್ಲಿ ಜಿಜ್ಞಾಸಾಧಿಕರಣ ನ್ಯಾಯಸುಧೆ ಹಾಗೂ ವ್ಯುತ್ಪತ್ತಿವಾದವನ್ನು ಅಭ್ಯಸಿಸುತ್ತಿದ್ದ, ಸದಾಚಾರಿ, ಧರ್ಮದೀಕ್ಷಾಬದ್ಧ ಯುವಕನೊಬ್ಬನನ್ನು ಕಂಡರು. ಆ ಯುವಕ 'ಶ್ರೀ ಹರೇಕೃಷ್ಣ ಭಟ್'. ಶ್ರೀ ಹರೇಕೃಷ್ಣ ಭಟ್ಟರಿಗೆ ಶ್ರೀಭಂಡಾರಕೇರಿ ಗ್ರಾಮ ಮೂಲ ಮಠದಲ್ಲಿ ಸಂನ್ಯಾಸಾಶ್ರಮವನ್ನು ನೀಡಿ 'ಶ್ರೀವಿದ್ಯೇಶತೀರ್ಥ' ಎಂಬ ನಾಮಕರಣವನ್ನು ಮಾಡಿದರು.

ಶ್ರೀವಿದ್ಯೇಶತೀರ್ಥರ ಆಯ್ಕೆಯ ಬಗ್ಗೆಯೂ ಪೂರ್ಣ ತೃಪ್ತಿ ಶ್ರೀಪಾದರಿಗಿತ್ತು. ಅದಕ್ಕೊಂದು ಉದಾಹರಣೆ:

ಉಡುಪಿಯಲ್ಲಿ ಮಧ್ವಜಯಂತೀ ಉತ್ಸವದ ಸಂದರ್ಭ. ಆ ಸಮಯದಲ್ಲಿ ಉಪನ್ಯಾಸ ಮಾಡಬೇಕಿದ್ದ ಶ್ರೀ

ವಿದ್ಯಾಮಾನ್ಯತೀರ್ಥರು ತಮ್ಮ ಉಪನ್ಯಾಸದಲ್ಲಿ ತಮ್ಮದೇ ವಿಚಾರಗಳನ್ನು ಮಂಡಿಸಲಿಲ್ಲ. ಅಂದಿನ ಉಪನ್ಯಾಸವನ್ನು ಹೀಗೆ ಆರಂಭಿಸಿದರು ಃಇಂದು ನಾವು ನಮ್ಮ ಶಿಷ್ಯರಾದ ಶ್ರೀವಿದ್ಯೇಶತೀರ್ಥರು, ವಿಷ್ಣುಸರ್ವೋತ್ತಮತ್ವ ಪರವಾದ ಗೀತೆಗೆ ವಾಯುಜೀವೋತ್ತಮತ್ವಪರತ್ವರೂಪ ಅರ್ಥವನ್ನು ಸಪ್ರಮಾಣವಾಗಿ ಹೇಳಿರುವರು. ಅದನ್ನು ಇಲ್ಲಿ ಅನುವಾದ ಮಾಡುತ್ತೇವೆ಼ ಎಂದು ಹೇಳಿ ಃಸರ್ವಧರ್ಮಾನ್ ಪರಿತ್ಯಜ್ಯ...಼ ಎಂಬ ಗೀತಾಶ್ಲೋಕಕ್ಕೆ ವಾಯುಜೀವೋತ್ತಮತ್ವಪರ ಅರ್ಥವನ್ನು ಹೇಳಿ ಉಪನ್ಯಾಸವನ್ನು ಸಮಾಪನಗೊಳಿಸಿದರು.

ಇಲ್ಲಿ ನಾವು ಗಮನಿಸಬೇಕಾದ ಅಂಶ ಎರಡು. ಒಂದು ಶಿಷ್ಯರಾದರೂ ಅವರಲ್ಲಿರುವ ಗುಣವನ್ನು ಜ್ಞಾನವನ್ನು ಸ್ವೀಕರಿಸುವ ಆ ಮಹಾಗುರುಗಳ ವಿಶಾಲ ಹೃದಯವಂತಿಕೆ, ಇನ್ನೊಂದು ಗುರುಗಳೇ ತಮ್ಮ ವಿಚಾರವನ್ನು ಹೇಳದೆ, ಶಿಷ್ಯ ಶ್ರೀವಿದ್ಯೇಶತೀರ್ಥರ ವಿಚಾರಗಳನ್ನು ಉಪನ್ಯಾಸದಲ್ಲಿ ಮಂಡಿಸಬೇಕಾದರೆ, ಅವರ ವಿಚಾರ ಸಿದ್ಧಾಂತ ಎಷ್ಟು ಸಮಂಜಸ, ಆ ಗುರುಗಳಿಗೆ ಸಮ್ಮತವೆಂಬುದು ಸ್ಪಷ್ಟವಾಗುವುದು. ಶ್ರೀವಿದ್ಯೇಶತೀರ್ಥರ ಸಪ್ರಮಾಣ ಸಂಶೋಧನ ಬುದ್ಧಿ ಪ್ರವೃತ್ತಿ, ಸದಾಚಾರ ಚಟುವಟಿಕೆಗಳ ಕುರಿತು ಶ್ರೀ ವಿದ್ಯಾಮಾನ್ಯತೀರ್ಥರಿಗೆ ಇದ್ದ ಪೂರ್ಣ ತೃಪ್ತಿ ಇದರಿಂದ ಅರ್ಥವಾಗುವುದು.

ಹೀಗೆ ತಮ್ಮ ಉಭಯ ಮಠಗಳ ಉತ್ತರಾಧಿಕಾರಿಗಳಿಗೆ ಅಧಿಕಾರವನ್ನು ಒಪ್ಪಿಸಿ 'ಉತ್ತರ'ನ ಬಗ್ಗೆ ಚಿಂತಿಸುತ್ತ ಉತ್ಕ್ರಮಣವನ್ನು ಮಾಡಿದ ಉತ್ತಮ ಯತೀಶ್ವರರು ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು.



# ಆಚಾರ್ಯರೊಡನೆ ಸಂಭಾಷಣೆ

ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳಲ್ಲೊಂದು 'ಮಹಾಭಾರತತಾತ್ಪರ್ಯ ನಿರ್ಣಯ'. ಇದು ಹೆಸರು ಹೇಳುವಂತೆ ಕೇವಲ ಮಹಾಭಾರತದ ನಿರ್ಣಯವನ್ನು ನೀಡುವುದಲ್ಲ. ರಾಮಾಯಣವನ್ನೂ ಸೇರಿಸಿ ಸಮಸ್ತಶಾಸ್ತ್ರಗಳ ನಿರ್ಣಯವನ್ನು ನೀಡುವಗ್ರಂಥ. ಯಾವ ಘಟ್ಟದಲ್ಲಿ ಓದುಗರಿಗೆ ಗೊಂದಲಬಂದೀತೋ, ಅಲ್ಲಿ ಆಚಾರ್ಯರ ನಿರ್ಣಯಾತ್ಮಕ ಪರಿಹಾರವು ಸಿದ್ಧ.

ಒಂದೊಮ್ಮೆ ಭಾರತಾದಿ ಮೂಲಗ್ರಂಥದಲ್ಲಿ ವೇದವ್ಯಾಸದೇವರ ಸಿದ್ಧಾಂತಕ್ಕೆ ವಿರುದ್ಧವಾದ ಅಂಶಗಳನ್ನುಸೇರಿಸುವ ಹಾಗೂ ಆ ಸಿದ್ಧಾಂತಕ್ಕೆ ಸಮ್ಮತವಾದ ಅಂಶಗಳನ್ನು ತೆಗೆಯುವಂತಹ ಕೆಲಸಗಳನ್ನು ಕೆಲವು ದುರ್ಮತಿಗಳು ಮಾಡಿದ್ದು, ಅದರಿಂದ ಜ್ಞಾನಾರ್ಥಿಗಳಿಗೆ ವಿಪರೀತಜ್ಞಾನ ವುಂಟಾದೀತು ಎಂದು ಶ್ರೀಮದಾನಂದತೀರ್ಥರು ಈ ಗ್ರಂಥವನ್ನು ರಚಿಸಿದರು. ದೇಶದ ಮೂಲೆ ಮೂಲೆಗಳಲ್ಲಿ ವಿಭಿನ್ನ ವಿಭಿನ್ನ ಪಾಠದ ಮೂಲಹಸ್ತಪ್ರತಿಗಳನ್ನು ವೀಕ್ಷಿಸಿದರು. ಸಂಶೋಧಿಸಿದರು. ತಮ್ಮ ಸ್ವಾಭಾವಿಕ ಅಸದೃಶ ಪಾಂಡಿತ್ಯದ ಹಿನ್ನೆಲೆಯಲ್ಲಿ ಶುದ್ಧಪಾಠಗಳನ್ನು ನಿರ್ಣಯಿಸಿ ಶಿಷ್ಯರಿಗೆ ನೀಡಿದರು. ಈ ರೀತಿಯ ಅವರ ಸಂಶೋಧನಾತ್ಮಕ ಕೃತಿರಚನೆಗೆ ಕಾರಣ, ಬದರಿನಾರಾಯಣನ ಪ್ರೇರಣೆ, ವೇದವ್ಯಾಸದೇವರ ಆದೇಶ.

ಅದನ್ನೇ ಶ್ರೀಮದಾಚಾರ್ಯರು ತಮ್ಮ ಈ ಗ್ರಂಥದ ಕೊನೆಯಲ್ಲಿ 'ವ್ಯಾಸಾಜ್ಞಯಾ ಭಾಷ್ಯವರಂ ವಿಧಾಯ ಪೃಥಕ್ ಪೃಥಕ್ ಚೋಪನಿಷತ್ಸು ಭಾಷ್ಯಂ ಕೃತ್ವಾ.........|| 175 || ......ಗ್ರಂಥಂ ಚಕಾರೇಮಂ ಉದೀರ್ಣವಿದ್ಯಾ ಯಸ್ಮಿನ್ ರಮಂತೇ ಹರಿಪಾದಭಕ್ತಾಃ || 176 || ಎಂದು ಸೂಚಿಸಿರುವರು. ಅವರಿಗೆ ಈ ಗ್ರಂಥದ ಬಗ್ಗೆ ಪೂರ್ಣಪ್ರೀತಿ,ತೃಪ್ತಿ. ಅದಕ್ಕೆ ಅವರೇ ನುಡಿದ ನುಡಿಯೇ ಸಾಕ್ಷಿ. 'ತಸ್ಮಾದಯಂ ಗ್ರಂಥವರೋಽಖಿಲೋರು ಧರ್ಮಾದಿ ಮೋಕ್ಷಾಂತಪುಮರ್ಥಹೇತುಃ । ಕಿಂ ವೋದಿತ್ಯೈರಸ್ಯ ಗುಣೈಸ್ತುತೋಽನ್ಯೈರ್ನಾರಾಯಣಃ ಪ್ರೀತಿಮುಪೇತ್ಯತೋಽಲಮ್'

ಈ ಗ್ರಂಥವು ವೇದ, ಇತಿಹಾಸಾದಿಗಳ ನಿರ್ಣಯ

ಗಳಗಡಣ.ಆದುದರಿಂದಲೇ ಇದು ಧರ್ಮಾರ್ಥಕಾಮ ಮೋಕ್ಷಾದಿಪುರುಷಾರ್ಥಸಾಧನ. ಶ್ರೀಮನ್ನಾರಾಯಣನ ಅತ್ಯಂತ ಪ್ರೀತಿಗೆ ಕಾರಣ. ಅಂದ ಮೇಲೆ ಇದಕ್ಕಿಂತ ಬೇಕೆ ಇದಕ್ಕೆ ಹೆಚ್ಚಿನ ಗುಣಗಾನ?

ಶ್ರೀಮದಾಚಾರ್ಯರ ಮುಕ್ತಕಂಠದ ಪ್ರಶಂಸೆಯ ಈ ಮಾತು ಮಹಾಭಾರತತಾತ್ಪರ್ಯನಿರ್ಣಯದ ಪ್ರಾಶಸ್ತ್ಯವನ್ನು ಜಗತ್ತಿಗೆ ಎತ್ತಿ ತೋರಿಸಿತು.

'ರೂಪಮನ್ಯದಿವ ಧನ್ಯಮಾತ್ಮನಃ' ಎಂಬುದು ಶ್ರೀಮಧ್ವ ವಿಜಯಕಾರರ ಮಾತು. ಶ್ರೀಮದಾ ಚಾರ್ಯರ ಸರ್ವಮೂಲಗ್ರಂಥಗಳು ಅವರ ಇನ್ನೊಂದು ರೂಪದಂತೆ. 'ಬ್ರಹ್ಮಸೂತ್ರಭಾಷ್ಯಕ್ಕೆ ಅನ್ವಯಿಸಿದಂತೆ ಈ ಮಾತು ಈ ಮಹಾಭಾರತತಾತ್ಪರ್ಯನಿರ್ಣಯಕ್ಕೂ ಪೂರ್ಣವಾಗಿ ಅನ್ವಯಿಸುವುದು. ಮೂವತ್ತೆರಡು ಲಕ್ಷಣಗಳನ್ನು ಹೊಂದಿದ ಆಚಾರ್ಯರಂತೆ ಈ ಗ್ರಂಥವೂ ಮೂವತ್ತೆರಡು ಅಧ್ಯಾಯಗಳನ್ನು ಹೊಂದಿದೆ. ಐದು ಸಾವಿರಕ್ಕೂ ಹೆಚ್ಚು ಶ್ಲೋಕಗಳನ್ನು ಒಳಗೊಂಡಿರುವುದು.

ಮೊದಲನೆಯ ಅಧ್ಯಾಯದಲ್ಲಿ 137 ಶ್ಲೋಕಗಳಿಂದ ಸರ್ವಶಾಸ್ತ್ರಾರ್ಥತಾತ್ಪರ್ಯನಿರ್ಣಯವು ಪ್ರತಿಪಾದಿಸಲ್ಪಟ್ಟಿದೆ. ಎರಡನೆಯ ಹಾಗು ಮೂರನೆಯ ಅಧ್ಯಾಯಗಳಲ್ಲಿ ವಾಕ್ಯೋದ್ಧಾರ ಹಾಗೂ ಸರ್ಗಾನುಸರ್ಗಲಯ, ಅಂಶಾವೇಶಾವತಾರಗಳ ನಿರ್ಣಯ ಪ್ರತಿಪಾದಿತವಾಗಿದೆ. (173-82) ಅಧ್ಯಾಯ ನಾಲ್ಕರಿಂದ ಒಂಬತ್ತರವರೆಗೆ ರಾಮಾಯಣದ ನಿರ್ಣಯವನ್ನು ನೀಡಿರುವರು. (609ಶ್ಲೋಕಗಳು) ಹತ್ತನೆಯ ಅಧ್ಯಾಯದಲ್ಲಿ (ಶ್ಲೋಕಗಳು86) ವ್ಯಾಸಾವತಾರವರ್ಣನೆ ಯನ್ನು ಮಾಡಿರುವರು. ಹನ್ನೊಂದನೆಯ ಅಧ್ಯಾಯದಿಂದ ಮೂವತ್ತೆರಡನೆಯ ಅಧ್ಯಾಯದವರೆಗೆ ಮಹಾಭಾರತ ನಿರ್ಣಯವನ್ನು ನೀಡಿರುವರು.(3915ಶ್ಲೋಕಗಳು)

ಸರ್ವಮೂಲ ಗ್ರಂಥಗಳ ಉದ್ದೇಶ ವಿಷ್ಣುಸರ್ವೋತ್ತಮತ್ವವೇ. ಅದನ್ನು ಬಗೆಬಗೆಯಾಗಿ ನಿರೂಪಿಸಿ ಸಮರ್ಥಿಸಿದ ಭಕ್ತಾಗ್ರಣ್ಯರು ಶ್ರೀಮದಾಚಾರ್ಯರು. ಅವರು ಬೇರೆಯಲ್ಲ. ಗ್ರಂಥಗಳು ಬೇರೆಯಲ್ಲ. 'ಅವುಗಳು ನಮ್ಮ ಮನೆಯಲ್ಲಿದ್ದರೆ, ನಮ್ಮ ಮನದಲ್ಲಿದ್ದರೆ ಸ್ವತಃ ಆಚಾರ್ಯರೇ ನಮ್ಮ ಮನೆಮನಗಳಲ್ಲಿದ್ದಂತೆ.' ಈ ಅನುಸಂಧಾನ ಎಲ್ಲರಿಗೂ ಎಲ್ಲಕಾಲದಲ್ಲಿಯೂ ಇಲ್ಲ. ಇರುವುದಿಲ್ಲ ಕೂಡ. ಆದರೆ ಇದಕ್ಕೆ ಹೊರತಾದವರು ಶ್ರೀಶ್ರೀವಿದ್ಯಾಮಾನ್ಯತೀರ್ಥರು. ಕಾರಣ, ಆ ಅನುಸಂಧಾನವು ಅನುದಿನದಲ್ಲಿ ಅಭಿವೃದ್ಧಿ ಹೊಂದಿ ಸ್ಥಾಯಿಯಾಗಿ ನಿಂತ ಮನಮಂದಿರ ಶ್ರೀವಿದ್ಯಾಮಾನ್ಯತೀರ್ಥರದು. ಒಂದಧಿಕ ಐದುಸಾವಿರ ಶ್ಲೋಕಗಳು ಅವರ ಕಂಠಸ್ಥವಾಗಿದ್ದವು. ಅವುಗಳ ಪ್ರಮೇಯಗಳೆಲ್ಲವೂ ಅವರ ಹೃದಯದಲ್ಲಿ ಅಡಗಿದ್ದವು. ಅವರ ಮನಸ್ಸು ಸದಾ ಅವುಗಳನ್ನೇ ಮೆಲುಕುಹಾಕುತ್ತಿತ್ತು.

ಶ್ರೀವಿದ್ಯಾಮಾನ್ಯತೀರ್ಥರು ನಿರಂತರ ವಿಶೇಷಾಧ್ಯಯನ, ಉತ್ತಮ ಅನುಸಂಧಾನ ಹಾಗೂ ಅಪ್ಪಟ ಪ್ರಾಮಾಣಿಕತನಗಳ ತಾಣ. ಆದ್ದರಿಂದಲೇ ಈ ಗ್ರಂಥ ಅವರಿಗೆ ನೀಡಿತು ಅಸದೃಶಸಿದ್ಧಿದರ್ಶನ. ಅದು ಗ್ರಂಥದ ಮೂಲಕ ಆಚಾರ್ಯರೊಡನೆ ಸಂಭಾಷಣ.

ಕೇಳಿದವರಿಗೆ ತಿಳಿಯದು. ಓದಿದವರಿಗೆ ಬೋಧವಾಗದು. ಏನಿದು? ಹೌದು ನಮಗ್ಯಾರಿಗೂ ದೊರೆಯದ ನಾವು ಯಾರೂ ಅರಿಯದ ಅದ್ಭುತ ಅನುಭವ ಕೇವಲ ಶ್ರೀವಿದ್ಯಾಮಾನ್ಯ ತೀರ್ಥರದ್ದು.

''ಒಂದು ಕೆಲಸವನ್ನು ಆರಂಭಿಸಿದರೆ ಅದನ್ನು ಪೂರ್ಣಗೊಳಿಸುವವರೆಗೆ ಅದರಿಂದ ಹಿಂತಿರುಗುವುದಿಲ್ಲ. ಹಿಂತಿರುಗುವ ಸಂದರ್ಭವಿದ್ದಲ್ಲಿ ಆ ಕೆಲಸವನ್ನು ಆರಂಭಿಸುವುದಿಲ್ಲ. ಇದು ಮಹಾತ್ಮರ ಸ್ವಭಾವ. ಕೆಲಸವನ್ನು ಆರಂಭಿಸುವುದಕ್ಕೆ ಪೂರ್ವದಲ್ಲಿಯೇ ಸರಿಯಾಗಿ ವಿಮರ್ಶಿಸಬೇಕು. ಎಂಬುದೇ ಈ ಮೇಲ್ಕಾತಿನ ಭಾವ.

ಶ್ರೀವಿದ್ಯಾಮಾನ್ಯತೀರ್ಥರು ಈ ಮಹಾತ್ಮರ ಪಂಕ್ತಿಯಲ್ಲಿ ಸೇರಿದವರು ಎಂದು ಪ್ರತ್ಯೇಕ ಹೇಳಬೇಕಿಲ್ಲ. ಕಾರಣ ಅವರ ವ್ಯವಹಾರವೇ ಅವರ ಗರಿಮೆಯನ್ನು ಸಾರುತ್ತದಲ್ಲ ಅವರನ್ನು ಕಂಡ ಪ್ರತಿಯೊಬ್ಬನೂ ಅದನ್ನೆಲ್ಲ ಬಲ್ಲ.

ಶ್ರೀವಿದ್ಯಾಮಾನ್ಯತೀರ್ಥರು ಏನನ್ನೇ ಆರಂಭಿಸಿದರೂ ಅದಕ್ಕೆ ಮುಂಚಿತವಾಗಿ ವಿಚಾರಮಾಡುತ್ತಿದ್ದರು. ಎಣಿಸಿದ ಕಾರ್ಯ ಸಫಲವೇ, ಸಾಧ್ಯವೇ, ಎಂದು ವಿಮರ್ಶಿಸುತ್ತಿದ್ದರು. ಆ ವಿಮರ್ಶೆಯ ಕ್ರಮ ವಿಲಕ್ಷಣವಾಗಿತ್ತು. ವಿಮರ್ಶೆಯ ಫಲಕ್ಕಾಗಿ ಮಧ್ವಾಂತರ್ಗತಭಗವಂತನನ್ನು ಪ್ರಾರ್ಥಿಸುತ್ತಿದ್ದರು. ಪ್ರಾರ್ಥಿಸಿ ತಾತ್ಪರ್ಯನಿರ್ಣಯವನ್ನು ತೆರೆಯುತ್ತಿದ್ದರು. ತೆರೆದಾಕ್ಷಣ ಅವರ ಕಣ್ಣಿಗೆ ಮೊದಲು ತೋರುವ ಪುಟ ಆ ಪುಟದಲ್ಲಿ ಮೊದಲಶ್ಲೋಕವು ಯಾವ ಸನ್ನಿವೇಶವನ್ನು ಸೂಚಿಸುತ್ತದೆಯೋ ಅದು ಅವರಿಗೆ ಆದೇಶ. ಶುಭ ಸನ್ನಿವೇಶವು 'ಅಸ್ತು' ಎನ್ನುವ ಸೂಚನೆಯಾದರೆ, ಅಶುಭ ಸನ್ನಿವೇಶವು ನಿಷೇಧದಸೂಚನೆಯಾಗಿತ್ತು. ಆ ಸೂಚನೆ ಹೇಗೆ ಬಂದರೂ ಅದಕ್ಕೆ ಬದ್ಧರಾಗುತ್ತಿದ್ದರು. ಶ್ರೀಪಾದರು ಆಸೂಚನೆಯಂತೆ ಕಾರ್ಯ ಪ್ರವೃತ್ತರಾಗುತ್ತಿದ್ದರು. ಅಥವಾ ನಿವೃತ್ತರಾಗುತ್ತಿದ್ದರು. ಅದರಿಂದ ಉತ್ತಮ ಫಲಕಂಡರು. ದುಷ್ಫಲದಿಂದ ದೂರವಾಗಿ ಪಾರಾದರು. ಈ ಸಿದ್ಧಿಯ ಮೂಲಕ ಶಿಷ್ಯಕೋಟಿ, ಭಕ್ತಕೋಟಿಯ ಸಂಕಟಕೋಟಿಗಳನ್ನು ಓಡಿಸಿದರು. ಅಭೀಷ್ಟವೃಷ್ಟಿಯನ್ನು ಹರಿಸಿದರು. ಅಂತಹ ಅನುಭವಗಳನ್ನು ಅನುಭವಿಸಿದ ಶಿಷ್ಯರು ಭಕ್ತರು ಸಾವಿರಾರು. ಅದನ್ನೆಲ್ಲ ಬರೆಯ ಹೊರಟರೆ ನನಗೆ ಸಾಲದು ಆಯುಷ್ಯ ನೂರು. ಆದರೂ ಅದರ ಪರಿಚಯಕ್ಕಾಗಿ ಇಲ್ಲಿರುವುದು ಆ ಪವಿತ್ರಾಮೃತದ ಕೇವಲ ಕೆಲವೊಂದು ತುಂತುರು.

1) 1958 ರ ಸಮಯ ಆಗ ಕಲಕತ್ತ ಮಹಾನಗರದಲ್ಲಿ ಶ್ರೀವಿದ್ಯಾಮಾನ್ಯತೀರ್ಥರ ಚಾತುರ್ಮಾಸ್ಯ. ಆ ಸಂದರ್ಭದಲ್ಲಿ ಒಂದು ದಿನ ಶ್ರೀಪಾದರಮನದಲ್ಲಿ ಒಂದಾಲೋಚನೆ ಮೂಡಿತು. ಅದು ಶ್ರೀಗಳು ಆರಂಭಿಸಿದ ಶ್ರೀಮಾಧ್ವರಾದ್ಧಾಂತಸಂವರ್ಧಕ ಸಭೆಗಾಗಿ ಶಾಶ್ವತ ಮೂಲನಿಧಿ ಸಂಗ್ರಹಿಸುವುದಾಗಿತ್ತು. ಆದರೆ ಆ ಸಂಗ್ರಹದ ಆರಂಭವು ಸಫಲವೇ? ಸಾಫಲ್ಯವು ಸಾಧ್ಯವೇ ಎಂಬ ಶಂಕೆ ಎದ್ದಿತು. ಶ್ರೀಪಾದರ ಈ ಪ್ರಶ್ನೆಗೆ ಉತ್ತರವನ್ನೀಡುವವರು ಯಾರು ? ಅವರಿಗೆ ಧೈರ್ಯತುಂಬುವವರು ಯಾರು? ಶ್ರೀಪಾದರು ತಮ್ಮ ಆರಾಧ್ಯಗುರು ಶ್ರೀಮದಾಚಾರ್ಯರನ್ನೇ ಕೇಳತೊಡಗಿದರು. ಕೇಳಿದ ಬಗೆ ಹೀಗೆಯೇ.

ಕೈಯಲ್ಲಿ ತಾತ್ಪರ್ಯನಿರ್ಣಯ ಪುಸ್ತಕವನ್ನು ಹಿಡಿದರು. ಕಣ್ಣುಗಳನ್ನು ಮುಚ್ಚಿದರು. ಕಣ್ಣಿನೊಳಗಿಂದ ಶ್ರೀಮದಾಚಾರ್ಯರನ್ನು ಶ್ರೀಹರಿಯನ್ನೂ ಚಿಂತಿಸಿದರು. ತನ್ಮಯರಾದರು. ಈ ಕೋರಿಕೆಯನ್ನು ಅವರೀರ್ವರ ಎದುರಿಟ್ಟರು. ಕಣ್ತೆರೆದು ಪುಸ್ತಕವನ್ನು ತೆರೆದಿಟ್ಟರು. ಓದಿದರು ಬಲು ಸಂತುಷ್ಟರಾದರು. ಕಾರಣ, ಅವರಿಗೆ ಶ್ರೀಮದಾಚಾರ್ಯರು ನಿಧಿಸಂಗ್ರಹದ ಆರಂಭಕ್ಕೆ ಒಪ್ಪಿಗೆಯನ್ನಿತ್ತಿದ್ದರು. ಹೇಗಿದು ತಿಳಿಯಿತು ಮಹಾ

ಭಾರತತಾತ್ಪರ್ಯನಿರ್ಣಯದಲ್ಲಿ 20ನೇ ಅಧ್ಯಾಯದ 110 ನೆಯ ಶ್ಲೋಕವು ಶ್ರೀಪಾದರ ಕಣ್ಣಿಗೆ ಮೊದಲು ಗೋಚರವಾಯಿತು. ಆ ಶ್ಲೋಕವು ನರಕಾಸುರನನ್ನು ಸಂಹರಿಸಿದ ಶ್ರೀಕೃಷ್ಣನು ನರಕಾಸುರನಿಂದ ಅಪಹರಿಸಲ್ಪಟ್ಟ ಹದಿನಾರುಸಾವಿರದ ನೂರು ರಾಜಕನ್ನಿಕೆಯರನ್ನು ಕರುಣಾರಸಪೂರಿತಕಣ್ಣುಗಳಿಂದ ಕಂಡನು.'ಎಂಬ ವೃತ್ತಾಂತವನ್ನು ಅರುಹಿತು.

ತತ್ರಾಪಶ್ಯತ್ ಕನ್ಯಕಾ ಭೂಮಿಪಾನಾಂ
ಭೌಮಾನೀತಾಃ ಸಮರೇ ತಾನ್ ವಿಜಿತ್ಯ ।
ದ್ವ್ಯಷ್ಟೌ ಸಹಸ್ರಾಣಿ ಶತಂ ಚ
ರೂಪಶೀಲೋದಾರಾಃ ಅಕ್ಷತಾಃ ಸದ್ವ್ರತಸ್ಥಾಃ ॥

(ಮ.ಭಾ.ತಾ.ನಿ.20 ನೇ ಅಧ್ಯಾಯ. 110 ಶ್ಲೋಕ)

ಇದು ಮಂಗಲ ಸೂಚನೆಯಾಗಿತ್ತು. ಶ್ರೀಪಾದರ ಕಾರ್ಯಕ್ಕೆ ಹಸಿರುನಿಶಾನೆಯನ್ನು ತೋರಿಸಿತ್ತು. ಹೀಗಾಗಿ ಶ್ರೀಗಳ ಸಂಕಲ್ಪ ದೃಢವಾಗಿತ್ತು. ಈ ಸೂಚನೆ ಕೇವಲ ಮಂಗಲವಾಗಿರದೆ ಮುಂಬರುವ ಫಲವನ್ನೂ ಸೂಚಿಸಿತ್ತು. ಅದು ಚಾತುರ್ಮಾಸ್ಯದ ಸಮಾಪ್ತಿಯಲ್ಲಿ ಗೊತ್ತಾಯಿತು.

ಶ್ರೀಮದಾಚಾರ್ಯರ ಸೂಚನೆಯನ್ನು ಅನುಸರಿಸಿದ ಶ್ರೀಪಾದರು, ಮರುದಿನದ ಉಪನ್ಯಾಸದಲ್ಲಿ ತಮ್ಮ ಸಭೆಯ ಮೂಲನಿಧಿಗಾಗಿ ಸಂಗ್ರಹದ ಕಾರ್ಯವನ್ನು ಅರುಹಿದರು. ಭಕ್ತರು ಕೇಳಿದರು. ದಿನದಿಂದ ದಿನಕ್ಕೆ ಸಂಗ್ರಹ ಬಲಗೊಂಡಿತು. ಸಾಫಲ್ಯಕಂಡಿತು. ಅಷ್ಟೊತ್ತಿಗೆ ಚಾತುರ್ಮಾಸ್ಯವು ಮುಗಿದಿತ್ತು. ಎಣಿಸಿ ನೋಡಿದರೆ ಸಂಗ್ರಹಿಸಿದ ಸಭೆಯ ನಿಧಿಯ ಮೊತ್ತ ಹೆಚ್ಚು ಕಡಿಮೆ ಯಾಗಿರದೆ ಸರಿಯಾಗಿ ಹದಿನಾರು ಸಾವಿರದ ನೂರು ರೂಪಾಯಿಯಾಗಿತ್ತು. ಎಲ್ಲರಿಗೂ ಮುದವನ್ನೀಡಿತ್ತು. ಕಲ್ಕತ್ತಾ ಭಕ್ತರ ಚಿತ್ತದಲ್ಲಿ ತೃಪ್ತಿಯಿತ್ತು. ಧನ್ಯತೆ ಮೂಡಿತ್ತು. ಶ್ರೀಪಾದರ ಮನಸ್ಸು ಮಾತ್ರ ಶ್ರೀಮದಾಚಾರ್ಯರ ಮಾತಿನ ಅದ್ಭುತಮಹಿಮಾಜಲಧಿಯಲ್ಲಿಯೇ ಮುಳುಗಿತ್ತು.

ಶ್ರೀಕೃಷ್ಣನ ಕರುಣಾದೃಷ್ಟಿಗೆ ವಿಷಯರಾದ ಹದಿನಾರು ಸಾವಿರದ ನೂರು ಕನ್ನಿಕೆಯರ ವೃತ್ತಾಂತವನ್ನು ತೋರಿಸುವ ಮೂಲಕ, ಆಚಾರ್ಯರ ಪ್ರತೀಕವಾದ ಈ ಗ್ರಂಥವು ಸರಿಯಾಗಿ ಹದಿನಾರುಸಾವಿರದ ನೂರು ರೂಗಳ ಸಂಪಾದನೆಯನ್ನು ಶ್ರೀಗಳಿಗೆ ಮಾಡಿಸಿಕೊಟ್ಟಿತು. ಹೀಗೆಯೇ ಶ್ರೀಗಳಿಗೆ ಸಂದರ್ಭಕ್ಕನುಗುಣವಾಗಿಯೇ ಉತ್ತರವನ್ನು ನೀಡುವ ಗ್ರಂಥ ತಾನೆಂದು ಸಾಬೀತುಪಡಿಸಿತು.

2) 1969ರಲ್ಲಿ ಉಡುಪಿಯ ಅಷ್ಟಮಠಗಳ ವಲಯದಲ್ಲೊಂದು ವಿಚಿತ್ರ ಘಟನೆ ಸಂಭವಿಸಿತು. ಶ್ರೀಪಲಿಮಾರು ಮಠದ ಅಧಿಪತಿಗಳಾಗಿದ್ದ ಶ್ರೀರಘುವಲ್ಲಭತೀರ್ಥರು ತಮ್ಮ ಪೀಠವನ್ನು ತ್ಯಜಿಸಲು ಯೋಚಿಸಿದರು. ಕಾರಣ, ಸಂನ್ಯಾಸಧರ್ಮದ ಅನುಷ್ಠಾನಯೋಗ್ಯತೆ ತನ್ನಲ್ಲಿರದಿರುವುದು ಅವರಿಗೆ ತಿಳಿದಿತ್ತು. ಪೀಠದಲ್ಲಿದ್ದುಕೊಂಡೇ ಅಪ್ರಾಮಾಣಿಕನಾಗಿರುವುದಕ್ಕಿಂತ ಪೀಠದಿಂದೆದ್ದು ಒಂದಂಶದಲ್ಲಿಯಾದರೂ ಪ್ರಾಮಾಣಿಕನಾಗಿ ಬದುಕಬೇಕೆಂದು ಹಂಬಲಿಸಿದರು। ಆದರೆ ಒಡನೆಯೇ ಪೀಠವನ್ನು ಬಿಡುವುದು ಅಸಾಧ್ಯ ಹಾಗೂ ಅಕ್ರಮ ಎಂಬ ಅರಿವೂ ಅವರಿಗಿತ್ತು. ತನ್ನಂತಿರುವ ಮಾನಸಿಕವಾಗಿ ದುರ್ಬಲಮನುಷ್ಯನನ್ನು ಈ ಪೀಠದಲ್ಲಿ ಕುಳ್ಳಿರಿಸಲು ಅವರು ತಯಾರಿರಲಿಲ್ಲ. ಅದಕ್ಕೆ ತಕ್ಕುದಾದ ವ್ಯಕ್ತಿಗಾಗಿ ಹುಡುಕಾಡಿದರು. ಕೊನೆಗೊಬ್ಬ ಉತ್ತಮ ಅಭ್ಯರ್ಥಿಯ ಪ್ರಾಪ್ತಿಯಾಯಿತು. ಅದಕ್ಕಾಗಿ

ರಘುವಲ್ಲಭರ ಹೃದಯ ಮುದಭರಿತವಾಯಿತು. ಆ ಅಭ್ಯರ್ಥಿ, ಉತ್ತಮ ವಿರಕ್ತರಾದ ಭಕ್ತರಾದ ತತ್ವವಾದದಲ್ಲಿ ಉದ್ದಾಮಪಂಡಿತರಾದ ಶ್ರೀಭಂಡಾರಕೇರಿ ಮಠದ ಶ್ರೀಶ್ರೀವಿದ್ಯಾಮಾನ್ಯತೀರ್ಥರು. ಇಂತಹ ಅಭ್ಯರ್ಥಿಯನ್ನು ರಘುವಲ್ಲಭರ ಮನಸ್ಸು ಬಲವಾಗಿ ಒಪ್ಪಿಕೊಂಡಿತು. ಅವರು ತಮ್ಮ ಮನದಭಿಲಾಷೆಯನ್ನು ಶ್ರೀವಿದ್ಯಾಮಾನ್ಯತೀರ್ಥರ ಮುಂದಿರಿಸಿದರು. ಈ ವಿಷಯವನ್ನು ಕೇಳಿದ ಶ್ರೀವಿದ್ಯಾಮಾನ್ಯತೀರ್ಥರಿಗೆ ಒಂದು ಕ್ಷಣ ತೋಚದಂತಾಯಿತು. ಈ ವಿಷಯ ಅವರನ್ನು ಆನಂದಸಾಗರದಲ್ಲಿ ಮುಳುಗಿಸಿತು. ಕಾರಣ, ಅವರಿಗೆ ಇನ್ನೊಂದು ಪೀಠದ ಅಧಿಕಾರ ಬಂದಿತೆಂದಲ್ಲ. ಬದಲಾಗಿ ಶ್ರೀಮದಾಚಾರ್ಯಕರಾರ್ಚಿತ ಶ್ರೀಕೃಷ್ಣನ ಅರ್ಚನೆಯ ಸೌಭಾಗ್ಯದ ಆನಂದ. ಆದರೆ ಒಂದೆಡೆ ಅವರಿಗೆ ಅತ್ಯಂತ ಅಚ್ಚರಿಯಾಗಿತ್ತು. ಊಹಾತೀತವೂ ಆಗಿತ್ತು. ಶ್ರೀವಿದ್ಯಾಮಾನ್ಯತೀರ್ಥರ ಮನಸ್ಸು, ತಾನು ಒಪ್ಪಿದರೂ ತನ್ನ ಆರಾಧ್ಯಗುರು ಶ್ರೀಮದಾಚಾರ್ಯರು ಒಪ್ಪಿರುವರೆ? ಎಂದು ಆಲೋಚಿಸಿತು. ಅದಕ್ಕಾಗಿ ಅವರು ಎಂದಿನ ರೂಢಿಯಂತೆ ತಾತ್ಪರ್ಯನಿರ್ಣಯಪ್ರಶ್ನೆಯನ್ನು ಕೇಳಿದರು. ಆಗ ನಿರ್ಣಯಗ್ರಂಥ ನೀಡಿದ ಉತ್ತರ

'ಮಹೋದಕಸ್ಯ ಮಧ್ಯತಶ್ಚಕಾರ ತಾಂ ಪುರೀಂ ಶುಭಾಮ್ ।
ದ್ವಿಷಟ್ಕಯೋಜನಾಯತಾಂ ಪಯೋಬ್ಧಿಮಧ್ಯಗೋಪಮಾಮ್ ।
ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಮ್॥

(ಮ.ಭಾ.ತಾ.ನಿ.ಅಧ್ಯಾಯ. 17ಶ್ಲೋಕ 112-113)

ದೈತ್ಯರ ಹಾವಳಿಯಿಂದ ನೊಂದ ಗೋಪಾಲಕ, ಯಾದವವೃಂದದ ರಕ್ಷಣೆಗಾಗಿ ಶ್ರೀಕೃಷ್ಣನು ವೃಂದಾವನದಿಂದ ಬಂದು ಸಾಗರ ನೀರಮಧ್ಯದಲ್ಲಿ ಸುಂದರಪುರವನ್ನು ನಿರ್ಮಿಸಿದನು.' ಎಂದು ಸಂದರ್ಭಕ್ಕೊಪ್ಪುವ ಸನ್ನಿವೇಶ. ಶ್ರೀವಿದ್ಯಾಮಾನ್ಯತೀರ್ಥರು ಭಂಡಾರಕೇರಿ ಮಠದಿಂದ ಪಲಮಾರು ಮಠಕ್ಕೆ ಬಂದರು ಶ್ರೀಕೃಷ್ಣನನ್ನು ಪೂಜಿಸಿದರು. ಪಲಿಮಾರು ಮಠದ ಇತಿಹಾಸದಲ್ಲೇಕೆ ಉಡುಪಿಯ ಅಷ್ಟಮಠಗಳ ಇತಿಹಾನದಲ್ಲೇ ಅಸದೃಶ ದಾಖಲೆಯನ್ನು ಸ್ಥಾಪಿಸಿದರು. ತಮ್ಮ ಸ್ವರ್ಣತೊಟ್ಟಿಲು, ಸ್ವರ್ಣರಥ, ವಜ್ರಕಿರೀಟಗಳ ಕೊಡುಗೆಗಳಿಂದ ಕರ್ಣಾಟಕದ, ಉಡುಪಿಯ ಹೆಗ್ಗಳಿಕೆಯನ್ನೇ ವೃದ್ಧಿಗೊಳಿಸಿದರು. ರಜತಪೀಠಪುರವೆನಿಸಿದ ಉಡುಪಿಯನ್ನು 'ಸುವರ್ಣಪುರ' ವೆಂದು ಪ್ರಸಿದ್ಧಿಗೊಳಿಸಿದರು.

3) ಕಡಗೋಲು ಪಿಡಿದ ಉಡುಪಿಯ ಶ್ರೀಕೃಷ್ಣನನ್ನು ಸ್ವರ್ಣರಥದಲ್ಲಿ ಕುಳ್ಳಿರಿಸಿ, ಎಳೆಯಬೇಕೆಂದು ಪರ್ಯಾಯ ಶ್ರೀಪಲಿಮಾರು ಮಠಾಧೀಶರಾದ ಶ್ರೀವಿದ್ಯಾಮಾನ್ಯ ತೀರ್ಥರ ಸಂಕಲ್ಪ. ಇದಕ್ಕೆ ಪುಕ್ಕರ ವಿಕಲ್ಪ. ಆದರೆ ಗೆಲುವನ್ನು ಪಡೆದದ್ದು ಶ್ರೀಪಾದರ ಸಂಕಲ್ಪ. ಧನಸಂಗ್ರಹ ಕಾರ್ಯವು ಮಧ್ಯಮಗತಿಯಿಂದ ಸಾಗುತ್ತಿತ್ತು. ಭಕ್ತರ ಕಾಣಿಕೆ ಬರುತ್ತಲೇ ಇತ್ತು. ಧನಸಂಗ್ರಹವನ್ನು ನೋಡುತ್ತಿದ್ದಂತೆ ಮಠದ ವ್ಯವಸ್ಥಾಪಕರ ಚಿಂತೆ ಬಲವಾಗುತ್ತಿತ್ತು. ಕಾರಣ, ರಥದ ವಿನ್ಯಾಸ, ಗಾತ್ರ, ಅದಕ್ಕನುಗುಣವಾದ ಚಿನ್ನ, ಅದರ ವೆಚ್ಚ ಹೀಗೆ ಯೋಚಿಸುತ್ತಿದ್ದರೆ, ಅವರಿಗೆ ಅದೆಲ್ಲವೂ ಅಗಾಧ, ಸುವರ್ಣರಥನಿರ್ಮಾಣದ ಮೌಲ್ಯ ಕೋಟಿರೂಪಾಯಿ ಗಳನ್ನೂ ಮೀರಿತು. ಅಷ್ಟೊಂದು ಧನ ಸಂಗ್ರಹಸಾಧ್ಯವೇ? ಎಂಬ ಶಂಕೆಯೊಂದಿಗೆ 'ಅಸಂಭಾವಿತ' ವೆಂಬ ಭ್ರಾಮಕ ನಿಶ್ಚಯವೇ ಅವರಿಗಿತ್ತು. ಅದರ ಫಲವಾಗಿ ಅವರೆಲ್ಲ

ಯೋಚಿಸಿದರು. 'ಸ್ವರ್ಣರಥದ ನಿರ್ಮಾಣವಾಗಲಿ. ಆದರೆ ಅದು ಪುಟ್ಟದಾಗಿರಲಿ. ಕೇವಲ ಗರ್ಭಗುಡಿಯ ಪೌಳಿಯೊಳಗೆ ಎಳೆಯುವಂತಾಗಿರಲಿ. ಆಗ ರಕ್ಷಣೆ ವೆಚ್ಚ ಎಲ್ಲವೂ ಸುಲಭ' ಎಂದು ಆದರೆ ಶ್ರೀಪಾದರು ಇದಕ್ಕೆ ಅನುಮೋದನೆಯನ್ನೀಡಲಿಲ್ಲ. ಕಾರಣ ಅದು ಅವರಿಗೆ ಹಿಡಿಸಲಿಲ್ಲ. ಆದರೂ ಶಿಷ್ಯರ ಮಾತನ್ನು ಕಡೆಗಣಿಸಲಿಲ್ಲ. ಸಾರಾಸಾರವಿವೇಚನೆಗಾಗಿ ಶ್ರೀಮದಾಚಾರ್ಯರ ಮುಂದೆ ಪ್ರಶ್ನೆ ಇಟ್ಟರು. ಗುಡಿಯಲ್ಲಿ ಎಳೆಯ ಬಹುದಾದ ಪುಟ್ಟರಥವನ್ನು ಮಾಡಿಸಬೇಕೆ? ರಥಬೀದಿಯಲ್ಲಿ ಬರಬಲ್ಲ ಭವ್ಯರಥವನ್ನು ನಿರ್ಮಿಸಬೇಕೆ? ಎಂದು ಪ್ರಶ್ನೆ ಅದಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದ ಮೂಲಕ ಉತ್ತರವನ್ನಿತ್ತರು.

ಸೈವಾದಿತಿರ್ವಾಸುದೇವಸ್ಯ ದತ್ತಾ
ತಸ್ಯಾ ರಥಂ ಮಂಗಲಂ ಕಂಸ ಏವ ।
ನಯಾಪಯಾಮಾಸ.....॥

ಮ.ತಾ.ನಿ.ಅಧ್ಯಾಯ12.ಶ್ಲೋಕ ॥3॥

ಅದಿತಿದೇವಿಯೇ ದೇವಕಿಯಾಗಿ ಜನಿಸಿದಳು. ಅವಳನ್ನು ಕಶ್ಯಪರ ಅವತಾರಭೂತನಾದ ವಸುದೇವನಿಗೆ ನೀಡಿ ವಿವಾಹವನ್ನುಮಾಡಿ ಅವರೀರ್ವರನ್ನುಮಂಗಲ ರಥದಲ್ಲಿ ಕುಳ್ಳಿರಿಸಿ ಸ್ವತಃ ಕಂಸನೇ ಅದರ ಸಾರಥ್ಯವನ್ನುಮಾಡುತ್ತಾ ರಾಜಬೀದಿಯಲ್ಲಿ ಶೋಭಾಯಾತ್ರೆಯನ್ನು ನಡೆಸಿದ ವೃತ್ತಾಂತವಿದು.

ಎಷ್ಟೊಂದು ಸಮಂಜಸವಾದ ಉತ್ತರವಲ್ಲವೇ ಶ್ರೀಮದಾಚಾರ್ಯರಸಹಮತ ಶ್ರೀಪಾದರ ಮಾತಿಗಿತ್ತು. ಕಾರಣ ಶ್ರೀವಿದ್ಯಾಮಾನ್ಯತೀರ್ಥರ ಕನಸಾದ ಭವ್ಯಸ್ವರ್ಣ ರಥವು, ಶ್ರೀಮದಾಚಾರ್ಯರಿಗೆ ಪ್ರಿಯತಮ ನಾದ ಶ್ರೀಕೃಷ್ಣನಿಗೆ ಇಷ್ಟವಾಗಿತ್ತು. ಅದು ಅವನಿಗೆ ಬೇಕಿತ್ತು. ಕೊನೆಗೂ ಅದು ಭವ್ಯರೀತಿಯಲ್ಲಿಯೇ ಆಯಿತು. ಜಗತ್ತು ಅಚ್ಚರಿ, ಆನಂದಗಳಲ್ಲಿ ಮುಳುಗಿತ್ತು.

4) ಕಡಲತಡಿಯಲ್ಲಿ ನೆಲೆಸಿದ ಯದುಕುಲಲಲಾಮನಿಗೆ ಚಿನ್ನದ ತೊಟ್ಟಿಲು, ಹೊನ್ನ ತೇರುಗಳನ್ನು ಅರ್ಪಿಸಿದ ಶ್ರೀವಿದ್ಯಾಮಾನ್ಯತೀರ್ಥರು ವಜ್ರಕಿರೀಟವನ್ನರ್ಪಿಸುವ ಸಂಕಲ್ಪಗೈದರು. ಈ ಸುದ್ದಿ ಕೇಳುಗರ ಕಿವಿಗಳನ್ನು ನೆಟ್ಟಗಾಗಿಸಿತು. ಯಥಾ ಪ್ರಕಾರ ಜನರಿಂದ 'ಅಸಾಧ್ಯವಿದು' ಎಂದು ಶಂಕೆ ಕೇಳಿ ಬಂದಿತು. ಆದರೆ ಶ್ರೀಗಳವರ ಅಂತರಂಗದಲ್ಲಿ ಶಂಕೆಗೆ ಅವಕಾಶವಿರಲಿಲ್ಲ. ಆದರೂ ಅವರು ಜನರಿಗಾಗಿ ತಾತ್ಪರ್ಯನಿರ್ಣಯ ಕಾರರನ್ನು ಕೇಳದೇ ಇರಲಿಲ್ಲ. 'ಸಂಕಲ್ಪಿತರೀತಿಯಲ್ಲಿ ವಜ್ರಕಿರೀಟವನ್ನು ಮಾಡಿಸುವುದು ಸಾಧ್ಯವೇ? ಎಂದು. ಅದಕ್ಕುತ್ತರವಾಗಿ 'ಕಿರೀಟಂ ತತ್ ಕೃಷ್ಣಮೂರ್ಧ್ನಿ ಪ್ರವಿಷ್ಟಂ ತತ್ತುಲ್ಯಮಾಸೀತ್ ತಸ್ಯ ರೂಪೇಷ್ವಭೇದಾತ್' (ಮ. ತಾ.ನಿ. ಅಧ್ಯಾಯ 16. ಶ್ಲೋಕ 9) ಕ್ಷೀರಸಾಗರದ ಅಮುಕ್ತಸ್ಥಾನಕ್ಕೆ ಒಂದು ಬಾರಿ ಬಲಿರಾಜನು ಆಗಮಿಸಿದ. ಅಲ್ಲಿ ನಿದ್ರೆಯಿರದವನಾದರೂ ಕಣ್ಮುಚ್ಚಿ ಮಲಗಿ ನಿದ್ರಿಸಿದವನಂತೆ ನಟಿಸುವ ವಾಸುದೇವನನ್ನು ವೀಕ್ಷಿಸಿದ. ವಾಸುದೇವನ ಶಿರಸ್ಸಿನಲ್ಲಿರುವ ರತ್ನ ಖಚಿತ ಕಿರೀಟವು ತನ್ನದಾಗಿದ್ದರೆ ಬಲು ಚೆನ್ನ ಎಂದು ಭಾವಿಸಿದ. ಭಾವಿಸಿ ವಾಸುದೇವನೆಡೆಗೆ ಧಾವಿಸಿದ. ಧಾವಿಸಿ ಕಿರೀಟವನ್ನು ಅಪಹರಿಸಿದ. ಅಪಹರಿಸಿ ಓಡಲಾರಂಭಿಸಿದ. ಕಿರೀಟವನ್ನು ಹಿಡಿದು ಓಡುತ್ತಿರುವ ಬಲಿಯನ್ನು ದಾರಿಮಧ್ಯದಲ್ಲಿ ಗರುಡದೇವನು ನೋಡಿದ. ನೋಡಿ ಬೆರಗಾದ. ನಮ್ಮ ಸ್ವಾಮಿಯ ಕಿರೀಟ ಇವನ ಕೈಯನ್ನು ಹೇಗೆ ಸೇರಿತು?

ಎಂದು ಯೋಚಿಸಿದ. ಇದು ಕಳ್ಳತನವೆಂದು ತಿಳಿದ. ಬಲಿಯ ಬೆನ್ನು ಹಿಡಿದ. ಬಲಿ ಚಕ್ರವರ್ತಿ ಪಾತಾಲ ಕ್ಕೋಡಿದ. ಆದರೂ ಬಿಡದ ಗರುಡ ಅಲ್ಲಿ ಬಲಿಯೊಡನೆ ಕಾದಾಡಿದ. ಕಾದಾಡಿ ಅವನನ್ನು ಸೋಲಿಸಿದ. ಕಿರೀಟವನ್ನು ಪಡೆದ. ಪಡೆದು ಅದನ್ನು ಪುನಃ ಸ್ವಾಮಿಗೆ ನೀಡಲು ಕ್ಷೀರಾಬ್ಧಿಗೆ ಹೊರಡುತ್ತಿದ್ದ. ಆ ಸಮಯದಲ್ಲಿ ಭೂಮಿಯಲ್ಲಿ ದ್ವಾಪರದ ಶ್ರೀಕೃಷ್ಣನಿದ್ದ. ಅವನು ಗೋಮಂತಕ ಪರ್ವತದಲ್ಲಿ ಕುಳಿತಿದ್ದ. ಕುಳಿತು ಕೊಳಲನ್ನೂದುತ್ತಿದ್ದ. ಗರುಡದೇವ ಗಗನ ಮಾರ್ಗದಿಂದಲೇ ಶ್ರೀಕೃಷ್ಣನನ್ನು ನೋಡಿದ. ಇಲ್ಲಿಯೇ ಸ್ವಾಮಿಯಿರಲು ಪುನಃ ಪಾಲ್ಗಡಲಿಗೆ ಏಕೆ ಹೋಗಬೇಕೆಂದು ಆಲೋಚಿಸಿದ. ಆ ಕಿರೀಟವನ್ನು ಶ್ರೀಕೃಷ್ಣನಿಗೇ ಅರ್ಪಿಸಲು ನಿಶ್ಚಯಿಸಿದ. ಕಿರೀಟವನ್ನು ಆಕಾಶದಿಂದಲೇ ಶ್ರೀಕೃಷ್ಣನ ಮೇಲೆ ಹಾಕಿದ. ಆ ಕಿರೀಟವು ಬಂದು ಸರಿಯಾಗಿ ಶ್ರೀಕೃಷ್ಣನ ತಲೆಯ ಮೇಲೆಯೇ ಕುಳಿತುಕೊಂಡಿತು. ಅಳತೆ ಸರಿಯಾಗಿತ್ತು. ಕಾರಣ ಕ್ಷೀರಸಮುದ್ರದ ಮಧ್ಯದಲ್ಲಿರುವ ಮೂಲರೂಪಿ ವಾಸುದೇವನೇ, ಭೂಮಿಯಲ್ಲಿರುವ ವಸುದೇವಸುತ ಶ್ರೀಕೃಷ್ಣನಲ್ಲವೆ?

ಈ ರೀತಿ ಶ್ರೀಮದಾಚಾರ್ಯರು 'ಭಗವಂತನ ಮೂಲರೂಪಕ್ಕೂ ಅವತಾರರೂಪಗಳಿಗೂ ಭೇದವಿಲ್ಲ' ಎಂಬ ತತ್ವವನ್ನು ಈ ಕಥೆಯ ಮೂಲಕ ಅರುಹಿದರು. ತನ್ಮೂಲಕ ಪ್ರಸ್ತುತ ಶ್ರೀಪಾದರ ಪ್ರಶ್ನೆಗೆ ಉತ್ತರವನ್ನಿತ್ತರು. ಕಿರೀಟದ ಅರ್ಪಣೆಯ ಕುರಿತು ಪ್ರಶ್ನಿಸಿದರೆ ಕಿರೀಟದ ಅರ್ಪಣೆಯ ಉತ್ತರವೇ ಬಂದಿತು. ಕೋಟಿಗೂ ಅಧಿಕವಾಗಿ ಬೆಲೆ ಬಾಳುವ ಸುಂದರ ವಜ್ರಕಿರೀಟವು ಉಡುಪಿ ಶ್ರೀಕೃಷ್ಣನ ಶಿರಸ್ಸನ್ನೇರಿತು. ಅಂತೂ ಶ್ರೀವಿದ್ಯಾಮಾನ್ಯತೀರ್ಥರ ಕನಸು ನನಸಾಯಿತು.

5) 1989 ಅವಧಿಯಲ್ಲಿ ಶ್ರೀವಿದ್ಯಾಮಾನ್ಯತೀರ್ಥರು ಚಾತುರ್ಮಾಸ್ಯಕ್ಕಾಗಿ ಮುಂಬಯಿ ಮಹಾನಗರದಲ್ಲಿ ಅಂಧೇರಿ ಪಶ್ಚಿಮದ ಶ್ರೀಅದಮಾರು ಮಠದಲ್ಲಿ ತಂಗಿದ್ದರು. ಗುರು ಶ್ರೀಸತ್ಯಧ್ಯಾನರ ಅಪ್ಪಟ ಸಾರ್ಥಕ ಶಿಷ್ಯರಾದ ಅವರು ತಮ್ಮ ಅಧ್ಯಯನದ ಬಳಿಕ ನಿರಂತರದ ಪಾಠ-ಪ್ರವಚನಗಳೊಂದಿಗೆ ಪರಮತಖಂಡನ- ಸ್ವಮತ ಸಮರ್ಥನಗಳನ್ನು ಮಾಡುತ್ತಿದ್ದವರು. ಈ ಚಾತುರ್ಮಾಸ್ಯದ ಸಂದರ್ಭದಲ್ಲಿ ಪತ್ರಿಕೆಗಳಲ್ಲಿ ಒಂದು ಪ್ರಕಟಣೆ ಯನ್ನೀಯಲು ಯೋಚಿಸಿದರು. ದ್ವೈತಾ-ದ್ವೈತಚರ್ಚೆಯ ಪಂಥಾಹ್ವಾನವೇ ಆ ಪ್ರಕಟಣಯಾಗಿತ್ತು.

ನೇರವಾಗಿ ಪರವಾದಿಗಳನ್ನು ಕರೆದರೆ ಅವರು ಬಾರರು. ಕಾರಣ ಅವರು ದುರ್ಬಲಮತದಲ್ಲಿ ಜನಿಸಿದ ಅಬಲರು. ಬರುವುದರ ಬದಲಾಗಿ 'ಈ ವಾಕ್ಯಾರ್ಥದಿಂದ ಸೌಹಾರ್ದಹಾನಿ' ಎಂಬ ಬೊಗಳೆಯನ್ನು ಉಲಿಯು ವವರು. ವಾಕ್ಯಾರ್ಥದಿಂದ ಹಿಂಜರಿವವರು. ಆದರೆ ಶ್ರೀಪಾದರು ಮಾತ್ರ ಅವರನ್ನು ಬಿಡರು. ಅದಕ್ಕೊಂದು ಉಪಾಯವನ್ನು ಹೂಡಿದರು.

'ದ್ವೈತಸಿದ್ಧಾಂತವನ್ನು ಖಂಡಿಸಿದ ಶ್ರೇಷ್ಠ ಅದ್ವೈತ ವಿದ್ವಾಂಸರಿಗೆ ಒಂದು ಲಕ್ಷರೂಗಳ ಬಹುಮಾನ' ಎಂಬ ಸವಾಲೆಸದರು. ಈ ಸವಾಲು ದೇಶದ ಮೂಲೆಮೂಲೆಗಳಲ್ಲಿರುವ ಅದ್ವೈತಿವಿದ್ವಾಂಸರನ್ನು ತಲುಪಲು ದೇಶದ ಪ್ರಧಾನ ಆಂಗ್ಲಭಾಷಾಪತ್ರಿಕೆಗಳನ್ನು ಉಪಯೋಗಿಸಬಯಸಿದರು. ಅದಕ್ಕಾಗಿ ಪ್ರಕಟಣೆಗೆ ಮುಂಚಿತವಾಗಿ ಶ್ರೀಮದಾಚಾರ್ಯರನ್ನು ಕೇಳಿದರು. 'ಈ ಕಾರ್ಯವು ಈ ಸಮಯದಲ್ಲಿ ಸಫಲವೆ?' ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರು ನೀಡಿದ ಉತ್ತರವಿದು.

'ಶೌರ್ಯಪ್ರಕಾಶನಾಯೈವ ಯುದ್ಧಂ
ಯೋಜಯತಾಂ ಭವಾನ್ ।
ಇತ್ಯುಕ್ತಃ ಸಹದೇವೇನ
ಯುಯುಧಾನೇನ ಚಾಚ್ಯುತಃ॥ '

(ಮ.ತಾ.ನಿ.ಅಧ್ಯಾಯ 24. ಶ್ಲೋಕ 52 )

ಇದು ಶ್ರೀಕೃಷ್ಣನು ಸಂಧಾನಕ್ಕಾಗಿ ಕೌರವರಲ್ಲಿಗೆ ತೆರಳುವ ಸಂದರ್ಭ. ಅವನು ಅಲ್ಲಿಗೆ ಹೋಗುವದಕ್ಕೂ ಪೂರ್ವದಲ್ಲಿ ಎಲ್ಲರ ಅಭಿಪ್ರಾಯವನ್ನು ಕೇಳಿದನು. ಐದು ಗ್ರಾಮ ಗಳಿಂದ ಸಂಧಾನವೊ? ಯುದ್ಧ ಅನಿವಾರ್ಯವೊ? ಧರ್ಮರಾಯನ ಒಲವುಸಂಧಾನ ದಲ್ಲಿ. ಭೀಮಸೇನಾ ರ್ಜುನರ ನಿಲುವು ಧರ್ಮಜ ಅಣ್ಣನಾದ್ದ ರಿಂದ ಅವನ ಮಾತಿನಲ್ಲಿ ದ್ರೌಪದೀ ದೇವಿಯರ ದೃಷ್ಟಿ ಯುದ್ಧದಲ್ಲಿ. ಹೀಗೆ ಒಂದೊಂದೂ ಭಿನ್ನಭಿನ್ನ ಅಭಿಮತ ವಾಗಿತ್ತು. ಆ ಸಮಯದಲ್ಲಿ ಸಹದೇವನ ಮಾತು ವಿಚಿತ್ರ ವಾಗಿತ್ತು. ಅದೇ ಈಗ ಶ್ರೀಗಳಿಗೆ ಬಂದ ಉತ್ತರವಾಗಿತ್ತು.

'ನಮ್ಮ ಭುಜಗಳಲ್ಲಿ ಬಲ ತುಂಬಿದೆ. ಶೌರ್ಯ ಉಕ್ಕುತ್ತಿದೆ. ಅದನ್ನು ಪ್ರದರ್ಶಿಸಬೇಕಾಗಿದೆ. ಅದಕ್ಕಾಗಿ ಈ ಯುದ್ಧ ಅವಶ್ಯವೆನಿಸಿದೆ. ಆದ್ದರಿಂದ ಯುದ್ಧವೇ ಯೋಗ್ಯ ವೆಂಬುದೇ ನನ್ನ ಇರಾದೆ? ಸಹದೇವನ ಈ ಮಾತಿಗೆ ಯುಯುಧಾನನೆಂಬ ಯಾದವನ ಸಹಮತವೂ ಇತ್ತು.

ಈ ಮಾತಿನಲ್ಲಿ 'ಜಯಾಪಜಯಗಳ ಪ್ರಶ್ನೆಯಿಲ್ಲ ರಾಜ್ಯ ಬೇಕೇಬೇಕೆಂಬ ಹಂಬಲವಿಲ್ಲ. ತನ್ನಲ್ಲಿರುವ ಭುಜ ಬಲವನ್ನು ತೋರಿಸಲು ಯುದ್ಧ ಬೇಕೆನ್ನುವ ಅಭಿಪ್ರಾಯ ಅಡಗಿದೆ. ಇದು ಶ್ರೀಪಾದರ ಪ್ರಸ್ತುತ ಪ್ರಶ್ನೆಗೆ ಸಮರ್ಪಕ ಉತ್ತರವಾಗಿತ್ತು. ಅರ್ಥಾತ್ ಶ್ರೀಗಳವರ ಈ ಸವಾಲಿನ ಪ್ರಕಟಣೆಯಿಂದ ಪರವಾದಿಗಳು ವಾಕ್ಯಾರ್ಥಕ್ಕೆ ಬರುವರೆಂದು ಖಚಿತವಾಗಿ ಹೇಳುವಂತಿಲ್ಲ. ಬಂದರೆ ಬರಬಹುದು. ಬಾರದೆಯೂ ಇರಬಹುದು. ಹೀಗಾಗಿ ಈ ಸಮಯದಲ್ಲಿ ಜಯಾಪಜಯಗಳ ಬಗ್ಗೆ ಹೇಳುವಂತಿಲ್ಲ. ಆದರೆ ಪರವಾದಿಗಳಿಗೆ ಶ್ರೀಪಾದರಲ್ಲಿ ಅಡಗಿರುವ ಅಸದೃಶ ಪಾಂಡಿತ್ಯದ, ಸ್ವಮತಶುದ್ಧತೆಯ ಬಗ್ಗೆ ಇರುವ ಅವರ ಸ್ಥೈರ್ಯದ ಪೂರ್ಣಪರಿಚಯವಾಗಬೇಕು. ಅದಕ್ಕಾಗಿ ಈ ಸವಾಲು ಪ್ರಕಟಗೊಳ್ಳಲೇಬೇಕು. ಇದು ಶ್ರೀಮದಾಚಾರ್ಯರ ಅಭಿಪ್ರಾಯವಾಗಿರಬೇಕು.

ಕೊನೆಗೂ ಈ ಮಾತಿನಿಂದ ಶ್ರೀಗಳವರು ಮುಗುಳ್ನಗೆ ಬೀರಿದರು. ಒಂದು ಲಕ್ಷರೂಗಳ ನಿಧಿಯನ್ನು ಸಿದ್ಧ ಪಡಿಸಿದರು. ಸವಾಲನ್ನೆಸೆದರು. ಪರವಾದಿಗಳ ಬರುವಿಗಾಗಿ ನಿರೀಕ್ಷಿಸಿದರು. ಆದರೆ ದಿನಗಳು, ತಿಂಗಳು, ವರ್ಷಗಳು ಉರುಳಿದರೂ , ಪರವಾದಿಪಂಡಿತರು ಮಾತ್ರ ಶ್ರೀಗಳ ಬಳಿ ಸುಳಿಯಲಿಲ್ಲ. ಕಾರಣ ಅವರಲ್ಲಿ ಶ್ರೀಗಳನ್ನೆದುರಿಸುವ ಸಾಮರ್ಥ್ಯ ಹಾಗೂ ಧೈರ್ಯವೆರಡೂ ಇರಲಿಲ್ಲ.

ಅಂತೂ ಶ್ರೀಮದಾಚಾರ್ಯರ ಆ ಮಾತು ನಿಜಕ್ಕೂ ಅರ್ಥವತ್ತಾಯಿತು.

6) ಅನೇಕ ಬಾರಿ ಆಸೇತುಹಿಮಾಚಲ ಸಂದರ್ಶನಗೈದ ಶ್ರೀವಿದ್ಯಾಮಾನ್ಯತೀರ್ಥರಿಗೆ ಒಂದೊಮ್ಮೆ ಬದರಿ ನಾರಾಯಣನ ದರ್ಶನಾಕಾಂಕ್ಷೆ ಮೂಡಿತು. ಆದರೆ ಶ್ರೀಪಾದರನ್ನು ಅವರ ಇಳಿವಯಸ್ಸು ಬಾಧಿಸುತ್ತಿತ್ತು. ಆದರೂ ಅವರ ಇಚ್ಛೆ ಉತ್ಸಾಹದಿಂದ ಕೂಡಿತ್ತು. ಈ ಇಚ್ಛೆಯನ್ನು ಪೂರೈಸಲು ಶಿಷ್ಯವೃಂದ ಸನ್ನದ್ಧವಾಗಿತ್ತು. ಶ್ರೀಪಾದರ ಬದರೀನಾಥನ ದರ್ಶನಯಾತ್ರೆಯ ಶಿಷ್ಯರ ಯೋಚನೆ ಹೀಗಿತ್ತು.

'ಬೆಂಗಳೂರಿನಿಂದ ದೆಹಲಿಗೆ ವಿಮಾನದಲ್ಲಿ ಪಯಣ. ದೆಹಲಿಯಿಂದ ಹೆಲಿಕಾಪ್ಟರ್ ನಲ್ಲಿ ಬದರಿಗೆ ಗಮನ' ಅಲ್ಲಿ ಭಗವಂತನ ದರ್ಶನ, ಅಲಕನಂದಾಸ್ನಾನ. ಬಳಿಗ ಇದೇ ರೀತಿಯಲ್ಲೇ ಪುನರಾಗಮನ.'ಎಂದು. ಈ ಗಮನಾಗಮನ ವೆಚ್ಚ ಅದೆಷ್ಟಾದರೂ ಸಲ್ಲಿಸುವ ಭಕ್ತರು ಸಿದ್ಧರಾದರು. ಅವರು ಎಲ್ಲ ವ್ಯವಸ್ಥೆಯನ್ನು ಮಾಡಿದರು. ಅನಂತರ ಶ್ರೀಪಾದರ ಬಳಿ ವಿಷಯ ತಿಳಿಸಿದರು. ಆದರೆ ಶ್ರೀಪಾದರು'ಹ್ಞೂಂ' ಎನ್ನರು. ಆದರೆ ಶಿಷ್ಯರೂ ಹಟಬಿಡರು. ಕೊನೆಯಲ್ಲಿ ಶ್ರೀಗಳವರು 'ಆಚಾರ್ಯರನ್ನು ಕೇಳುವೆ. ಅವರು 'ಆಯಿತು' ಎಂದರೆ ಬರುವೆ 'ಇಲ್ಲ' ವೆಂದರೆ ಇಲ್ಲ' ಎಂದರು. ಶಿಷ್ಯರು ಅದಕ್ಕೊಪ್ಪಿದರು. ಶ್ರೀಗಳು ಮೂಲಗುರುಗಳಲ್ಲಿ ಪ್ರಶ್ನೆಯಿಟ್ಟರು.

> ತೃಣಾವರ್ತೋ ನಾಮತಃ ಕಂಸಭೃತ್ಯಃ
> ಸೃಷ್ಟ್ವಾ ಽತ್ಯುಗ್ರಂ ಚಕ್ರವಾತಂ ಶಿಶುಂ ತಮ್ ।
> ಆದಾಯಾ ಽಯಾದಂತರಿಕ್ಷಂ ಸ ತೇನ
> ಶಸ್ತಃ ಕಂಠಗ್ರಾಹಸಂರುದ್ಧವಾಯುಃ ।
> ಪಪಾತ ಕೃಷ್ಣೇನ ಹತಃ ಶಿಲಾತಳೇ
> ತೃಣಾವರ್ತಃ ಪರ್ವತೋದಗ್ರದೇಹಃ ॥

(ಮ.ಭಾ.ತಾ.ನಿ.ಅಧ್ಯಾಯ12 ಶ್ಲೋಕ.117-118)

ಇದು ಪ್ರಶ್ನೆಗೆ ಬಂದ ಉತ್ತರ 'ಗಗನಮಾರ್ಗದಲ್ಲಿ ಬಾಲಕೃಷ್ಣನಿಂದ ತೃಣಾವರ್ತನ ಸಂಹಾರ' ಇದು ಶುಭವೆಂದು ಬಗೆದು ಮುದಪಟ್ಟಿತು ಶ್ರೀಪಾದರ ಶಿಷ್ಯಪರಿವಾರ. ಆದರೆ ಶ್ರೀಗಳು ತಿಳಿಸಿದರು. ಈ ಉತ್ತರದ ಸಾರ 'ನಾವು ವಿಮಾನ, ಹೆಲಿಕಾಪ್ಟರ್ ಗಳ ಮೂಲಕ ಗಗನದಲ್ಲೇ ಸಾಗಿ ಸೇರುವೆವು ಬದರಿಯನು ನೇರ. ನಿಜ, ಆದರೆ ಈ ಗಗನ ಯಾತ್ರೆಯಲ್ಲಿ ಅನಾಹುತ ವಾದೀತು'ಎಂದು ಸೂಚಿಸುತ್ತದೆ ಈ ಉತ್ತರ. ಕಾರಣ ತೃಣಾವರ್ತನನ್ನು ಗಗನ ಮಾರ್ಗದಲ್ಲಿಯೇ ಕೊಂದನು ಆ ನಂದಕುವರ. ರಕ್ಕಸನ ಸಂಹಾರ ನಮಗೆ ಶುಭವೆನಿಸಿದರೂ, ಪ್ರಸ್ತುತಕ್ಕೆ ಈ ಸನ್ನಿವೇಶ ಬಹಳಗಂಭೀರ. ಆದ್ದರಿಂದ ಯಾತ್ರೆಗೆ ನಾಲ್ಕುಚಕ್ರಗಳ ಕಾರೇ ಸುಕರ.'

ಈ ರೀತಿ ಶ್ರೀಪಾದರು ನುಡಿದಾಗ ಶಿಷ್ಯರಿಗಾಯಿತು ನಿರಾಶೆ ಅಪಾರ. ಜೊತೆಯಲ್ಲೇ ಅವರಿಗೆ 'ಸರಿ' ಇದು ಎಂದು ತೋರಿ ಅರಿವಾಯಿತು ಗುರುಗಳ ರಕ್ಷಣೆಯ ಭಾರ.

ಇದೇ ತೆರನಾಗಿ, ಮುಂದಾಗುವ ಅನಾಹುತಗಳನ್ನು ತಪ್ಪಿಸಿ, ಸೂಕ್ತಕ್ರಮದಿಂದ ಬದರಿಯಾತ್ರೆ, ನಾರಾಯಣ ದರ್ಶನಾದಿಗಳನ್ನು ಮಾಡಿಸಿ ಶ್ರೀಪಾದರನ್ನು ಪೊರೆದ ಗ್ರಂಥ ಮಹಾಭಾರತತಾತ್ಪರ್ಯನಿರ್ಣಯ.

7) ಶ್ರೀವಿದ್ಯಾಮಾನ್ಯತೀರ್ಥರ ಶಿಷ್ಯಸಂಪತ್ತು ಅಪಾರ. ಬ್ರಹ್ಮಚಾರಿ, ಗೃಹಸ್ಥ, ಸಂನ್ಯಾಸಿಗಳೆಂಬ ಎಲ್ಲ ವಿಧದ ಶಿಷ್ಯರುಗಳಿಗೆ ಅವರೇ ಆಧಾರ.ಅವರೆಲ್ಲರನ್ನೂ ಅನೇಕ ವಿಧದಿಂದ ಪೊರೆದ ಗುರುವರ ಅವರು ಹೆಜ್ಜೆ ಹೆಜ್ಜೆಗೂ ಶಿಷ್ಯರ ಯೋಗಕ್ಷೇಮಗಳನ್ನು ವಿಚಾರಿಸುವವರು. ಅವರ ಆಗು ಹೋಗುಗಳಿಗೆ ಸ್ಪಂದಿಸುವವರು. ಅವರನ್ನು ಸಲಹುವವರು. ಇಂತಹ ಮಹಾಗುರುಗಳ ಅತ್ಯಂತ ಪ್ರಿಯಶಿಷ್ಯರಾಗಿ, ಸುಧಾಂತವೇದಾಂತ ಅಧ್ಯಯನ ಮಾಡಿದ ವಿದ್ವಾಂಸರು ಶ್ರೀಕೊರ್ಲಹಳ್ಳಿ ಜಯತೀರ್ಥಾಚಾರ್ಯರು. ಅವರು 'ತಮಗೆ ಗುರುಗಳೇ ಎಲ್ಲವೂ'ಎಂದುಕೊಂಡವರು. ನಂಬಿದವರು. ಮನೆಯಲ್ಲಿ ಶುಭಕಾರ್ಯಗಳೇನೇ ಆಗಬೇಕಿದ್ದರೂ ಈ ಗುರುಗಳ ಅನುಗ್ರಹ ಆಜ್ಞೆ ಬೇಕೇಬೇಕು. ಏನೇ ಆಪತ್ತೊದಗಿದರೂ ಅದಕ್ಕೆ ಪರಿಹಾರ ಶ್ರೀಪಾದರ ಅನುಗ್ರಹರಕ್ಷೆ. ಈ ರೀತಿ

ಈ ಗುರುಗಳನ್ನು ನಂಬಿದ ಶಿಷ್ಯರ ಸಂಖ್ಯೆ ಎಣಿಸಲಾಗದಷ್ಟು.

ಶ್ರೀಜಯತೀರ್ಥಾಚಾರ್ಯರು ತಮ್ಮ ಮಕ್ಕಳಿಗೆ ವಿವಾಹವನ್ನು ಮಾಡುವುದಕ್ಕೆ ಮುಂಚಿತವಾಗಿ ಗುರುಗಳ ಆಜ್ಞೆಪಡೆಯುತ್ತಿದ್ದರು. ವೈಶಿಷ್ಟ್ಯವೆಂದರೆ ಇವರು ವಿವಾಹಕ್ಕೆ ಪೂರ್ವದಲ್ಲಿ ವಧೂವರರ ಜಾತಕಗಳನ್ನು ನೋಡದವರು. ಅವರೀರ್ವರ ಯೋಗ್ಯತೆಯನ್ನು ವಿಮರ್ಶಿಸಿ ಗುರುಗಳ ಬಳಿ ಬರುವರು. ಕೇಳುವರು. ಗುರುಗಳು ನುಡಿದ ಮಾತುಗಳೇ ಸರ್ವಗ್ರಹಗಳ ಅನುಗ್ರಹ ಎಂದು ತಿಳಿಯುವವರು. ಇವರ ವಿಶ್ವಾಸಕ್ಕೆ ಸರಿಯಾಗಿ ಗುರುಗಳು ಆಚಾರ್ಯರ ನಿರ್ಣಯದ ಮೂಲಕ ಆಜ್ಞೆ ನೀಡುತ್ತಿದ್ದರು. ಅಂತಹ ಶುಭಸಮಾರಂಭಗಳಲ್ಲಿ ಇದು ಒಂದು.

ಶ್ರೀ ಜಯತೀರ್ಥಾಚಾರ್ಯರ ಹಿರಿಯ ಕುವರಿಯನ್ನು ಶ್ರೀಆನಂದತೀರ್ಥಾಚಾರ್ಯರೆಂಬ ವರನಿಗೆ ನೀಡಿ ವಿವಾಹಮಾಡಬೇಕೆಂದು ಕುಟುಂಬದ ಹಿರಿಯರ ಬಯಕೆ. ಅದಕ್ಕೆ ಬೇಕಾಗಿತ್ತು ಶ್ರೀವಿದ್ಯಾಮಾನ್ಯತೀರ್ಥರ ಪೂರ್ಣಕೃಪೆ. ಅದಕ್ಕಾಗಿ ಶ್ರೀಜಯತೀರ್ಥಾಚಾರ್ಯರು ತಮ್ಮ ಗುರುಗಳ ಬಳಿ ಬಂದರು. ಗುರುಗಳು ಶಿಷ್ಯನಿಗಾಗಿ ಆಚಾರ್ಯರನ್ನು ಪ್ರಾರ್ಥಿಸಿದರು. ಅವರು ಪ್ರಾರ್ಥಿಸಿ ಪುಸ್ತಕವನ್ನು ತೆರೆದಾಗ ಅವರ ಕಣ್ಣಿಗೆ ಗೋಚರಿಸಿದ ಉತ್ತರವಾಕ್ಯ ಇದು. ''ಜಾತಾ ಸುತಾಸ್ತೇ ಪ್ರವರಾಃ ಪೃಥಾಯಾಂ..'' (ಮ.ತಾ.ನಿ.ಅಧ್ಯಾಯ 12ಶ್ಲೋಕ 121) ಇದು ಮಾದ್ರಿಯು ಪಾಂಡುರಾಜನಿಗೆ ನುಡಿದ ಮಾತು.'ಮಂತ್ರಬಲದಿಂದ ನಿನ್ನ ಅಪ್ಪಣೆಯಿಂದ ಪೃಥೆಯಲ್ಲಿ (ಕುಂತಿಯಲ್ಲಿ) ಮೂವರು ದೇವತೆಗಳು ಶ್ರೇಷ್ಠಮಕ್ಕಳಾಗಿ ಜನಿಸಿದರು.'

ಇದನ್ನೋದಿದ ಶ್ರೀಪಾದರು ಶಿಷ್ಯಶ್ರೀಜಯತೀರ್ಥಾಚಾರ್ಯರಿಗೆ ಆದೇಶವನ್ನಿತ್ತರು. 'ವಧೂವರರ ಈ ವಿವಾಹ ಬಂಧನ ಶುಭಕ್ಕಾರ್ಯಕ್ಕಾಗಿ ಆಚಾರ್ಯರು ಪಾಂಡು-ಕುಂತಿ ದಂಪತಿಗಳಿಗೆ ಪುತ್ರತ್ರಯೋದಯದ ಶುಭ ಸೂಚನೆಯನ್ನು ನೀಡಿರುವರು.' ವಿವಾಹವನ್ನು ಮಾಡಿರಿ' ಎಂದರು. ಅನುಗ್ರಹಮಂತ್ರಾಕ್ಷತೆಯನ್ನಿತ್ತರು. ಆ ವಧೂವರರ ಉತ್ತರೋತ್ತರ ಕಲ್ಯಾಣವನ್ನು ಅನುಗ್ರಹಿಸಿದರು. ವಿವಾಹವಾಯಿತು. ಮಂಗಲ ವಾಯಿತು. ಶ್ರೀಮದಾಚಾರ್ಯರ ಈ ಉತ್ತರ ಇಂದು ಎಷ್ಟು ಸಮರ್ಪಕವಾಯಿತೆಂದರೆ ಇಂದು ಆ ದಂಪತಿಗಳ ಸಂತತಿ ಮೂವರು ಪುತ್ರರು. ಮಧ್ವೇಶ,ವಾಗೀಶ,ಹೃಷೀಕೇಶರು



# ಮಳೆಯ ಗೆಳೆಯ

ಶ್ರೀವಿದ್ಯಾಮಾನ್ಯತೀರ್ಥರು 1940 ರ ಸಮಯದ ಚಾತುರ್ಮಾಸ್ಯಕ್ಕಾಗಿ ಗಯಾ ಕ್ಷೇತ್ರದಲ್ಲಿ ವಾಸವಾಗಿದ್ದರು. ಆ ಸಂದರ್ಭದಲ್ಲಿ ಓರ್ವ ವಿಧರ್ಮೀಯನು ಪಾದ ರಕ್ಷೆಗಳನ್ನು ಧರಿಸಿಯೇ ದೇವಸ್ಥಾನವನ್ನು ಪ್ರವೇಶಿಸಿದನು. ಆಗ ವಿಷ್ಣುಪಾದದ ಅರ್ಚಕರಾದ ಗಯಾವಾಡರು ದೇವಸ್ಥಾನದ ಅಶುಚಿಯ ಬಗ್ಗೆ ಚಿಂತಿತರಾದರು. ಅದರ ಪರಿಹಾರಕ್ಕಾಗಿ ಅವರು ಹಿರಿಯ ವಿದ್ವಾಂಸರಾಗಿದ್ದ (ಗಯಾವಾಸಿಗಳಾಗಿದ್ದ) ಶ್ರೀವರಖೇಡಿ ಪ್ರದ್ಯುಮ್ನಾಚಾರ್ಯರನ್ನು ಕೇಳಿದರು. ಆದರೆ ವರಖೇಡಿ ಆಚಾರ್ಯರು ಗಯಾವಾಡರನ್ನು ಕೂಡಿಕೊಂಡು ಶ್ರೀಭಂಡಾರಕೇರಿ ಶ್ರೀಪಾದರ ಬಳಿ ಬಂದರು. ಬಂದು ವಿಷ್ಣುಪಾದ ಮಂದಿರದ ಪಾವಿತ್ರ್ಯಕ್ಕಾಗಿ ಪ್ರಾರ್ಥಿಸಿದರು. ಆಗ ಶ್ರೀಗಳವರು.'ಪವಮಾನಸೂಕ್ತ ಅಭಿಷೇಕ- ಹೋಮ, ಬ್ರಾಹ್ಮಣಸಂತರ್ಪಣೆಗಳು ನಡೆಯಬೇಕು. ಇದರಿಂದ ಶುದ್ಧಿಯಾಗುವುದು'ಎಂದರು.

ಶ್ರೀಪಾದರ ಆದೇಶಕ್ಕೆ ಗಯಾವಾಡರು ಸಿದ್ಧರಾದರು. ಪಾವಿತ್ರ್ಯಕ್ಕೆ ಕಾರಣವಾದ ಈ ಕಾರ್ಯಕ್ರಮಕ್ಕೆ ಎಲ್ಲವೂ ಸಿದ್ಧಗೊಂಡಿತು. ವೇದಜ್ಞರಾದ ಬ್ರಾಹ್ಮಣರ ಪವಮಾನ ಸೂಕ್ತಪಾರಾಯಣದ ಘೋಷದೊಂದಿಗೆ ಶ್ರೀಪಾದರು ವಿಷ್ಣುಪಾದಕ್ಕೆ ಸ್ವತಃ ತಾವೇ ಅಭಿಷೇಕ ಮಾಡಿದರು. ಪುರೋಹಿತರು ಹೋಮಗಳನ್ನು ನಡೆಸಿದರು. ಈ ಸಮಯದಲ್ಲಿ ಮೂರು ಸಾವಿರಕ್ಕೂ ಮಿಕ್ಕ ಬ್ರಾಹ್ಮಣ-ಸುವಾಸಿನಿಯರು ಉಚ್ಚ ಮಧುರ ಕಂಠದಿಂದ ಹರಿನಾಮ ಸಂಕೀರ್ತನೆಯನ್ನು ನಡೆಸುತ್ತಿದ್ದರು. ಈ ಎಲ್ಲ ಕಾರ್ಯಕ್ರಮಗಳು ಭಾವುಕತೆಯನ್ನು ಉದ್ರೇಕಿಸುವಂತಹದ್ದಾಗಿದ್ದವು. ಕಾರಣ ಆ ವಿಷ್ಣುಪಾದದ ಮೇಲೆ ಅಭಿಷೇಕ ಆರಂಭವಾದೊಡನೇ 'ವಿಷ್ಣುಪಾದ' ಎಂಬ ಹೆಸರುಳ್ಳ ಆಕಾಶದಿಂದಲೂ ಭೂಮಿಯ ಮೇಲೆ ಧಾರಾಕಾರವಾಗಿ ಮಳೆಯು ಬರಲಾರಂಭಿಸಿತು. ಅನೇಕವರ್ಷಗಳಿಂದ ಮಳೆಯನ್ನೇ ಕಾಣದ ಆ ಗಯೆಯ ಜನರು ಈ ಮಳೆಯನ್ನು ಕಂಡು ಅತ್ಯಂತ ಹರ್ಷಿತರಾದರು. ದೇವಸ್ಥಾನದ ಪಾವಿತ್ರ್ಯಸೂಚನೆಯೊಂದಿಗೆ ಗಯೆಯ ಜನತೆಯ ಜೀವನವೆನಿಸಿದ ನೀರೂ ಸಮೃದ್ಧವಾಯಿತು. ಎಂದೂ ತುಂಬದ 'ಫಲ್ಗು' ನದಿ ತುಂಬಿ ಹರಿಯಿತು.

ಜನರಿಗೆ ಆನಂದವೇ ಆನಂದ, ಅವರು 'ಭಗವಂತನ ಪಾದಕ್ಕೆ ಶ್ರೀಪಾದರೇ ಅಭಿಷೇಕಮಾಡಿದ್ದರಿಂದ, ಆ ಪಾದದಿಂದ ಉದಿಸಿದ ಗಂಗಾಮಾತೆಯೇ ಪ್ರತ್ಯಕ್ಷಳಾದಳು' ಎಂದು ಉದ್ಗರಿಸಿದರು. ಶ್ರೀಗಳಿಗೆ ಜಯಕಾರ ಕೋರಿದರು. ಆದರೆ ಶ್ರೀಪಾದರು 'ಇದೆಲ್ಲವೂ ಭಗವಂತನ ಅನುಗ್ರಹ ಆದ್ದರಿಂದ ಅವನನ್ನೇ ಅತಿಶಯವಾಗಿ ಭಜಿಸಿರಿ' ಎಂದು ಆದೇಶಿಸಿದರು.

ಹೀಗೆ ಶ್ರೀಪಾದರ ತಪಸ್ಸಿನ ಪ್ರಭಾವದಿಂದ ಸೆಳೆಯಲ್ಪಟ್ಟ ಮಳೆರಾಯ ಗಯೆಯಲ್ಲಿಳಿದ. ಪ್ರಜೆಗಳನ್ನು ತಣಿಸಿದ. ದೇವಳವನ್ನು ಶುಚಿಗೊಳಿಸಿದ.

2) 1998 ರಲ್ಲಿ ಶ್ರೀವಿದ್ಯಾಮಾನ್ಯತೀರ್ಥರು ಪ್ರಯಾಗ ಕ್ಷೇತ್ರದಲ್ಲಿ (ಅಲಹಾಬಾದ್) ಮಾಧ್ವ ರಾದ್ಧಾಂತ ಸಂವರ್ಧಕಸಭೆಯನ್ನು ಹಾಗೂ ಮಧ್ವನವಮೀ ಉತ್ಸವವನ್ನು ಆಚರಿಸಿದರು. ಈ ಕಾರ್ಯಕ್ರಮದ ವ್ಯವಸ್ಥಾಪಕರು ಶ್ರೀಗಡಚಿಂತಿ ರಾಮಾ ಚಾರ್ಯರು(ಪ್ರಸ್ತುತ ಶ್ರೀವಿದ್ಯಾವಲ್ಲಭ ತೀರ್ಥರು) ಈ ಸಮಾರಂಭದಲ್ಲಿ ಅನೇಕ ಪೀಠಾಧಿಪತಿಗಳು, ಅನೇಕ ಮತತ್ರಯಪಂಡಿತರು, ಭಕ್ತರು, ಅಭಿಮಾನಿಗಳೆಲ್ಲರೂ ಸೇರಿದ್ದರು. ಆ ತ್ರಿವೇಣೀಸಂಗಮಕ್ಷೇತ್ರದಲ್ಲಿ, ವಿಶೇಷವಾಗಿ ವಾಕ್ಯಾರ್ಥ ವಿಚಾರಗಳು, ವಿದ್ವಾಂಸರ ಹಾಗೂ ವಿದ್ಯಾರ್ಥಿಗಳ ಪುರಸ್ಕಾರ, ಭಗವಂತನ ಪೂಜೆ ಹಾಗೂ ಅನ್ನಸಂತರ್ಪಣಾದಿಗಳು ಮೂರು ದಿನಗಳಕಾಲ ಜರುಗಿದವು. ಕೊನೆಯ ದಿನದಂದು ಅನೇಕ ಗಜರಾಜಗಳ ಮೇಲೆ ರಜತ ಅಂಬಾರಿಯನ್ನಿಟ್ಟು ಆದರ ಮೇಲೆ ಶ್ರೀಮದಾಚಾರ್ಯರ ಭಾವಚಿತ್ರ, ಸರ್ವಮೂಲಗ್ರಂಥಗಳನ್ನಿಟ್ಟು ಹಾಗೂ ಎಲ್ಲ ಶ್ರೀಪಾದರನ್ನು ಕುಳ್ಳಿರಿಸಿ ಭವ್ಯಮೆರವಣಿಗೆಯನ್ನು ಮಾಡುವ ಉದ್ದೇಶದಿಂದ ಸಿದ್ಧತೆ ಭರದಿಂದ ನಡೆದಿತ್ತು. ಆದರೆ ಆಕಾಶದಲ್ಲಿ ಕಪ್ಪಾದ ಮೋಡಕವಿದಿತ್ತು. ಮಳೆ ವ್ಯವಸ್ಥಾಪಕಮಂಡಲಿಯನ್ನು ಹೆದರಿಸಿತು. ಆಗ ವ್ಯವಸ್ಥಾಪಕರೆಲ್ಲ. ಶ್ರೀಪಾದರಲ್ಲಿಗೆ ಬಂದರು. ಭಿನ್ನವಿಸಿದರು. ಶ್ರೀಪಾದರು ನುಡಿದರು. 'ಶ್ರೀಮದಾಚಾರ್ಯರ ಮೆರೆವಣಿಗೆಗೆ ಮಳೆ ಅಡ್ಡಿಯಾಗುವುದಿಲ್ಲ. ಮೆರವಣಿಗೆ ಆರಂಭವಾಗಲಿ' ಎಂದರು. ಅದರಂತೆ ಶೋಭಾಯಾತ್ರೆ ಆರಂಭ ವಾಯಿತು. ವೈಭವದಿಂದ ಜರುಗಿತು. ಕೊನೆಯಲ್ಲಿ ಮೆರವಣಿಗೆ ಶ್ರೀಮದಾಚಾರ್ಯರ ಭಾವಚಿತ್ರ ಹಾಗೂ ಸರ್ವಮೂಲಗ್ರಂಥಗಳು 'ಸಭಾಮಂದಿರವನ್ನು ಪ್ರವೇಶಿಸಿದ ತತ್ಕ್ಷಣದಲ್ಲೇ ತಡೆಯಿಲ್ಲದೆ ಮಳೆ ಹರಿಯಿತು. ಭಕ್ತರೆಲ್ಲರೂ ಮಳೆಯಿಂದ ಮಿಂದಂತಾಯಿತು. ಶ್ರೀಗಳ ಮಾತಿಗಾಗಿ ಮಳೆರಾಯ ಕಾದಿದ್ದ. ಆಚಾರ್ಯರ ಭಾವಚಿತ್ರವು ಸಭಾಮಂದಿರವನ್ನು ಪ್ರವೇಶಿಸಿದ ಕ್ಷಣದಲ್ಲಿ ಅವನಿಗೆ ತಡೆಯಾಗಲಿಲ್ಲ. ಮಳೆಯನ್ನು ಹರಿಸಿಯೇ ಬಿಟ್ಟ. ಅಂತೂ 'ಮಳೆ ಮೆರವಣಿಗೆಗೆ ತೊಂದರೆಕೊಡುವುದಿಲ್ಲ' ಎಂಬ ಶ್ರೀಪಾದರು ಮಾತನ್ನು ಮಳೆರಾಯ ನಿಜ ಮಾಡಿದ.

3) 1962 ರಲ್ಲಿ ಅಷ್ಟಗ್ರಹಯೋಗ ಪ್ರಯುಕ್ತ ದೆಹಲಿಯಲ್ಲಿ ವಿಶ್ವಕಲ್ಯಾಣಯಾಗವನ್ನು ಏರ್ಪಡಿಸಲಾಗಿತ್ತು. ಯಾಗದ ನಿಗದಿತ ದಿನ ಡಿಸೆಂಬರ್ ಹದಿನೇಳಾಗಿತ್ತು. ಅಷ್ಟೊತ್ತಿಗೆ ಯಾಗದ ಸಿದ್ಧತೆ ಪೂರ್ಣವಾಗಿತ್ತು. ಆದರೆ ಹದಿನೇಳರ ಮುಂಚೆಯೇ ಆಗಸದಲ್ಲಿ ಮೇಘಗಳಗುಂಪು ನೆಲೆ ಮಾಡಿತ್ತು. ಮಳೆ ಸುರಿಯುತ್ತಿತ್ತು. ಸಂಘಟಕರ ಚಿಂತೆಗೆ ಅಂತ್ಯಕಾಣದಂತಾಯಿತು. ಲಕ್ಷಾಂತರ ರೂಪಾಯಿಗಳ ವೆಚ್ಚದಿಂದನಿರ್ಮಿಸಿದ ಯಾಗದ ಸಿದ್ಧತೆ ಈ ಮಳೆಯಿಂದಾಗಿ ನೀರು ಪಾಲಾದೀತು

ಎಂಬ ಭಯಕಾಡುತ್ತಿತ್ತು. ಸಂಘಟಕರ ಸಮಿತಿ ತಮ್ಮ ನೇತಾರರಾದ ಶ್ರೀವಿದ್ಯಾಮಾನ್ಯತೀರ್ಥರನ್ನು ಸಮೀಪಿಸಿತು. ತನ್ನ ಚಿಂತೆಯನ್ನು ತೋರಿ, ಪರಿಹಾರವನ್ನು ಕೋರಿತು. ಆಗ ಶ್ರೀಪಾದರು 'ಡಿಸೆಂಬರ್ 17ರಂದು ಮಳೆಯಾಗುವುದಿಲ್ಲ. ಯಾಗವು ನಿರ್ವಿಘ್ನವಾಗಿ ನೆರವೇರುವುದು. ಯಾರೂ ಚಿಂತಿಸುವುದು ಬೇಡ' ಎಂದು ಆದೇಶಿಸಿದರು. ಆಶ್ಚರ್ಯವೆಂದರೆ ಡಿಸೆಂಬರ್ 17 ಬಂದಿತು. ಆಕಾಶದಲ್ಲಿ ಕವಿದಿದ್ದ ಮೋಡಗಳು ಕಾಣದಾದವು. ರವಿಯು ಕಾಣತೊಡಗಿದ. ಬೆಳಕನ್ನು ನೀಡತೊಡಗಿದ. ಸಂಘಟಕರ ಮುಖಗಳ ಮೇಲೆಯಿದ್ದ ಭೀತಿಯ ಕಪ್ಪು ಮಾಯವಾಗಿತ್ತು. ಸಂತಸ ಕುಣಿಯುತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಶ್ರೀಪಾದರ ಮಾತಿನ ಸತ್ಯತೆ ಅಚ್ಚರಿಯನ್ನುಂಟುಮಾಡಿತ್ತು. ಯಾಗ ನಿರ್ವಿಘ್ನವಾಗಿ ನೇರವೇರಿತು. ಬ್ರಾಹ್ಮಣಸಂತರ್ಪಣಾದಿ ಎಲ್ಲ ಕಾರ್ಯಕ್ರಮಗಳೂ ಚೆನ್ನಾಗಿ ನೆರವೇರಿದವು । ಈ ಕಾರ್ಯಕ್ರಮ ಕೊನೆಗೊಂಡಾಗ ಮತ್ತೆ ಮಳೆರಾಯ ಕಂಡ. ಇದು ಶ್ರೀಪಾದರ ಮಹಿಮಾಪುರುಷತ್ವವನ್ನು ಸೂಚಿಸುತ್ತದಲ್ಲ?

ಈ ಘಟನೆಯನ್ನು ದೇಶದ ಪ್ರಸಿದ್ಧ ಆಂಗ್ಲ ಪತ್ರಿಕೆಯಾದ 'ಇಂಡಿಯನ್ ಎಕ್ಸ್‌ಪ್ರೆಸ್' ನ ಡಿಸೆಂಬರ್ 28 ನೇ ದಿನಾಂಕದಸಂಚಿಕೆ ಪ್ರಕಟಿಸಿತ್ತು.

4) 1987 ರ ಜುಲೈ 5 ರಂದು ಉಡುಪಿಯ ಶ್ರೀಕೃಷ್ಣನಿಗೆ ಕೊಟಿ ರೂ ಅಧಿಕ ಬೆಲೆಯಾದ ಸುವರ್ಣರಥವನ್ನು ಅರ್ಪಿಸುವ ಅಭೂತಪೂರ್ವ ಸಮಾರಂಭ. ಕರ್ನಾಟಕ ದಲ್ಲಿಯೇ ಮೊದಲ ಸುವರ್ಣರಥ ಉದ್ಘಾಟನೆ. ಅದಕ್ಕಾಗಿ ಅನೇಕ ಪೀಠಾಧಿಪತಿಗಳ ಸರಕಾರ ಮಂತ್ರಿಗಳ, ಲಕ್ಷಲಕ್ಷ ಸಂಖ್ಯಾಕಭಕ್ತರ ಆಗಮನದಿಂದ ಉಡುಪಿ ಜನನಿಬಿಡವಾಗಿತ್ತು. ಸಂಭ್ರಮದಿಂದ ಕೂಡಿತ್ತು. ಆದರೆ ಜೂನ್ -ಜುಲೈ ತಿಂಗಳು ಭರ್ತಿ ಮಳೆಗಾಲದ ಕಾಲವಾಗಿತ್ತು. ಅದರಲ್ಲೂ ಕರಾವಳಿಯ ಮಳೆ ನಿಲ್ಲದ ಮಳೆ. ಹೀಗಾಗಿ ಉಡುಪಿಯಲ್ಲಿ ಕ್ಷಣವನ್ನು ಬಿಡದೆ ಸುರಿಯುತ್ತಿತ್ತು. ಇಂತಹ ಸಂದರ್ಭದಲ್ಲಿಯೇ ಸುವರ್ಣರಥದ ಉದ್ಘಾಟನೆಯ ದಿನವನ್ನು ನಿಶ್ಚಯಿಸುವುದು ಅನಿವಾರ್ಯವಾಗಿತ್ತು. ಕಾರ್ಯಕ್ರಮ ಸಿದ್ಧತೆ ಭರದಿಂದ ಸಾಗಿತ್ತು. ಆದರೆ ಕಾರ್ಯಕರ್ತ ರಿಗೆಲ್ಲರಿಗೂ ಮಳೆಯಕಾಟವನ್ನು ತಪ್ಪಿಸುವುದು ಹೇಗೆ? ಎಂಬ ಚಿಂತೆ ಮೂಡಿತ್ತು. ಆದರೆ ಶ್ರೀಪಾದರು ಯಾವ ಚಿಂತೆಯನ್ನೂ ಮಾಡದೆ ಉತ್ಸಾಹದಿಂದ ಇದ್ದರು. ಆದರೆ ಶಿಷ್ಯರು ಶ್ರೀಪಾದರನ್ನು ಬಿಡಲಿಲ್ಲ. ಪದೇ ಪದೇ ಪ್ರಾರ್ಥಿಸಿದರು. ಆಗ ಶ್ರೀಪಾದರು ಅರ್ಧರಥಬೀದಿಗೆ ಚಪ್ಪರವನ್ನು ಹಾಕಿಸಿದರು. ಆದರೂ ಅದು ಸಫಲವಾಗುವಂತೆ ಕಾಣಲಿಲ್ಲ. ವ್ಯವಸ್ಥಾಪಕರ ಹೃದಯಬಡಿತ ಜೋರಾಗಿತ್ತು. ಆಗ ಶ್ರೀಪಾದರು 'ಉತ್ಸವ ಪ್ರಾರಂಭವಾಗುವರೆಗೆ ಮಳೆ ಬರುವುದು ದೇವರು ಹೊರಗೆ ಬಂದಕೂಡಲೆ ನಿಲ್ಲುವುದು ಮತ್ತೆ ತೊಂದರೆಯಾಗುವುದಿಲ್ಲ. ' ಎಂದು ನುಡಿದರು. ಕೇಳಿದವರಿಗೆ ಈ ಮಾತನ್ನು ನಂಬಲಾಗದಂತಾಗಿತ್ತು. ಆದರೆ ಭಗವಂತನು ತನ್ನ ಅಚ್ಚಿನ್ನಭಕ್ತನ ಮಾತನ್ನು ಸತ್ಯಮಾಡಿಸಿದ. ಜನ ನಂಬುವಂತಾಯಿತು. ಕಾರಣ ಅಂದು ಪ್ರಾತಃ ಕಾಲದಲ್ಲಿ ಬಳಿಗ್ಗೆ ಸರಿಯಾಗಿ 10-30ಕ್ಕೆ ಉತ್ಸವ ಪ್ರಾರಂಭವಾಯಿತು. ಅಲ್ಲಿಯವರೆಗೂ ಮಳೆಎಡಬಿಡದೆ ಸುರಿಯುತ್ತಿತ್ತು. ಚಿನ್ನದ ರಥದಲ್ಲಿ ಕುಳಿತುಕೊಳ್ಳುವ ಚಿಣ್ಣನನ್ನು ಕಾಣಲು ತವಕದಿಂದ ಭಕುತಸಾಗರವು ಮಳೆಯನ್ನು ಲೆಕ್ಕಿಸದೆ ನೆರೆದಿತ್ತು. ಶ್ರೀಕೃಷ್ಣಮುಖ್ಯಪ್ರಾಣರು

ಮಠದ ಹೊರಗೆ ಬಂದರು. ಆ ವೇಳೆಗೆ ಮಳೆ ನಿಂತಿತು. ಸುವರ್ಣರಥದಲ್ಲಿ ಶ್ರೀಕೃಷ್ಣನನ್ನು ಕುಳ್ಳಿರಿಸಿ ಪೂಜಿಸಿಲಾಯಿತು. ಆಗ ಭಕ್ತಸಾಗರದ ಭಕ್ತಿಯ ಕರತಾಡನಗಳಸ್ವನ ಗೋವಿಂದ ಘೋಷಣೆಗಳ ಅಲೆ ಆಗಸವನ್ನು ತಲುಪಿತ್ತು. ಮೇಘಗಳ ಸಾಲು ಸರಿದಿತ್ತು. ಹಿರಣ್ಮಯ ಪಾತ್ರನಾದ ಸೂರ್ಯನು ಹಿರಣ್ಮಯರಥಸ್ಥಶ್ರೀಕೃಷ್ಣನನ್ನು ಸಂದರ್ಶಿಸಿದನು. ಎಲ್ಲರಿಗೂ ಆನಂದ ಒಂದೆಡೆ ಸ್ವರ್ಣರಥದ ಸೊಬಗಿನ ಆನಂದ ಇನ್ನೊಂದೆಡೆ ಮಳೆಕಾಟ ತಪ್ಪಿತೆಂಬ ಆನಂದ. ವಾದ್ಯ, ವೇದಘೋಷಗಳ ಮಧ್ಯದಲ್ಲಿ ಭಗವಂತನಿಗೆ ಮಂಗಳಾರತಿಯಾಯಿತು. ಇನ್ನು ಕೆಲವೇಕ್ಷಣಗಳಲ್ಲಿ ರಥಯಾತ್ರೆ ಆರಂಭವಾಗಬೇಕು ಅಷ್ಟರಲ್ಲಿ ಮತ್ತೆ ಆಕಾಶ ಕಪ್ಪಾಗಿತ್ತು. ಮೋಡಗಳು ಗುಡುಗಿದವು. ಸೂರ್ಯತೋರದಾದ. ಹೊನ್ನತೇರು ರಥಚಪ್ಪರದಿಂದ ಮುಂದೆ ಸರಿದಾಗಿ ಮೇಲಿಂದ ಮಳೆನೀರು ಇಳಿಯಲಾರಂಭಿಸಿತು. ಎಷ್ಟು ನೀರು ? ತುಂತುರು ಮಾತ್ರ. ಎಷ್ಟು ಹೊತ್ತು? ಕ್ಷಣಮಾತ್ರ. ಭಕ್ತರ ಗೋವಿಂದ ಘೋಷಣೆ ಅಧಿಕವಾಗಿತ್ತು. ಭಕ್ತರು ರಥವನ್ನೆಳೆದರು. ವೈಭವದಿಂದ ಉತ್ಸವ ಜರುಗಿತು. ತೀರ್ಥಪ್ರಸಾದ ವಿತರಣೆ ಆದಾಗ ಸಾಯಂಕಾಲವಾಗಿತ್ತು. ಆಗ ಅಲ್ಲಿಯವರೆಗೂ ಇರದ ವರುಣದೇವನ ಜಲವಿತರಣ ಕಾರ್ಯ ಮತ್ತೆ ಆರಂಭವಾಗಿತ್ತು.

ಒಟ್ಟಿನಲ್ಲಿ ಶ್ರೀಗಳ ಮಾತಿನಂತೆ ಮಳೆರಾಯನು ಯಾವ ಕಾರ್ಯಕ್ರಮಕ್ಕೂ ಅಡ್ಡಿಯಾಗಲಿಲ್ಲ. ಈ ಸನ್ನಿವೇಶವು ಅದ್ಭುತಪವಾಡವೆನಿಸಿತು. ಜನಮನದಲ್ಲಿ ಸ್ಥಿರವಾಯಿತು.

5) 1996 ರಲ್ಲಿ ಮುದಗಲ್ ನ ಶ್ರೀರಾಘವೇಂದ್ರಮಠದಲ್ಲಿ ಯತಿತ್ರಯ ಕೂಟ ಚಾತುರ್ಮಾಸ್ಯ ಸಂಕಲ್ಪಕ್ಕೈದಿತ್ತು. ಇದು ಇತಿಹಾಸ ದಾಖಲೆಯ ಚಾತುರ್ಮಾಸ್ಯವಾಯಿತು. (ಶ್ರೀಪಲಿಮಾರು ಹಾಗೂ ಭಂಡಾರಕೇರಿ ಉಭಯಮಠಾಧೀಶರಾದ ಶ್ರೀವಿದ್ಯಾಮಾನ್ಯತೀರ್ಥರ, ಶ್ರೀ ಅದಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀವಿಶ್ವಪ್ರಿಯತೀರ್ಥರು, ಹಾಗು ಶ್ರೀಪಲಿಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀವಿದ್ಯಾಧೀಶತೀರ್ಥರು) ದಿನನಿತ್ಯದಲ್ಲಿ ಶ್ರೀಗಳ ವರಿಂದ ಪಾಠ, ಪ್ರವಚನ,ಪೂಜೆ, ಪ್ರಸಾದ ಗಳಲ್ಲದೆ ವಿಶೇಷವಾಗಿ ವಿದ್ವಾಂಸರ ಉಪನ್ಯಾಸಗಳು. ಸಂಗೀತಾದಿ ಕಾರ್ಯಕ್ರಮಗಳು ಜರುಗುತ್ತಿದ್ದವು. ಅಲ್ಲಿಯ ವ್ಯವಸ್ಥೆಯನ್ನು ಶ್ರೀನರಸಿಂಗರಾವ್ ದೇಶಪಾಂಡೆ ಹಾಗೂ ಕುಟುಂಬದವರು ಕಲ್ಪಿಸಿದ್ದರು. ಅತ್ಯಂತ ಉತ್ಸಾಹಿಗಳಾದ ಅವರು ಶ್ರೀಕೃಷ್ಣಾಷ್ಟಮಿ ಕಾರ್ಯಕ್ರಮವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಲು ತೊಡಗಿದರು. ಉಡುಪಿಯ ಮಾದರಿಯಲ್ಲಿ ನಡೆಯಬೇಕೆಂದು ಅವರ ಬಯಕೆ. ಶ್ರೀಪಾದರ ಅಪ್ಪಣೆ ಪಡೆದು ಸಿದ್ಧತೆಯಲ್ಲಿ ತೊಡಗಿದರು. ವಿಧ ವಿಧ ಫಲಗಳಿಂದ, ಪುಷ್ಪಗಳಿಂದ ಮಂಟಪಗಳನ್ನು ಕಟ್ಟಿ ಅಲಂಕರಿಸಲಾಗಿತ್ತು. ಒಂದೆಡೆ ಭಕ್ತರ ಸುಮಧುರ ಭಜನೆ. ಮತ್ತೊಂದೆಡೆ ಮಠಗಳವಿದ್ಯಾರ್ಥಿಗಳ ವೇದಪಾರಾಯಣ, ಇನ್ನೊಂದೆಡೆ ಸುಸ್ವರ ನಾದಸ್ವರ ಹೀಗೆ ಅನೇಕ ವಿಧದಶಬ್ದಗಳು ಭಕ್ತನ ಹೃದಯವನ್ನು ಪುಲಕಿತವನ್ನಾಗಿಸುತ್ತಿದ್ದವು. ವಿಶೇಷವಾಗಿ ಯುವಯತಿದ್ವಯರಿಂದ ಸಹಿತರಾದ ಹಿರಿಯ ತಪಸ್ವಿಗಳ ಸನ್ನಿಧಾನ ಈ ಸಮಾರಂಭಕ್ಕೆ ಮೆರುಗುನೀಡುತ್ತಿತ್ತು. ಒಟ್ಟಿನಲ್ಲಿ ಆ ಸಮಯದಲ್ಲಿ ಆ ಪರಿಸರ ಭಾವಪೂರ್ಣ ವಾಗಿತ್ತು. ಶ್ರೀಕೃಷ್ಣಾಷ್ಟಮೀ ರಾತ್ರಿಯ ಪೂಜೆಗಾಗಿ, ಅರ್ಘ್ಯಪ್ರದಾನಕ್ಕಾಗಿ ಸುಮಾರು 5000ಕ್ಕೂ ಹೆಚ್ಚು

ಭಕ್ತರು ಸೇರಿದ್ದರು. ವೈಭವದಿಂದ ಎಲ್ಲವೂ ನೆರವೇರಿದವು. ನಿಜಕ್ಕೂ ಆ ಸನ್ನಿವೇಶ ಉಡುಪಿಯನ್ನೇ ನೆನಪಿಸಿತು.

ಬೆಳಗಿನ ಝಾವದಲ್ಲಿ ಮಳೆಯು ಆರಂಭವಾಯಿತು. ನಿಲ್ಲದ ಮಳೆರಾಯ ಎಲ್ಲರನ್ನೂ ಚಿಂತೆಗೀಡುಮಾಡಿದ. ಚಿಂತೆ ಹೆಚ್ಚಾಯಿತು. ಕಾರಣ, ಆ ದಿನದ ಮುದ್ದುಗಲ್ಲದ ಗೊಲ್ಲತಿಯರೊಡನೆ ಆಡಿ ನಲಿದ ಮುದ್ದುಕೃಷ್ಣನ ಲೀಲೋತ್ಸವಕ್ಕೆ ಆ ಮಳೆ ಅಡ್ಡಿಯಾಗಿತ್ತು. ಶ್ರೀದೇಶಪಾಂಡೆಯವರು ಶ್ರೀವಿದ್ಯಾಮಾನ್ಯತೀರ್ಥರ ಬಳಿ ಬಂದರು. ಶ್ರೀಗಳು ಅವರ ಬರುವಿಕೆಯ ಇಂಗಿತವನ್ನು ಅರಿತರು. 'ಮಳೆಯ ಸಮಸ್ಯೆಯೆ ?' ಎಂದು ಪ್ರಶ್ನಿಸಿದರು. ಮತ್ತು ಕೇಳಿದರು. 'ಎಷ್ಟು ಘಂಟೆಗೆ ಉತ್ಸವ?' ಅದಕ್ಕೆ ದೇಶಪಾಂಡೆಯವರು. 'ಮೂರು ಘಂಟೆಗೆ' ಎಂದರು. ಶ್ರೀಗಳವರು ಅಷ್ಟು ಹೊತ್ತಿಗೆ ಮಳೆ ನಿಲ್ಲುವುದು' ಎಂದು ಹೇಳಿದರು. ಹೇಳುವಾಗ ಅವರ ಮುಖದಲ್ಲಿರುವ ಆ ಮುಗುಳ್ನಗೆ ಧೈರ್ಯ ಹಾಗೂ ನಿಶ್ಚಿಂತತೆಯನ್ನು ಸೂಚಿಸುತ್ತಿತ್ತು. ಶ್ರೀಗಳ ಮಾತಿನಲ್ಲಿ ಬಲವಾದ ನಂಬಿಕೆಯುಳ್ಳ ದೇಶಪಾಂಡೆಯವರೂ ನಿಶ್ಚಿಂತರಾದರು. ಸಾವಿರಾರು ಭಕ್ತರ ಪಾರಣೆಯಾಯಿತು ಮಧ್ಯಾಹ್ನದ ಹನ್ನೆರಡೂ ದಾಟಿತು. ಆದರೆ ಮಳೆ ನಿಲ್ಲುವ ಸೂಚನೆ ಮಾತ್ರ ಇಲ್ಲ. ಆದರೂ ದೇಶಪಾಂಡೆಯವರ ಮನದಲ್ಲಿ ಆತಂಕವಿಲ್ಲ. ಕಾರಣ, ಅವರಿಗೆ ಶ್ರೀಗಳ ಮಾತಿನ ಬೆಂಬಲವಿತ್ತು.

ಗಡಿಯಾರದ ಮುಳ್ಳು ಎರಡನ್ನು ದಾಟಿ ಮೂರರ ಬಳಿ ಬಂದಿತು. ಮಳೆರಾಯನ ಧಾರೆಯೂ ನಿಂತಿತು. ಶ್ರೀಕೃಷ್ಣಲೀಲೋತ್ಸವದ ಸಡಗರ ಚುರುಕುಗೊಂಡಿತು. ಅಲಂಕೃತರಥದಲ್ಲಿ ಶ್ರೀಕೃಷ್ಣನು ಕುಳಿತನು. ಯತಿತ್ರಯರೂ ಉತ್ಸವದಲ್ಲಿ ಪಾಲ್ಗೊಂಡರು. ಈ ಉತ್ಸವವು ಪೌರಾಣಿಕವೇಷಗಳು, ಹುಲಿವೇಷಗಳು, ಸಾಮಾಜಿಕವೇಷಗಳು ಹೀಗೆ ವಿವಿಧವೇಷಗಳಿಂದ ಅತ್ಯಂತ ಸಂಭ್ರಮದಿಂದ ಶೋಭಾಯಾತ್ರೆಯು ಮುದಗಲ್‌ನ ಪ್ರಧಾನಮಾರ್ಗಗಳಲ್ಲಿ ಸಾಗಿತು. ಶ್ರೀಕೃಷ್ಣನ ಲೀಲೆಯನ್ನು ನೆನಪಿಸುವ ಮಡಿಕೆಯೊಡೆಯುವ ಕಾರ್ಯಕ್ರಮವು ಪ್ರಧಾನವಾಗಿ ತೋರುತ್ತಿತ್ತು. ವಿಶೇಷವಾಗಿ ಸಿಡುಮದ್ದು ಪ್ರದರ್ಶನವೂ ಸೇರಿತ್ತು. ಒಟ್ಟಿನಲ್ಲಿ ಮುದಗಲ್ ನ ಹಾಗೂ ಆಸುಪಾಸಿನ ಭಕ್ತಜನತೆ ಎಂದಿಗೂ ಮರೆಯಲಾಗದ ಉತ್ಸವವಾಗಿತ್ತು. ಉತ್ಸವವು ಮಠವನ್ನು ತಲುಪಿದನಂತರ ಪೂಜೆಗಳು ಜರುಗಿದವು. ಶ್ರೀಪಾದರು ಆಶೀರ್ವಚನ ನೀಡಿದರು. ನಂತರ ಭಕ್ತರು ಪ್ರಸಾದವನ್ನು ಸ್ವೀಕರಿಸಿದರು. ಆಗ ರಾತ್ರಿಯಾಗಿತ್ತು. ಘಂಟೆ ಹತ್ತನ್ನು ಮೀರಿತ್ತು ಭಕ್ತರು ತಮ್ಮ ತಮ್ಮ ಮನೆಗಳನ್ನು ಸೇರಿದರು. ಅಲ್ಲಿಯವರೆಗೂ ಕಾಣದ ಮಳೆ ಒಮ್ಮೆಲೆ ಆರಂಭವಾಯಿತು. ಆ ಮಳೆ ನಿಂತಾಗ ಕತ್ತಲೆ ಹೋಗಿ ಬೆಳಕು ಚೆಲ್ಲಿತ್ತು.

ಇಂದಿಗೂ ಮುದಗಲ್ ಜನರ ಹಾಗೂ ದೇಶಪಾಂಡೆಯವರ ಮನದ ಭಾವನೆ, 'ಮುದಗಲ್‌ನ ಅಂದಿನ ಮಳೆ ಶ್ರೀಗಳಮಾತನ್ನುಳಿಸುವ ಗೆಳೆಯ ನಂತೆ ' ಇತ್ತು.



# ವಿಶ್ವಕಲ್ಯಾಣಯಾಗ

ಸುಮಾರು 40 ವರುಷಗಳ ಹಿಂದೆ ದೇಶದ ರಾಜಧಾನಿ ದೆಹಲಿಯಲ್ಲಿ ಒಂದು ಅಭೂತಪೂರ್ವ ಮಹಾಯಾಗವು ನಡೆಯಿತು. ಆದರ ಉದ್ದೇಶ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಎಂಟು ಗ್ರಹಗಳ ಸಮ್ಮಿಲನದ ದುಷ್ಪರಿಣಾಮವಾಗಿ ಜಗತ್ತಿನಲ್ಲಿ ನಡೆಯಬಹುದಾದ ಅಹಿತಕರ ಘಟನೆಗಳನ್ನು ತಡೆಯುವುದು ಜಗತ್ತಿನಲ್ಲಿ ಶಾಂತಿ ನೆಲೆಗೊಳಿಸುವುದಾಗಿತ್ತು. ಈ ಮಹಾಯಾಗದಲ್ಲಿ ಪ್ರಧಾನ ಪಾತ್ರಗಳಾಗಿ ಪಾಲ್ಗೊಂಡ ಅನೇಕ ಮಹನೀಯರು ಒಬ್ಬ ಉತ್ತಮ ತಪಸ್ವಿಗಳನ್ನು ಮುಂದಿಟ್ಟುಕೊಂಡು ಮಹಾಯಾಗದ ವ್ಯವಸ್ಥೆಯನ್ನು ಏರ್ಪಡಿಸುತ್ತಿದ್ದರು. ಆ ವ್ಯವಸ್ಥಾಪಕ ಮಂಡಲಿಯ ಪ್ರತಿಯೊಂದು ಹೆಜ್ಜೆಯ ಕಾರ್ಯಕ್ಕೂ ಆ ತಪಸ್ವಿಗಳ ಆದೇಶವೇ ಜೀವವಾಗಿತ್ತು. ಉತ್ತರಭಾರತದ ಪ್ರಧಾನ ನಗರದಲ್ಲಿ ನಡೆಯುವ ಈ ಮಹಾಕಾರ್ಯಕ್ಕೆ ಮುಖ್ಯ ಮುಂದಾಳುವಾಗಿದ್ದ ಆ ತಪಸ್ವಿಗಳು ಉತ್ತರಭಾರತದವರೇ ಅಥವಾ ಬೇರಾರೋ ಅಲ್ಲ ದಕ್ಷಿಣಭಾರತದ ಕರ್ಣಾಟಕದ ಉಡುಪಿಯ ಶ್ರೀಭಂಡಾರಕೇರಿ ಮಠದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರೇ ಆ ಮಹಾಯಾಗದ ನೇತಾರರು. ಇದು ದಕ್ಷಿಣಭಾರತಕ್ಕೆ ಕರ್ಣಾಟಕಕ್ಕೆಹೆಮ್ಮೆಯ ವಿಷಯ.

ಶ್ರೀಪಾದರ ಆದೇಶ ಹೀಗಿತ್ತು' ಅಷ್ಟಗ್ರಹಗಳ ಯೋಗದ ದುಷ್ಪರಿಣಾಮ ನಮ್ಮ ದೇಶಕ್ಕೆ ತಗಲದಿರಲು ಹಾಗೂ ಜಗತ್ತಿಗೆ ಕಲ್ಯಾಣವಾಗಲು ನಾಲ್ಕುವೇದಗಳ ಪಾರಾಯಣ, ಗಾಯತ್ರೀಮಂತ್ರದ ಪುರಶ್ಚರಣ, ಹದಿನೆಂಟು ಪುರಾಣಗಳ ಪಾರಾಯಣ, ರಾಮಾಯಣ, ಮಹಾಭಾರತಗಳ ಪಾರಾಯಣ, ಪವಮಾನಹೋಮ, ಶತಚಂಡೀಯಾಗ, ನವಗ್ರಹ ಹೋಮ, ಮೃತ್ಯುಂಜಯ ಹೋಮ, 1008 ಸತ್ಯನಾರಾಯಣ ಪೂಜೆ, ವಿಶೇಷವಾಗಿ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳ ಪಾರಾಯಣ, ಭಗವದ್ಗೀತಾ ಪ್ರವಚನ, ಹರಿನಾಮ ಸಂಕೀರ್ತನ, ಸಹಸ್ರಾರು ಬ್ರಾಹ್ಮಣಸುವಾಸಿನಿಯರಿಗೆ ಅನ್ನ ಸಂತರ್ಪಣೆ, ಪಂಡಿತರ ಪರಮಹಂಸರ ಸನ್ಮಾನ ಸತ್ಕಾರಗಳು, ವಿಶೇಷದಾನ ದಕ್ಷಿಣೆಗಳು ಎಲ್ಲವೂ ಬಹಳ ಚೆನ್ನಾಗಿ ನಡೆಯಬೇಕು.'' ಶ್ರೀಪಾದರ ಈ ಆದೇಶಕ್ಕೆ ಎಲ್ಲರೂ ಬದ್ಧರಾದರು. ದೆಹಲಿಯ ಸಿರಿವಂತರೂ ಉನ್ನತ

ಅಧಿಕಾರಿಗಳೂ ಸಾಮಾನ್ಯಭಕ್ತರೂ ಸೇರಿ ಯಾಗದ ಪೂರ್ವದಲ್ಲಿ ಒಂದು ಸಮಿತಿಯನ್ನು ರಚಿಸಿದರು. ಅದು ವಿಶ್ವಕಲ್ಯಾಣಮಹಾಯಾಗ ಸಿಮಿತಿ. ಸಮಿತಿಯ ಅಭಿಪ್ರಾಯ ಶ್ರೀಪಾದರ ನಿರ್ಣಯಕ್ಕೆ ಒಡಂಬಟ್ಟಿತ್ತು.

ವಿಶ್ವಕಲ್ಯಾಣ ಮಹಾಯಾಗಕ್ಕಾಗಿ ಸುಮಾರು ಮೂರು ನಾಲ್ಕು ತಿಂಗಳುಗಳಿಂದ ಪೂರ್ವಸಿದ್ಧತೆ ಆರಂಭ ಗೊಂಡಿತು. ಸುಮಾರು ಐದಾರು ಲಕ್ಷ ರೂಪಾಯಿಗಳನ್ನು ಯಾಗಕ್ಕಾಗಿ ವಿನಿಯೋಗಿಸುವುದೆಂದು ಸಮಿತಿಯ ಅಂದಾಜಿನ ವೆಚ್ಚವಾಗಿತ್ತು.

ಯಮುನಾನದಿಯ ತೀರದಲ್ಲಿ ಒಂದು ಕುದಿಯಾಘಾಟ್ ಎಂಬ ವಿಶಾಲವಾದ ಬಯಲು. ಅಲ್ಲಿ ಯಾಗವನ್ನು ನಡೆಸಲು ಅಗತ್ಯವಾಗಿ ಸಜ್ಜುಗೊಂಡ ದೊಡ್ಡ ಯಾಗ ನಗರದಂತೆಯೇ ತೋರುತ್ತಿದ್ದ ಅತಿವಿಶಾಲವಾದ ಪೆಂಡಾಲು. ಅದರೊಳಗೆ ಅನೇಕ ವಿಭಾಗಗಳು ಕೆಲವು ಕಡೆ ವಿಶಾಲವಾದ ಯಜ್ಞಕುಂಡಗಳು, ಮತ್ತೊಂದೆಡೆ ವಿಸ್ತಾರವಾದ ಸಹಸ್ರಾರು ಜನರು ಕೂಡಲು ಅನುಕೂಲವಾದ ಸಭಾಭವನಗಳು, ಅಗಲವಾದ ಪಾಕಶಾಲೆಗಳೂ, ಸ್ನಾನಗೃಹಗಳು, ಯಾಗಕ್ಕಾಗಿ ಆಗಮಿಸಿದ ಪಂಡಿತರ ಶ್ರೀಗಳವರ ವಸತಿಗಾಗಿ ಪ್ರತ್ಯೇಗ ಕೊಠಡಿಗಳು, ವಿಚಾರಣಾ ಕೇಂದ್ರಗಳು, ಆರಕ್ಷಕ ಠಾಣೆಗಳು ನಿರ್ಮಾಣಗೊಂಡವು, ಇಷ್ಟೆಲ್ಲ ಕಡೆಗೂ ವಿದ್ಯುದ್ದೀಪ, ಕೊಳಾಯಿನೀರು, ದೂರವಾಣಿ, ತಂತಿ ಅಂಚೆ ವ್ಯವಸ್ಥೆಗಳನ್ನೊಳಗೊಂಡ ಸುಂದರ ನಗರ ನಿರ್ಮಾಣಗೊಂಡಿತು. ಇದರೊಂದಿಗೆ ವಾಹನಗಳ ಸೌಕರ್ಯವೂ ಸುಲಭವಾಗಿತ್ತು. ಭಾರತದ ಮೂಲೆ ಮೂಲೆಗಳಿಂದ ಕಾಶಿ, ಗಯಾ, ಕಲ್ಕತ್ತಾ, ನವದ್ವೀಪಗಳು, ಮುಂಬಯಿ, ಉಡುಪಿ,ಮೈಸೂರು, ಬೆಂಗಳೂರು, ಕೊಯಂಬತ್ತೂರು, ಹುಬ್ಬಳ್ಳಿ ಮೊದಲಾದ ಕಡೆ ಗಳಿಂದಲೂ ನೂರಾರು ಯಾಜ್ಞೀಕರೂ ಪಂಡಿತರೂ ಆಗ ಮಿಸಿದ್ದರು, ಇವರೆಲ್ಲರಿಗೂ ಭಂಡಾರಕೇರಿ ಶ್ರೀಪಾದರೇ ವಿಶೇಷ ಆಮಂತ್ರಣವನ್ನು ಕಳುಹಿಸಿದ್ದರು. ಒಟ್ಟು ಏಳುನೂರು ಜನ ಋತ್ವಿಜರು ಮಹಾಯಾಗದಲ್ಲಿ ಭಾಗವಹಿಸಿದ್ದರು. ಅಲ್ಲದೇ ವೇದ ಪುರಾಣ ಸರ್ವಮೂಲಗಳ ಪಾರಾಯಣಕ್ಕೆ ಪ್ರತ್ಯೇಕ ಪ್ರತ್ಯೇಕ ಮುನ್ನೂರು ಜನ ವಿದ್ವಾಂಸರು ಆಗಮಿಸಿದ್ದರು. ಶ್ರೀಶ್ರೀಪಾದರ ಅಚ್ಚುಮೆಚ್ಚಿನ ಶಿಷ್ಯರಾದ ಶ್ರೀಪೇಜಾ ವರ ಶ್ರೀಪಾದರು ಆಗಮಿಸಿದ್ದರು. ಈ ಗುರುಶಿಷ್ಯರು ಸೇರಿ ಮಹಾಯಾಗದ ಮೇಲ್ವಿಚಾರಕರಾಗಿ ಎಲ್ಲ ಕಾರ್ಯ ಕ್ರಮಗಳಲ್ಲೂ ಭಾಗವಹಿಸುತ್ತಿದ್ದರು.

ಪ್ರಾತಃಕಾಲ ಹಾಗೂ ಸಾಯಂಕಾಲ ವಿದ್ವಾಂಸರ ಹಾಗೂ ಶ್ರೀಪಾದರ ಉಪನ್ಯಾಸ ಪ್ರವಚನಗಳೂ ನಡೆಯುತ್ತಿದ್ದವು. ವಾಕ್ಯಾರ್ಥವಿಚಾರ ವಿದ್ವತ್ಸಭೆಗಳು ವಿಜೃಂಭಿಸುತ್ತಿದ್ದವು. ಎಲ್ಲ ಕಾರ್ಯಕ್ರಮಗಳಿಗೂ ಕಲಶಪ್ರಾಯವಾಗಿ ಮಠದ್ವಯದ ಶ್ರೀರಾಮವಿಠಲರ ಪೂಜೆಗಳು ನಡೆಯುತ್ತಿದ್ದವು. ಬೆಳಗಿನ ಎಂಟು ಘಂಟೆಯಿಂದ ಸಾಯಂಕಾಲದ ಆರು ಘಂಟೆಗಳ ವರೆಗೆ ವಿವಿಧ ಹೋಮ ಪಾರಾಯಣಾದಿಗಳು ಸಾಂಗವಾಗಿ ನಡೆಯುತ್ತಿದ್ದವು. ಯಾಗದ ಕೊನೆಯವೆಗೂ ಋತ್ವಿಜರೆಲ್ಲರೂ ಉಪವಾಸದಿಂದಿದ್ದು ತಮ್ಮ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದರು. ಸ್ನಾನಕ್ಕಾಗಿ ಬಿಸಿನೀರಿನ ವ್ಯವಸ್ಥೆ ಇತ್ತು. ಸ್ನಾನ ಮಾಡಿದ ಬಳಿಕ ಆಹ್ನೀಕವನ್ನು ಪೂ ರೈಸಿದ ಋತ್ವಿಜರಿಗೆ ಉತ್ತಮ ಹಾಲನ್ನು ನೀಡಲಾಗುತ್ತಿತ್ತು. ಉಳಿದ

ಭಕ್ತರಿಗೆ ಮಧ್ಯಾಹ್ನ ಉಪಹಾರ. ಎಲ್ಲರಿಗೂ ಸಾಯಂಕಾಲ ಮಾತ್ರ ಭೋಜನದ ವ್ಯವಸ್ಥೆಯಾಗಿತ್ತು. ಯಾಗಕ್ಕಾಗಿ ದೇಶದ ಹಿತಕ್ಕಾಗಿ ಎಲ್ಲರೂ ಏಕಭೋಕ್ತರಾಗಿದ್ದರು. ಉತ್ತರ ಭಾರತದ ಜನರಿಗಾಗಿ ಪ್ರತ್ಯೇಕ ಅಡುಗೆ ದಕ್ಷಿಣ ಭಾರತದವರಿಗೆ ಪ್ರತ್ಯೇಕ ಅಡುಗೆಗಳ ವ್ಯವಸ್ಥೆಯಾಗಿತ್ತು. ನಿತ್ಯವೂ ಸಮಾರು ಐದಾರುಸಾವಿರಕ್ಕೂ ಅಧಿಕವಾಗಿ ಭಕ್ತರು ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಹೀಗೆ ಹತ್ತು ದಿನಗಳ ಕಾಲ ನಡೆಯುತ್ತಿತ್ತು.

ಈ ಮಹಾಯಾಗದ ಆರ್ಥಿಕ ಬೆನ್ನೆಲುಬಾಗಿ ಬಿರ್ಲಾ, ಜಯಪುರಿ ಮುಂತಾದ ಕೋಟ್ಯಧೀಶರು ಸೇವೆಗಾಗಿ ಕೈಕಟ್ಟಿ ನಿಂತಿದ್ದರು. ಎಲ್ಲ ಕಾರ್ಯಕ್ರಮಗಳೂ ಅಚ್ಚುಕಟ್ಟಾಗಿ ಜರುಗುತ್ತಿದ್ದವು. ಏಕಕಾಲದಲ್ಲಿ 1008 ಸತ್ಯನಾರಾಯಣಪೂಜೆಗಳು ನಡೆಯುತ್ತಿದ್ದ ದೃಶ್ಯ ಭಾವುಕರ ಭಕ್ತಿಯನ್ನು ಉದ್ರೇಕಿಸುತ್ತಿತ್ತು. ಸಾಯಂಕಾಲದ ಹೊತ್ತು ಭೋಜನದ ನಂತರ ಮತ್ತೆ ಉಪನ್ಯಾಸಗಳು ಇಂಗ್ಲಿಷ್, ಸಂಸ್ಕೃತ ,ಹಿಂದೀ ಭಾಷೆಗಳಲ್ಲಿ ಮೂಡಿಬರುತ್ತಿದ್ದವು.

ವಿಶ್ವಕಲ್ಯಾಣ ಮಹಾಯಾಗ ನಗರದ ಎಲ್ಲೆಡೆಗಳಲ್ಲೂ ಸಾತ್ವಿಕ ಶಬ್ದ ತರಂಗಿಣಿಯು ರಮಿಸುತ್ತಿತ್ತು. ಒಂದೆಡೆ ವೇದಘೋಷ, ಮತ್ತೊಂದೆಡೆ ಶಾಸ್ತ್ರೀಯ ವಿಚಾರಗಳ ಶಬ್ದ ಸಂಘರ್ಷ, ಮಗದೊಂದೆಡೆ ಸಂಗೀತಮಯ ಸಂಕೀರ್ತನ ಸಮಾವೇಶ, ಹೀಗೆ ಎಲ್ಲೆಲ್ಲೂ 'ಶಬ್ದ ಶಬ್ದ ಶಬ್ದ' ಇಂತಹ ಪವಿತ್ರ ಶಬ್ದದಿಂದ ಪಾವನ ಹವನಗಳ ಧೂಮದಿಂದ ಅನೇಕ ಭಕ್ತರ ಮಹಾತ್ಮರ ಪಾದರಜೋಕಣಗಳಿಂದ ಕುದಿಯಾಘಾಟ್ ಮೈದಾನವಾಗಿತ್ತು ಉತ್ತಮ ಪಾವಿತ್ರ್ಯದ ತಾಣ.

ಭಂಡಾರಕೇರಿ ಶ್ರೀಪಾದರ ನೇತೃತ್ವದಲ್ಲಿ ನಡೆದ ಮಹಾಯಾಗವೂ ಧರ್ಮರಾಜಾದಿ ಪಾಂಡವರ ರಾಜಸೂಯ ಯಾಗದ ಪುನರಾವೃತ್ತಿಯಂತಿತ್ತು. ಆ ಮಹಾಯಾಗದ ಸಂದರ್ಭದಲ್ಲಿ ಭಾರತದ ರಾಷ್ಟ್ರಾಧ್ಯಕ್ಷರೂ, ಪ್ರಧಾನಮಂತ್ರಿಗಳೂ, ಉಳಿದ ಮಂತ್ರಿಗಳೂ, ಅನೇಕ ಮಹನೀಯರೂ ಭಾಗವಹಿಸಿದ್ದರು. ಜಾಗತಿಕ ಒಳಿತಿಗಾಗಿ ಭಾರತದೇಶದ ಧರ್ಮಪೀಠ ಹಾಗೂ ರಾಜಪೀಠಗಳು ಸೇರಿ ನಡೆಸಿದ ಮಹಾಯಾಗ ವಿಶ್ವಕಲ್ಯಾಣ ಮಹಾಯಾಗ. ಇಂತಹ ಮಹಾಯಾಗದ ಸಂದರ್ಭದಲ್ಲಿ ಒಂದು ದಿನ ಆಕಾಶದಲ್ಲಿ ಮೋಡಗಳು ಕವಿದು ಮಳೆಯ ಆತಂಕ ಉಂಟುಮಾಡಿತು. ವ್ಯವಸ್ಥಾಪಕರು ಚಿಂತಾಕ್ರಾಂತರಾದರು. ಆದರೆ ಶ್ರೀಪಾದರ ಅದ್ಭುತ ತಪಶ್ಶಕ್ತಿಯಿಂದ ಮೋಡದಿಂದ ತುಂಬಿದ್ದರೂ ಆಕಾಶದಿಂದ ಮಳೆ ಇಳಿಯಲಿಲ್ಲ. ಈ ಘಟನೆಯಿಂದ ಎಲ್ಲ ರಾಜಕಾರಣಿಗಳೂ, ಮಹಾಜನರು ಪ್ರಭಾವಿತರಾದರು. ಶ್ರೀಪಾದರ ತಪಶ್ಶಕ್ತಿಗೆ ವಶರಾದರು.

ಭಾರತದ ಸುಪ್ರಸಿದ್ಧ ಇಂಗ್ಲೀಷ್ ಹಾಗೂ ಹಿಂದೀ ದೈನಿಕ ಪತ್ರಿಕೆಗಳು ಈ ಮಹಾಯಾಗ ಹಾಗೂ ಶ್ರೀಪಾದರ ವ್ಯಕ್ತಿತ್ವ, ಪಾಂಡಿತ್ಯ ಮತ್ತು ತಪಶ್ಶಕ್ತಿಗಳ ಬಗ್ಗೆ ಉತ್ತಮ ಪ್ರಚಾರವನ್ನು ನೀಡಿದವು.

ದೆಹಲಿಯ 'ಹಿಂದೂಸ್ಥಾನ್' ಎಂಬ ದಿನಪತ್ರಿಕೆಯ ಪ್ರತಿನಿಧಿಯು ನೀಡಿದ ವರದಿಯ ಸಂಕ್ಷೇಪ ಇಲ್ಲಿದೆ.

'ಮಹಾರಾಜಾಧಿರಾಜ ಯುಧಿಷ್ಠಿರಕೆ ರಾಜಸೂಯ ಯಜ್ಞಕೆ ಬಾದ್ ಯಮುನಾ ಚಟ ಪರ ಇಂದ್ರಪ್ರಸ್ಥಪ್ರದೇಶ್‌ಮೇ 5000 ವರ್ಷ್ ಬಾದ್ ಫಿರ್ ವೇದ ಮಂತ್ರೋಂ ಕಿ ಧ್ವನಿಕೆ ಸಾಥ್ 700 ಮಹಾನ್

ವಿದ್ವಾನ್ ಪಂಡಿತೋಂ ದ್ವಾರಾ ಆಹುತಿಯಾ ದೇತೆ ಹುಯೆ ಮಹಾವಿಷ್ಣು ಯಜ್ಞಹೋಂ ರಹಾ ಹೈ ಜಿಸಮೆ 3 ಲಕ್ಷಸೆ ಅಧಿಕ್ ಧನ್ ಲಗೇಗಾ ಕೇಂದ್ರ ಮಂತ್ರಿ ಶ್ರೀ ಬಿ.ಎಸ್. ದಾತಾರ್ ಇಸಕೆ ಪುನೀತಪ್ರೇರಕ ಹೈ ಔರ ಇಸಕೆ ಪಿಛಲೆ ಸಹಕಾರಿ ತಥಾ ಆಜ ಪ್ರಸಿದ್ಧ 'ಹಿಂದಿ ಪ್ರಿಂಟಿಂಗ್ ಪ್ರೆಸ್' ಕೆ ಅಧ್ಯಕ್ಷ್ ಶ್ಯಾಮಸುಂದರ ಅಗ್ರವಾಲಾ ಪ್ರಕಾಶನ ಅಧಿಕಾರಿ ಹೈ ಯಜ್ಞ ಇತನೀ ವಿಶಾಲ ಹೈ ಕಿ ವಿಶ್ವಕಲ್ಯಾಣ ಮಹಾಯ ಏ ಸಮಿತಿ 3 ಮಹೀನೇ ಸೆ ಪ್ರಭಂಧ ಕರ ರಹೀ ಥೀ' ಎಂದು ಮೂರು ಕಾಲಂ ಗಟ್ಲೆ ಯಜ್ಞವನ್ನು ಅದರ ವಿವರಣೆ, ವ್ಯವಸ್ಥೆಯನ್ನು ಕುರಿತು ಬರೆದಿದ್ದಾರೆ.

ದಿ 5 ಆಗಸ್ಟ್ 1961 ದಿನದ 'ಸ್ಟೇಟ್ಸಮನ್' ಇಂಗ್ಲೀಷ್ ದೈನಿಕ ಈ ರೀತಿ ಬರೆಯುತ್ತಿದೆ. ಶ್ರೀಗಳವರು ದೇವರ ಪೂಜೆ ಮಾಡುತ್ತಿರುವ ದೃಶ್ಯದ ಚಿತ್ರವನ್ನು ಕೊಟ್ಟು ಹೀಗೆ ಬರೆದಿದ್ದಾರೆ. ಸ್ವಾಮಿಗಳ ವಿಷಯವಾಗಿಯೂ, ಯಜ್ಞದ ವಿಷಯವಾಗಿಯೂ ಎರಡು ಅಂಕಣದಲ್ಲಿ ದಪ್ಪಾಕ್ಷರಗಳಲ್ಲಿ ಪ್ರಕಟಿಸಿದೆ

Delhi yagna for world prosperity

(By a staff reporter)

The appearance of luminous, bright object gliding across the Delhi sky for the past few days has attracted the ateention of many citizens in the capital. But not many know that a radiant and brilliant figure is among them. He is his Holiness Sri Vidhyamanya Therrtha Sripadangalavaru of Bandarakere peetham near Udupi in Mysore, who has just return from a second trip of Badarinath.

Shree jagadguru later started a school of Vedanta with 50 students to begin with. So far nearly 500 students havae completed courses in philosophy at that school.

The Times of India

H.H. Vidyamanya Theertha Swamiji of Bandarakere near Udupi in Mysore State, the presiding Mahanta of a Math, founded by Shri Madhvacharya the famous philosopher of the school of Realism in India on philosophy in the 12th century A.D. has been camping at Delhi for the last 9 months, with a brief break due to a visit to Shri Badarinath some weeks ago.

He has been known throughout India for leading a highly advanced spiritual life and for inculcating the elevating doctrines of Hindu Religion and philosophy amongst one and all. His presence at Delhi has been responsible for creating a high religious-cum-spiritual atmosphere amongst all the cross-sections of its Hindu population.

WILL THEIR PRAYERS BE ANSWERED?

(by our staff reporter)

MIRACULOUS POWERS.

New Delhi, December 28. The swami is also started to be endowed with devine powers. A spokesman of the Vishwa Kalyan Maha Yaga Samiti said that the swamy stopped the rains on December 17.

When the sadhus told him that day that the rains would upset the arrangements for the yaga, the swamy assured that the weather would begin to clear in the afternoon. The samiti spokesman said that to the diligeted surprise of the sadhus the sky completely cleared in the evening.

## ಪವಾಡ ಪುರುಷ

ದಿಲ್ಲಿಯಲ್ಲಿ ವಿಶ್ವಕಲ್ಯಾಣಯಾಗ ನಡೆಯುವ ಕಾಲದಲ್ಲಿ ಮಳಯಿತ್ತು ಆಕಾಶದಲ್ಲಿ ಮೇಘಾಚ್ಛಾದಿತವಾಗಿತ್ತು. ಮಳೆಯಾದರೆ ಯಜ್ಞದ ಸಲುವಾಗಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡಿ ನಿರ್ಮಿಸಿದ ಸಿದ್ಧತೆಗಳು ಹಾಳಾಗಿ ಹೋಗಿ ಬಹಳ ತೊಂದರೆಯಾಗುವುದೆಂದು 'ಡಿಸೆಂಬರ್ 17 ರಂದು ಮಳೆಯಾಗುವುದಿಲ್ಲ ಯಾರೂ ಚಿಂತೆಗೆ ಒಳಗಾಗುವ ಕಾರಣವಿಲ್ಲ. ದೇವರ ಅನುಗ್ರಹದಿಂದ ಎಲ್ಲವೂ ಸರಿಯಾಗಿ ನಡೆಯುತ್ತದೆಂದು ಹೇಳಿದರು. ಅಂದು ಸಾಯಂಕಾಲದೊಳಗಾಗಿ ಮಳೆಯಾಗಬೇಕೆಂದು ಕವಿದುಕೊಂಡ ಮೋಡಗಳೆಲ್ಲವೂ ಹಾರಿಹೋಗಿ ಆಕಾಶವೂ ನಿರಭ್ರವಾಯಿತು. ಇದನ್ನು ನೋಡಿ ವ್ಯವಸ್ಥಾಪಕರಿಗೂ, ಪಂಡಿತರಿಗೂ ಪರಮಾಶ್ಚರ್ಯವೂ, ಸಂತೋಷವೂ ಆಯಿತು. ಈ ಘಟನೆಯನ್ನು ಕುರಿತು ಇಂಡಿಯನ್ ಎಕ್ಸಪ್ರೆಸ್ ಡಿಸೆಂಬರ್ 28 ನೇ ದಿನಾಂಕದ ಸಂಚಿಕೆಯಲ್ಲಿ ಈ ಪ್ರಕಾರ ಬರೆದಿದೆ.

★★★

# ಸನಾತನಧರ್ಮರಕ್ಷಕ

ಸನಾತನಧರ್ಮ ಪ್ರತಿನಿಧಿ ಸಭೆಗೆ ಭಂಡಾರಕೇರಿ
ಶ್ರೀಪಾದರು ಅಧ್ಯಕ್ಷರಾಗಿ ಆಯ್ಕೆ

ಶ್ರೀಶ್ರೀಭಂಡಾರಕೇರಿ ಮಠದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಮೂರು ವರ್ಷಗಳವರೆಗೆ ಈ ಸಭೆಯ ಸಂರಕ್ಷಕ(ಅಧ್ಯಕ್ಷ)ರಾಗಿ ಆರಿಸಲ್ಪಟ್ಟಿದ್ದರು. ಇದು ದಾಕ್ಷಿಣಾತ್ಯರಿಗೆ ವಿಶೇಷವಾಗಿ ಕನ್ನಡಿಗರಿಗೆ ತತ್ರಾಪಿ ಮಾಧ್ವರಿಗೆ ಹೆಮ್ಮೆಯ ಮಾತಾಗಿದೆ. ಏಕೆಂದರೆ ಉತ್ತರದ ಇಂಥ ಮಹಾ ಸಂಸ್ಥೆಗಳಲ್ಲಿ ಕೇವಲ ತಮ್ಮ ಪಾಂಡಿತ್ಯ ತ್ಯಾಗಮಯ ಜೀವನಗಳ ಸ್ವಸಾಮರ್ಥ್ಯದಿಂದ ಅಧ್ಯಕ್ಷಸ್ಥಾನವನ್ನು ಪಡೆದದ್ದು ಸಾಮಾನ್ಯವೇ? ಇದಕ್ಕೂ ಮೊದಲು ಲೋಕಸಭೆಯ ಅಧಿಪತಿಗಳಾದ ಶ್ರೀಅನಂತ ಶಯನಂ ಅಯ್ಯಂಗಾರರು ಸಂರಕ್ಷಕ'ರಾಗಿದ್ದರು. ಮೂರು ವರ್ಷಕ್ಕೊಮ್ಮೆ ಈ ಸಂರಕ್ಷಕರ ಆಯ್ಕೆ ಆಗುತ್ತದೆ.

ಸನಾತನ ಧರ್ಮ ಪ್ರತಿನಿಧಿ ಸಭಾ ಪಂಜಾಬ, ಇದರ ಕೇಂದ್ರ ಕಛೇರಿ ಹೊಸದಿಲ್ಲಿಯಲ್ಲಿದ್ದು 50 ವರ್ಷಗಳಿಂದ ಸನಾತನ ಧರ್ಮದ ಪ್ರಚಾರವನ್ನು ಮಾಡುತ್ತಲಿದೆ. ಈ ಸಂಸ್ಥೆಗೆ 600 ಶಾಖೆಗಳಿದ್ದು, 200 ಮಹಾವೀರದಳವಿದ್ದು, 300ಕ್ಕೂ ಮೇಲ್ಪಟ್ಟು ಕಾಲೇಜು, ಸಂಸ್ಕೃತವಿದ್ಯಾಲಯ, ಹೈಸ್ಕೂಲ್ ಗಳೂ ಮತ್ತು ಕನ್ಯಾಶಾಲೆಗಳು ಇವೆ.

ಅನೇಕ ದೇವಸ್ಥಾನಗಳೂ, ಆಶ್ರಮಗಳೂ, ಪುಸ್ತಕಾಲಯ ಗಳೂ ಶಾಖಾ ಕಾರ್ಯಾಲಯಗಳೂ ತಮ್ಮ ತಮ್ಮ ಕಾರ್ಯಗಳನ್ನು ಸುವ್ಯವಸ್ಥಿತವಾಗಿ ನಡೆಸುತ್ತಲಿವೆ.

ಸಭೆಗೆ ಅನೇಕ ಉಪಸಮಿತಿಗಳು ಇದ್ದು ಇದರಲ್ಲಿ 'ವಿದ್ವತ್ಪರಿಷದ್' ಎಂಬ ಒಂದು ಸಮಿತಿಯೂ ಇದೆ. ಈ ಪರಿಷತ್ತು ಕೆಳಗೆ ಬರೆದ ಎಂಟು ಕಾರ್ಯಗಳನ್ನು ಮಾಡುತ್ತದೆ.

1. ಪ್ರತಿನಿಧಿ ಸಭೆಯ ಧಾರ್ಮಿಕ ನೀತಿಯನ್ನು ಸುವ್ಯವಸ್ಥಿತವಾಗಿ ಮಾಡುವುದು.

2. ಧಾರ್ಮಿಕ ಶ್ರದ್ಧಾಳುಗಳಲ್ಲಿ ಧಾರ್ಮಿಕಸಂದೇಹಗಳನ್ನು ನಿವಾರಣೆ ಮಾಡುವುದು.

3. ವಿವಾದಾಸ್ಪದ ಧಾರ್ಮಿಕ ವಿಷಯಗಳ ನಿರ್ಣಯ ಕೊಡುವುದು.

4. ವರ್ಷದಲ್ಲಿ ನಡೆಯುವ ಧಾರ್ಮಿಕ ಉತ್ಸವಾದಿಗಳ ಬಗ್ಗೆ ನಿರ್ಣಯ ಕೊಡುವುದು.

5. ಪ್ರತ್ಯವಾಯಿಗಳಿಗೆ ಪ್ರಾಯಶ್ಚಿತ್ತ ಕೊಡುವುದು.

6. ಪ್ರತಿನಿಧಿ ಸಭೆಯ ಶಿಕ್ಷಣ ಸಂಸ್ಥೆಗಳಲ್ಲಿ ಧರ್ಮ, ಸದಾಚಾರ, ಶಿಕ್ಷಣದ ಬಗ್ಗೆ ಶಿಕ್ಷಣದ ವಿಭಾಗದವರು ನಿರ್ಧರಿಸಿದ ಪಠ್ಯಪುಸ್ತಕಗಳ ವಿಷಯದಲ್ಲಿ ಸಮ್ಮತಿ ಕೊಡುವುದು.

7. ಪ್ರಾಚೀನ ಧರ್ಮಗ್ರಂಥಗಳ ಅನ್ವೇಷಣಪೂರ್ವಕ ಸಂಪಾದನ ಮಾಡುವುದು.

8. ಸನಾತನ ಧರ್ಮ ಸಿದ್ಧಾಂತಗಳ ಬಗ್ಗೆ ಪುಸ್ತಕ ವರ್ತಮಾನ ಪತ್ರಗಳ ಮುಖಾಂತರ ಪ್ರಚಾರ ಮಾಡುವುದು.

ಈ ಎಲ್ಲ ಕಾರ್ಯಗಳೂ ಶಾಸ್ತ್ರವೇತ್ತರ ಸಂಬಂಧ ವಿಟ್ಟುಕೊಂಡು ಕಾರ್ಯ ನಡೆಸುತ್ತಿದೆ. ಮತ್ತು ವೇದ, ಪುರಾಣ, ಧರ್ಮಶಾಸ್ತ್ರಗಳ ಕರ್ಮಕಾಂಡ, ಜ್ಯೋತಿಷ್ಯಾದಿ ಶಾಸ್ತ್ರಗಳ ಪರಿಣತರ ಸಹಾಯವನ್ನು ತೆಗೆದುಕೊಳ್ಳುತ್ತದೆ.

ಪ್ರತಿವರ್ಷ ಅಧಿವೇಶನ ಕೂಡುತ್ತದೆ. ಅಧಿವೇಶನಾನಂತರ ಭಾರತದ ಪ್ರತಿಯೊಂದು ಪ್ರಾಂತದಿಂದಲೂ ಒಟ್ಟು 50 ಪ್ರಖ್ಯಾತವಿದ್ವಾಂಸರನ್ನು ಆರಿಸುತ್ತದೆ.

ಈ ಸಭೆಯ ಸಂರಕ್ಷಕರು ಉತ್ತರಪ್ರದೇಶದಲ್ಲಿ ಸಂಚಾರ ಮಾಡಿದಲ್ಲಿ ಆಯಾ ಶಾಖಾದವರು ಸ್ವಾಗತಮಾಡಿ ಗೌರವಮಾಡಿ ಅವರ ವ್ಯವಸ್ಥೆಯನ್ನು ಮಾಡುತ್ತಾರೆ.

ಸಂರಕ್ಷಕರು -ಶ್ರೀಶ್ರೀ 108 ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು. ಪ್ರಧಾನ, ಶ್ರೀಪದ್ಮಭೂಷಣ ನಾರಾಯಣವ್ಯಾಸ ಜ್ಯೋತಿಷ್ಯಾಚಾರ್ಯ, ಉಪ ಪ್ರಧಾನ- ಮಹಾಮಹೋಪಾಧ್ಯಾಯ ಪರಮೇಶ್ವ ರಾನಂದ ಶಾಸ್ತ್ರಿಗಳು. ಪ್ರಧಾನಮಂತ್ರಿ- ತ್ಯಾಗಮೂರ್ತಿ ಗೋಸ್ವಾಮಿ ಗಣೇಶದತ್ತ. ಕೇಂದ್ರ, ಕಛೇರಿ- ವಹಾಡಗಂಜ ನ್ಯೂದಿಲ್ಲಿ, ಬಿರ್ಲಾಮಂದಿರ ಮತ್ತು ಭೂಪೇಂದ್ರಹಾಲ.

★★★

ಭಾರತದ ಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದು ಮಥುರಾ. ಇಲ್ಲಿ ಆಯಿತು ಭಗವಂತನ ಕೃಷ್ಣಾವತಾರ. ಮಥುರೆಯಿಂದ ವೃಂದಾವನಕ್ಕೆ ತುಸು ದೂರವೇ ಅಂತರ. ಅಲ್ಲಿ ನಲಿದಾಡಿದ ಆ ನವನೀತಚೋರ. ಅದಕ್ಕಾಗಿ ಆಕ್ಷೇತ್ರವಾಯಿತು, ಕೃಷ್ಣಭಕ್ತಾಗ್ರಣಿಗಳ ಬಿಡಾರ. ಅಲ್ಲಿಗಾಗಮಿಸಿತು ಭಂಡಾರಕೇರಿ ಶ್ರೀಪಾದರ ದೇಶಸಂಚಾರ. ನಿಶ್ಚಿತ ಆ ನೆಲವನ್ನು ಮುಟ್ಟಿದ ಮನುಜನ ಉದ್ಧಾರ.

ಅಲ್ಲೊಂದು ಭಾಗವತ ವಿದ್ಯಾಪೀಠ. ಅದರ ಮೇಲ್ವಿಚಾರಕರು ಸಂಸ್ಥಾಪಕರು ಶ್ರೀಪ್ರಭುದತ್ತ ಬ್ರಹ್ಮಚಾರಿಗಳಿಂದ ನಡೆಯಿತು ಅದರ ಪ್ರತಿಷ್ಠೆ. ಅವರು ಒಂದು ತಿಂಗಳ ಕಾಲ ಅಖಂಡ ಸಂಕೀರ್ತನ ಯಜ್ಞವನ್ನು ನಡೆಸುತ್ತಿದ್ದರು. ಶ್ರೀಪಾದರಿಂದ ಪ್ರಭಾವಿತರಾದ ಅವರು ದ್ವೈತವೇದಾಂತ ವೇದೋಪನಿಷತ್ತು ಗೋರಕ್ಷಣ ವಿಭಾಗದ ಅಧ್ಯಕ್ಷಸ್ಥಾನವನ್ನು ವಹಿಸಲು ಶ್ರೀಪಾದರನ್ನು ಪ್ರಾರ್ಥಿಸಿದರು. ಅದರಂತೆ ಶ್ರೀಪಾದರು ಆ ಅಖಂಡಸಂಕೀರ್ತನೆ ಯಜ್ಞದ ಒಂದು ವಿಭಾಗದ ಕಾರ್ಯಕ್ರಮಗಳನ್ನು ನಡೆಸಲು ಸಿದ್ಧರಾದರು. ವೃಂದಾವನದಲ್ಲಿರುವ ಪ್ರತಿಮನೆಗಳಲ್ಲೂ ಶ್ರೀಕೃಷ್ಣನಾಮ ಸಂಕೀರ್ತನೆ, ಸತ್ಸಂಗದ ಕಾರ್ಯಕ್ರಮಗಳೂ ಶ್ರೀಕೃಷ್ಣನು ನಡೆದಾಡಿದ ಕ್ರೀಡಾಪ್ರದೇಶಗಳು ಯಾತ್ರಿಕರ ಚಿತ್ತಾಪಹಾರಕಗಳು ಆಗಿದ್ದವು.

ಇಂತಹ ಕ್ಷೇತ್ರದಲ್ಲಿ ಶ್ರೀಮಧ್ವಾಚಾರ್ಯರ ಸಂಪ್ರದಾಯದ ಚೈತನ್ಯ ಮತದ ಶಿಷ್ಯ ಸಮೂಹವಿದೆ. ಈ ಸಮೂಹ ಇಂದಿಗೂ ಶ್ರೀಮದಾಚಾರ್ಯರ ಹೆಸರಿನಿಂದ ಅನೇಕ ಉತ್ಸವಗಳನ್ನು ಆಚರಿಸುತ್ತಿದೆ. ದಿನಾಂಕ 22-3-1945 ರಂದು ಸಾಯಂಕಾಲ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರನ್ನು ಭವ್ಯ ಮೆರವಣಿಗೆಯಿಂದ ಬರಮಾಡಿಕೊಳ್ಳಲಾಯಿತು. ಛತ್ರ, ಚಾಮರ, ವಾದ್ಯ ಮೊದಲಾದ ವೈಭವಗಳಿಂದ ಯುಕ್ತವಾದ ಶ್ರೀಪಾದರ ಶೋಭಾ ಯಾತ್ರೆಯೂ ಅಖಂಡ ಸಂಕೀರ್ತನ ಯಜ್ಞ ಮಂಟಪಕ್ಕೆ ಆಗಮಿಸಿತು. ಶೋಭಾ ಯಾತ್ರೆಯಲ್ಲಿ ಐದಾರು ಸಾವಿರಕ್ಕೂ ಹೆಚ್ಚು ಜನರು ಸೇರಿದ್ದರು. ಹರಿನಾಮ ಸ್ಮರಣೆಯೊಂದಿಗೆ ''ಶ್ರೀಮಧ್ವಾಚಾರ್ಯಜೀ ಕಿ ಜೈ'' ಎಂಬ ಘೋಷಣೆಗಳನ್ನು ಮಾಡುತ್ತಿದ್ದರು. ದಿನಾಂಕ 23 ರಂದು ಶ್ರೀಪಾದರ ಅಧ್ಯಕ್ಷತೆಯಲ್ಲಿ ದ್ವೈತವೇದಾಂತ ಕಾರ್ಯಕ್ರಮಗಳು ಜರುಗಿದವು. ಅಧ್ಯಕ್ಷಸ್ಥಾನದಿಂದ ಮಾತನಾಡಿದ ಶ್ರೀಪಾದರು ವೃಂದಾವನಕ್ಷೇತ್ರದ ಮಹಾತ್ಮ್ಯ ಶ್ರೀಕೃಷ್ಣನ ಸರ್ವೋತ್ತಮತ್ವಗಳನ್ನು ಪ್ರತಿಪಾದಿಸುತ್ತಾ ವಿವಿಧ ಮತಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿ ದ್ವೈತ ವೇದಾಂತದ ಉತ್ತಮತ್ವವನ್ನು ಸ್ಥಾಪಿಸಿದರು. ಶ್ರೀಮದಾಚಾರ್ಯರ ಸಂದೇಶಗಳ ಪ್ರಮೇಯವನ್ನೂ ಮಂಡಿಸಿದರು.

ಮರುದಿನ ಶ್ರೀಪಾದರ ಅಧ್ಯಕ್ಷತೆಯಲ್ಲಿ ವೇದ ಸಮ್ಮೇಳನವು ಜರುಗಿತು. ಆ ದಿನ ಅಧ್ಯಕ್ಷರಾದ ಶ್ರೀಪಾದರು ವೇದಾಪೌರುಷೇಯತ್ವದ ಕುರಿತು ಉಪನ್ಯಾಸವಿತ್ತರು. ಆ ಕುರಿತಾಗಿ ಪ್ರತಿಯೊಂದು ಮತದ ಅಭಿಪ್ರಾಯಗಳನ್ನು ವಿವರಿಸಿ ಶ್ರೀಮದಾಚಾರ್ಯರ ನಿರ್ಣಯವನ್ನು ಮಂಡಿಸಿದರು.

ಮೂರನೆಯ ದಿನ ಶ್ರೀಪಾದರ ಅಧ್ಯಕ್ಷತೆಯಲ್ಲಿಯೇ ಗೋರಕ್ಷಾ ಸಮ್ಮೇಲನವು ನಡೆಯಿತು. ಹೀಗೆ ಅಖಂಡ ಸಂಕೀರ್ತನ ಮಹಾಜ್ಞದ ಒಂದು ವಿಭಾಗದ ಕಾರ್ಯಕ್ರಮವೂ ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿತ್ತು. ಎಲ್ಲ ಕಾರ್ಯಕ್ರಮಗಳೂ ವೃಂದಾವನದ ಚೈತನ್ಯ ಮಹಾಪ್ರಭು ಮಂದಿರದಲ್ಲಿ ನಡೆಯುತ್ತಿದ್ದವು.

ದಿನಾಂಕ 25-3-1964 ರಂದು ಚೈತನ್ಯಮತ ಸಂಪ್ರದಾಯಾಚಾರ್ಯ ಮಹಾತ್ಮಾ ಗೋಸ್ವಾಮಿಯವರು ಅತ್ಯದ್ಭುತ ಮೆರವಣಿಗೆಯೊಂದಿಗೆ ಶ್ರೀಪಾದರನ್ನು ಸ್ವಾಗತಿಸಿದರು. ಅಂದಿನ ಆ ಸನ್ಮಾನ ಕಾರ್ಯಕ್ರಮವೂ ವೃಂದಾವನದ ಸುಪ್ರಸಿದ್ಧ ರಾಧಾರಮಣ ಮಂದಿರದಲ್ಲಿ ನಡೆಯಿತು. ಈ ರೀತಿಯ ವೈಭವದ ಮೆರವಣಿಗೆ ವೃಂದಾವನದಲ್ಲೇ ಮೊದಲಬಾರಿಯಾಗಿತ್ತು. ಗೋಸ್ವಾಮಿಯವರು ಶ್ರೀಪಾದರಿಗೆ ಸನ್ಮಾನ ಪತ್ರವನ್ನು ಅರ್ಪಿಸಿದರು. ಸನ್ಮಾನಕ್ಕುತ್ತರವಾಗಿ ಮಾತನಾಡಿದ ಶ್ರೀಪಾದರು ಮಧ್ವಸಿದ್ಧಾಂತದ ಸಾರವನ್ನು ಬೋಧಿಸಿ ಆ ಮಾರ್ಗದಿಂದಲೇ ಆತ್ಮೋದ್ಧಾರವಾಗುವುದೆಂದು ಅಪ್ಪಣೆ ಕೊಡಿಸಿದರು.

ಶ್ರೀಪಾದರ ಉತ್ತಮ ವ್ಯಕ್ತಿತ್ವದಿಂದ ಪ್ರಭಾವಿತರಾದ ವೃಂದಾವನದ ಸುಪ್ರಸಿದ್ಧಮಹಾತ್ಮರುಗಳಾದ ಓಡಿಯಾಬಾಬ ಜ್ಞಾನಗಮಟೆಯವರು, ಶ್ರೀಹರಿ ರಾಮದಾಸ ಶಾಸ್ತ್ರಿಯವರು. ಮೊದಲಾದವರು ಶೋಭಾಯಾತ್ರೆಯೊಂದಿಗೆ ಶ್ರೀಪಾದರನ್ನು ತಮ್ಮ ತಮ್ಮ ಆಶ್ರಮಗಳಿಗೆ ಬರಮಾಡಿಕೊಂಡರು. ಅವರನ್ನು

ಸತ್ಕರಿಸಿದರು. ಧನ್ಯತಾಭಾವವನ್ನು ಹೊಂದಿದರು. ವಿಶೇಷವಾಗಿ ಶ್ರೀಹರಿರಾಮದಾಸ ಶಾಸ್ತ್ರಿಗಳು ತಮ್ಮದಾದ ಮಾಧವಾಶ್ರಮವನ್ನು ಶ್ರೀಪಾದರಿಗೆ ದಾನಮಾಡು ವುದಾಗಿ ಘೋಷಿಸಿದರು ದಾನವಿತ್ತರು. ಈ ಆಶ್ರಮದ ಶಿಷ್ಯರ ಸಂಖ್ಯೆ ಸುಮಾರು ಐದಾರು ಸಾವಿರ ಜನರು. ಈ ಆಶ್ರಮದಲ್ಲಿ ಪ್ರತಿವರ್ಷವೂ ಶ್ರೀಮಧ್ವನವಮಿ ಉತ್ಸವವನ್ನು ಅತ್ಯಂತ ವೈಭವದಿಂದ ಆಚರಿಸುತ್ತಾ ತಾವು ಮಾಧ್ವರೆಂಬುವುದನ್ನು ವ್ಯಕ್ತಪಡಿಸಿರುವರು. ಈ ಆಶ್ರಮ ಗೋವರ್ಧನ ಪರ್ವತದ ಪರಿಕ್ರಮಮಾರ್ಗದಲ್ಲಿ ಇರುವುದು.

ವೃಂದಾವನದಿಂದ 40 ಮೈಲಿ ದೂರದಲ್ಲಿ ಓಟಾ ಎಂಬ ಪುಟ್ಟ ಹಳ್ಳಿ. ಆ ಗ್ರಾಮಸ್ಥರಿಗೆ ಅತ್ಯಂತ ಭಕ್ತಿಪ್ರೇಮ ನಮ್ಮ ಶ್ರೀಪಾದರಲ್ಲಿ. ಅವರನ್ನು ತಮ್ಮಲ್ಲಿಗೆ ಬರಮಾಡಿ ಕೊಂಡರು. ಸಕಲಮರ್ಯಾದೆಯೊಂದಿಗೆ ಅದ್ಭುತ ಮೆರವಣಿಗೆಯಲ್ಲಿ ಶ್ರೀಪಾದರು ಅವರ ಬರುವಿನಿಂದ ಅವರನ್ನೆಲ್ಲ ಹರಸಿದರು ವಾತ್ಸಲ್ಯಪೂರ್ಣ ಅರಳುಗಣ್ಣಿನ ನೋಟದಲ್ಲಿ. ಮುಳಿಗಿಸಿದರು ತಮ್ಮ ವಚನಾಮೃತದ ಹೊಳೆಯಲ್ಲಿ. ಸ್ತ್ರೀ ಪುರುಷ ಭಕ್ತರು ಸೇರಿದ್ದರು ಸಾವಿರವನ್ನೂ ಮೀರಿದ ಸಂಖ್ಯೆಯಲ್ಲಿ.

ವೃಂದಾವನಕ್ಕಿಂತ 21 ಮೈಲು ದೂರದಲ್ಲಿ ಮತ್ತೊಂದು ಗ್ರಾಮ ಹಾಥರಸ. ಆಗ್ರಾಮಸ್ಥರು ಶ್ರೀಪಾದರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಹೊಂದಿದರು ಎಲ್ಲಿ ಇಲ್ಲದ ಸಂತಸ. ಆ ಗ್ರಾಮದ ಜನರು ಶ್ರೀಮದಾಚಾರ್ಯರ ಭಾವಚಿತ್ರವನ್ನೂ ಹಾಗೂ ಶ್ರೀಪಾದರನ್ನೂ ರಜತ ರಥದಲ್ಲಿ ಕುಳ್ಳಿರಿಸಿ ಅದ್ದೂರಿಯ ಮೆರವಣಿಗೆಯನ್ನೂ ಮಾಡಿದರು. ಶ್ರೀಪಾದರಲ್ಲಿರುವ ತಮ್ಮ ಭಕುತಿಯನ್ನು ತೋರಿದರು. ಶ್ರೀಪಾದರು ಈ ಸಂದರ್ಭದಲ್ಲಿ ಶ್ರೀಮದಾಚಾರರ್ಯರ ಭಕ್ತಿಮಾರ್ಗವನ್ನು ವಿವರಿಸಿದರು.

ಗೋವರ್ಧನ ಪರ್ವತದಲ್ಲಿ ಯಜ್ಞ ನಿಮಿತ್ತವಾಗಿ ಅನ್ನ ಕೋಟಿ ಕಾರ್ಯಕ್ರಮವೂ ಇತ್ತು. ಈ ಕಾರ್ಯಕ್ರಮದಲ್ಲಿ 56 ವಿಧ ವಿಧ ಭಕ್ಷ್ಯಗಳನ್ನು ಮಾಡಿ ದೇವರಿಗೆ ಸಮರ್ಪಿಸಿ ಸಹಸ್ರಾರು ಭಕ್ತರಿಗೆ ಹಂಚಲಾಯಿತು. ಈ ಸಂದರ್ಭದಲ್ಲಿ ಶ್ರೀಪಾದರು ದ್ವಾಪರಯುಗದಲ್ಲಿ ಶ್ರೀಕೃಷ್ಣನು ಗೋಪಾಲಕರಿಂದ ಗೋವರ್ಧನಪೂಜೆಯನ್ನು ಮಾಡಿಸಿದ ಮಹಾತ್ಮ್ಯವನ್ನು ತಿಳಿಸಿದರು. ಅನಂತರ ಅನೇಕ ಸಂಘಸಂಸ್ಥೆಗಳು ಭಕ್ತರು ಶ್ರೀಪಾದರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಪಾದಪೂಜೆಯನ್ನು ಮಾಡಿ ಆಶೀರ್ವಾದಗಳನ್ನು ಪಡೆದರು.

ಅಂದಿಗೆ ಮೂರುವರೆ ದಶಕಗಳ ಹಿಂದೆ ಶ್ರೀಸತ್ಯಧ್ಯಾನತೀರ್ಥರಿಗೂ ಈ ರೀತಿಯ ಸತ್ಕಾರಗಳು ವೃಂದಾವನದ ಪರಿಸರದಲ್ಲಿ ನಡೆದಿದ್ದು ಅದನ್ನು ಅಲ್ಲಿಯ ಹಿರಿಯರು ಹೇಳಿದರು. ಅಷ್ಟು ವರ್ಷಗಳ ನಂತರ ಅವರ ನೆಚ್ಚಿನ ಶಿಷ್ಯರಾದ ಶ್ರೀವಿದ್ಯಾಮಾನ್ಯತೀರ್ಥರಿಗೆ ಆ ಗೌರವ ನಡೆದುದು ಒಂದು ಪೂರ್ವಯೋಗವೇ ಎಂದು ಉದ್ಗರಿಸುತ್ತಿದ್ದರು. ಅಖಂಡ ಸಂಕೀರ್ತನ ಯಜ್ಞದಲ್ಲಿ ಭಾಗವಹಿಸಿದ ಸಹಸ್ರಾರು ಜನರು ತಮ್ಮ ತಮ್ಮ ಪ್ರದೇಶಗಳಿಗೂ ಬರುವಂತೆ ಶ್ರೀಪಾದರನ್ನು ಪ್ರಾರ್ಥಿಸಿದರು. ಒತ್ತಾಯಿಸಿದರು.

ಹೀಗೆ ಶ್ರೀಪಾದರು ತಮ್ಮ ಅದ್ಭುತ ವಿದ್ವತ್ತು, ತಪಃಶಕ್ತಿ, ಮುಗ್ಧತೆ, ಕಾರುಣ್ಯ, ಔದಾರ್ಯ ಮೊದಲಾದ ಗುಣಗಳ ಬಲದಿಂದ ಪ್ರಕರಗೊಂಡ ಮುಖ ವರ್ಚಸ್ಸಿನಿಂದ ಹಾಗೂ ಗಂಭೀರ ಮಧುರ ವಚನಾಮೃತದಿಂದ ಜನರನ್ನು

ಪ್ರಭಾವಿತರನ್ನಾಗಿ ಮಾಡುತ್ತಿದ್ದರು. ಅವರ ಸುಸಂಸ್ಕೃತ ಭಾಷೆಯ ಹಿಂದೀ ಅನುವಾದವನ್ನು ಅವರ ಶಿಷ್ಯರಾದ ಶ್ರೀ ಗಡಚಿಂತೀ ರಾಮಾಚಾರ್ಯರು ಮಾಡುತ್ತಿದ್ದರು. ಇದು ಉತ್ತರಭಾರತದಲ್ಲಿ ಶ್ರೀಪಾದರ ಪ್ರಭಾವಕ್ಕೆ ಒಳಗಾದ ಜನರ ಭಕ್ತಿಗೆ ಒಂದು ಪುಟ್ಟ ನಿದರ್ಶನ.

## ಸನಾತನಧರ್ಮರಕ್ಷಣ ದೀಕ್ಷೆ

ಸಮಾಜದಲ್ಲಿ ಸನಾತನಧರ್ಮದ ಜಾಗೃತಿಗಾಗಿ ಶ್ರೀವಿದ್ಯಾಮಾನ್ಯತೀರ್ಥರು ಕೈಗೊಂಡ ಯೋಜನೆಗಳು ಅನೇಕ ವಿಧ, ಪುಸ್ತಕಪ್ರಕಾಶನ ಪ್ರಸಿದ್ಧ ವಿದ್ವಾಂಸರ ಉಪನ್ಯಾಸಗಳು, ಧಾರ್ಮಿಕ ಶಿಕ್ಷಣ ಶಿಬಿರಗಳು, ಶಾಲಾ-ಕಾಲೇಜು ವಿದ್ಯಾರ್ಥಿಗಳಿಗೆ ಪರೀಕ್ಷೆ ಮೊದಲಾದವುಗಳನ್ನು ನಡೆಸುತ್ತಿದ್ದರು.

**ಪುಸ್ತಕ ಪ್ರಕಾಶನ** : ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳು ಎಲ್ಲರಿಗೂ ದೊರೆಯುವಂತೆ ಮಾಡಿದ್ದಲ್ಲದೆ ಆ ಗ್ರಂಥಗಳಿಗೆ ಟೀಕೆಗಳನ್ನು ಬರೆದ ಶ್ರೀಟೀಕಾಕೃತ್ಪಾದರ ಗ್ರಂಥಗಳು ಹಾಗೂ ಅವುಗಳ ವ್ಯಾಖ್ಯಾನಗಳೂ ಜಿಜ್ಞಾಸುಗಳನ್ನು ತಲುಪುವಂತೆ ಮಾಡಿದ ಮಹಾತ್ಮರು ಈ ಗ್ರಂಥಗಳ ಮುದ್ರಣಕ್ಕಾಗಿ 1969ರಲ್ಲಿ ತಮ್ಮ ಮಠದಲ್ಲಿ 'ಧರ್ಮಬೋಧ' ಎಂಬ ಮುದ್ರಣಾಲಯವನ್ನು ಸ್ಥಾಪಿಸಿದರು. ಆ ಮೂಲಕ ಗ್ರಂಥಗಳನ್ನು ಬಿಡುಗಡೆಗೊಳಿಸಿದರು. ಈ ಮಹಾಕಾರ್ಯಕ್ಕೆ ಮಾಧ್ವ ಸಮಾಜ ಅವರಿಗೆ ಚಿರಋಣಿ. ಈ ಗ್ರಂಥಗಳಲ್ಲದೆ, ಇನ್ನೂ ವಿಧವಿಧ ಗ್ರಂಥಗಳನ್ನು ಪ್ರಕಟಿಸಿದರು. ತಮ್ಮ ಪರ್ಯಾಯ ಕಾಲದಲ್ಲಿ 'ವಿಷ್ಣು ಸಹಸ್ರ ನಾಮ'ದ ಅರ್ಥವನ್ನು, ಅದರ ಮೇಲೆ ಬರುವ ಜಿಜ್ಞಾಸೆ ಹಾಗೂ ಉತ್ತರಗಳನ್ನು ಸ್ವತಃ ತಾವೇ ಬರೆದು ನಾಲ್ಕು ಸಂಪುಟಗಳಲ್ಲಿ ಪ್ರಕಟಪಡಿಸಿದರು. ಸಾಮಾನ್ಯ ಜನತೆಯ ಧಾರ್ಮಿಕ ತಿಳುವಳಿಕೆಗಾಗಿ ಪುಟ್ಟ ಪುಟ್ಟ ಕನ್ನಡದ ಕೃತಿಗಳನ್ನು ತಾವೇ ಬರೆದರು. ನಾಸ್ತಿಕ್ಯವಾದ ನಿರಾಸ, ಧರ್ಮಾಚರಣೆಯ ರಹಸ್ಯ, ಮಧ್ವಸಿದ್ಧಾಂತ, ಗಾಯತ್ರಿ ಗಾಂಭೀರ್ಯ ಮೊದಲಾದ ಕೃತಿಗಳನ್ನು ಬಿಡುಗಡೆಗೊಳಿಸಿದರು. ಶಾಸ್ತ್ರಪ್ರಪಂಚದಲ್ಲಿಯೂ ತಮ್ಮ ಲೇಖನ ಸಾಮರ್ಥ್ಯವನ್ನು ಪ್ರಚುರ ಪಡಿಸಿರುವರು.

ಅವರ ಪ್ರಸಿದ್ಧ ಕೃತಿಗಳು : 1. ವಿಷ್ಣು ಸಹಸ್ರನಾಮ ( 4 ಸಂಪುಟದಲ್ಲಿ), 2. ವಿಷ್ಣು ಸರ್ವೋತ್ತಮತ್ವ ವಾಯುಜೀವೋತ್ತಮತ್ವ, 3. ಕೃಷ್ಣಾಷ್ಟಮಿ ವ್ರತ, 4. ಸಭಾ ಸಾರೋದ್ಧಾರ, 5. ಗಾಯತ್ರೀ ಗಾಂಭೀರ್ಯ, 6. ಗೀತೋಪನ್ಯಾಸಗಳು, 7. ಗೀತಾಗಾಂಭೀರ್ಯ, 8. ಧರ್ಮಾಚರಣೆಯ ರಹಸ್ಯ, 9. ಅದ್ವೈತ ತತ್ವಸುಧಾಸಮೀಕ್ಷಾ (ಸಂಸ್ಕೃತ), 10. ತತ್ವಮಾರ್ತಾಂಡ ವಿಮರ್ಶೆ (ಸಂಸ್ಕೃತ), 11. ದ್ವೈತಸ್ಯಅಪೂರ್ವತಾ (ಸಂಸ್ಕೃತ), 12. ದ್ವೈತ ವಿಜಯ (ಸಂಸ್ಕೃತ), 13. ಮಾಯಾವಾದ ನಿರಾಸನಾನಾರ್ಥಮಾಲಿಕಾ (ಸಂಸ್ಕೃತ), 14. ಮಧ್ವ ಸಿದ್ಧಾಂತ ಸಾರ.

**ಧಾರ್ಮಿಕ ಉಪನ್ಯಾಸಗಳು** : ವೈದಿಕ ತತ್ವಗಳನ್ನು ಜನಮನ ಮುಟ್ಟಿಸುವಂತೆ, ಧಾರ್ಮಿಕ ಉಪನ್ಯಾಸಗಳನ್ನು ಅಲ್ಲಲ್ಲಿ ಆಗಾಗ ಮಾಡಿಸುತ್ತಿದ್ದರು. ರಾಮಾಯಣ, ಮಹಾಭಾರತ, ಹರಿವಂಶ ಮೊದಲಾದ ಗ್ರಂಥಗಳ ಕುರಿತು ಶ್ರೀಬನ್ನಂಜೆ ಗೋವಿಂದಾಚಾರ್ಯ, ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯ, ಶ್ರೀ ಮಳಗಿ ಜಯತೀರ್ಥಚಾರ್ಯ, ಶ್ರೀ ಗುರು ವೆಂಕಟಾಚಾರ್ಯ

ಮೊದಲಾಗಿ ಅನೇಕ ವಿದ್ವಾಂಸರಿಂದ ಉಪನ್ಯಾಸಗಳನ್ನು ತಿಂಗಳುಗಟ್ಟಲೆ ದೇಶದ ಮಹಾನಗರಗಳಲ್ಲಿ ಮಾಡಿಸುತ್ತಿದ್ದರು. ಅವರನ್ನು ಹತ್ತಾರು ಸಾವಿರ ರೂಗಳ ಸಂಭಾವನೆ ನೀಡಿ ಸನ್ಮಾನಿಸುತ್ತಿದ್ದರು.

**ಧಾರ್ಮಿಕ ಶಿಕ್ಷಣ ಶಿಬಿರಗಳು** : ಸುಮಾರು 3-4 ದಶಕಗಳ ಹಿಮದೆ ಬ್ರಾಹ್ಮಣ ಸಂಸ್ಕಾರಗಳನ್ನು ತಿಳಿಸುವ, ಅಭ್ಯಾಸ ನೀಡಿ ತರಬೇತಿಗೊಳಿಸುವ ವಯಸ್ಕರ ಶಿಕ್ಷಣ ಶಿಬಿರಗಳನ್ನು ಸೋದೆ, ಮಹಿಷಿ, ಕೊಯಂಬತ್ತೂರು ಮೊದಲಾದ ಕ್ಷೇತ್ರಗಳಲ್ಲಿ ನಡೆಸುತ್ತಿದ್ದರು. 1990ರಿಂದ ಅನೇಕ ವರ್ಷಗಳವರೆಗೆ ಬೆಂಗಳೂರಿನಲ್ಲಿರುವ 'ರಾಮಧಾಮ' ಎಂಬ ಪಲಿಮಾರು ಮಠದ ಸಂಸ್ಥೆಯಲ್ಲಿ ಪ್ರತಿವರ್ಷವೂ ಮಕ್ಕಳಿಗಾಗಿ ಬೇಸಿಗೆಯ ಧಾರ್ಮಿಕ ಶಿಕ್ಷಣ ಶಿಬಿರಗಳನ್ನು ನಡೆಸುತ್ತಿದ್ದರು. ಅದರಲ್ಲಿ ನೂರಿನ್ನೂರು ವಿದ್ಯಾರ್ಥಿಗಳಿಗೂ ಮಿಕ್ಕಿ ವಿದ್ಯಾರ್ಥಿಗಳಿರುತ್ತಿದ್ದರು. ಉತ್ತಮ ಉಚಿತಭೋಜನ, ವಸತಿ ವ್ಯವಸ್ಥೆಯೊಂದಿಗೆ ಶ್ರೇಷ್ಠ ವಿದ್ವಾಂಸರ ಉಪನ್ಯಾಸಗಳನ್ನು ಮಾಡಿಸುತ್ತಿದ್ದರು. ಅಂತಹ ಶಿಬಿರಗಳಲ್ಲಿ ತರಬೇತಿ ಹೊಂದಿ ಉತ್ತಮ ಸಂಸ್ಕಾರವನ್ನು ಪಡೆದ ಮಂದಿ ಬಹಳ ಅವರೆಲ್ಲರೂ ಇಂದು ಉನ್ನತ ಹುದ್ದೆಯಲ್ಲಿದ್ದು ಆ ಶಿಬಿರಗಳನ್ನು ನೆನೆಯುವರು.

**ಪ್ರತಿಭಾ ಪರೀಕ್ಷೆ :** ಮುಂದಿನ ಭಾರತದ ಪ್ರಜೆಗಳಾಗುವ ಇಂದಿನ ಮಕ್ಕಳಲ್ಲಿ ನಮ್ಮ ದೇಶದ ಇತಿಹಾಸ, ಧರ್ಮಪ್ರಜ್ಞೆ ಮೂಡುವುದಕ್ಕಾಗಿ ಶ್ರೀಪಾದರರು ತಮ್ಮ ಆದರ್ಶಗುರುಕುಲ ಟ್ರಸ್ಟ್‌ನ ವತಿಯಿಂದ ಶಾಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ 'ಆಚಾರ್ಯ ಮಧ್ವ 'ಹಾಗೂ 'ಮಧ್ವರಾಮಾಯಣ' ಎಂಬ ಪರೀಕ್ಷೆಗಳನ್ನು ನಡೆಸುತ್ತಿದ್ದರು. ಪರೀಕ್ಷೆಯಲ್ಲಿ ವಿಶಿಷ್ಟವಾಗಿ ಉತ್ತೀರ್ಣರಾದವರಿಗೆ ವಿಶೇಷ ಪ್ರತಿಭಾ ಪುರಸ್ಕಾರವನ್ನು ಮಾಡಿ, ಭಾಗವಹಿಸಿದ ಎಲ್ಲ ವಿದ್ಯಾರ್ಥಿಗಳಿಗೆ ಉತ್ತೇಜನಕ್ಕಾಗಿ ಪ್ರಮಾಣ ಪತ್ರದೊಂದಿಗೆ ಬಹುಮಾನ ವನ್ನೂ ನೀಡುತ್ತಿದ್ದರು.

**ಪಾವನಯಾತ್ರೆ** : ಭಾರತೀಯರಿಗೆ, ಕನ್ನಡಿಗರಿಗೆ, ಅದರಲ್ಲೂ ಮಾಧ್ವರಿಗೆ ಶ್ರೀಮದಾಚಾರ್ಯರ ವಿಶೇಷ ಪರಿಚಯವಾಗುವುದಕ್ಕೋಸ್ಕರ, ಅವರಲ್ಲಿ ಭಕ್ತಿ ಶ್ರದ್ಧೆ ಅಭಿವೃದ್ಧಿಯಾಗುವುದಕ್ಕೋಸ್ಕರ, ಆಚಾರ್ಯರು ನಡೆದಾಡಿದ, ತಮ್ಮ ಸರ್ವವಿಧ ಶಕ್ತಿಯನ್ನು ತೋರಿದ ಕ್ಷೇತ್ರಗಳನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆಯುವ ಒಂದು ವಾರದ ಯಾತ್ರೆಯನ್ನು 1996ರಲ್ಲಿ ಆರಂಭಿಸಿದರು. ಆ ಯಾತ್ರೆ, ಅಡೂರು, ದಂಡತೀರ್ಥ, ಕಟ್ಟಿಲ, ಅಂಬುತೀರ್ಥ, ಕಾಂತಾವರ, ಕೋಡಿಪ್ಪಾಡಿ, ಕಾವುಮಠ ಕಣ್ವತೀರ್ಥ, ಮಧ್ವ ವಿಷ್ಣುಮಂಗಲ, ಮಧೂರು ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸುವ, ತಿಳಿಯುವ ಯಾತ್ರೆ. ಈ ಯಾತ್ರೆಯಲ್ಲಿ ನೂರಾರು ಭಕ್ತರು ಪಾಲ್ಗೊಂಡು ಆಚಾರ್ಯರ ಕುರಿತಾದ ವಿದ್ವಾಂಸರ, ಶ್ರೀಪಾದರ ಉಪನ್ಯಾಸ, ಜೊತೆಯಲ್ಲಿ ಸುಮಧುರ ಭಜನಾ ಕಾರ್ಯಕ್ರಮವೂ ಈ ಯಾತ್ರೆಯಲ್ಲಿ ಅಡಕವಾಗಿದೆ. ಒಂದು ಬಾರಿ ಈ ಯಾತ್ರೆಗೆ ಬಂದ ಭಕ್ತ ಎಂದಿಗೂ ಆ ಮಧುರ ಅನುಭವವನ್ನು ಮರೆಯಲಾರ. ಈ ಪಾವನ ಯಾತ್ರೆಯ ಸ್ಫೂರ್ತಿ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು 4-5 ವರ್ಷಗಳ ಯಾತ್ರೆಯಲ್ಲಿ ಅವರು ಪ್ರಾಯಃ ಉಪಸ್ಥಿತರಿದ್ದು ಅವರ ಶಿಷ್ಯರಾದ ಶ್ರೀ ವಿದ್ಯಾಧೀಶ

ತೀರ್ಥರು ನೇತೃತ್ವವನ್ನು ವಹಿಸುತ್ತಿದ್ದರು. ಮುಂದೆಯೂ ಅವರೇ ಈ ಯಾತ್ರೆಯ ನೇತಾರರಾಗಿ ಜನರಿಗೆ ಆಚಾರ್ಯರ ಮಹಿಮೆಯ ಜ್ಞಾನಮೂಡುವಂತೆ ಅನುಗ್ರಹಿಸಲಿರುವರು.

ತಾವು 90ರ ಅಂಚಿಗೆ ಬಂದರೂ, ಅಶಕ್ತರಾದರೂ ಸ್ವತಃ ತಾವೇ ರಾಮನಾಮವನ್ನು ಬರೆದು ಪೂರ್ಣಪುಸ್ತಕವನ್ನು ಪೂರೈಸಿದರು. ಅವರ ಆ ಸ್ಫೂರ್ತಿ ಎಲ್ಲರಿಗಾದರ್ಶ.

**ಪವಮಾನ ಹೋಮ - ವಿಶ್ವಕ್ಷೇಮ :** 1995-1997 ರಲ್ಲಿ ಘಟಿಕಾಚಲದ ಶ್ರೀನರಸಿಂಹ ಹಾಗೂ ಶ್ರೀಪ್ರಾಣದೇವರ ಸನ್ನಿಧಿಯಲ್ಲಿ ಮಧ್ವರಾದ್ಧಾಂತ ಸಂವರ್ಧಕ ಸಭೆಯನ್ನು ನಡೆಸಿದರು. ಆ ಸಂದರ್ಭದಲ್ಲಿ 108 ಪವಮಾನ ಹೋಮಗಳನ್ನು ಋತ್ವಿಜರ ಮೂಲಕ ನಡೆಸಿದರು. ವೇದ ಮಂತ್ರಗಳಲ್ಲಿ 'ಪವಮಾನ' ಮಂಡಲವನ್ನು 'ಭಗವಂತನಿಗೆ ನೀರಾಜನ'ವೆಂದು ಸ್ತುತಿಸಿರುವರು. ಅಂತಹ ಉತ್ಕೃಷ್ಟ ಹೋಮಗಳನ್ನು ಮಾಡಿಸಿ ಜಗತ್ತಿನ ಕ್ಷೇಮವನ್ನು ಸಾಧಿಸಿದರು. ಆ ರೀತಿಯ 108 ಪವಮಾನ ಹೋಮಗಳು ಪ್ರತಿ ವರ್ಷವೂ ಫಲಿಮಾರಿನ ಹನುಮಜ್ಜಯಂತೀ ಮಹೋತ್ಸವದ ಸಂದರ್ಭದಲ್ಲಿ ನಡೆಯುವುವು. ಅದರ ನೇತಾರರು ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು.

**ಪಾರಂತೀದೇವಾಲಯದಲ್ಲಿ ಪೂಜಾವ್ಯವಸ್ಥೆ :** ಪಾಂಡವರು ಐದು ಲಿಂಗಗಳಲ್ಲಿ ವಾಸುದೇವಾದಿ ಪಂಚರೂಪಗಳನ್ನು ಪ್ರತಿಷ್ಠಾಪಿಸಿ ಪೂಜೆ ಮಾಡಿದರು. ಆ ಕ್ಷೇತ್ರ, ಪಾರಂತಿ, ಅಲ್ಲಿಗೆ ಶ್ರೀ ಮದಾಚಾರ್ಯರು ಬಂದಾಗ ಪೂಜೆಯ ವ್ಯವಸ್ಥೆಯು ಇರಲಿಲ್ಲ. ಆಚಾರ್ಯರು ಅಲ್ಲಿಯೇ ಇದ್ದು ಅರ್ಧ ದಿನದಲ್ಲಿ ಊರಿನ ಹಿರಿಯರನ್ನು ಕರೆದು ಪೂಜೆಯ ವ್ಯವಸ್ಥೆಯನ್ನು ಮಾಡಿದರು. ಎಲ್ಲ ಉತ್ಸವಗಳೂ ನಡೆಯುವಂತೆ ಮಾಡಿದರು. ಆದರೆ ಇತ್ತೀಚಿನ ದಿನಗಳಲ್ಲಿ ಮತ್ತೆ ಪೂಜೆಯು ಸರಿಯಾಗಿ ನಡೆಯುತ್ತಿರಲಿಲ್ಲ. ಅಲ್ಲಿಗೆ ಪಾವನ ಯಾತ್ರೆಗೋಸ್ಕರ ಶ್ರೀ ವಿದ್ಯಾಮಾನ್ಯತೀರ್ಥರು ಭೇಟಿಯಿತ್ತರು. ಅವ್ಯವಸ್ಥೆಯನ್ನು ತಿಳಿದು ಖಿನ್ನರಾಗಿ, ಪುನಃ ಪೂಜೆಯ ವ್ಯವಸ್ಥೆಯನ್ನು ಸ್ಥಾಪಿಸಿದರು. 'ಪಾರಂತಿ ದೇವಸ್ಥಾನ ಸಮಿತಿ'ಯೊಂದನ್ನು ಸ್ಥಾಪಿಸಿದರು. ನಿಧಿಯನ್ನು ಸಂಗ್ರಹಿಸಿ ತಿಂಗಳಿಗೆ ಸುಮಾರು 1500/- ರೂಗಳ ಬಡ್ಡಿ ಬರುವಂತೆ ಮಾಡಿ ದೇವಸ್ಥಾನದ ಪೂಜಾವೆಚ್ಚಕ್ಕಾಗಿ ವ್ಯವಸ್ಥೆಮಾಡಿದರು. ಹಾಗೂ ಆ ದೇವಸ್ಥಾನದ ಅರ್ಚಕರಿಗೆ ಆ ಪೂಜೆಯ ಸಂದರ್ಭದಲ್ಲಿ ಆ 5 ಲಿಂಗಗಳೊಳಗೆ ವಾಸುದೇವಾದಿ ಭಗವದ್ರೂಪಗಳನ್ನು ಚಿಂತಿಸಬೇಕು ಹೊರತು ರುದ್ರ ದೇವರನ್ನಲ್ಲ ಎಂದು ಬೋಧಿಸಿದರು. ಆದೇಶಿಸಿದರು. ಇದನ್ನೆಲ್ಲ ಗಮನಿಸಿದರೆ 'ಸನಾತನಧರ್ಮಪರಿಪಾಲನಾ ಟ್ರಸ್ಟ್', 'ಸದಾಚಾರಾಭಿವೃದ್ಧಿ ' ಇತ್ಯಾದಿ ಸಂಸ್ಥೆಗಳನ್ನು ಹುಟ್ಟು ಹಾಕಿದ ಶ್ರೀಪಾದರಲ್ಲಿ ಧಾರ್ಮಿಕ ಕಳಕಳಿ, ವೈಷ್ಣವ ದೀಕ್ಷೆಯು ಎಷ್ಟಿದೆ ಎಂಬುದು ಮನವರಿಕೆಯಾಗುವುದು.



# ತೀರ್ಥಕ್ಷೇತ್ರಗಳಲ್ಲಿ ಶ್ರೀಪಾದರು

ಭಾರತದ ಪ್ರಸಿದ್ಧ ಎಲ್ಲ ಕ್ಷೇತ್ರಗಳ ದರ್ಶನವನ್ನು ಪಡೆದ ಸಾಧಕರು ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು. ಅವರು ಒಂದೊಂದು ಕ್ಷೇತ್ರದಲ್ಲಿ ಒಂದೊಂದು ವಿಧವಾಗಿ ಭಗವಂತನ ಸೇವೆಯನ್ನು ಮಾಡಿದವರು.

1) ತಿರುಮಲೆಯ ಶ್ರೀ ಶ್ರೀನಿವಾಸ ಪರಬ್ರಹ್ಮನ ಪರಮ ಭಕ್ತರಾದ ಶ್ರೀ ಶ್ರೀಪಾದರು ತಮ್ಮ ದ್ವಿತೀಯ ಪರ್ಯಾಯ ಸಂಚಾರದಲ್ಲಿ ತಿರುಮಲೆಗೆ ಬಂದರು. ಅಂದು ಶುಕ್ರವಾರ, ಶ್ರೀ ಶ್ರೀನಿವಾಸನ ಅಭಿಷೇಕವನ್ನು ವೀಕ್ಷಿಸಿ ಆನಂದ ತುಂದಿಲರಾದ ಶ್ರೀಪಾದರು ಹತ್ತಾರು ಕೇಜಿ ಬೆಳ್ಳಿಯ ಎರಡು ದೊಡ್ಡ ತೂಗು ದೀಪಗಳನ್ನು ಹಾಗೂ ಬೃಹತ್ ಸಾಲಿಗ್ರಾಮ ಸಂಪುಟವನ್ನೂ ಸಮರ್ಪಿಸಿದರು. ಅವರೊಂದಿಗೆ ಅವರ ಶಿಷ್ಯರಾದ ಶ್ರೀ ಶ್ರೀವಿದ್ಯಾಧೀಶ ತೀರ್ಥರೂ ಇದ್ದರು. ದೇವಸ್ಥಾನದ ಅಧಿಕಾರಿಗಳು ಆ ದೀಪಗಳಲ್ಲಿ ಶ್ರೀಪಾದರ ನಾಮಧೇಯವನ್ನು ಉಲ್ಲೇಖಿಸಿ ದಾಖಲಿಸಿಕೊಂಡರು. ನಾವು ಇಂದಿಗೂ ತಿರುಮಲೆಯ ಶ್ರೀನಿವಾಸನ ಸನ್ನಿಧಿಯಲ್ಲಿ ಆ ಬೆಳ್ಳಿಯ ತೂಗುದೀಪಗಳನ್ನು ಹಾಗೂ ಸಂಪುಟವನ್ನು ಕಾಣಬಹುದು.

2) ಶ್ರೀಮುಷ್ಣಕ್ಷೇತ್ರದ ಶ್ರೀವರಾಹ ಸ್ವಾಮಿಯ ದೇವಸ್ಥಾನದ ಜೀರ್ಣೋದ್ಧಾರದ ಸಂದರ್ಭದಲ್ಲಿ ಆ ದೇವಸ್ಥಾನದ ರಾಜಗೋಪುರದ ಜೀರ್ಣೋದ್ಧಾರ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ಹೆಸರಿನಲ್ಲಿ ನಡೆಯಿತು. ಶ್ರೀವರಾಹ ಸ್ವಾಮಿಯ ಸೇವೆಯಾಯಿತು. ಅದು ಅವರ 75 ವರ್ಷಗಳ ಪೀಠಾರೋಹಣ ಅಮೃತ ಮಹೋತ್ಸವದ ಕೊಡುಗೆಯಾಗಿತ್ತು.

3) ಶ್ರೀರಂಗದ ರಂಗನಾಥದೇವಸ್ಥಾನದಲ್ಲಿ ಅತ್ಯಂತ ಪವಿತ್ರವಾದ, ವೈಕುಂಠದಲ್ಲಿರುವ ವಿರಜಾನದಿ ಸದೃಶವಾದ ಚಂದ್ರ ಪುಷ್ಕರಣಿಯ ಜೀರ್ಣೋದ್ಧಾರ ಹಾಗೂ 28 ಗೋಪುರಗಳಲ್ಲಿ ಕೆಲವು ಗೋಪುರಗಳ ಜೀರ್ಣೋದ್ಧಾರ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ಹೆಸರಿನಲ್ಲಿ ನೆರವೇರಿತು. ಅದೂ ಅವರ ಅಮೃತಮಹೋತ್ಸವದ ಉಡುಗೊರೆಯಾಗಿತ್ತು.

4)ತಾವುಶ್ರೀವಿಬುಧಪ್ರಿಯತೀರ್ಥ ಗುರುವರರೊಡನೆ ನಡೆದಾಡಿ ಅಭ್ಯಸಿಸಿ ಸಿದ್ಧಿಯನ್ನು ಪಡೆದ ಆಪ್ಯಾಯಮಾನ ಕ್ಷೇತ್ರವೆನಿಸಿದ ಘಟಿಕಾಚಲದಲ್ಲಿ ತಮ್ಮ ಗುರುಗಳ ಸ್ಮಾರಕವಾಗಿ ಶೀವಿಬುಧಪ್ರಿಯತೀರ್ಥಸಭಾಭವನ ಹಾಗೂ ಶ್ರೀರಘುಮಾನ್ಯತೀರ್ಥರ ಸ್ಮಾರಕವಾಗಿ ವಿಶ್ರಾಂತಿಗೃಹವನ್ನೂ ಸುಮಾರು 25 ಲಕ್ಷರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿ ಯೋಗಾಂಜನೇಯಾಂತರ್ಗತನಾದ ಯೋಗನರಸಿಂಹದೇವರಿಗೆ ಸಮರ್ಪಿಸಿದರು. ಕ್ಷೇತ್ರಕ್ಕೆ ಬರುವ ಭಕ್ತರಿಗೆ ಆಶ್ರಯವನ್ನಿತ್ತರು.

ಶ್ರೀಪಾದರ ಈ ಎಲ್ಲ ಸೇವೆಗಳಲ್ಲೂ ಚೆನ್ನೈಯ ಶ್ರೀರಾಮಪ್ರಸಾದರ ಪ್ರಮುಖ ಪಾತ್ರವಿತ್ತು ಶ್ರೀಪಾದರ ಮುಖಾಂತರ ಅಂತಹ ಸೇವೆಗಳನ್ನು ಸಲ್ಲಿಸುವ ಸೌಭಾಗ್ಯ ಅವರದಾಗಿತ್ತು.



# ಹರಿದಿನದೀಕ್ಷೆ

ಆರೊಂದು ನೂರು ವರುಷಗಳ ಹಿಂದೆ ಆಚಾರ್ಯರು ''ಹರಿಯೇ ಪರದೇವ''ನೆಂದು ಸಾಧಿಸಿದರು. ಸ್ಥಾಪಿಸಿದರು. ಅವನೊಲುಮೆಯಿಂದಲೇ ಭವಬಂಧನದಿಂದ ಮುಕ್ತಿ ನಿರ್ದುಷ್ಟಾನಂದ ಪ್ರಾಪ್ತಿ ಸಾಧ್ಯವೆಂದರು. ಆ ಒಲುಮೆಯನ್ನು ಗಳಿಸಲು ಹರಿದಿನ ತ್ರಯವೆಂಬ ವ್ರತವನ್ನಾಚರಿಸ ಬೇಕೆಂದರು. ಅದು ದಶಮೀ, ಏಕಾದಶೀ, ದ್ವಾದಶೀ ಎಂದು ಮೂರು. ದಶಮೀ,ದ್ವಾದಶಿಗಳಲ್ಲಿ ಒಪ್ಪತ್ತಿನ ಆಹಾರ, ಏಕಾದಶಿಯಂದು ಪೂರ್ಣನಿರ್ಜಲ ನಿರಾಹಾರ ವೆಂಬುದು ಆ ವ್ರತದ ಕಟ್ಟಾಕರಾರು. ಈ ದಿನದಂದು ಏನನ್ನಾದರೂ ತಿಂದರೂ ಕುಡಿದರೂ, ಆ ಪಾಪದ ಫಲ ಶಿಕ್ಷೆ ಬಹಳ ಜೋರು. ವೈದಿಕರ, ಅದರಲ್ಲೂ ವೈಷ್ಣವರ ಅನೇಕ ವ್ರತಗಳಲ್ಲಿ ಈ ವ್ರತವೇ ಮಹಾಮೇರು. ಅದನ್ನೇ 'ಸಕಲವ್ರತಗಳಿಲ್ಲವೂ ಏಕಾದಶೀವ್ರತದ ಹಿಂದೆ' ಎಂದು ಸಾರಿದರು ಶ್ರೀವಿಜಯದಾಸರು.

ಇಂತಹ ವ್ರತದ ಆಚರಣೆ ಎಲ್ಲರಲ್ಲಿದ್ದರೂ ನಿರಂತರ ವಾಗಿರುವುದೆಂದು ಹೇಳಲಾಗದು. ಮನೋ ದೌರ್ಬಲ್ಯದಿಂದ, ಅಥವಾ ದೈಹಿಕ ಅನಾರೋಗ್ಯದಿಂದ ಏಕಾದಶೀ ಉಪವಾಸ ವ್ರತವು ನಿಲ್ಲುವ ಸಂಭವವೂ ಇರುವುದು. ಎಂತಹ ಆಪತ್ತಿನಲ್ಲೂ ಅನಾರೋಗ್ಯದಲ್ಲೂ ಏಕಾದಶೀಯನ್ನು ಬಿಡದ ದೀಕ್ಷೆ ಅತಿ ಅಪರೂಪವಾಗಿ ಕಂಡುಬರುವುದು. ಅಂಥ ಅಪರೂವದ ಏಕಾದಶೀ ನೈರಂತರ್ಯದೀಕ್ಷೆ ಶ್ರೀವಿದ್ಯಾಮಾನ್ಯ ತೀರ್ಥರದು. ಎಂತಹ ಬೇಸಿಗೆ ಉರಿಯಬೇಗೆಯಿರಲಿ, ಎಂತಹ ದೈಹಿಕ ಅನಾರೋಗ್ಯವೇ ಇರಲಿ ಶ್ರೀವಾದರ ಏಕಾದಶೀ ಉಪವಾಸಮಾತ್ರ ತಪ್ಪದು. ಅವರ ಬಾಲ್ಯ,ಯೌವ್ವನ, ಮಧ್ಯದ ಹರೆಯದಲ್ಲಿ ಅವರ ಆ ಮಹಾವ್ರತ ತಪ್ಪಿಲ್ಲವೆನ್ನುವುದನ್ನು ಅವರ ಇಳಿವಯಸ್ಸಿನ ಏಕಾದಶೀಉಪವಾಸವು ಸೂಚಿಸುವುದು. ಎಂತಹ ಅನಾರೋಗ್ಯದ ಸ್ಥಿತಿಯಲ್ಲೂ ಅವರಿಂದ ಏಕಾದಶೀ ವ್ರತನಿಲ್ಲಲಿಲ್ಲವೆನ್ನುವದಕ್ಕೆ ಕೆಲವು ಸಣ್ಣ ದೃಷ್ಟಾಂತಗಳನ್ನು ದರ್ಶಿಸಲಾಗುವುದು.

1)1997 ಚಾತುರ್ಮಾಸ್ಯಕ್ಕಾಗಿ ಶ್ರೀಪಾದರು ಪಲಿಮಾರು ಗ್ರಾಮದ ಪಲಿಮಾರಿನಲ್ಲಿದ್ದರು. ಒಂದು ದಿನ ಜ್ವರವು

ಶ್ರೀಪಾದರನ್ನು ಬಾಧಿಸಿತು. ದಿನಗಳು ಕಳೆದರೂ ಗುಣಮುಖವಾಗದ ಅದು ಬೆಳೆಯುತ್ತಲೇ ಹೋಯಿತು. ವೈದ್ಯರು ಬಂದರು. ಶ್ರೀಪಾದರನ್ನುಪರೀಕ್ಷಿಸಿದರು. ಜ್ವರ ಉನ್ನತಮಟ್ಟದಲ್ಲಿತ್ತು. ವೈದ್ಯರು ಔಷಧವನ್ನೀಡಿದರು. ತಪ್ಪದೆ ದಿನನಿತ್ಯದಲ್ಲಿ ಅದನ್ನು ತೆಗೆದುಕೊಳ್ಳುವಂತೆ ನುಡಿದರು. ಶ್ರೀಪಾದರು 'ನಾಳೆ ಏಕಾದಶೀ' ಎಂದು ನುಡಿದರು. ಆದರೂ ವೈದ್ಯರು'ಈ ಉಪವಾಸದ ನಿಮಿತ್ತಔಷಧವನ್ನು ಸ್ವೀಕರಿಸದಿದ್ದರೆ ದೇಹಸ್ಥಿತಿ ಪೂರ್ಣ ಹದಗೆಡುತ್ತದೆ' ಎಂದು ಬಿರುನುಡಿದರು. ಶ್ರೀಪಾದರು ಆಗ ಮೌನವಾಗಿದ್ದರು. ವೈದ್ಯರು ತೆರಳಿದರು. ಮರುದಿನ ಏಕಾದಶೀ. ಉದಯವಾಯಿತು. ಅದಕ್ಕೂ ಪೂರ್ವದಲ್ಲಿಯೇ ಎದ್ದ ಶ್ರೀಪಾದರ ಸ್ನಾನ, ಆಹ್ನೀಕಗಳೆಲ್ಲವೂ ಯಥಾಕ್ರಮ ದಲ್ಲಿಯೇ ನಡೆದಿದ್ದವು. ಆಹ್ನೀಕದನಂತರ ಶ್ರೀಪಾದರು ಗ್ರಂಥಾವಲೋಕನ, ಲೇಖನಗಳಲ್ಲಿ ಮಗ್ನರಾದರು. ವೈದ್ಯರು ಮರಳಿಬಂದರು. ಬಂದಕ್ಷಣದಲ್ಲಿಯೇ ಶ್ರೀಪಾದರು ' ನಾನು ಆರೋಗ್ಯವಾಗಿದ್ದೇನೆ ನೋಡಿ ಓದುತ್ತಿದ್ದೇನೆ, ಬರೆಯುತ್ತಿದ್ದೇನೆ' ಎಂದು ನಗುತನುಡಿದರು. ಆ ನುಡಿ ಕೇಳಿದ ವೈದ್ಯರಿಗೆ ಆಚ್ಚರಿಯಾಯಿತು. ಶ್ರೀಪಾದರಕೈಹಿಡಿದು ನೋಡಿದರು. ಜ್ವರ ಇಳಿದಿರಲಿಲ್ಲ. ಹಿಂದಿನ ದಿನಕ್ಕಿಂತ ಅಧಿಕ ಉಷ್ಣಾಂಶವಿತ್ತು. ಆಗವೈದ್ಯರಿಗೆ ಪೂರ್ಣವಾಗಿ ಆಶ್ಚರ್ಯವಾಯಿತು. ಕಾರಣ ಹಿಂದಿನ ದಿನಕ್ಕಿಂತ ಅಧಿಕವಾದ ಜ್ವರದತಾಪವಿದ್ದರೂ ಆ ವೇದನೆಯನ್ನು ಸಹಿಸಿ ಉಪವಾಸದಿಂದಿದ್ದು ಗ್ರಂಥಾವಲೋಕನದಲ್ಲಿ ರತರಾಗುವ ಶ್ರೀಪಾದರ ಏಕಾದಶೀ ದೀಕ್ಷೆ, ದೇಹಾಭಿಮಾನರಾಹಿತ್ಯ.

2)20-4-2000 ಅವರ ಅನಾರೋಗ್ಯದ ಪಕ್ವತೆಯ ಕಾಲ. ಅವರು ಚಲಿಸರು, ಸ್ವತಃ ಎದ್ದು ನಿಲ್ಲರು. ಕುಳಿತು ಕೊಳ್ಳರು, ಮಾತನ್ನಾಡರು. ಇಂತಹ ಸಂದರ್ಭದಲ್ಲೂ ಅವರ ಏಕಾದಶೀ ದೀಕ್ಷೆ ಎಂತಹವನನ್ನು ದಂಗುಬಡಿಸುತ್ತದೆ. ಅಂದು ರಾತ್ರಿಯ ನರದಿಯಲ್ಲಿ ಶ್ರೀಪಾದರನ್ನುಎಚ್ಚರದಿಂದಿದ್ದುಕಾಯುತ್ತಾಕುಳಿತವರು ಶ್ರೀಪಾದರ ಪ್ರಿಯಶಿಷ್ಯರಾದ ವಿದ್ವಾನ್ ಶ್ರೀಗುರುರಾಜಾಚಾರ್ಯಜೋಶಿ ಅವರು. ರಾತ್ರಿಯ ಮಧ್ಯದಲ್ಲಿ ಮಲಗಿದ್ದ ಶ್ರೀಪಾದರು ಎಚ್ಚೆತ್ತರು. ಕಾರಣ ಅವರು ಉದರದ ವೇದನೆಯಿಂದ ಬಳಲುತ್ತಿದ್ದರು. ಈ ಶಿಷ್ಯರು ಗುರುಗಳ ಮುಖವನ್ನು ನೋಡುತ್ತಿದ್ದರು. ಗುರುಗಳು ಶಿಷ್ಯನ ಮುಖವನ್ನು ನೋಡುತ್ತಿದ್ದರು. ಮೌನವೇ ಶೋಭಿಸುತ್ತಿತ್ತು. ಕೊನೆಯಲ್ಲಿ ಗುರುರಾಜಾಚಾರ್ಯರು ಮೆಲ್ಲನೆ ' ಏನು ಸ್ವಾಮೀ ನೋವಾಗುತ್ತಿದೆಯೇ? ಔಷಧವನ್ನು ಹಚ್ಚಲೇ' ಎಂದೆಲ್ಲ ಕೇಳಿದರು. ಎಲ್ಲದಕ್ಕೂ ಶ್ರೀಪಾದರ ಶಿರವೇ ಉತ್ತರವನೀಡಿತು. ಕಾರಣ, ಶ್ರೀಪಾದರಿಗೆ ಮಾತನ್ನಾಡುವಷ್ಟು ಸಾಮರ್ಥ್ಯವಿರಲಿಲ್ಲ. ಶ್ರೀಪಾದರ ಉದರಕ್ಕೆ ಔಷಧವನ್ನುಪೂಸುತ್ತ ಗುರುರಾಜಾಚಾರ್ಯರು ಭಯ,ಲಜ್ಜೆಯಿಂದ ಮೆಲ್ಲನೆ ಗುರುಗಳೊಡನೆ ಮಾತನ್ನಾಡಲಾರಂಭಿಸಿದರು. ''ಸ್ವಾಮೀ ತಾವು ಯಾವುದಾದರೊಂದು ರುದ್ರದೇವಸ್ಥಾನಕ್ಕೆ ಪಲಿಮಾರು ಮಠದ ವತಿಯಿಂದ ನೈವೇದ್ಯಕ್ಕಾಗಿ ನೀಡುತ್ತಿದ್ದ ಅಕ್ಕಿಯನ್ನು ನಿಲ್ಲಿಸಿದರಂತೆ ಹೌದೇ? ಸ್ವಾಮೀ!'' ಎಂದು ಕೇಳಿದರು. ಆಗ ಶ್ರೀಪಾದರಿಂದ ''ಹ್ಞೂಂ'' ಎಂಬ ತುಟಿಯನ್ನು ಬಿಡಿಸದೇ ಉತ್ತರ ಬಂತು. ಆಗ ಗುರುರಾಜಾಚಾರ್ಯರು ''ತಾವು ದಯವಿಟ್ಟು ತಪ್ಪುತಿಳಿಯಬಾರದು'' ಇದು ನನ್ನ ಅನಿಸಿಕೆ ಮಾತ್ರ ರುದ್ರದೇವರ ನೈವೇದ್ಯಕ್ಕೆ ನಿಷೇಧವನ್ನು

ತಂದಿದ್ದರಿಂದ, ಅಂದರೆ ಉದರದ ಅನ್ನಕ್ಕೆ ತೊಂದರೆ ಬಂದಿದ್ದರಿಂದ ತಮಗೆ ಈ ರೀತಿ.....'' ಎಂದು ಅರ್ಧಕ್ಕೆ ನಿಲ್ಲಿಸಿದರು. ಆದರೂ ಶ್ರೀಪಾದರಿಂದ ಏನೂ ಉತ್ತರವಿಲ್ಲ. ಪುನಃಗುರುರಾಜಾಚಾರ್ಯರು ''ಏಕಾದಶೀ ದಿನದಂದೂ ಆ ರುದ್ರದೇವರಿಗೆ ಅನ್ನ ನೈವೇದ್ಯ ಮಾಡುವರೆಂದು ತಾವು ನೈವೇದ್ಯದ ಅಕ್ಕಿಯನ್ನು ಕೊಡುವುದನ್ನು ನಿಲ್ಲಿಸಿದಿರಿ. ಅದು ಸಮಂಜಸವಾದುದೇ! ಆದರೆ ತಿಂಗಳಿನ ಕೇವಲ ಎರಡು ಏಕಾದಶೀ ದಿನಗಳಿಗೋಸ್ಕರ ಪೂರ್ಣತಿಂಗಳಿನ ನೈವೇದ್ಯದ ಅಕ್ಕಿಯನ್ನು ನಿಷೇಧಿಸುವುದಕ್ಕಿಂತ ಆ ಎರಡು ದಿನಗಳ ಅಕ್ಕಿಯನ್ನು ಕೊಡದೆ ಉಳಿದ28 ದಿನಗಳ ಅಕ್ಕಿಯನ್ನು ನೀಡಬಹುದಲ್ಲವೇ? ಅದರಿಂದ ಮೃತ್ಯುಂಜಯನ ನೈವೇದ್ಯವಾದಂತಾಗುತ್ತದೆ ತಮ್ಮ ದೀಕ್ಷೆಯಪ್ರಕಾರ ಏಕಾದಶೀ ದಿನಗಳಂದು ಅನ್ನನೈವೇದ್ಯದ ಅಕ್ಕಿಯನ್ನು ನೀಡದಂತೆಯೂ ಆಗುತ್ತದೆ ತಮ್ಮ ಉದರವ್ಯಾಧಿಪರಿ ಹಾರವಾಗಲು ಆ ಮೃತ್ಯುಂಜಯನ ಅನುಗ್ರಹ ವೂ ಆಗುವುದು. ಈ ವಿಚಾರ ಹೇಗಿದೆಯೋ ತಿಳಿಯದು ತಪ್ಪಿದ್ದಲ್ಲಿ ಕ್ಷಮಿಸಿರಿ'' ಎಂದು ಹೇಳಿದರು. ತತ್ಕ್ಷಣದಲ್ಲಿ ಶ್ರೀಪಾದರು ''ನಾನು ಗತಪ್ರಾಣನಾದರೂ ಚಿಂತೆಯಿಲ್ಲ ಆ ದೇವಸ್ಥಾನದ ಅರ್ಚಕರಿಂದಾಗುವ ನೈವೇದ್ಯಕ್ಕೆ ಅಕ್ಕಿಯನ್ನು ಮಾತ್ರ ನೀಡುವುದಿಲ್ಲ. ಪೂರ್ಣತಿಂಗಳಿಗೂ ನೀಡುವುದಿಲ್ಲ. ಏಕಾದಶೀದಿನ ದಂದು ನಾವು ಅಕ್ಕಿ ನೀಡದಿದ್ದರೇ ನಾಯಿತು. ಅವರೇ ತಂದು ನೈವೇದ್ಯಮಾಡಿ ಅದನ್ನೇ ತಿನ್ನುತ್ತಾರೆ. ಅಂತಹವರು ಮಾಡುವನ್ನೈವೇದ್ಯಕ್ಕಾಗಿ ಅಕ್ಕಿಯನ್ನು ನೀಡಬಾರದು. ನೀಡಿದರೆ ಅವರು ಏಕಾದಶೀ ದಿನ ಅನ್ನ ತಿನ್ನುವುದು ಸರಿ ಎಂದು ಒಪ್ಪಿದಂತಾಗುವುದು'' ಎಂದು ಉಗ್ರವಾಗಿ ನುಡಿದರು. ಅವರು ನುಡಿಯುವಾಗ ಮುಖ ಕೆಂಪಾಗಿತ್ತು. ಸ್ವರತಗ್ಗಿದ್ದರೂ ಸ್ಪಷ್ಟತೆಯಿತ್ತು. ಈ ಮಾತನ್ನು ಆಲಿಸಿದ ಗುರುರಾಜಾಚಾರ್ಯರು ಬೆಚ್ಚಿಬಿದ್ದರು. ಅವರು ಮಾತ್ರ ಏಕೆ ? ಇದನ್ನು ಕೇಳಿದ ಪ್ರತಿಯೊಬ್ಬನೂ ಬೆರಗಾಗಲೇಬೇಕು .ಕಾರಣ, ಸ್ವಾಭಾವಿಕವಾಗಿ ಶಾಸ್ತ್ರವಿರುದ್ಧವೆಂದೆನಿಸಿದರೂ ''ಸಂಪ್ರದಾಯ'' ಎಂಬ ಹೆಸರಿನಲ್ಲಿ ಮಾಡುವ ಕೆಲಸವನ್ನು ನಾವು ಕೆಲವೊಮ್ಮೆ ನಿಲ್ಲಸುವುದಿದೆ. ಆದರೆ ಕಾಕತಾಲೀಯವಾಗಿ ಏನಾದರೂ ಅನಾಹುತ. ಪ್ರಾಣಾಂತಿಕ ಆಪತ್ತು ಎದುರಾದರೆ ನಾವು ಶಾಸ್ತ್ರವನ್ನು ಬಿಟ್ಟು ಮತ್ತೆ ಸಂಪ್ರದಾಯವನ್ನೇ ಅನುಸರಿಸುತ್ತೇವೆ. ಕಾರಣ ನಾವು ಆ ಆಪತ್ತಿನಿಂದ ಪಾರಗಬೇಕು. ಇಂತಹ ಸ್ಥಿತಿಗಳನ್ನೇ ನೋಡುವ ನಮ್ಮ ಕಾಲದಲ್ಲಿಯೇ ಅತಿಯಾದ ಉದರವ್ಯಾಧಿಯ ಪರಿಹಾರದ ದೃಷ್ಟಿಯಿಂದಲಾದರೂ ರುದ್ರದೇವರ, ಉಳಿದದಿನಗಳ ಅನ್ನನೈವೇದ್ಯಕ್ಕಾದರೂ ಅಕ್ಕಿಯನ್ನು ನೀಡುವುದನ್ನೇ ನಿಲ್ಲಿಸಿ ತಾವು ಇಲ್ಲದಂತಾದರೂ ಅನಾರೋಗ್ಯ ವಾಸಿಯಾಗದಿದ್ದರೂ ಚಿಂತೆಯಿಲ್ಲ ಏಕಾದಶೀ ದಿನ ಅನ್ನ ತಿನ್ನುವವರಿಗೆ ಮಾತ್ರ ನಮ್ಮ ಸಹಕಾರ ಇರಬಾರದು ಎಂಬ ಶ್ರೀಪಾದರ ದೀಕ್ಷೆಯನ್ನು ಕಂಡಾಗ ಅಚ್ಚರಿಯಾಗದೇ ಇರದು.

೩)ಅಂದು ವಿಕ್ರಮಸಂವತ್ಸರದ ಚೈತ್ರ ಕೃಷ್ಣ ದಶಮೀ ದಿನದಂದು ಶ್ರೀಪಾದರ ದೇಹಸ್ಥಿತಿ ಪೂರ್ಣಹದಗೆಟ್ಟಿತ್ತು. ಆ ಅನಾರೋಗ್ಯದ ಪ್ರಭಾವದಿಂದ ಅವರಿಗೆ ಏನೂ ರುಚಿಸುತ್ತಿರಲಿಲ್ಲ. ಅವರು ಏನನ್ನು ತಿನ್ನುತ್ತಿರಲಿಲ್ಲ. ಆದರೆ ಅಂದು ದಶಮಿಯಾದ್ದರಿಂದ ಸ್ವಲ್ಪವಾದರೂ ಊಟವನ್ನು ಮಾಡಬೇಕಿತ್ತು. ಆದರೂ ಮಾಢಲಿಲ್ಲ. ಪೇಜಾವರ ಶ್ರೀಪಾದರ ಒತ್ತಾಯ, ಎಲ್ಲ ಶಿಷ್ಯರ ವೈದ್ಯರ ಒತ್ತಾಯದಿಂದ ಅಂದು ರಾತ್ರಿ ಒಂದು ಚಿಕ್ಕ ಇಡ್ಲಿಯ

ತುಂಡನ್ನುತಿಂದರು. ಸ್ವಲ್ಪಹಣ್ಣುಗಳನ್ನುತಿಂದರು. ಒಂದು ಲೋಟ ಹಾಲನ್ನು ಕುಡಿದರು. ಎಲ್ಲರಿಗೂ ಸ್ವಲ್ಪಸಮಾಧಾನವಾಯಿತು. ಅಂದಿನ ರಾತ್ರಿಯ ಸರದಿಯಲ್ಲಿ ನಾನು ಹಾಗೂ ಶ್ರೀವೆಂಕಟರ ಮಣಾಚಾರ್ಯರು ಎಚ್ಚರದಲ್ಲಿದ್ದು ಶ್ರೀಪಾದರನ್ನು ನೋಡುತ್ತಿದ್ದೆವು. ಸುಮಾರು ರಾತ್ರಿ 12-30 ರವೇಳೆಯಲ್ಲಿ ಶ್ರೀಪಾದರಿಗೆ ತಡೆಯಲಾರದಷ್ಟು ವೇಗದಲ್ಲಿ ವಾಂತಿಯಾಯಿತು. ಬಹಳವಾಯಿತು. ಅವರು ಅಂದು ರಾತ್ರಿ ಏನೆಲ್ಲ ತಿಂದಿದ್ದರೋ ಅವೆಲ್ಲವೂ ಆ ವಾಂತಿಯಲ್ಲಿತ್ತು. ನಮ್ಮಿಬ್ಬರಿಗೂ ಆತಂಕ ಹೆಚ್ಚಾಗಿತ್ತು. ಶ್ರೀಪಾದರನ್ನುಕುಳ್ಳಿರಿಸಿ ಎಲ್ಲವನ್ನೂಸ್ವಚ್ಛಗೊಳಿಸಿದೆವು. ಶ್ರೀಪಾದರಿಗೆ ಅತ್ಯಂತ ಆಯಾಸವಾಗಿತ್ತು. ಆಗ ನಾನು ''ಸ್ವಾಮೀ ಸ್ವಲ್ಪ ಎಳನೀರನ್ನುನೀಡಲೇ'' ಎಂದು ಕೇಳಿದೆ. ಮೊದಲೆಲ್ಲ ಬೇಡವೆನ್ನುತ್ತಿದ್ದಶ್ರೀಪಾದರು ಆಗತತ್ಕ್ಷಣದಲ್ಲಿ ''ಹ್ಞೂಂ'' ಎಂದರು. ಕಾರಣ ಅಷ್ಟು ಬಳಲಿದ್ದರು. ತತ್ಕ್ಷಣದಲ್ಲಿ ಎಳನೀರನ್ನು ಕೆತ್ತಲಾಯಿತು. ಮಡಿಯಲ್ಲೇ ಶ್ರೀಪಾದರಿಗೆ ಕುಡಿಸಲು ತೊಡಗಿದಾಗ, ಅಲ್ಲಿಯ ತನಕ ಸುಮ್ಮನಿದ್ದ ಶ್ರೀಪಾದರು ಆಗ ''ಇವತ್ತು ಯಾವ ತಿಥಿ '' ಎಂದು ಕೇಳಿದರು. ನಾನು ''ದಶಮೀ'' ಎಂದೆ ಸುಳ್ಳಾಡಿದೆ ಕಾರಣ, ವಾಸ್ತವಿಕವಾಗಿ ಏಕಾದಶೀ ತಿಥಿಪ್ರವೇಶವಾಗಿತ್ತು. ಆದರೆ ಆ ವಿಷಯವನ್ನುತಿಳಿಸಿದರೆ ಬಳಲಿದ ಶ್ರೀಪಾದರು ಎಳನೀರನ್ನು ಸ್ವೀಕರಿಸಲಾರರು'' ಎಂಬ ಭಾವನೆ. ಮತ್ತೆ ಮತ್ತೆ ಎರಡು ಬಾರಿ ಕೇಳಿದರು. ಅದೇ ಉತ್ತರ ನೀಡಿದೆ. ಎಳನೀರನ್ನು ಒತ್ತಾಯದಿಂದ ಕುಡಿಯಿಸಿದರೂ ಅದು ಶ್ರೀಪಾದರ ಗಂಟಲಲ್ಲಿಳಿಯದೆ ಹೊರಗೆ ಬಂತು. ಅವರು ಉಗುಳಿದ್ದರು ನನಗೂ ಶ್ರೀವೆಂಕಟರಮಣಾಚಾರ್ಯರಿಗೂ ಗಿರೀಶನಿಗೂ ನಗು. ಮತ್ತೊಂದು ಆ ಪವಿತ್ರ ಎಂಜಲಿನ ಪ್ರೋಕ್ಷಣೆಯ ಧನ್ಯತೆಯ ಬಿಗು. ಮತ್ತೆ ಕುಡಿಸಲು ಪ್ರಯತ್ನಿಸಿದರೆ ಕುಡಿಯದಾದರು. ಆದರೆ ನಮ್ಮ ಭಯ ಅಧಿಕವಾಗಿತ್ತು. ಮರುದಿನ ಏನು? ಅಂದೇ ಏಕಾದಶಿಯಾಗಿತ್ತು. ನಾವು ಡಾ || ಕೇಶವರನ್ನು ಎಬ್ಬಿಸಿದೆವು. ವಾಂತಿಯ ವಿಷಯವನ್ನುತಿಳಿಸಿದೆವು. ಅವರು ಒಂದು ಮಾತ್ರೆಯನ್ನು ಪುಡಿಮಾಡಿ ಜೇನುತುಪ್ಪದಲ್ಲಿ ಕಲಿಸಿ ಶ್ರೀಪಾದರಿಗೆ ನೀಡಲು ಉದ್ಯುಕ್ತರಾದರು. ಆಗಲೂ ಶ್ರೀಪಾದರು ''ಇವತ್ತುಏನು ತಿಥಿ?''ಎಂದು ಪ್ರಶ್ನಿಸಿದರು. ನಮಗೆ ಮತ್ತೆ ಆಶ್ಚರ್ಯ. ಆಗ ನಾನು ದಶಮೀ ಎಂದೆ. ಡಾ || ಕೇಶವರು ಒತ್ತಾಯಮಾಡಿ ಆ ಔಷಧವನ್ನು ಶ್ರೀಪಾದರ ಬಾಯಲ್ಲಿ ಹಾಕಿದರು. ಅದು ಒಳಗೆ ಹೋಯಿತು ಅಷ್ಟೇ ಒಳಗಿಳಿಯಲಿಲ್ಲ. ಮತ್ತೆ ಶ್ರೀಪಾದರು ''ಪುಚಕ್'' ಎಂದು ಆ ಔಷಧವನ್ನು ಉಗುಳಿದರು. ಕಾರಣ, ಅಂದು ಆ ಹೊತ್ತು ಏಕಾದಶೀಪ್ರವೇಶವಾಗಿದ್ದು ಅವರಿಗೆ ಅರಿವಾಗಿತ್ತು ನಿಶ್ಚಯವಾಗಿತ್ತು. ಹೀಗಾಗಿ ಆ ಏಕಾದಶಿಯನ್ನು ಪೂರ್ಣ ಉಪವಾಸದಲ್ಲೇ ಕಳೆದರು. ಅದರ ಮುಂದಿನ ಏಕಾದಶೀಯಂದು (14-5-200) ವೈಶಾಖಶುದ್ಧ ಏಕಾದಶೀಯಂದು ಪೂರ್ಣ ಉಪವಾಸದಿಂದಿದ್ದು ಶ್ರೀಹರಿಯ ಪದವನ್ನು ಸೇರಿದರು. ಇದರಿಂದ ಅವರ 87 ವರ್ಷಗಳ ಎಲ್ಲ ಏಕಾದಶೀಗಳು ಪೂರ್ಣ ಉಪವಾಸದಿಂದಲೇ ನಡೆದಂತಾಯಿತು. ಯಾವ ಒಂದು ಏಕಾದಶೀಯನ್ನು ಭಗ್ನಗೊಳಿಸದೇ ಭಗ್ನಗೊಳಿಸುವವರಿಗೆ ಸಹಕಾರ ನೀಡದೆ ಇರುವ ಅನುಪಮವಾದ ಆ ದೀಕ್ಷೆ ಪ್ರಾಯಃ ನಮಗಿನ್ನು ಕಾಣಸಿಗದು.

ಸೂರ್ಯೋದಯದ ಸಮಯದಲ್ಲಿ ಸನ್ನಿಹಿತವಾದ ತಿಥಿಯ

ಅವಲೋಕನದಿಂದ ಈ ದಿನತ್ರಯವ್ರತದ ಆಚರಣೆ ಶುರು. ಆಚರಣೆಗಾಗಿ ಆ ತಿಥಿಗಳ ಸ್ಪಷ್ಟವಿಚಾರಗಳನ್ನು ತಿಳಿಸುವವರು ಅನೇಕ ಸಿದ್ಧಾಂತಗಳ ಪಂಚಾಂಗ ಕರ್ತರು. ಅವರನ್ನನುಸರಿಸಿಯೇ ಆ ವ್ರತವನ್ನು ಆಚರಿಸುವವರು ಭಕ್ತಸಾಮಾನ್ಯ ಜನರು. ಆ ಪಂಚಾಂಗ ಕರ್ತರಿಗೂ ವಿಮರ್ಶಿಸಿ ಬೆಂಬಲವನ್ನೀವವರು ಪೀಠಾಧೀಶ್ವರರು. ಮುಖ್ಯವಾಗಿ ಈ ಏಕಾದಶೀ ತಿಥಿಯ ಪ್ರವೇಶ, ನಿರ್ಗಮನಾದಿಗಳನ್ನು ಗಣಿತದ ಮೂಲಕ ಬಹು ಎಚ್ಚರದಿಂದ ಗಮನಿಸಿ ವಿಮರ್ಶಿಸುವುದೇ ಆಚರಣೆಯ ತಾಯಿ ಬೇರು. ಕೆಲವೊಮ್ಮೆ ಕಾಲಕ್ಕನುಗುಣವಾಗಿ ಭೂಚಂದ್ರ ಸೂರ್ಯಗತಿಗಳ ವ್ಯತ್ಯಾಸದಿಂದ ಗಣಿತದ ಫಲಿತಾಂಶ ಸರಿಬಾರದಿದ್ದಲ್ಲಿ ಆಗ ಮಹಾತಪಸ್ವಿಗಳೂ ಜ್ಞಾನಿಗಳೂ ಆದ ಪೀಠಾಧೀಶ್ವರರೇ ತಮ್ಮ ಅದ್ಭುತ ಪಾಂಡಿತ್ಯಬಲದಿಂದ ಸರಿಪಡಿಸುತ್ತಿದ್ದರು. ಆ ರೀತಿ ಹೊಂದಾಣಿಸಿ ಸರಿಪಡಿಸುವ ವಿಧಾನವನ್ನು ಪದಕ ಎಂದು ಕರೆದರು. ಆ ರೀತಿ ಏಕಾದಶೀ ತಿಥಿಯ ತಿಳುವಳಿಕೆ ಹಾಗೂ ಆಚರಣೆಗಳಿಗಾಗಿ ಪರಿಷ್ಕರಿಸಿ ಗಣಿತವನ್ನು ಬೋಧಿಸಿದವರಲ್ಲಿ ಶ್ರೀಸೋದೆ ಮಠದ ಶ್ರೀವಾದಿರಾಜ ಸ್ವಾಮಿಗಳು. ಶ್ರೀಉತ್ತರಾದಿಮಠದ ಶ್ರೀವಿದ್ಯಾಧೀಶ ತೀರ್ಥರು. ಶ್ರೀನಂಜನಗೂಡು ರಾಘವೇಂದ್ರ ಮಠದ ಶ್ರೀಸುಮತೀಂದ್ರತೀರ್ಥರು ಪ್ರಮುಖರು. ಅಂದಿನ ಕಾಲಕ್ಕೆ ತಕ್ಕಂತೆ ಲೇಖ್ಯಾಚಾರ ಮಾಡಿ ಅಂದಿನಿಂದ ಕೆಲವು ವರ್ಷಗಳವರೆಗೆ ತಿಥ್ಯಾದಿಗಳು ಸರಿ ಬರುವಂತೆ ಅದನ್ನು ತಿಳಿಯುವಂತೆ ಗಣಿತಮಾರ್ಗವನ್ನು ಸೂಚಿಸಿದರು. ಅದರಂತೆ ಅಂದಿನ ಭಕ್ತರೆಲ್ಲ ಸರಿಯಾದ ಏಕಾದಶೀಯನ್ನು ಆಚರಿಸುತ್ತಿದ್ದರು. ಆದರೆ ಈ ಶತಮಾನದ ಅಂಚಿನ ದಶಕಗಳಿಂದ ಮಾತ್ರ ಆ ತಿಥಿಜ್ಞಾನ ಆಚರಣೆಗಳಲ್ಲಿ ಗೊಂದಲವುಂಟಾಗಿದೆ. ಅದು ಅತಿಯಾಗಿದೆ ಒಬ್ಬೊಬ್ಬರು ಒಂದೊಂದು ದಿನ ಏಕಾದಶಿಯನ್ನು ಆಚರಿಸುವಂತಾಗಿದೆ. ಇದು ಎಷ್ಟು ವರ್ಷಗಳಿಂದ ಹೀಗೆಯೇ ನಡೆಯುತ್ತಿದೆ ಎಂಬುದು ತಿಳಿಯಲಸಾಧ್ಯ.

ಆದರೆ ಶ್ರೀವಿದ್ಯಾಮಾನ್ಯತೀರ್ಥರ ಮಧ್ಯವಯಸ್ಸಿನಲ್ಲಿಯೆ ಈ ಏಕಾದಶೀ ಏಕತೆಯ ಸಮಸ್ಯೆ ಆಗಾಗ ವ್ಯಕ್ತವಾಗುತ್ತಿತ್ತು. ಆಗ ಶ್ರೀಪಾದರ ಮನಸ್ಸು ಅದಕ್ಕಾಗಿ ಆತಂಕಪಡುತ್ತಿತ್ತು. ಪರಿಹಾರಕ್ಕಾಗಿ ಬಹಳ ವಿಧ ಆಲೋಚನೆ ಬರುತ್ತಿತ್ತು. ಶ್ರೀಪಾದರು ಕೊನೆಗೊಮ್ಮೆ ಒಂದು ಹಂತವನ್ನು ತಲುಪಿದರು. ಎಲ್ಲ ಮಾಧ್ವರಿಗೂ ಮಾಧ್ವಪೀಠಾಧಿಪತಿಗಳಿಗೂ ಏಕಾದಶೀ ಏಕತೆಯ ವಿಚಾರಕ್ಕಾಗಿ ಸೂಚನೆಯಿತ್ತರು. ಆದರೆ ಎಲ್ಲಿಯೂ ಸರಿಯಾದ ಪ್ರತಿಕ್ರಿಯೆ ದೊರೆಯಲಿಲ್ಲ. ಕಾರಣ, ತಮ್ಮ ತಮ್ಮ ಸಂಪ್ರದಾಯವನ್ನು ಬಿಡುವುದು ಪ್ರತಿಷ್ಠೆಗೆ ಕುಂದು ತಂದೀತು ಎಂಬ ಭಾವನೆಬಲವಾಗಿತ್ತು. ಆದ್ದರಿಂದ ಯಾರೂ ಮಾಧ್ವರ ಏಕಾದಶೀ ವ್ರತವನ್ನು ಒಂದು ಮಾಡುವ ಬಗೆ ಹೇಗೆ ಎಂದು ಪ್ರಯತ್ನಿಸಲಿಲ್ಲ. ತಲೆಗೆಡಿಸಿಕೊಳ್ಳಲೂ ಇಲ್ಲ.

ಈ ಮಧ್ಯೆ ಕೆಲವು ದುರಾಗ್ರಹಿಗಳು ಇದನ್ನೇ ನಿಮಿತ್ತವಾಗಿಸರಿಸಿ ಶ್ರೀಪಾದರ ಬಗ್ಗೆ ತಮ್ಮಲ್ಲಿರುವ ವೈಯಕ್ತಿಕ ದ್ವೇಷವನ್ನು ವ್ಯಕ್ತಪಡಿಸಿದರು. ಆದರೆ ಶ್ರೀಪಾದರು ಮಾತ್ರ ನಿರ್ವಿಕಾರರು. ಅವರನ್ನು ಅನೇಕರು ಅನೇಕರೀತಿಯಿಂದ ಪ್ರಶ್ನಿಸುತ್ತಿದ್ದರು. ಕೆಲವರು ಆಕ್ಷೇಪಿಸುತ್ತಿದ್ದರು. ಇದರಲ್ಲಿ ಏಕಾದಶಿಯನ್ನು

ಮಾಡುವವರು, ಎಷ್ಟು ಜನರೋ? ಮಾಡದವರು ಏಸು ಜನರೋ ತಿಳಿಯದು. ಆದರೂ ಶ್ರೀಪಾದರ ಮುಂದೆ ಪ್ರಶ್ನೆಗಳ ಸುರಿಮಳೆಯನ್ನೇ ಹರಿಸುತ್ತಿದ್ದರು. ಅವರಿಗೆಲ್ಲರಿಗೂ ಶ್ರೀಪಾದರು ಸಮಾಧಾನದಿಂದ ಉತ್ತರವನ್ನು ನೀಡುತ್ತಿದ್ದರು. ಕಾರಣ, ಅವರಿಗೆ ತನ್ನನ್ನು ನಿಂದಿಸಲಿ ಆಕ್ಷೇಪಿಸಲಿ ,ಏನಾದರೂ ಆಗಲಿ ಮಾಧ್ವರ ಏಕಾದಶಿ ಮಾತ್ರ ಏಕಾಚರಣೆಯಾಗಬೇಕು ಎಂಬ ಮಹೋನ್ನತ ಧ್ಯೇಯವಿತ್ತು. ಅದಕ್ಕಾಗಿ ಎಲ್ಲವನ್ನೂ ಸಹಿಸಿದರು ತಾವೂ ಒಂದಲ್ಲ, ಎರಡು ಸಂಸ್ಥಾನಗಳ ಅಧಿಪತಿಗಳೆಂಬುದನ್ನೂ ಪರಿಗಣಿಸಲಿಲ್ಲ. ತಾವು ಉತ್ತಮ ತಪಸ್ವಿ ಜ್ಞಾನಿವರೇಣ್ಯ ಎಂಬ ಭಾವನೆಯಂತೂ ಮೊದಲೇ ಇಲ್ಲ.

ಯಾರು, ಹೇಗೆ ಏಕಾದಶಿಯನ್ನು ಆಚರಿಸಿದರೆ ಇವರಿಗೇನು ? ತಾವು ಮಾಡಿ ಸುಮ್ಮನಿರಬಾರದೇಕೆ? ಎಂದು ಕೆಲವರು ಕೇಳುವುದಿದೆ ಆದರೆ ಅಂತಹವರು ಸ್ವಲ್ಪ ಆಲೋಚಿಸಬೇಕು. ಊರನ್ನು ನೋಡಬಯಸುವವನಿಗೆ ಆ ಊರನ್ನು ಅರಿಯದ ಹತ್ತು ಜನ ಹತ್ತು ದಾರಿಗಳನ್ನು ಹೇಳುವರು. ಆದರೆ ಊರಿನ ದಾರಿಯನ್ನು ಚೆನ್ನಾಗಿ ಅರಿತ ಹನ್ನೊಂದನೆಯವನು ಏನು ಹೇಳಬೇಕು. ಊರಿಗೆ ಹೋಗದೇ ಇದ್ದರೆ ಹಾಳಾಗಲಿ ನನಗೇನು? ಎಂದು ಸುಮ್ಮನಿರಬೇಕೇ? ಅಥವಾ ಸರಿಯಾದ ದಾರಿಯನ್ನು ತೋರಬೇಕೆ ಪ್ರಜ್ಞಾವಂತರಾದವರ ಪ್ರಾಮಾಣಿಕ ಕರ್ತವ್ಯವೇನು ? ಎಂಬುದನ್ನು ಟೀಕೆ ಮಾಡುವ ಮಂದಿ ತಿಳಿಯಬೇಕು.

ಇನ್ನು ಕೆಲವರು, ''ದೇವರಿಗೆ ಪ್ರೀತಿಯಾಗಲೊ'' ಎಂಬ ದೊಡ್ಡ ಉದ್ದೇಶವನ್ನಿಟ್ಟುಕೊಂಡು ಎಂದಾದರೊಂದು ದಿನ ಉಪವಾಸವನ್ನು ಮಾಡಿದರೆ ತಪ್ಪೇನು. ಶ್ರದ್ಧೆಯೊಂದಿದ್ದರೆ ಯಾವ ಪಂಚಾಂಗವೇನು? ಯಾವ ಸಂಪ್ರದಾಯವೇನು? ಅದನ್ನು ಅನುಸರಿಸಿ ಉಪವಾಸವನ್ನು ಮಾಡಿದರಾಯಿತು. ಆ ಶ್ರದ್ಧೆಯನ್ನೇ ನೋಡಿದ ದೇವರು ಒಲಿಯುವುನಲ್ಲ! ಎಂದು ಆಕ್ಷೇಪಿಸಿದರು. ಆದರೆ ಇದು ಒಂದು ಭ್ರಮೆ ನಾವು ನಮ್ಮ ದೇಶದ ಉತ್ತರಕ್ಕೆ ಸಾಗಿದರೆ ಎತ್ತರದ ಪರ್ವತ ತೋರುವುದೇ ಹೊರತು ಸಾಗರವು ಸಿಗಲಾರದು. ದಕ್ಷಿಣಕ್ಕೆ ಸಾಗಿದರೆ ಕನ್ಯಾಕುಮಾರಿಯ ಸಾಗರವು ಕಾಣಸಿಗುವುದೇ ವಿನಾ ಸುಂದರ ಹಿಮಗಿರಿ ದೊರೆಯಲಾರದು. ನಾವು ತಲುಪಬೇಕಾದ ಗುರಿಯು ಹೇಗೆ ನಿಶ್ಚಿತವಾಗಿರಬೇಕೋ ಹಾಗೆ ಸಾಗುವ ದಾರಿಯೂ ನಿಶ್ಚಿತವಾಗಿರಬೇಕು. ಎಲ್ಲ ಮಾರ್ಗಗಳೂ ಸ್ವರ್ಗದೆಡೆಗೆ ಸಾಗುವುವು ಎನ್ನುವುದು ನರಕ ಭೀರುಗಳ ಅನುಕೂಲಶಾಸ್ತ್ರಮಾತ್ರ ಅದೇ ರೀತಿ ನಮ್ಮೆಲ್ಲರ ಬದುಕಿನಲ್ಲಿ ಆ ಶ್ರೀಹರಿಯ ಕರುಣೆಯ ಸಂಪಾದನೆ ಎಂಬ ಮುಖ್ಯಗುರಿ ಹೇಗೆ ನಿಶ್ಚಿತವಾಗಿದೆಯೋ ಹಾಗೆಯೇ ಅದರ ಮೂಲ ಸಾಧನವಾದ ಈ ಏಕಾದಶೀ ಆಚರಣೆಯ ನಿಶ್ಚಿತ ಶುದ್ಧತೆ ಅತ್ಯಾವಶ್ಯಕವಾಗಿದೆ.

ಎಲ್ಲರೂ ''ತಮ್ಮದೇ ಶುದ್ಧ ಗಣಿತ. ಸರಿಯಾದುದು. ಅದರಿಂದಲೇ ಏಕಾದಶಿಯನ್ನು ಆಚರಿಸಬೇಕು'' ಎಂದು ಪಟ್ಟು ಹಿಡಿದರೆ ನಮ್ಮಂಥವರ ಪಾಡೇನು? ಎಂದು ಮಧ್ಯಮವರ್ಗದ ಭಕ್ತರುಗಳ ಗೋಳು, ಹೌದು .ರೋಗವಾಸಿಯಾಗಲು ತಮ್ಮ ಔಷಧವೇ ಸರಿಯಾದುದು ಎಂದು ಪ್ರತಿಯೊಬ್ಬ ವೈದ್ಯರೂ ರೋಗಿಗಳಿಗೆ ಭರವಸೆ ನೀಡುತ್ತಾರೆ. ಇಂತಹ ವೈದ್ಯರಲ್ಲಿ ನಾಡಿಯ ಬಡಿತವನ್ನೂ ಗುರುತಿಸುವ ಸಾಮರ್ಥ್ಯವೂ ಕೆಲವರಿಗೆ ಇರುವುದಿಲ್ಲ.

ಇಂತಹ ವೈದ್ಯರಿಂದ ಕೆಲವು ರೋಗಿಗಳು ಅನರ್ಥವನ್ನು ಅನುಭವಿಸುವುದರಲ್ಲಿ ಎರಡು ಮಾತಿಲ್ಲ. ಪುಣ್ಯವಶಾತ್ ಉತ್ತಮ ವೈದ್ಯ ದೊರಕಿದರೆ ಆ ರೋಗಿ ಬದುಕಿಕೊಂಡಂತೆ.

ಈ ನಿಟ್ಟಿನಲ್ಲಿ ಸರಿಯಾದ ಏಕಾದಶಿಯನ್ನು ಆಚರಿಸಲು ಒಂದು ನಿಶ್ಚಿತ ಶುದ್ಧ ಗಣಿತ ಆವಶ್ಯಕ. ಅದರ ಸಂಪಾದನೆಗಾಗಿ ಶಕ್ತಿ ಮೀರಿ ಪ್ರಯತ್ನವನ್ನು ಮಾಡಿದವರುಶ್ರೀಶ್ರೀಪಾದರು. ಅವರ ಆ ಮಹಾ ಪ್ರಯತ್ನ ಅಸಾಧಾರಣವಾದುದು. ಎಂಭತ್ತರ ಇಳಿಯವಯಸ್ಸಿನಲ್ಲಿಯೂ ಇಪ್ಪತ್ತರ ಉತ್ಸಾಹದಿಂದ ಏಕಾದಶಿಯ ಕುರಿತು ಗಣಿತದ ಕುರಿತು ಹಗಲಿರುಳೂ ಆಲೋಚಿಸಿದರು. ಆರ್ಯ,ದೃಕ್ ,ಮೊದಲಾದ ಸಿದ್ಧಾಂತಗಳ ಗ್ರಂಥಗಳನ್ನು ದೇಶದ ವಿಥವಿಧ ಗ್ರಂಥಾಲಯಗಳಿಂದ ತರಿಸಿದರು. ತಲಸ್ಪರ್ಶಿಯಾಗಿ ಅವಲೋಕಿಸಿದರು. ಮನಸ್ಸಿನಲ್ಲಿ ಆ ವಿಷಯಗಳನ್ನು ಮಥಿಸಿದರು. ಅಲ್ಲದೇ ದೇಶಾದ್ಯಂತ ಸಂಚರಿಸುತ್ತಾ ಪ್ರಸಿದ್ಧ ಗಣಿತಜ್ಞರನ್ನು ಜ್ಯೋತಿಷ್ಕರನ್ನೂ ಸಂಪರ್ಕಿಸಿದರು. ಅವರೊಡನೆ ವಿಚಾರ ವಿನಿಮಯ ಮಾಡಿದರು. ಆ ವಿಮರ್ಶೆಯೊಂದಿಗೆ ಏಕಾದಶೀ ಏಕಾಚರಣೆಯ ವಿಚಾರಕ್ಕಾಗಿ ಮಾಧ್ವಜನತೆಗೆ ಕರೆಕೊಟ್ಟರು. ಇತರ ಮಾಧ್ವಪೀಠಾಧಿಪತಿಗಳಿರುವಲ್ಲಿಯೇ ತಾವೇ ಹೋದರು. ವಿಚಾರಕ್ಕಾಗಿ ಸೂಚಿಸಿದರು. ಅದಕ್ಕಾಗಿಯೇ ಅವರು ಹೋಗದ ಮಠಗಳಿಲ್ಲ ನೋಡದ ಮಠಾಧಿಪತಿಗಳಿಲ್ಲ. ಕೆಲವೆಡೆ ಸನ್ಮಾನ, ಕೆಲವೆಡೆ ಅವಮಾನ. ಕೆಲವೆಡೆ ಉದಾಸೀನ ಭಾವನೆ. ಆದರೂ ಅವಾವುದನ್ನೂ ಎಣಿಸಲಿಲ್ಲ.- ಈ ಪ್ರಾಮಾಣಿಕ ದೀಕ್ಷಾಬದ್ಧಮುನಿಗಳ ಸುಪಕ್ವಮನ. ಕೆಲವರು ಶ್ರೀಪಾದರ ಮಾತನ್ನು ಒಪ್ಪಿದವರು. ಕೆಲವರು ಒಪ್ಪಿದರೂ ಅವರ ಮುಂದೆ ಮಾತ್ರ ಮತ್ತೆ ಹಿಂದೆ ತಿರಸ್ಕರಿಸುವರು. ಒಟ್ಟಿನಲ್ಲಿ ಶ್ರೀಪಾದರ ಮಾತು ಕಿವಿಯಲ್ಲಿ ಬಿದ್ದು ಬುದ್ಧಿಯೊಳಗೆ ಪ್ರವೇಶಿಸಿದರೂ ಅದನ್ನು ಕಾರ್ಯರೂಪಕ್ಕೆ ತರಲು ಯಾರೂ ತಯಾರಿರಲಿಲ್ಲ. ಆದರೆ ಒಂದು ಸಂಗತಿ ಮಾತ್ರ ನಿತ್ಯಸತ್ಯ ಶ್ರೀಪಾದರ ಈ ಅಸದೃಶ ಹೋರಾಟ ಮಾಧ್ವ ಜನತೆ ಎಲ್ಲ ಎಡುವುತ್ತಿದೆ ನಾವು ಎಲ್ಲಿ ಎಡುವುತ್ತಿದ್ದೇವೆ ?ಎಂಬುದನ್ನು ತಿಳಿಸಿಕೊಟ್ಟಿತು.

ಶ್ರೀಪಾದರು ಜ್ಯೋತಿಷ್ಯ ಗ್ರಂಥಗಳನ್ನು ಅಭ್ಯಸಿಸಿ ''ಸದ್ಯದ ದಿನಗಳಲ್ಲಿ ಏಕಾದಶಿ ಏಕಾಚರಣೆಗೆ ಸೂಕ್ತವಾದ ಗಣಿತ, ದೃಗ್ಗಣಿತ. ಏಕೆಂದರೆ ಅದು ಪ್ರತ್ಯಕ್ಷವಾಗಿಯೇ ಭೂಮಿಚಂದ್ರಾದಿಗಳ ಚಲನವಲನಗಳನ್ನೂ ಕಂಡು ತಿಥಿಗಳ ನಿಶ್ಚಯ ಮಾಡುವ ಗಣಿತ ಗ್ರಹಣ ಸಮಯದಲ್ಲಿ ತಾಳೆ ನೋಡಿ ಸಿದ್ಧಪಡಿಸಿದ ಶುದ್ಧ ಗಣಿತ ಹೀಗೆ ನಮ್ಮ ಕಣ್ಣೆದುರಿಗೇ ಸರಿಯಾಗಿ ತೋರುವ ಗಣಿತವನ್ನು ತ್ಯಜಿಸಿ ಸಂಸ್ಕಾರವಿಲ್ಲದ ಗಣಿತವನ್ನು ಸ್ವೀಕರಿಸಬಾರದು'' ಎಂದು ತೀರ್ಮಾನಿಸಿದರು. ಈ ತೀರ್ಮಾನಕ್ಕೆ ಅನೇಕ ವೇದವ್ಯಾಸದೇವರ ಪುರಾಣ ವಚನಗನ್ನು ಶ್ರೀಮದಾ ಚಾರ್ಯರ ಮಾತುಗಳನ್ನೂ ಜ್ಯೋತಿಷ್ಯ ಶಾಸ್ತ್ರಗ್ರಂಥ ಗಳನ್ನು ಪ್ರಮಾಣವನ್ನಾಗಿರಿಸಿದ್ದರು. ಈ ವಿಷಯವನ್ನು ಎಲ್ಲ ಜ್ಯೋತಿಷ್ಕರಲ್ಲಿ ತಿಳಿಸಿದರು. ಶ್ರೀಪಾದರು ಅವರನ್ನು ಕೇಳುತ್ತಿದ್ದರು. ''ನಿಮ್ಮ ಸಿದ್ಧಾಂತದ ಗಣಿತಕ್ಕೆ ಸಂಸ್ಕಾರವಾಗಿದೆಯೇ?'' ಎಂದು ಅದಕ್ಕೆ ಅವರ ಉತ್ತರ ''ಇಲ್ಲ.'' '' ಹಾಗಿದ್ದಲ್ಲಿ ಆ ಲೆಖ್ಖದ ಪ್ರಕಾರ ತಿಥಿ ಸರಿ ಬರುವುದಿಲ್ಲ. ?'' ಎಂದು ಶ್ರೀಪಾದರ ಮರು ಪ್ರಶ್ನೆ ಅದಕ್ಕೆ

ಜ್ಯೋತಿಷ್ಕರ ಉತ್ತರ ''ಹೌದು'' ಹಾಗಾದರೆ ಅದನ್ನೇಕೆ ಅನುಸರಿಸುತ್ತೀರಿ ?ಎಂದು ಶ್ರೀಪಾದರ ಮರು ಪ್ರಶ್ನೆ. ''ನಮ್ಮ ಸಂಪ್ರದಾಯ ಎಂದು ಗಣಿತಜ್ಞರ ಉತ್ತರ. ಈ ಉತ್ತರ ಸರಿಯಲ್ಲ. ಜ್ಯೋತಿಷ್ಯಶಾಸ್ತ್ರದ ನಿಯಮದಂತೆ ಪ್ರತಿಯೊಂದು ಗಣಿತಕ್ಕೂ ಕೆಲವು ವರ್ಷಗಳ ನಂತರ ಸಂಸ್ಕಾರವಾಗಲೇಬೇಕು. ಪ್ರಸ್ತುತ ಯಾವ ಪಂಚಾಂಗಕ್ಕೂ ಸಂಸ್ಕಾರವಾಗಿಲ್ಲ. ಶ್ರೀಮದ್ವಾದಿರಾಜರು ಶ್ರೀವಿದ್ಯಾಧೀಶತೀರ್ಥರೂಮೊದಲಾದ ಮಹನೀಯರು ಶುದ್ಧವಾದ ರೀತಿಯಲ್ಲಿ ಆಚರಿಸುತ್ತಿದ್ದ ಏಕಾದಶೀತಿಥಿಯ ಗಣಿತಪರಿಷ್ಕಾರವನ್ನು ಹೊಂದಿದ ನಂತರ ಮೂರು ನಾಲ್ಕು ಶತಮಾನಗಳು ಕಳೆದವು. ಇಲ್ಲಿಯವರೆಗೂ ಸಂಸ್ಕಾರ ಮಾಡಿದ ದಾಖಲೆ ಇಲ್ಲ. ಹೀಗಾಗಿ ಅಂದಿನ ಗಣಿತವು ಇಂದು ಸರಿ ಹೊಂದೀತೇ! ಎಂದು ಎಲ್ಲರೂ ವಿಮರ್ಶಿಸಬೇಕು. ಹಾಗೆಂದು ಪ್ರಾಚೀನರ ಅಂದಿನ ಆ ಕ್ರಮದ ಗಣಿತ ತಪ್ಪೆಂದು ಹೇಳಬಾರದು. ಅದೇ ರೀತಿ ಅದನ್ನೇ ಎಂದಿಗೂ ಅನುಸರಿಸಬೇಕೆಂದೂ ಹೇಳಬಾರದು. ಶ್ರೀಪಾದರು ಏಕಾದಶೀ ವಿಚಾರಕ್ಕಾಗಿ ಶ್ರೀಭೀಮಾ ಜೋಯಿಸರು, ಶ್ರೀ ಅತ್ತೂರು ಉಡುಪರು, ಶ್ರೀ ಬನ್ನಿಂತಾಯರು, ಶ್ರೀವಾಲಕೊಂಡ ನರಸಿಂಹಾಚಾರ್ಯರು, ಶ್ರೀಹುಣಸಿಗಿ ರಾಮಾಚಾರ್ಯರು, ಶ್ರೀಬಿ.ವಿ. ರಾಮನ್, ಶ್ರೀಶ್ರೀನಿವಾಸ ಅಡಿಗರು. ಡಾ|| ಶ್ರೀನಿವಾಸ ಹೆಬ್ಬಾರ್ ಮೊದಲಾದ ಅನೇಕ ಆರ್ಯ,ದೃಕ್ ಸಿದ್ಧಾಂತಗಳ ವಿದ್ವಾಂಸರನ್ನು ಸಂಪರ್ಕಿಸಿದರು.

ಏಕಾದಶಿಗಾಗಿ ಸರ್ವವಿಧ ಪ್ರಯತ್ನಗಳನ್ನೂ ಮಾಡಿದ ಶ್ರೀಪಾದರು ಕೆಲವೊಂದು ಬಾರಿ ಉಪವಾಸ ಸತ್ಯಾಗ್ರಹಗಳನ್ನೂ ಮಾಡಿದ್ದರು. ಇಷ್ಟಾದರೂ ಅವರನ್ನು ಅವರ ಉದ್ದೇಶವನ್ನು ಅರ್ಥಮಾಡಿಕೊಳ್ಳಲಿಲ್ಲ ಆ ದಡ್ಡಮಂದಿ. ಶ್ರೀಪಾದರು ಈ ಹೋರಾಟವನ್ನು ತಮ್ಮಕೊನೆ ಉಸಿರಿನವರೆಗೂ ನಡೆಸಿದರು. ಏಕಾದಶೀ ಶುದ್ಧಾಚರಣೆ. ವಿಚಾರದೀಕ್ಷೆ ಅವರಲ್ಲಿ ಕೊನೆತನಕವೂ ಪರಿಪೂರ್ಣವಾಗಿತ್ತು. ಅದಕ್ಕೆರಡು ಪುಟ್ಟ ದೃಷ್ಟಾಂತ.

7-4-2000 ರಂದು ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀಸತ್ಯಾತ್ಮತೀರ್ಥರು ಶ್ರೀಪಾದರ ಅನಾರೋಗ್ಯವನ್ನು ತಿಳಿದು ಅವರನ್ನು ನೋಡಲು ಬಂದರು. ಅವರು ಬಂದ ವಿಷಯವನ್ನು ಶ್ರೀಪಾದರಿಗೆ ತಿಳಿಸಿದಾಗ ಅತ್ಯಂತ ಅನಾರೋಗ್ಯ ಪೀಡಿತರಾದ ಶ್ರೀಪಾದರ ಮುಖದಲ್ಲಿ ಒಂದು ವಿಶಿಷ್ಟ ನಗುವಿನ ಹೊನಲು ಚಿಮ್ಮಿತು. ಶ್ರೀಸತ್ಯಾತ್ಮತೀರ್ಥರು ಬಂದಾಗ ಎದ್ದುಕುಳಿತುಕೊಳ್ಳಲೂ ಅಸಮರ್ಥರಾದ ಶ್ರೀಪಾದರು ಮಲಗಿಯೇ ಅವರನ್ನು ಮಾತನಾಡಿಸಿದರು. ಕುಶಲಪ್ರಶ್ನೆಯನ್ನು ಮಾಡಿದರು. ಪಾಠಪ್ರವಚನಗಳ ಬಗ್ಗೆಯೂ ವಿಚಾರಿಸಿದರು. ತತ್ಕ್ಷಣದಲ್ಲಿ ಒಮ್ಮೆಲೆ ಏಕಾದಶೀ ವಿಷಯದ ಕುರಿತು ಪ್ರಶ್ನಿಸಿದರು. ಸ್ಪಷ್ಟವಿರದ ಧ್ವನಿಯಿಂದಲೇ ಏಕಾದಶೀ ಬಗ್ಗೆ ಮಾಡಿದ್ದ ಪ್ರಶ್ನೆಯನ್ನು ಕೇಳಿ ಅಲ್ಲಿದ್ದವರೆಲ್ಲರೂ ಸ್ತಂಭೀಭೂತರಾದರು. ಶ್ರೀಸತ್ಯಾತ್ಮತೀರ್ಥರು ''ಏನು ಸ್ವಾಮಿ! ಇಂತಹ ಸಮಯದಲ್ಲೂ ಅದನ್ನು ಮರೆತಿಲ್ಲವೇ? ಆಶ್ಚರ್ಯ! ತಾವು ಮೊದಲು ಆರೋಗ್ಯಪೂರ್ಣರಾಗಿರಿ ಅನಂತರದಲ್ಲಿ ವಿಚಾರವನ್ನು ಮಾಡೋಣ.'' ಎಂದರು.

ಇನ್ನೊಂದು ದಿನ, ಆಹಾರವನ್ನೇ ಸ್ವೀಕರಿಸದ ಶ್ರೀಪಾದರು ದ್ರವಪದಾರ್ಥವನ್ನೂ ಸ್ವೀಕರಿಸಲಿಲ್ಲ. ಶಿಷ್ಯರ ಬಳಿಯಲ್ಲೂ ಮಾತನಾಡಲಿಲ್ಲ. ಸಾಯಂಕಾಲ ನಾಲ್ಕು ಘಂಟೆ

ಗಳಾದರೂ ಶಿಷ್ಯರ ಊಟ ನಡೆಯಲಿಲ್ಲ. ನಿತ್ಯ ಬರುವಂತೆ ಪೇಜಾವರಶ್ರೀಪಾದರು ಅಂದೂ ಬಂದರು. ಶಿಷ್ಯರನ್ನು ವಿಚಾರಿಸಿದರು. ಊಟವಾಗದ ವಿಷಯ ಗುರುಗಳು ಮಾತನಾಡದಿರುವುದನ್ನು ತಿಳಿದರು. ಪ್ರಾಯಃ ಗುರುಗಳ ಮನಸ್ಸಿನಲ್ಲಿ ಏನೋ ಸಂಕಲ್ಪವಿದೆ ಅದಕ್ಕಾಗಿ ಆಹಾರವನ್ನು ಬಿಟ್ಟಿರಬೇಕು ಎಂದು ಊಹಿಸಿದರು. ಏಕಾಂತದಲ್ಲಿ ಶಿಷ್ಯರೊಡನೆ ಪೇಜಾವರಶ್ರೀಪಾದರು ಗುರುಗಳನ್ನು ತಮ್ಮ ಸಂಕಲ್ಪವೇನೆಂದು ಕೇಳಿದರು. ಊಟವನ್ನೂ ಮಾಡದೇ ಇರುವ ಕಾರಣವನ್ನೂ ಕೇಳಿದರು. ಏನೇನು ಸಂಕಲ್ಪವೆಂದೂ ತಾವೇ ಊಹಿಸಿ ಪೇಜಾವರಶ್ರೀಪಾದರು ಕೇಳಿದರೂ ಯಾವುದಕ್ಕೂ ಗುರುಗಳ ಪ್ರತಿಕ್ರಿಯೆ ಇಲ್ಲ. ಕೊನೆಯಲ್ಲಿ ''ಏಕಾದಶೀ ಕುರಿತಾದ ಚಿಂತೆಯೇ? ಇನ್ನು ಮುಂದೆ ಏಕಾದಶೀ ವಿಚಾರವನ್ನು ಎಲ್ಲರೂ ಉಪೇಕ್ಷಿಸಿರುವರೇ ಬಿಟ್ಟುಬಿಡುವರೇ ಎಂಬ ಚಿಂತೆಯೇ'' ಎಂದು ಪ್ರಶ್ನಿಸಿದಾಗ ಶ್ರೀಪಾದರು ತಮ್ಮ ತಲೆಯನ್ನು ಅಲ್ಲಾಡಿಸಿ ''ಹೌದು'' ಎಂದು ಸೂಚಿಸಿದರು. ಆಗ ಪೇಜಾವರಶ್ರೀಪಾದರು ''ಸ್ವಾಮಿ !ಅದರ ಬಗ್ಗೆ ತಮಗೆ ಚಿಂತೆಬೇಡ. ನಾವೆಲ್ಲ ಶಿಷ್ಯರೂ ತಮ್ಮ ವಿಚಾರಸರಣಿಯನ್ನು ಮುಂದುವರೆಸಿಕೊಂಡು ಹೋಗುತ್ತೇವೆ. ಇದು ಖಚಿತವಾದ ಮಾತು. ಆ ಬಗ್ಗೆ ತಮಗೆ ಚಿಂತೆಬೇಡ ಸಾಧ್ಯವಾದಷ್ಟು ಎಲ್ಲರನ್ನೂ ಮನಒಲಿಸಿ ಏಕಾದಶಿಯ ಏಕತೆಯನ್ನು ಸಾಧಿಸಲು ಪ್ರಯತ್ನಿಸುತ್ತೇವೆ.'' ಎಂದು ದೃಢವಾಗಿ ನುಡಿದರು. ಆಗ ಮಾತ್ರ ಶ್ರೀಪಾದರ ಮುಖದಲ್ಲಿ ಸಂತಸದ ಹೊಳೆಯೇ ಹರಿಯಿತು. ಆಗ ಪೇಜಾವರ ಶ್ರೀಪಾದರು ಈಗಲಾದರೂ ಸಮಾಧಾನವಾಯಿತೇ? ಇನ್ನಾದರೂ ಆಹಾರವನ್ನು ಸ್ವೀಕರಿಸಬಹುದೇ? ನಿಮ್ಮ ವಿದ್ಯಾರ್ಥಿಗಳು ನಿಮಗಾಗಿ ಇನ್ನೂ ಊಟವನ್ನೇ ಮಾಡಿಲ್ಲ ''ಎಂದರು. ಆಗ ಶ್ರೀಪಾದರು ತಮ್ಮ ಆಹಾರಸ್ವೀಕಾರಕ್ಕೆ ಒಪ್ಪಿಗೆಯನ್ನಿತ್ತರು. ಅವರು ಸ್ವೀಕರಿಸಿದ ಆಹಾರ ಮಾತ್ರ ಕೇವಲ ಅರ್ಧಲೋಟ ಸೇಬು ಹಣ್ಣಿನ ರಸಮಾತ್ರ. ವಿದ್ಯಾರ್ಥಿಗಳು ಭೋಜನಮಾಡಿದರು.

ಈ ಸನ್ನಿವೇಶದಿಂದ ಶ್ರೀಪಾದರ ದೀಕ್ಷೆ ಯಾವ ಮಟ್ಟದಲ್ಲಿದೆ ಎಂಬುದು ಅರ್ಥವಾಗುವುದು. ಇಷ್ಟೆಲ್ಲ ನಡೆದರು ಈ ಅವಿಚಾರವಂತ ಮಂದಿಯೊಂದಿಗೆ ಇರಲು ಇಷ್ಟಪಡದ ಶ್ರೀಪಾದರು ಈ ಜಂಜಾಟದ ಜಗತ್ತಿನಿಂದ ಮುಕ್ತರಾಗಲು ಮನಸ್ಸು ಮಾಡಿದರು. ಸಪ್ತಮೀ ದಿನವೇ ಹೊರಟಿದ್ದ ಶ್ರೀಪಾದರು ಶುದ್ಧವಾದ ಗೊಂದಲವಿಲ್ಲದ ಹರಿದಿನದ, ವೇದವ್ಯಾಸ ಜಯಂತಿಯ ಬರುವಿಗಾಗಿ ಕಾಯ್ದರು. ಕಾದು, ಅದೇ ದಿನದಂದು ಜಗತ್ತಿನ ಆ ಅಪ್ಪನ ಪದವನ್ನುಸೇರಿದರು.



# ಸರ್ವಮಾನ್ಯರಿಗೆ ಸನ್ಮಾನ

ಮಾನವನ ಸನ್ಮಾನಕ್ಕೆ ಕಾರಣ ಐದು ಗುಣಗಳು. ''ವಿತ್ತಂ, ಬಂಧುಃ, ವಯಃ,ಕರ್ಮ,ವಿದ್ಯಾ.'' ಈ ಐದರಿಂದಲೂ ಉತ್ತಮಯೋಗ್ಯತೆಯನ್ನು ಹೊಂದಿದ ಶ್ರೀವಿದ್ಯಾಮಾನ್ಯ ತೀರ್ಥರು ಸರ್ವದಾ ಸರ್ವಮಾನ್ಯರು.

ಅವರ ಜೀವನದ ಸನ್ಮಾನಮಾಲಿಕೆಯ ಕೆಲವು ಕುಸುಮಗಳು

## ರಜತಮಹೋತ್ಸವ

ಶ್ರೀಮದಾಚಾರ್ಯರ ಪ್ರಿಯಶಿಷ್ಯರಾದ ಶ್ರೀಸತ್ಯ ತೀರ್ಥರ ಪೀಠವಾದ ಶ್ರೀಭಂಡಾರಕೇರಿ ಮಠದ ಶ್ರೀವಿದ್ಯಾರ್ಣವ ತೀರ್ಥರು ಉಡುಪಿಯಲ್ಲಿ ವೃಂದಾವನಸ್ಥರಾದ ಬಳಿಕ ಆ ಪೀಠವನ್ನು ಅಲಂಕರಿಸಿದವರು ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು. ಅವರು ಪೂರ್ವಾಶ್ರಮದ ಕೌಟುಂಬಿಕ ಸಂಬಂಧವನ್ನು ತ್ಯಜಿಸಿ ಸನ್ಯಾಸಿಯಾದ ದಿನ-5-11-1925. ಅಂದಿನಿಂದಲೂ ಸಂನ್ಯಾಸಜೀವನ ವನ್ನು ನಡೆಸುತ್ತಾ ಪಾಠಪ್ರವಚನಾದಿಗಳನ್ನು ಶ್ರೀರಾಮಾರ್ಚನೆಯನ್ನು ನಡೆಸಿ ಆಚಾರ್ಯರ ಶಿಷ್ಯ ಪರಂಪರೆಯ ಸಾರ್ಥಕ ಯತಿಗಳೆಂದೆನಿಸಿದರು. ಅವರು ಪೀಠಕ್ಕೆ ಬಂದು 25 ವರ್ಷಗಳು ಕಳೆದ ಬಳಿಕ ಅವರ ಮೆಚ್ಚಿನ ಶಿಷ್ಯ ಶ್ರೀಪೇಜಾವರ ಶ್ರೀಪಾದರು ಹಾಗೂ ಉಳಿದ ಶಿಷ್ಯರೂ, ಭಕ್ತರೂ ಸೇರಿಕೊಂಡು 1950 ರಲ್ಲಿ ಉಡುಪಿ ಶ್ರೀಪೇಜಾವರ ಮಠದಲ್ಲಿ ಶ್ರೀವಿದ್ಯಾಮಾನ್ಯ ತೀರ್ಥ ಶ್ರೀಪಾದರ ಸರ್ವಜ್ಞಾಚಾರ್ಯ ಸಿಂಹಾಸನಾ ರೋಹಣ ರಜತ ಮಹೋತ್ಸವವನ್ನು ಆಚರಿಸಿದರು. ಆ ಉತ್ಸವ ಬಹಳ ವೈಭವದಿಂದ ಜರುಗಿತು. ಉಡುಪಿಯ ಅಷ್ಟಮಠಗಳ ಎಲ್ಲ ಶ್ರೀಪಾದರೂ ಈ ಉತ್ಸವದಲ್ಲಿ ಪಾಲ್ಗೊಂಡಿದ್ದರು. ವಿಶೇಷ ಅನ್ನಸಂತರ್ಪಣೆ, ದಕ್ಷಿಣೆಗಳು, ದಾನಗಳು, ಸಂಭಾವನೆಗಳು ನಡೆದವು. ಸಂಜೆಯ ಸಾರ್ವಜನಿಕ ಸಭೆಯಲ್ಲಿ ಶ್ರೀಭಂಡಾರಕೇರಿ ಶ್ರೀಪಾದರನ್ನು ಸನ್ಮಾನಿಸಲಾಯಿತು. ಸನ್ಮಾನ ಪತ್ರವನ್ನೂ ಸಮರ್ಪಿಸಲಾಯಿತು. ಅನೇಕ ಶಿಷ್ಯರು ಸಂಸ್ಕೃತ, ಕನ್ನಡ ಕಾವ್ಯ ಕುಸುಮಾಂಜಲಿಗಳನ್ನು ಶ್ರೀಪಾದರಿಗೆ ಅರ್ಪಿಸಿದರು. ಶ್ರೀಪೇಜಾವರ ಶ್ರೀಪಾದರು ತಮ್ಮ ಗುರುಗಳ ರಜತೋತ್ಸವದ ಕುರಿತು ಮಾತನಾಡುತ್ತಾ ಅವರ ಶಾಸ್ತ್ರೀಯ ವಿದ್ವತ್ತು ಪಕ್ವವಾದ ಜ್ಞಾನ ಶುದ್ಧವಾದ ವಿರಕ್ತಿ ನಿಸ್ಸೀಮ ಔದಾರ್ಯ,

ಅಮಿತಶಿಷ್ಯವಾತ್ಸಲ್ಯ ಮತ್ತು ನಿರಂತರದ ಪಾರಪ್ರವಚನಗಳ ಕುರಿತು ಉಪನ್ಯಾಸವನ್ನಿತ್ತರು. ಶ್ರೀ ಕಾಪೂ ಸುಬ್ಬರಾಯ ಪುರಾಣಿಕರು ಮೊದಲಾದ ಪಂಡಿತರು ಶ್ರೀಪಾದರ ಹಿರಿಮೆಯನ್ನು ಸ್ತುತಿಸಿ ಅವರ ಅನುಗ್ರಹ ಸದಾ ಸಮಾಜದಮೇಲಿರಬೇಕು ಎಂದು ಪ್ರಾರ್ಥಿಸಿದರು.

## ಸುವರ್ಣಮಹೋತ್ಸವ

27-7-1913 ರಂದು ಎರ್ಮಾಳಿನಲ್ಲಿ ತಂತ್ರಿಗಳ ಪುತ್ರನಾಗಿ ಜನಿಸಿದ ಶ್ರೀವಿದ್ಯಾಮಾನ್ಯತೀರ್ಥರು ಸಾರ್ಥಕ 50 ವರ್ಷದ ಬದುಕಿನ ಸುವರ್ಣಮಹೊತ್ಸವವನ್ನು ಅವರ ಭಕ್ತರು ಶಿಷ್ಯರೆಲ್ಲ ಕೂಡಿ ಶ್ರೀವಿಶ್ವೇಶತೀರ್ಥರ ನೇತೃತ್ವದಲ್ಲಿ ದಲ್ಲಿ ಗದಗ ನಗರದಲ್ಲಿ ಬಹು ವಿಜೃಂಬಣೆಯಿಂದ ಆಚರಿಸಿದರು. ಆ ಸಂದರ್ಭದಲ್ಲಿ ಅವರ ತಪೋಮಯ, ಜ್ಞಾನಮಯ, ದಾನಮಯ ಪಾವನಜೀವನದ ಪುಣ್ಯಚರಿತೆಯನ್ನು ಅಂದಿನ ಹಾಗೂ ಮುಂದಿನ ಭಕ್ತರು ಶಿಷ್ಯರು ತಿಳಿದು ಕೃತಾರ್ಥರಾಗಲು ಒಂದು ಗ್ರಂಥವನ್ನು ಬಿಡುಗಡೆಗೊಳಿಸಿದರು. ಆ ಗ್ರಂಥದ ಪ್ರಕಾಶಕರು ಗದುಗಿನ ಶ್ರೀ ಕೆ ನಾರಾಯಣರಾಯರು. ಅವರು ಶ್ರೀಪಾದರ ಅಚ್ಛಿನ್ನ ಭಕ್ತರು, ಅಷ್ಟೇ ಅಲ್ಲದೇ ಪರೋಪಕಾರಿಗಳು. ವಿಶೇಷವಾಗಿ ಶ್ರೀವಿದ್ಯಾಮಾನ್ಯ ತೀರ್ಥರ ಆದೇಶದ ಮೇರೆಗೆ ಸರ್ವಮೂಲಗ್ರಂಥಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯವನ್ನು ಮಾಡಿದ ಮಹಾ ಉದಾರಿಗಳು. ಅವರು ಎಂದೆಂದೂ ಶ್ರೀವಿದ್ಯಾಮಾನ್ಯ ತೀರ್ಥರನ್ನೇ ನಂಬಿದವರು ಅಂತೆಯೇ ಅವರ ಶಿಷ್ಯರನ್ನೂ ಕೂಡ. ಇವರ ಪ್ರೇರಣೆಯಿಂದ ಪ್ರೋತ್ಸಾಹದಿಂದ ಶ್ರೀಪಾದರ ಪವಿತ್ರ ಜೀವನದ ಮಾಹಿತಿಗಳನ್ನು ಸಂಗ್ರಹಿಸಿ ಸುಂದರ ಶೈಲಿಯಲ್ಲಿ ಬರೆದು ಮುಂದಿನ ಜನಾಂಗ ಶ್ರೀಪಾದರ ಮಹಿಮೆಯನ್ನು ತಿಳಿಯಲು ಮುಖ್ಯಕಾರಣರಾದ ಪುಣ್ಯಾತ್ಮರು, ಶ್ರೀಮಳಗೀ ಜಯರಾಮಾಚಾರ್ಯರು ಅವರ ಆ ಗ್ರಂಥದ ಆಧಾರದಿಂದಲೇ ಈ ಗ್ರಂಥವೂ ಜನ್ಮತಾಳುವುದಕ್ಕೆ ಕಾರಣವಾಯಿತೆಂದು ವಾಚಕರು ಭಾವಿಸಬೇಕು.

## ವಜ್ರಮಹೋತ್ಸವ

ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಬದುಕಿದ 75 ವರ್ಷಗಳ ವಜ್ರಮಹೋತ್ಸವವನ್ನು ಕರ್ಣಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಬಹು ವಿಜೃಂಭಣೆ ಯಿಂದ ನಡೆಸಲಾಯಿತು. ಈ ಮಹೋತ್ಸವಕ್ಕಾಗಿ ಒಂದು ಉನ್ನತಮಟ್ಟದ ಸಮಿತಿಯೊಂದನ್ನೂ ರಚಿಸಲಾಯಿತು. ಶ್ರೀಪಾದರ ಯತಿಶಿಷ್ಯರೂ, ಗೃಹಸ್ಥಶಿಷ್ಯರೂ, ಶ್ರೀಮಂತಭಕ್ತರೂ ಹಾಗು ಸಮಸ್ತ ಭಕ್ತಜನತೆ ಜೊತೆಗೂಡಿ ಈ ಮಹಿತಾತ್ಮರ ಉತ್ಸವವನ್ನು 19-8-1988 ರಿಂದ 28-8-1988 ರ ವರೆಗೆ 10 ದಿನಗಳ ಕಾಲ ನಡೆಸಿದರು. ಹತ್ತು ದಿನವೂ ಶ್ರೀಪಾದರ ಪೂಜೆ ಭಿಕ್ಷೆ ಸಾವಿರಾರು ಭಕ್ತಾದಿಗಳ ಅನ್ನ ಸಂತರ್ಪಣೆ ಅನೇಕ ಶ್ರೀಪಾದರ ಪ್ರವಚನಗಳೂ ಅನೇಕ ವಿದ್ವಾಂಸರ ಉಪನ್ಯಾಸಗಳೂ ಸಂಗೀತ ಮೊದಲಾದ ಕಾರ್ಯಕ್ರಮ ಗಳೆಲ್ಲವೂ ಬೆಂಗಳೂರಿನ ರೇಸ್ ಕೋರ್ಸ ರಸ್ತೆಯಲ್ಲಿರುವ ಶ್ರೀಗುರುರಾಜಕಲ್ಯಾಣಮಂಟಪದಲ್ಲಿ ಜರುಗುತ್ತಿದ್ದವು. 28-8-1988 ರಂದು ಪಿಟೀಲು ಚೌಡಯ್ಯ ಸ್ಮಾರಕ ಭವನದಲ್ಲಿ ಶ್ರೀಪಾದರ ವಿಶೇಷ ಸನ್ಮಾನವನ್ನು ಏರ್ಪಡಿಸಲಾಗಿತ್ತು. ಸನ್ಮಾನಕ್ಕೆ ಮುಂಚಿತವಾಗಿ

ಯತಿಶಿಷ್ಯಸಮೇತರಾದ ಶ್ರೀವಿದ್ಯಾಮಾನ್ಯತೀರ್ಥರನ್ನು ಬಹು ವಿಜೃಂಭಣೆಯಿಂದ ಮೆರವಣಿಗೆಯಲ್ಲಿ ಕರೆತರಲಾಯಿತು. ಸಹಸ್ರಾರು ಭಕ್ತಾದಿಗಳ ಸಮ್ಮುಖದಲ್ಲಿರುವ ಬೃಹತ್ ವೇದಿಕೆಯಲ್ಲಿ ಕಾವಿ ಬಣ್ಣವೇ ಸಾಲಾಗಿ ಶೋಭಿಸುತ್ತಿತ್ತು. ಮಧ್ಯದಲ್ಲಿ ಶ್ರೀವಿದ್ಯಾಮಾನ್ಯ ತೀರ್ಥಶ್ರೀಪಾದರು ಇದ್ದು ಅವರ ಎಡಬಲದಲ್ಲಿ ಶ್ರೀಪೇಜಾವರಶ್ರೀಪಾದರೂ, ಶ್ರೀಪುತ್ತಿಗೆ ಶ್ರೀಪಾದರೂ, ಶ್ರೀಪಲಿಮಾರು ಕಿರಿಯ ಶ್ರೀಪಾದರೂ, ಶ್ರೀಭಂಡಾರಕೇರಿ ಕಿರಿಯ ಶ್ರೀಪಾದರೂ, ಶ್ರೀಬಾಳಗಾರು ಶ್ರೀಪಾದರೂ ಶ್ರೀಪ್ರಯಾಗ ಮಠದ ಶ್ರೀವಿದ್ಯಾವಲ್ಲಭತೀರ್ಥರು ಮೊದಲಾದ ಯತಿವರೇಣ್ಯರು ಆಸೀನರಾಗಿದ್ದರು. ಮುಖ್ಯ ಅಥಿತಿಗಳಾಗಿ ನಗರದ ಮೇಯರ್ ಡಾ || ಎಂ. ಜಿ. ಶೇಷಾದ್ರಿ, ಕೆ ಕೃಷ್ಣರಾವ್ ವುಡ್‌ಲಾಂಡ್ಸ್ ಶ್ರೀಭದ್ರಗಿರಿ ಸರ್ವೋತ್ತಮದಾಸ್, ಶ್ರೀರಾಮಸ್ವಾಮಿ ಅಯ್ಯಂಗಾರ್ ಮುಂತಾದ ಗಣ್ಯರು ಪಾಲ್ಗೊಂಡಿದ್ದರು. ಸಮಿತಿಯ ಕಾರ್ಯದರ್ಶಿಗಳಾದ ಹಾಗೂ ಉತ್ಸವದ ಪೂರ್ಣ ನೇತೃತ್ವವನ್ನು ವಹಿಸಿದ ಶ್ರೀಪಾದರ ಮಹಾಭಕ್ತ ಶ್ರೀ ಕೆ.ವಿ. ಆಚಾರ್ಯರು(ಚಾರ್ಟೆಂಡ್ ಅಕೌಂಟೆಂಟ್. ಬೆಂಗಳೂರು) ಇವರ ಜೊತೆಯಾಗಿ ಉತ್ಸವದ ಆಧಾರ ಸ್ತಂಭಗಳಾಗಿ ಸೇವೆ ಸಲ್ಲಿಸಿದ ಭಕ್ತರು ಶ್ರೀ. ಅನಂತ ಪದ್ಮನಾಭ ಬಲ್ಲಾಳ್, ಶ್ರೀ ವಾದಿರಾಜರಾವ್, ಶ್ರೀ ಸಿ.ಎಮ್. ನಾಗರಾಜರಾವ್,ಶ್ರೀ ಸಿ.ಎಂ. ನಾಗೇಂದ್ರರಾವ್. ಶ್ರೀ. ಜಿ. ಆರ್ . ನಾಯಕ್, ಶ್ರೀರಾಮನಾಥ್ ಭಟ್ ಮೊದಲಾದವರು.

ಶ್ರೀಪಾದರ ಸನ್ಮಾನ ಕಾರ್ಯಕ್ರಮವು ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ಯಾರ್ಥಿಗಳ ವೇದ ಘೋಷದಿಂದ ಆರಂಭಗೊಂಡಿತು. ಅನೇಕ ವಿದ್ವಾಂಸರ ಗಣ್ಯರ ಅಭಿನಂದನಾ ಭಾಷಣಗಳನಂತರ ಶ್ರೀಪಾದರೆಲ್ಲರ ಗುರುಸ್ತುತಿಯು ನಡೆಯಿತು. ಶ್ರೀವಿದ್ಯಾಮಾನ್ಯತೀರ್ಥ ರನ್ನು 75 ವಸಂತಗಳನ್ನು ಕಂಡ ಪ್ರಯುಕ್ತ 75 ಸಾವಿರರೂಪಾಯಿಗಳ ಕಾಣಿಕೆಯನ್ನು ಸಮರ್ಪಿಸಿ ಹಾಗೂ ಸುವರ್ಣಾಭಿಷೇಕವನ್ನು ಮಾಡಿ ರೇಷ್ಮೆಯ ಜರಿತಾರಿ ಶಾಲನ್ನು ಹೊದಿಸುವ ಮೂಲಕ ಸನ್ಮಾನಿಸಲಾಯಿತು. ಜೊತೆಯಲ್ಲಿ ಶ್ರೀಪಾದರ ಸಾಧನೆ ತಪಃಶಕ್ತಿ ವಿದ್ವತ್ತು ಮೊದಲಾದವುಗಳನ್ನು ಸೂಚಿಸುವ ಸನ್ಮಾನ ಪತ್ರವನ್ನು ನೀಡಲಾಯಿತು. ಈ ಮಹಾತಪಸ್ವಿಗಳಿಂದ ನಿರಂತರದ ಕೃಪೆಯನ್ನು ಪ್ರಾರ್ಥಿಸಲಾಯಿತು. ಈ ಸಂದರ್ಭದಲ್ಲಿಯೇ ಈ ಉತ್ಸವದ ಸ್ಮರಣಾರ್ಥವಾಗಿ **''ಶ್ರೀವಿದ್ಯಾಮಾನ್ಯ ವಿಜಯ ವೈಜಯಂತೀ''**ಎಂಬ ಸ್ಮರಣ ಸಂಚಿಕೆಯನ್ನು ಬಿಡುಗಡೆಗೊಳಿಸಲಾಯಿತು. ಅದರಲ್ಲಿ ಶ್ರೀಪಾದರ ಎಲ್ಲ ಯತಿಶಿಷ್ಯರ ವಿಶೇಷ ಲೇಖನಗಳೂ ವಿದ್ವಾಂಸರ ಬರವಣಿಗೆಗಳೂ ಹಾಗೂ ಕೆಲವು ಭಾವಚಿತ್ರಗಳು ಅಡಕವಾಗಿರುವುವು.

ಸನ್ಮಾನಕ್ಕೆ ಉತ್ತರವಾಗಿ ಸಂದೇಶವನ್ನಿತ್ತ ಶ್ರೀವಿದ್ಯಾಮಾನ್ಯ ಶ್ರೀಪಾದರು 'ಇಷ್ಟೊಂದು ಸಂಭ್ರಮದಿಂದ ನೀವೆಲ್ಲರೂ ಮಾಡಿರುವ ಈ ಸನ್ಮಾನವೂ ನಮಗಲ್ಲ ನಮ್ಮೊಳಗಿರುವ ಮಧ್ವಾಂತರ್ಗತ ಶ್ರೀಕೃಷ್ಣನಿಗೆ ಎಂದು ನಮ್ಮ ಅನುಸಂಧಾನವಾಗಿದೆ. ಈ ನಿಮ್ಮ ಸೇವೆಯಿಂದ ಶ್ರೀಕೃಷ್ಣನೂ ಹಾಗು ಶ್ರೀಮದಾಚಾರ್ಯರೂ ಎಲ್ಲರನ್ನೂ ಅನುಗ್ರಹಿಸಲಿ ಜಗತ್ತಿಗೆ ಮಂಗಳವಾಗಲಿ' ಎಂದು ನುಡಿದರು. ಸಭಾ ಕಾರ್ಯಕ್ರಮದ ನಂತರ

ಖ್ಯಾತಪ್ರಭಾತ್ ಕಲಾವಿದರಿಂದ ಶ್ರೀಕೃಷ್ಣವೈಜಯಂತೀ ಹಾಗು ದಶಾವತಾರ ಎಂಬ ನೃತ್ಯರೂಪಕಗಳು ನಡೆದವು.

ಈ 75 ವರ್ಷದ ಉತ್ಸವದ ಅಂಗವಾಗಿ ಹೈದರಾಬಾದ್, ಹುಬ್ಬಳ್ಳಿ, ಧಾರವಾಡ, ಮಾನ್ವಿ ಮೊದಲಾದ ಊರುಗಳಲ್ಲೂ ಸನ್ಮಾನ ಸಮಾರಂಭಗಳು ಜರುಗಿದವು.

## ಎಂಬತ್ತು ತುಂಬಿದ ಹಬ್ಬ

ಪುತ್ತಿಗೆ ಮಠಾಧೀಶರಾದ ಶ್ರೀಶ್ರೀಸುಗುಣೇಂದ್ರ ತೀರ್ಥರು ತಮ್ಮ ಪರ್ಯಾಯದ ಅಂತಿಮ ಘಟ್ಟದಲ್ಲಿ 80 ವಸಂತಗಳನ್ನು ಕಂಡ ಶ್ರೀವಿದ್ಯಾಮಾನ್ಯತೀರ್ಥರಿಗೆ ಸಂಭ್ರಮದಿಂದ ವಿಶೇಷಸನ್ಮಾನವನ್ನು ಮಾಡಿದರು. 80 ವರುಷದ ಉತ್ಸವದ ಅಂಗವಾಗಿ ಮೊದಲ ಸನ್ಮಾನ ಇದಾಗಿತ್ತು. ಪುಷ್ಪಕಿರೀಟ ಹಾರ,ತುರಾಯಿಗಳಿಂದ ಅಲಂಕರಿಸಲ್ಪಟ್ಟ ಶ್ರೀಪಾದರನ್ನು ವಿಶೇಷ ಮೆರವಣಿಗೆಯಲ್ಲಿ ರಾಜಾಂಗಣಕ್ಕೆ ಸ್ವಾಗತಿಸಲಾಯಿತು. ನಾಣ್ಯಗಳಿಂದ ಶ್ರೀಪಾದರ ತುಲಾಭಾರವನ್ನು ಮಾಡಲಾಯಿತು. ಪುತ್ತಿಗೆ ಶ್ರೀಪಾದರು 80 ವರುಷದ ನೆನಪಿಗಾಗಿ 80ಸಾವಿರ ರೂಪಾಯಿಗಳನ್ನು ಕಾಣಿಕೆಯಾಗಿ ನೀಡಿದರು. ಶ್ರೀಪಾದರು ಅನುಗ್ರಹಸಂದೇಶವನ್ನಿತ್ತರು. ಶ್ರೀವಿದ್ಯಾಮಾನ್ಯತೀರ್ಥರ 80 ನೇ ವರ್ಧಂತಿಯ ಸನ್ಮಾನ ಸಮಾರಂಭವೂ ,ಉತ್ಸವವೂ, ಶ್ರೀಕೃಷ್ಣನ ಹಾಗು ಶ್ರೀಮದಾಚಾರ್ಯರ ಸನ್ನಿಧಿಯಲ್ಲೇ ಆರಂಭಗೊಂಡಿತು ಇದು ಒಂದು ದೈವಕೃಪೆಯ ಸಂಕೇತ. ಅವರ ಶಿಷ್ಯರಾದ ನಮ್ಮ ಪರ್ಯಾಯದಲ್ಲಿಯೇ ಈ ಕಾರ್ಯಕ್ರಮದ ನಿರ್ವಹಣೆಯ ಸುಯೋಗ ನಮ್ಮ ಸುಕೃತ'' ಎಂದು ಪುತ್ತಿಗೆ ಶ್ರೀಪಾದರು ತಮ್ಮ ಅಭಿನಂದನ ಭಾಷಣದಲ್ಲಿ ನುಡಿದರು.

## ರಜತತುಲಾಭಾರ

1994 ರಲ್ಲಿ ಬೆಂಗಳೂರಿನ ಪೂರ್ಣಪ್ರಜ್ಞವಿದ್ಯಾಪೀಠದ ಆವರಣದಲ್ಲಿ ಬೃಹತ್ತಾದ ಪೆಂಡಾಲನ್ನು ಹಾಕಲಾಗಿತ್ತು. ಅಲ್ಲಿ ಬಹಳ ಸಂಭ್ರಮ ತೋರುತ್ತಿತ್ತು. ಮಧ್ವನವಮಿ ಉತ್ಸವದೊಂದಿಗೆ ತತ್ವಜ್ಞಾನಸಮ್ಮೇಳನದೊಂದಿಗೆ ಒಂದು ವಿಶಿಷ್ಟವಾದ ಕಾರ್ಯಕ್ರಮವೂ ಸೇರಿತ್ತು. ಅದು ಶ್ರೀವಿಶ್ವೇಶತೀರ್ಥರು ತಮ್ಮ ಗುರುಗಳ 80ನೇ ವರ್ಧಂತಿಯ ಮಹೋತ್ಸವದ ಅಂಗವಾಗಿ ಅವರಿಗೆ ರಜತ ತುಲಾಭಾರವನ್ನು ಮಾಡುವ ಕಾರ್ಯಕ್ರಮ. ಅದಕ್ಕಾಗಿ ನಾಡಿನಾದ್ಯಂತದಿಂದ ಭಕ್ತರಿಂದ ದೇಣಿಗೆಯನ್ನು ಸಂಗ್ರಹಿಸಲಾಗಿತ್ತು. ಸುಮಾರು 70ಕೇಜಿ ಬೆಳ್ಳಿಯ ಗಟ್ಟಿಗಳನ್ನು ಸೇರಿಸಲಾಯಿತು. ಎಲ್ಲ ಶ್ರೀಪಾದರ ಉಪಸ್ಥಿತಿಯಲ್ಲಿ ಹತ್ತಾರು ಸಾವಿರ ಭಕ್ತರ ಸಮ್ಮುಖದಲ್ಲಿ ಸುವರ್ಣಯತೀಶ್ವರರನ್ನು ಬೆಳ್ಳಿಯಿಂದ ತೂಗಲಾಯಿತು. ಸುವರ್ಣವೃಷ್ಟಿಯನ್ನು ಹರಿಸಲಾಯಿತು. ಆರತಿಯನ್ನೂ ಬೆಳಗಲಾಯಿತು. ಈ ಸನ್ಮಾನಕ್ಕೆ ಉತ್ತರವಾಗಿ ಸಂದೇಶವನ್ನಿತ್ತ ಶ್ರೀವಿದ್ಯಾಮಾನ್ಯತೀರ್ಥರು 'ನೀವೆಲ್ಲರೂ ಸೇರಿ ಮಾಡಿದ ತುಲಾಭಾರ ಸನ್ಮಾನಾದಿಗಳೆಲ್ಲವೂ ನಮ್ಮಲ್ಲಿ ಅಂತರ್ಯಾಮಿಯಾದ ಭಗಂತನಿಗೆ ಮತ್ತು ಆಚಾರ್ಯರಿಗೆ ಎಂದು ನಾವು ಅನುಸಂಧಾನಿಸುತ್ತೇವೆ ಎಂದು ನುಡಿದರು. ಶ್ರೀಪಾದರು ತಮ್ಮನ್ನು ತೂಗಿದ ಆ ಬೆಳ್ಳಿಯ ಮೊತ್ತ ಸುಮಾರು 50ಲಕ್ಷರೂಪಾಯಿಗಳನ್ನು ಶ್ರೀವಿಶ್ವೇಶತೀರ್ಥರ ಪಂಡಿತ ಪೋಷಣ ನಿಧಿಗೆ ಮರಳಿ ನೀಡಿದರು. ಇಂತಹ ಔದಾರ್ಯ ಕಾಣಲು ಸಿಕ್ಕೀತೆ! ಎಂದು ಜನಗಳ ಮನದೊಳಗಿನ ಹರ್ಷ ಅವರ ಕರತಾಡನಗಳ

ಶಬ್ದದ ಮೂಲಕ ಮುಗಿಲನ್ನು ಮುಟ್ಟಿತು.

## ಶ್ರೀರಂಗನ ಸನ್ನಿಧಿಯಲ್ಲಿ ಸಹಸ್ರಚಂದ್ರದರ್ಶನ ಶಾಂತಿ

ಶಾಸ್ತ್ರೀಯ ರೀತಿಯಿಂದ ಸಾವಿರ ಹುಣ್ಣಿಮೆಯ ಚಂದ್ರಮರನ್ನು ಕಂಡ ಪುಣ್ಯಾತ್ಮರು ಶ್ರೀವಿದ್ಯಾಮಾನ್ಯ ತೀರ್ಥರು. ಅದಕ್ಕಾಗಿ ಕಾವೇರಿಯ ಮಧ್ಯದಲ್ಲಿರುವ ಸ್ವಯಂವ್ಯಕ್ತ ಶ್ರೀರಂಗಕ್ಷೇತ್ರದಲ್ಲಿ ಅವರ ಸಹಸ್ರಚಂದ್ರದರ್ಶನ ಶಾಂತಿಯನ್ನೂ ತುಲಾಭಾರ ಸನ್ಮಾನಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಈ ಮಹೋತ್ಸವದ ರೂವಾರಿಗಳು ಶ್ರೀಪಲಿಮಾರು ಮಠದ ಶ್ರೀಶ್ರೀವಿದ್ಯಾಧೀಶತೀರ್ಥರು. ಶಾಸ್ತ್ರಪಾಠಪ್ರವಚನ ಪ್ರಿಯರಾದ ಶ್ರೀವಿದ್ಯಾಮಾನ್ಯತೀರ್ಥರಿಗೆ 1994 ಅಕ್ಟೋಬರ್ ತಿಂಗಳಿನ 13,14 ರಂದು ಸಂವತ್ಸರದ ಆಶ್ವಯುಜ ಶುದ್ಧನವಮಿ,ದಶಮಿಯಂದು ಸನ್ಮಾನವನ್ನು ಮಾಡಲಾಯಿತು. ಸಹಸ್ರಸಹಸ್ರಸಂಖ್ಯೆಯಲ್ಲಿ ಭಕ್ತರು ಭಾಗವಹಿಸಿದ್ದರು. ಶ್ರೀಪಾದರಿಗೆ ಅಲ್ಲಿ ನಡೆದ ಹೋಮ ಹವನಾದಿಗಳಿಗಿಂತ ಅತ್ಯಂತಪ್ರಿಯವಾದ ಕಾರ್ಯಕ್ರಮ ವೆಂದರೆ ಅವರ ಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರು ನಡೆಸಿದ 4ನೆಯ ಸುಧಾಮಂಗಳ ಮಹೋತ್ಸವ. ಶ್ರೀವಿದ್ಯಾಧೀಶತೀರ್ಥರು ಆ ಮೊದಲು ಮೂರು ಸುಧಾಮಂಗಳಗಳನ್ನು ತಮ್ಮ ಗುರುಗಳ ಸನ್ನಿಧಿಯಲ್ಲಿ ನಡೆಸಿದ್ದು ಈ ನಾಲ್ಕನೆಯ ಬಾರಿಯ ಸುಧಾಪ್ರವಚನವನ್ನು ಗುರುಗಳಿಗೆ ಸಹಸ್ರಚಂದ್ರದರ್ಶನೋತ್ಸವದ ಉಡುಗೊರೆಯಾಗಿ ಸಮರ್ಪಿಸಿದರು. 13ನೇ ತಾರೀಖಿನಂದು ವಿದ್ವದ್ಗೋಷ್ಠಿ ನಡೆಯಿತು. 14ನೇ ತಾರೀಖಿನಂದು ಕಾವೇರಿಸ್ನಾನ, ಶ್ರೀರಂಗನಾಥಪರವಾಸು ದೇವರ ದರುಶನ, ರಂಗನಾಥನ ಸನ್ನಿಧಿಯಲ್ಲಿ ನ್ಯಾಯಸುಧೆಯ ಅಂತಿಮ ಘಟ್ಟದ ಪ್ರವಚನ, ಶಾಂತಿಪಾಠ ಹಾಗೂ ಸಮರ್ಪಣಾದಿಗಳ ನಂತರ ಶ್ರೀವ್ಯಾಸರಾಜಮಠದಲ್ಲಿ ಶ್ರೀವಿದ್ಯಾಧೀಶತೀರ್ಥರಿಂದ ವಿಶಿಷ್ಟ ಸುಧಾನುವಾದ ವೇದವ್ಯಾಸಪೂಜೆ ಹಾಗೂ ಗುರುಪೂಜೆಗಳು ಜರುಗಿದವು. ಶ್ರೀವಿದ್ಯಾಮಾನ್ಯ ತೀರ್ಥರ ಭಗವಂತನ ಉತ್ಸವದ ಅಂಗವಾಗಿ ಅವರಿಗೆ ಕಾಣಿಕೆಯನ್ನು ಕಿರಿಯ ಶ್ರೀಪಾದರು ನೀಡಲು ಉದ್ಯುಕ್ತರಾಗಿದ್ದಾಗ ಒಂದು ಮನೋಹರ ಆಕಸ್ಮಿಕ ನಡೆಯಿತು. ಅದು ಶ್ರೀವಿದ್ಯಾಮಾನ್ಯತೀರ್ಥರಿಗೆ ಭಗವಂತನ ಕೃಪೆ ಸರ್ವದಾ ಇರುವುದು ಎಂಬುದನ್ನು ಸೂಚಿಸುತ್ತಿತ್ತು. ತಿರುಪತಿ ಶ್ರೀನಿವಾಸನ ಮಹಾಪ್ರಸಾದ ವಾಗಿ ಅವನು ಉಟ್ಟಿದ್ದ ಬೃಹತ್ ಪೀತಾಂಬರವು ಹಾಗೂ ಗಂಧ ಅಕ್ಷತಾದಿಗಳನ್ನು ಆ ದೇವಸ್ಥಾನದವರು ಕೊಂಡು ಬಂದರು. ಅವರ ಉದ್ದೇಶ ಶ್ರೀಪಾದರಿಗೇ ನೀಡುವುದಾಗಿತ್ತು. ಕಿರಿಯ ಶ್ರೀಪಾದರ ಆನಂದಕ್ಕೆ ಪಾರವೇ ಇರಲಿಲ್ಲ ಕಾರಣ, ಗುರುಗಳಿಗೆ ಕಾಣಿಕೆಯಾಗಿ ಭಗವಂತನೇ ತನ್ನ ಶೇಷವಸ್ತ್ರವನ್ನು ನೀಡಲು ಕಳುಹಿಸಿರುವನೆಂದು ಧನ್ಯತೆಯಿಂದ ಭಾವಿಸಿದರು. ಗುರುಗಳಿಗೆ ಶೇಷವಸ್ತ್ರವನ್ನು ಹೊದಿಸಿದರು. ಭಕುತಸಮೂಹ ಮುದಪಟ್ಟಿತು.

ಸಭೆಯ ನಂತರ ಶ್ರೀಪಾದರಿಗೆ ಸಹಸ್ರಚಂದ್ರದರ್ಶನ ಶಾಂತಿಯ ಅಂಗವಾಗಿ ಸಹಸ್ರಧಾರಾಭಿಷೇಕಾದಿಗಳು ಜರುಗಿದವು. ಎಲ್ಲ ಬ್ರಾಹ್ಮಣರಿಗೂ ಮಾಡಿದ ದಾನ, ಸ್ವರ್ಣ,ರಜತ ಪಾತ್ರೆಗಳ ನಾಣ್ಯಗಳ ಹೊಳೆಯಂತೆ

ತೋರುತ್ತಿತ್ತು. ಎಲ್ಲ ಭಕ್ತರಿಗೂ ಸುಗ್ರಾಸ ಭಗವತ್ಪ್ರಸಾದದ ವಿತರಣೆ ಆಯಿತು.

ಅಂದು ಸಾಯಂಕಾಲ ಶ್ರೀವಿದ್ಯಾಧೀಶತೀರ್ಥರ ನಾಲ್ಕು ಸುಧಾವಿದ್ಯಾರ್ಥಿಗಳಾದ ರಾಜಗೋಪಾಲ ಉಪಾಧ್ಯಾಯ, ಅನಿಲಕುಮಾರ, ಮಧುಸೂದನಾಚಾರ್ಯ, ಹಾಗೂ ಗಣಪತಿಭಟ್ ಇವರು ಸುಧಾನುವಾದವನ್ನು ಮಾಡಿದರು. ತರುವಾಯ ಪುಷ್ಪಾಲಂಕೃತವಾಹನದಲ್ಲಿ ಶ್ರೀಪಾದರನ್ನು ಕುಳ್ಳಿರಿಸಿ ವೈಭವೋಪೇತ ಶೋಭಾಯಾತ್ರೆಯನ್ನು ನಡೆಸಲಾಯಿತು. ಮೆರವಣಿಗೆಯ ನಂತರ ಶ್ರೀಪೇಜಾವರ ಶ್ರೀಪಾದರ, ಅದಮಾರು ಕಿರಿಯ ಶ್ರೀಪಾದರ, ಪಲಿಮಾರು ಕಿರಿಯಶ್ರೀಪಾದರ, ಪೇಜಾವರಕಿರಿಯ ಶ್ರೀಪಾದರ ಉಪಸ್ಥಿತಿಯಲ್ಲಿ ಭಕ್ತಸಾಗರದ ಸಮ್ಮುಖದಲ್ಲಿ ಶ್ರೀವಿದ್ಯಾಮಾನ್ಯ ತೀರ್ಥರಿಗೆ ಬೃಹತ್ ಸನ್ಮಾನ ಕಾರ್ಯಕ್ರಮವೂ ನಡೆಯಿತು. ಹಾಗೂ ಸಿ. ಎಮ್. ನಾಗರಾಜ್ ರಾವ್ ಸಹೋದರರಿಂದ ಶ್ರೀಪಾದರಿಗೆ ನಾಣ್ಯಗಳಿಂದ ತುಲಾಭಾರವೂ ನಡೆಯಿತು. ಅನಂತರ ಎಲ್ಲ ಶ್ರೀಪಾದರು ತಮ್ಮ ಗುರುಗಳಿಗೆ ಕನಕಾಭಿಷೇಕವನ್ನು ಮಾಡಿದರು. ಕನಕದಾಸರಿಗೊಲಿದ ಕೃಷ್ಣನನ್ನು ಕನಕಮಯತೊಟ್ಟಿಲು ರಥಗಳಲ್ಲಿ ಕುಳ್ಳಿರಿಸಿ ಮೆರೆಸಿದ ಕನಕಕೀರ್ತಿಯ ಶ್ರೀಗಳವರ ಕನಕಾಭಿಷೇಕವನ್ನು ಕಂಡು ಭಕ್ತರ ಕಣ್ಣುಗಳು ಆನಂದಬಾಷ್ಪದಕೋಡಿಯನ್ನು ಹರಿಸಿದವು.

ಅನುಗ್ರಹ ಸಂದೇಶವನ್ನಿತ್ತ ಶ್ರೀವಿದ್ಯಾಮಾನ್ಯತೀರ್ಥರು ''ಈ ಸನ್ಮಾನವೆಲ್ಲವೂ ತಮ್ಮ ಅಂತರ್ಯಾಮಿಯಾದ ಮಧ್ವಾಂತರ್ಗತ ಭಗವಂತನಿಗೆ ಸಮರ್ಪಣೀಯವಾಗಿದೆ ಅವರ ಅನುಗ್ರಹ ಸದಾ ಎಲ್ಲಲ್ಲೂ ಇರಲಿ'' ಎಂದು ನುಡಿದರು.

## ಅಮೃತಮಹೋತ್ಸವ

1925 ರಿಂದ 2000 ದ ವರೆಗಿನ ಸುದೀರ್ಘ ಯಶಸ್ವಿಸಾಧಕ ಸಂನ್ಯಾಸ ಜೀವನವನ್ನು ನಡೆಸಿದ ಆದರ್ಶಯತೀಶ್ವರರ ಪೀಠಾರೋಹಣ ಅಮೃತ ಮಹೋತ್ಸವಗಳು ಅನೇಕ ನಡೆದಿದ್ದು ಮೊತ್ತಮೊದಲ ಬಾರಿಗೆ ನಡೆದದ್ದು ಬ್ರಹ್ಮಾವರದ ಭಂಡಾರಕೇರಿ ಸಮೀಪದ ಮಟಪಾಡಿ ಗ್ರಾಮದಲ್ಲಿ. 1999ರ ರಾಮನವಮಿ ಉತ್ಸವದ ಸಂದರ್ಭದಲ್ಲಿಯೇ ಶ್ರೀರಾಮಮೋಹನಾಚಾರ್ಯರು ಹಾಗೂ ಅವರ ಪುತ್ರರಾದ ಶ್ರೀಕುಮಾರಸ್ವಾಮಿ, ಶ್ರೀನರಸಿಂಹಾಚಾರ್ಯರ ಭಕ್ತಿಯ ಪ್ರತೀಕವಾಗಿ ಶ್ರೀಪಾದರ ಸನ್ಮಾನವು ನಡೆಯಿತು. ಸನ್ಮಾನದ ಸಮಾರಂಭದಲ್ಲಿ ಕಿರಿಯ ಪಲಿಮಾರು ಶ್ರೀಪಾದರು ಭಂಡಾರಿಕೇರಿ ಕಿರಿಯ ಶ್ರೀಪಾದರು ಉಪಸ್ಥಿತರಿದ್ದರು. ಡಾ॥ ವೀರೇಂದ್ರ ಹೆಗಡೆಯವರು ಮುಖ್ಯ ಅಥಿತಿಗಳಾಗಿದ್ದರು.

ಉಡುಪಿಯ ಶ್ರೀಕೃಷ್ಣಮುಖ್ಯಪ್ರಾಣದೇವರ ಸನ್ನಿಧಿಯಲ್ಲಿ ಅವರೀರ್ವರ ಪ್ರೀತಿಪಾತ್ರರಾದ ಶ್ರೀವಿದ್ಯಾಮಾನ್ಯತೀರ್ಥರ 75 ನೆಯ ವರ್ಷದ ಪೀಠಾರೋಹಣ ಅಮೃತಮಹೋತ್ಸವ ಕಾರ್ಯಕ್ರಮವೂ 15-4-2000 ಹಾಗು16-4-2000 ಈ ಎರಡು ದಿನಗಳಲ್ಲಿ ಬಹು ವಿಜೃಂಭಣೆಯಿಂದ ನಡೆಯಿತು. ಈ ಸನ್ಮಾನ ಕಾರ್ಯಕ್ರಮದ ನೇತಾರರು ಪರ್ಯಾಯ ಶ್ರೀಪೇಜಾವರ ಮಠಾಧೀಶರಾದ ಶ್ರೀಶ್ರೀವಿಶ್ವೇಶ

ತೀರ್ಥರು. ಈ ಸನ್ಮಾನ ಕಾರ್ಯಕ್ರಮಕ್ಕಾಗಿ ತಿರುಮಲ-ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಸಹಭಾಗಿಯಾಗಿತ್ತು. ಆಸಂಸ್ಥೆಯ 50ಕ್ಕೂ ಹೆಚ್ಚು ಭಜನಾಮಂಡಲಿಗಳು ಆಗಮಿಸಿದ್ದವು. ದಿನಾಂಕ 15ರಂದು ಶ್ರೀರಾಘವೇಂದ್ರಮಠದ ಶ್ರೀಸುಶಮೀಂದ್ರತೀರ್ಥರು ಅಮೃತಮಹೋತ್ಸವದ ಸಮಾರಂಭವನ್ನು ಉದ್ಘಾಟಿಸಿದರು. ಈ ಸಮಾರಂಭದಲ್ಲಿ ಶ್ರೀವಿದ್ಯಾಮಾನ್ಯತೀರ್ಥರ ಸಾರ್ಥಕ ಪವಿತ್ರ ಜೀವನದ ಅಪೂರ್ವಘಟ್ಟಗಳನ್ನು ಪ್ರತಿಬಿಂಬಿಸುವ ಅನೇಕ ಪ್ರಸಿದ್ಧ ವಿದ್ವಾಂಸರಿಂದ ಉಪನ್ಯಾಸಗಳು ಜರುಗಿದವು. ಶ್ರೀಪಾದರಿಗೆ ಅತ್ಯಂತ ಪ್ರಿಯವಾದ ಶಾಸ್ತ್ರಾರ್ಥ ಗೋಷ್ಠೀಗಳನ್ನು ದಾಸಸಾಹಿತ್ಯ ಗೋಷ್ಠಿಗಳನ್ನು ನಡೆಸಲಾಯಿತು. ಭಜನಾಮಂಡಳಿಗಳ ಸದಸ್ಯರಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು. ಈ ಎರಡು ದಿನಗಳ ಸಮಾರಂಭದಲ್ಲಿ ಶ್ರೀಪೇಜಾವರಮಠದ ಹಿರಿಯ ಹಾಗೂ ಕಿರಿಯ ಶ್ರೀಪಾದರು, ಶ್ರೀಅದಮಾರುಮಠದ ಹಿರಿಯ ಹಾಗೂ ಕಿರಿಯ ಶ್ರೀಪಾದರು. ಶ್ರೀಪುತ್ತಿಗೆ ಶ್ರೀಪಾದರು, ಶ್ರೀಪಲಿಮಾರುಕಿರಿಯ ಶ್ರೀಪಾದರು, ಭಂಡಾರಕೇರಿ ಕಿರಿಯ ಶ್ರೀಪಾದರು ಶ್ರೀಮುಳಬಾಗಿಲು ಶ್ರೀಪಾದರಾಜಮಠದ ಶ್ರೀಪಾದರು, ಶ್ರೀಕಣ್ವಮಠದ ಶ್ರೀಪಾದರು ಹಾಗು ಬನ್ನಂಜಿ ರಾಘವೇಂದ್ರತೀರ್ಥರು ಉಪಸ್ಥಿತರಾಗಿದ್ದರು. ಎಲ್ಲ ಶ್ರೀಪಾದರೂ ಶ್ರೀವಿದ್ಯಾಮಾನ್ಯತೀರ್ಥರಿಂದ ಪಡೆದ ಪ್ರಭಾವವನ್ನು ನಿರೂಪಿಸಿದರು.

ಶ್ರೀವಿದ್ಯಾಮಾನ್ಯತೀರ್ಥರ ಪ್ರಿಯಶಿಷ್ಯ ಹಾಗೂ ಪರ್ಯಾಯಪೀಠಾಧೀಶ ಶ್ರೀವಿಶ್ವೇಶತೀರ್ಥರ ಘನಾಧ್ಯಕ್ಷತೆಯಲ್ಲಿ ದಿನಾಂಕ-16 ರಂದು ನಡೆದ ಶ್ರೀಪಾದರ ಸನ್ಮಾನ ಕಾರ್ಯಕ್ರಮ ಅತ್ಯಂತ ಸುಸಂಭ್ರಮವಾಗಿತ್ತು. ಬೆಳಗಿನಿಂದ ಸಾಯಂಕಾಲದವರೆಗೂ ಜರುಗಿದ ಕಾರ್ಯಕ್ರಮಗಳಲ್ಲಿ ನಿರಂತರವಾಗಿ ಉಪಸ್ಥಿತರಾಗಲು ಅಶಕ್ತರಾದುದರಿಂದ ಶ್ರೀಪಾದರನ್ನು ಸಂಜೆಯ ಸನ್ಮಾನ ಸಮಾರಂಭದಲ್ಲಿಯೇ ಬರಮಾಡಿಕೊಳ್ಳಲಾಯಿತು. ಸಂಜೆ ಆರು ಘಂಟೆಗೆ ಸರಿಯಾಗಿ ವಾದ್ಯವೃಂದ, ಚಂಡೆ,ವೇದಘೋಷ ಬಿರುದಾವಳಿಗಳು ಹಾಗೂ ಶೋಭಾಯಮಾನವಾದ ಎರಡು ಆನೆಗಳಿಂದ ಕೂಡಿ ವೈಭವೋಪೇತವಾದ ಮೆರವಣಿಗೆಯೊಂದಿಗೆ ಹಿರಿಯ ಶ್ರೀಪಾದರನ್ನು ಸ್ವಾಗತಿಸಲಾಯಿತು. ಶ್ರೀಪಾದರು ಗಾಲಿಕುರ್ಚಿಯಲ್ಲಿಯೇ ಕುಳಿತು ಸಭಾಭವನಕ್ಕೆ ಆಗಮಿಸಿದ್ದರು. ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಹತ್ತಾರು ಶ್ರೀಪಾದರ ಮಧ್ಯದಲ್ಲಿ ಆಸೀನರಾದಾಗ ಭಕ್ತ ಜನತೆಯ ಪ್ರಚಂಡ ಕರತಾಡನವು ಆಯಿತು. ಎಲ್ಲ ಶ್ರೀಪಾದರೂ ಸೇರಿ ಮಾಧ್ವಸಮಾಜದಲ್ಲಿಯೇ ಈ ಶತಮಾತದ ಅಗ್ರಗಣ್ಯ ತಪಸ್ವಿ ಜ್ಞಾನವೃದ್ಧರು ವಯೋವೃದ್ಧರಾದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರಿಗೆ ಸುವರ್ಣಾಭಿ ಷೇಕ ವನ್ನು ಮಾಡಿದರು. ಎಲ್ಲ ಶ್ರೀಪಾದರೂ ಯತಿಕುಲ ಶಿರೋಮಣಿಗೆ ತಮ್ಮ ತಮ್ಮ ವೈಯಕ್ತಿಕ ಕಾಣಿಕೆಯನ್ನೂ ನೀಡಿ ಶಾಲನ್ನು ಹೊದಿಸಿ ಸನ್ಮಾನಿಸಿದರು. ಸನ್ಮಾನ ಸಮಿತಿಯ ವತಿಯಿಂದ ಪೇಜಾವರಶ್ರೀಪಾದರು ಶಾಲನ್ನು ಹೊದಿಸಿ ಮಾಲಾರ್ಪಣೆಯನ್ನು ಮಾಡಿದರು. ಸನ್ಮಾನಪತ್ರವನ್ನೂ ನೀಡಿದರು. ಹಾಗು ರಜತ ಫಲಕವನ್ನೂ ನೀಡಿದರು. ನಂತರದಲ್ಲಿ ಎಲ್ಲ ಶ್ರೀಪಾದರೂ ಎದ್ದು ನಿಂತು ಭಕ್ತಜನತೆಯೂ ನಿಂತುಕೊಂಡು ಸಾಮೂಹಿಕಪ್ರಾರ್ಥನೆಯನ್ನು ಭಗವಂತನಿಗೆ ಸಲ್ಲಿಸಿದರು. ಆ ಪ್ರಾರ್ಥನೆಯ

ಉದ್ದೇಶ, ಶ್ರೀಪಾದರ ಅನಾರೋಗ್ಯ ಪರಿಹಾರ ಹಾಗು ಆರೋಗ್ಯಪೂರ್ಣದೀರ್ಘಾಯುಷ್ಯದ ಅಭಿ ವೃದ್ಧಿ ಯಾಗಿತ್ತು. ಈ ಪ್ರಾರ್ಥನೆಯನ್ನು ಎಲ್ಲರಿಗೂ ಉಪದೇಶಿಸಿದವರು ಪರ್ಯಾಯ ಶ್ರೀಪೇಜಾವರ ಮಠಾಧೀಶರು. ಈ ಪ್ರಾರ್ಥನೆಯ ನಂತರ ತಿರುಪತಿ ದೇವಸ್ಥಾನದ ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿ ಕಾರಿಗಳಾದ ಶ್ರೀ ಕೆ. ಅಪ್ಪಣ್ಣಾಚಾರ್ಯರು ದಾಸರ ಸಾಹಿತ್ಯದ ಮೂಲಕ ಭಗವಂತನ ಪ್ರಾರ್ಥನೆಯನ್ನು ಮಾಡಿಸಿದರು. 'ಎನ್ನ ಭಿನ್ನಪ ಕೇಳೋ ಧನ್ವಂತ್ರೀ ದಯಮಾಡೋ' ಎಂಬ ಗೋಪಾಲದಾಸರ ಕೃತಿಯನ್ನು ಎಲ್ಲರ ಮುಖದಿಂದಲೂ ಹೇಳಿಸಿದರು. ಪ್ರಾಯಃ ಅಲ್ಲಿದ್ದವರಲ್ಲಿ ಒಬ್ಬರೂ ಬಿಡದೆ ಆ ಪದ್ಯವನ್ನು ಭಾವಪೂರ್ಣವಾಗಿ ಹಾಡಿದರು ಭಗವಂತನನ್ನು ಪ್ರಾರ್ಥಿಸಿದರು. ಆ ಸಮಯ ಭಾವಪೂರ್ಣವಾಗಿತ್ತು.

ಶ್ರೀಪಾದರ ಅಮೃತ ಮಹೋತ್ಸವದ ಸವಿನೆನಪಿಗಾಗಿ ಒಂದು ಪುಸ್ತಕವನ್ನು ಬಿಡುಗಡೆಗೊಳಿಸಲಾಯಿತು. ಆ ಪುಸ್ತಕದ ಹೆಸರು 'ತಾಪಸ' ಎಂದಾಗಿತ್ತು. ಅದನ್ನು ಮುಳಬಾಗಿಲು ಶ್ರೀಶ್ರೀಪಾದರಾಜಮಠದ ಶ್ರೀಶ್ರೀವಿಜ್ಞಾನ ನಿಧಿತೀರ್ಥ ಶ್ರೀಪಾದರು ಬಿಡುಗಡೆಗೊಳಿಸಿದರು. ಆ ಹೊತ್ತಿಗೆಯಲ್ಲಿ ಶ್ರೀಪಾದರ ಪವಿತ್ರ ಜೀವನ ಚರಿತ್ರೆಯ ಮಾಹಿತಿಯನ್ನೊಳಗೊಂಡ ಸಂಗ್ರಹ ಲೇಖನಗಳು ಶ್ರೀಪಾದರ ಕೃತಿಗಳು ಅಡಕವಾಗಿರುವುವು. ಸಭಯನ್ನುದ್ದೇಶಿಸಿ ಮಾತನಾಡಲು ಅಶಕ್ತರಾದ ಶ್ರೀವಿದ್ಯಾಮಾನ್ಯತೀರ್ಥರು ತಮ್ಮ ಅರಳು ಕಣ್ಣುಗಳಿಂದಲೇ ಜನತೆಯನ್ನುನೋಡಿ ಅನುಗ್ರಹಿಸಿದರು. ಸುಮಾರು 45 ನಿಮಿಷಗಳ ಕಾಲ ಸಭೆಯಲ್ಲಿ ಉಪಸ್ಥಿತರಾಗಿದ್ದರು.

ಈ ಅಮೃತ ಮಹೋತ್ಸವದ ಸಂದರ್ಭದಲ್ಲಿ ಉಪಸ್ಥಿತರಿದ್ದ ಶ್ರೀಪಾದರು ನೀಡಿದ ಸಂದೇಶಗಳ ಸಾರ ಇಲ್ಲಿ ಅಡಗಿದೆ.

''ಪಶ್ಚಿಮಘಟ್ಟಗಳಿಂದ ಅನೇಕ ನದಿಗಳು ಹರಿದಂತೆ ಶ್ರೀವಿದ್ಯಾಮಾನ್ಯತೀರ್ಥರಿಂದ ಅನೇಕ ಮಂದಿ ಯತಿಶಿಷ್ಯರು, ಗೃಹಸ್ಥಶಿಷ್ಯರು ಹೊರಹೊಮ್ಮಿರುವರು. ಪಶ್ಚಿಮಘಟ್ಟದಿಂದ ಹರಿಯುವ ನದಿಗಳಾದರೂ ಕೆಲವೊಮ್ಮೆ ಕೆಲವು ಒಣಗಿ ಹೋಗುವವು. ಆದರೆ ಶ್ರೀಪಾದರಿಂದ ಹೊರಟ ಶಿಷ್ಯರಲ್ಲಿ ಯಾರೊಬ್ಬರೂ ಒಣಗಿದ ವ್ಯಕ್ತಿತ್ವವನ್ನು ಪಡೆದವರಿಲ್ಲ.''

-ಶ್ರೀ ವಿಶ್ವೇಶತೀರ್ಥರು

''ಶ್ರೀಮದಾಚಾರ್ಯರು ಶರಣಾಗತಿಯ ಸ್ವರೂಪವನ್ನು ತಿಳಿಸುತ್ತಾ ''ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹಮಿತಿಸ್ಮೃತಿಃ '' ನಾನು ಅವನವನು ಅವನು ನನ್ನನ್ನು ಖಂಡಿತ ರಕ್ಷಿಸುತ್ತಾನೆ ಎಂಬ ಭಾವನೆ ಶರಣಾಗತಿಯಲ್ಲಿ ಮುಖ್ಯ ಎಂದು ಸೂಚಿಸಿದ್ದಾರೆ. ಶ್ರೀವಿದ್ಯಾಮಾನ್ಯ ತೀರ್ಥರು ಅಂತಹ ಶರಣಾಗತಿಯನ್ನು ಅಳವಡಿಸಿ ಕೊಂಡವರು. ಶ್ರೀಕೃಷ್ಣಜಾದೂಗಾರನಾಗಿ ಭಂಡಾರಕೇರಿ ಮಠದ ಅವರಿಗೆ ತನ್ನ ಪೂಜೆಯ ಅಧಿಕಾರವನ್ನು ಒದಗಿಸಿಕೊಟ್ಟು ಅವರು ತನ್ನವರೆಂದು ತೋರಿಸಿ ಕೊಟ್ಟಿರುವನು. ಶ್ರೀಪಾದರು ವಜ್ರಕಿರೀಟ, ಸ್ವರ್ಣರಥ ತೊಟ್ಟಿಲುಗಳನ್ನೆಲ್ಲ ಸಮರ್ಪಿಸಿ ತಾನು ಅವರಿಗೆ ಸೇರಿದವರೆಂದು ತೋರಿಸಿಕೊಟ್ಟಿರುವರು. ಇಂಥವರನ್ನೇ ಅವನು ಖಂಡಿತಾ ರಕ್ಷಿಸುತ್ತಾನೆ ''ನಮಗೆ ತಲೆಯಮೇಲೇ ಧರಿಸಿಕೊಳ್ಳಲು ಶ್ರೀಪಾದರ ಪಾದ ಬೇಕೇ ಬೇಕು'' ಎಂಬುದಾಗಿ ನಾವು ಭಗವಂತನಲ್ಲಿ ಅವರ ಪೂರ್ಣ ಆಯುಷ್ಯವನ್ನು ಆರೋಗ್ಯವನ್ನು ಪ್ರಾರ್ಥಿಸೋಣ.

-ಶ್ರೀವಿಬುಧೇಶತೀರ್ಥರು. ಅದಮಾರುಮಠ

ವಿದ್ಯಾಪ್ರಯುಕ್ತವಾದ ವಿನಯ ಹಾಗೂ ವಿದ್ವತ್ತು ಪ್ರಯುಕ್ತವಾದ ಎಲ್ಲರ ಮನ್ನಣೆ ಇವೆರಡನ್ನು ಶ್ರೀವಿದ್ಯಾಮಾನ್ಯತೀರ್ಥರಲ್ಲಿ ಕಾಣಬಹುದಾಗಿದೆ. ಅದು ಅತ್ಯಂತ ಅಪರೂಪವಾದ ದೃಷ್ಟಾಂತ'

-ಶ್ರೀವಿಶ್ವಪ್ರಿಯತೀರ್ಥರು- ಅದಮಾರುಕಿರಿಯಪಟ್ಟ

'ಶಂಕರಾಚಾರ್ಯರ ಅದ್ವೈತ ತತ್ವದಿಂದಲೇ ಶಂಕರಾಚಾರ್ಯರು ಮಣಿಮಂತನ ಅವತಾರ ಎಂಬುದನ್ನು ಸಮರ್ಥಿಸುವ ಅಸದೃಶ ವಾದಕೌಶಲ ನಮ್ಮ ಗುರುಗಳದ್ದು.'

-ಶ್ರೀ ವಿದ್ಯಾಧಿಶತೀರ್ಥರು. ಪಲಿಮಾರು ಕಿರಿಯಪಟ್ಟ

'ನಾನು ಓದುವುದಾದರೆ ಅವರಲ್ಲಿಯೇ ಎಂದು ಪಟ್ಟು ಹಿಡಿಯುವಷ್ಟು ನನಗೆ ಅವರಲ್ಲಿ ಆಕರ್ಷಣೆ ತಂದೊಡ್ಡಿತ್ತು ಅವರ ಆ ನೋಟ ಮುಂದೆ ಪೇಜಾವರ ಹಾಗೂ ಅದಮಾರು ಶ್ರೀಪಾದರು ಸಹಕಾರದಿಂದಾಗಿ ಈ ಮಹಾಗುರುಗಳ ದಿವ್ಯ ಸನ್ನಿಧಿಯಲ್ಲಿ ಆರಂಭಗೊಂಡಿತು ನನ್ನ ನಿಜ ಜೀವನದ ಪಾಠ'

-ಶ್ರೀಸುಗುಣೇಂದ್ರತೀರ್ಥರು. ಪುತ್ತಿಗೆ ಮಠ

'ಎಲ್ಲರಿಗೂ ಉಪಜೀವ್ಯನಾಗಿರುವುದರಿಂದ ''ಅನ್ನ''ಎಂದೆನಿಸುವ ಭಗವಂತನ ನಿಂದೆಯನ್ನು ನಮ್ಮ ಗುರುಗಳು ಎಂದಿಗೂ ಸಹಿಸುವುದಿಲ್ಲ. ಅದಕ್ಕಾಗಿಯೇ ವೈಯಕ್ತಿಕ ಮಾನಾಪಮಾನಗಳನ್ನೆಲ್ಲ ಬದಿಗಿರಿಸಿ ಭಗವಂತನ ವ್ಯಕ್ತಿತ್ವಕ್ಕೆ ಕುಂದು ತರತಕ್ಕ ವಾದಗಳನ್ನು ಖಂಡತುಂಡವಾಗಿ ಖಂಡಿಸುವ ಸ್ವಭಾವ ನಮ್ಮ ಗುರುಗಳದ್ದು.'

-ಶ್ರೀವಿದ್ಯೇಶತೀರ್ಥರು. ಭಂಡಾರಕೇರಿ ಕಿರಿಯ ಪಟ್ಟ.

'ಪಾಠ ಪ್ರವಚನ ಜಪಪೂಜಾನುಷ್ಠಾನ ವಿದ್ವಾಂಸರ ಹಾಗೂ ವಿದ್ಯಾರ್ಥಿಗಳ ಸನ್ಮಾನ ಪರೀಕ್ಷೆಗಳು ಮುಂತಾದ ಧಾರ್ಮಿಕ ಅಧ್ಯಾತ್ಮಿಕ ಕಾರ್ಯಕ್ರಮಗಳಿಂದ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡು ಆದರ್ಶಯತಿಗಳಾಗಿರುವರು ಶ್ರೀವಿದ್ಯಾಮಾನ್ಯ ತೀರ್ಥರು'

-ಶ್ರೀವಿಜ್ಞಾನನಿಧಿ ತೀರ್ಥರು.
ಶ್ರೀಶ್ರೀಪಾದರಾಜಮಠ

'ಶ್ರೀ ಹರಿಗುರುಗಳ ಸೇವೆಮಾಡಿ ಜೀವನವನ್ನು ಸಾರ್ಥಕ ಪಡಿಸಿದ ಶ್ರೀವಿದ್ಯಾಮಾನ್ಯತೀರ್ಥರಿಗೆ ಆಯುರಾರೋಗ್ಯ ಸಿದ್ಧಿಸುವಂತಾಗಲಿ.'

-ಶ್ರೀ ಸುಶಮೀಂದ್ರತೀರ್ಥರು.
ಶ್ರೀರಾಘವೇಂದ್ರಮಠ. ಮಂತ್ರಾಲಯ

ಸಮಾರಂಭದ ಎರಡೂ ದಿನಗಳಂದು ಶ್ರೀಕೃಷ್ಣನಿಗೆ ಶ್ರೀಪಾದರೇ ಅರ್ಪಿಸಿದ ವಜ್ರಕಿರೀಟದ ಅಲಂಕಾರವನ್ನು ಹಾಗೂ ಸ್ವರ್ಣರಥೋತ್ಸವದ ಸೇವೆಗಳನ್ನು ಸಮರ್ಪಿಸಲಾಯಿತು.

ಈ ಸಂದರ್ಭದಲ್ಲಿ ಶ್ರೀವಿದ್ಯಾಮಾನ್ಯತೀರ್ಥರನ್ನು ಕುರಿತ ''ತಾಪಸ '' ಎಂಬ ಒಂದು ಸ್ಮರಣ ಸಂಚಿಕೆಯನ್ನು ಬಿಡಿಗಡೆಮಾಡಲಾಯಿತು.



# ಶಿಷ್ಯರ ಸುಧಾಮಂಗಲಗಳಲ್ಲಿ ಉಪಸ್ಥಿತಿ

ದ್ವೈತವೇದಾಂತ ಗ್ರಂಥಗಳಲ್ಲಿ ಮೇರುಕೃತಿಯೆನಿಸಿದ ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನವಾದ ಶ್ರೀಮಟ್ಟೀಕಾಕೃತ್ಪಾದರ 'ನ್ಯಾಯಸುಧಾ' ಗ್ರಂಥದ ಪ್ರವಚನಗಳನ್ನು ಹದಿನೈದು ಬಾರಿ ಮಾಡಿ ಮಂಗಲಗಳನ್ನು ಮಾಡಿದ ಸುಧಾಪ್ರವಚನಾಚಾರ್ಯ ಚಕ್ರವರ್ತಿಗಳು ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು. ಅವರ ಸೌಭಾಗ್ಯವೆಷ್ಟೆಂದರೆ, ತಾವು 15 ಸುಧಾಮಂಗಲಗಳನ್ನು ಮಾಡಿದ್ದಲ್ಲದೆ ತಮ್ಮ ಶಿಷ್ಯರ ಸುಧಾಪ್ರವಚನ ಮಂಗಲಗಳಲ್ಲೂ ಭಾಗವಹಿಸಿ ಆನಂದ ಪಡುವ ಸೌಭಾಗ್ಯ ಪ್ರಾಯಃ ತಮ್ಮ ವಿದ್ಯಾಗುರು ಶ್ರೀ ಸತ್ಯಧ್ಯಾನತೀರ್ಥರ ಸಮ್ಮುಖದಲ್ಲಿಯೇ ತಾವು ಸುಧಾಮಂಗಲ ಮಾಡಿದ ಫಲವೇ ಆ ಸೌಭಾಗ್ಯಕ್ಕೆ ಕಾರಣವಾಗಿರಬೇಕು. ಅವರು ಕಂಡ ಶಿಷ್ಯರ ಸುಧಾಮಂಗಲಗಳು ನೂರನ್ನೂ ಮೀರಿರಬೇಕು. ಕೆಲವು ಸುಧಾಮಂಗಲಗಳ ಸಂಕ್ಷಿಪ್ತ ಮಾಹಿತಿಯನ್ನು ಸಂಗ್ರಹಿಸುವ ಪ್ರಯತ್ನ ಇಲ್ಲಿ ನಡೆದಿದೆ.

1. ಶ್ರೀವಿದ್ಯಾಮಾನ್ಯ ತೀರ್ಥ ಶ್ರೀಪಾದರು, ತಮ್ಮ ಯತಿಶಿಷ್ಯರಲ್ಲಿ ಅಗ್ರಗಣ್ಯರಾದ ಶ್ರೀ ಪೇಜಾವರ ಶ್ರೀಪಾದರು, ಬದರಿ ತಿರುಪತಿ, ಉಡುಪಿ, ಸೋದೆ, ಹಂಪೆ, ಮೊದಲಾದ ಕ್ಷೇತ್ರಗಳಲ್ಲಿ, ಅನೇಕ ನಗರಗಳಲ್ಲಿ ಮಾಡಿದ 20 ಸುಧಾಮಂಗಲಳಗಲ್ಲೂ ತಪ್ಪದೇ ಭಾಗವಹಿಸಿ, ಅನುಗ್ರಹಿಸಿರುವರು. ಇದೊಂದು ದಾಖಲೆಯಾದ ಸಂಗತಿ. ಶ್ರೀ ವಿಶ್ವೇಶತೀರ್ಥರು ತಮ್ಮ ನಾಲ್ಕನೆಯ ಪರ್ಯಾಯದ ಪ್ರಾರಂಭದಲ್ಲಿ ವಿಕ್ರಮಸಂವತ್ಸರದ ಮಾಘ ಶುದ್ಧ ದಶಮೀ ದಿನದಂದು ಮಾಡಿದ 20ನೆಯ ಸುಧಾಮಂಗಲದಲ್ಲಿ ಪೂರ್ಣ ಸುಧಾನುವಾದ ಕಾರ್ಯಕ್ರಮದವರೆಗೂ ಉಪಸ್ಥಿತ ರಾಗಿದ್ದರು. ಕೊನೆಯಲ್ಲಿ ಶ್ರೀವಿಶ್ವೇಶತೀರ್ಥರ ಪರಮತವಿಮರ್ಶಾತ್ಮಕ ಅದ್ಭುತ ಅನುವಾದವನ್ನು ಆಲಿಸಿ ಆನಂದ ತುಂದಿಲರಾಗಿ 'ಇಂದಿನ ಅನುವಾದವು ಶ್ರೀ ವಿಶ್ವೇಶತೀರ್ಥರದ್ದಲ್ಲ. ಶ್ರೀಮದಾಚಾರ್ಯರೇ ಅನುವಾದವನ್ನು ಮಾಡಿದಂತಿದೆ' ಎಂದು ಉದ್ಗಾರ ಮಾಡಿದರು. ಹೃತ್ಪೂರ್ವಕವಾಗಿ ಹರಸಿದರು.

2. ಶ್ರೀವಿದ್ಯಾಮಾನ್ಯತೀರ್ಥರ ಯತಿಶಿಷ್ಯರಲ್ಲಿ ಎರಡನೆಯವರು ಶ್ರೀಅದಮಾರು ಮಠದ ಶ್ರೀಪಾದರಾದ ಶ್ರೀವಿಶ್ವಪ್ರಿಯತೀರ್ಥರು ಅವರು ಮಾಡಿದ ನಾಲ್ಕು ಸುಧಾಮಂಗಲಗಳಲ್ಲಿ ಶ್ರೀವಿದ್ಯಾ ಮಾನ್ಯತೀರ್ಥರು ಭಾಗವಹಿಸಿ ಅನುಗ್ರಹಿ ಸಿರುವರು. ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದರಿಗೆ ಈ ಮಹಾಗುರುಗಳು ಮಾಡಿದ ಅನುಗ್ರಹ ನೀಡಿದ ಶಾಶ್ವತಕೀರ್ತಿ ಪ್ರಾಯಃ ಬೇರಾರಿಗೂ ಇಲ್ಲ ಅದರ ಮಾಹಿತಿಯನ್ನು ತಿಳಿಯಲು ಬಯಸಿದರೆ.

ಶ್ರೀ ವಿಶ್ವಪ್ರಿಯ ತೀರ್ಥರು ತಮ್ಮ ನಾಲ್ಕನೆಯ ಸುಧಾಮಂಗಲವನ್ನು ಘಟಿಕಾಚಲಕ್ಷೇತ್ರದಲ್ಲಿ ಮಾಡಲು ನಿರ್ಧರಿಸಿದ್ದರು. ಅಲ್ಲಿಗೆ ವಿದ್ಯಾಗುರುಗಳು ಬರಲು ಅಸಮರ್ಥರೆಂದು ತಿಳಿದ ತಕ್ಷಣದಲ್ಲಿ ಆ ಗುರುಗಳ ಅನುಕೂಲಕ್ಕಾಗಿ ಅದಮಾರು ಗ್ರಾಮದ ಶ್ರೀಅದಮಾರು ಮಠದಲ್ಲಿ ಮಂಗಲವನ್ನು ಮಾಡುವುದಾಗಿ ನಿಶ್ಚಯಿಸಿದರು. ಆದರೆ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ಆರೋಗ್ಯ ಬಹಳ ಕುಂಠಿತವಾಗಿ, ವೈದ್ಯರೂ ಹತಾಶರಾದ ಸ್ಥಿತಿ ಒದಗಿತು. ಈ ಸಂದರ್ಭದಲ್ಲಿ ಮಂಗಲದಿನದ ಪೂರ್ವದಲ್ಲಿ ಒಂದು ದಿನ ಶ್ರೀವಿಶ್ವಪ್ರಿಯತೀರ್ಥರು ಗುರುಗಳನ್ನು ಸಂದರ್ಶಿಸಿ ಸಲು ಬಂದರು. ಆಗ ವೈದ್ಯರ ಮಾತಿನಂತೆ ಶ್ರೀ ವಿದ್ಯಾಮಾನ್ಯತೀರ್ಥರು ಕೃಷ್ಣಮಠವನ್ನು ಬಿಟ್ಟು ಎಲ್ಲಿಗೆ ಹೋದರೂ ಬಹಳ ಸಮಸ್ಯೆ ಎಂಬ ಭಾವನೆ ಮೂಡಿತು. ಆಗ ಅವರ ಅನುಗ್ರಹವಚನವನ್ನಾದರೂ ಪಡೆಯಲೆಂದು ಶ್ರೀವಿಶ್ವಪ್ರಿಯತೀರ್ಥರು ಗುರುಗಳ ಬಳಿಯಲ್ಲೇ ಇದ್ದರು, ಎಷ್ಟು ಹೊತ್ತು ಕಳೆದರೂ ಗುರುಗಳು ಏಳಲಿಲ್ಲ. ಅವರು ಅತೀವ ಅಸ್ವಾಸ್ಥ್ಯವನ್ನು ಹೊಂದಿದ್ದರು. ಬಹಳ ಹೊತ್ತು ನಿರೀಕ್ಷಿಸಿ ಶ್ರೀವಿಶ್ವಪ್ರಿಯತೀರ್ಥರು ತೆರಳಿದರು.

ಸುಧಾಮಂಗಲದ ದಿನದಂದು ಬೆಳಗಿನ ಹೊತ್ತು ಶ್ರೀವಿದ್ಯಾಧೀಶತೀರ್ಥರು ಅದಮಾರು ಶ್ರೀಪಾದರ ಸುಧಾಮಂಗಲಕ್ಕಾಗಿ ಹೊರಡಲು ಸಿದ್ಧರಾಗಿ ಗುರುಗಳಿಗೆ ನಮಸ್ಕರಿಸಿದರು. ಗುರುಗಳು ಜಾಗ್ರತರಾಗಿದ್ದರೂ ಅಸ್ವಸ್ಥರಾಗಿಯೇ ಇದ್ದರು. ಶ್ರೀವಿದ್ಯಾಧೀಶತೀರ್ಥರು ನಮಸ್ಕರಿಸಿ 'ನಾನು ಅದಮಾರಿಗೆ ಹೋಗಿ ಬರುವೆ' ಎಂದರು. ಆಗ ಗುರುಗಳು 'ಏಕೆ?' ಎಂದು ಪ್ರಶ್ನಿಸಿದರು. ಪಲಿಮಾರು ಶ್ರೀಪಾದರು 'ಅದಮಾರು ಶ್ರೀಪಾದರ ಸುಧಾಮಂಗಲ ನಡೆಯುತ್ತಿದೆ'ಎಂದುತ್ತರಿಸಿದರು. ಆಗ 'ನಾನೂ ಬರುತ್ತೇನೆ' ಎಂದು ಗುರುಗಳು ನುಡಿದರು. ಈ ನುಡಿ ಕೇಳಿದ ಎಲ್ಲರೂ ದಿಗ್‌ಭ್ರಾಂತರಾದರು. 'ತಮಗೆ ತುಂಬ ಆಯಾಸವಾಗುವುದು. ಇಲ್ಲಿಯೇ ಇರೋಣವಾಗಲಿ' ಎಂದು ಶಿಷ್ಯರೆಲ್ಲ ನುಡಿದರು. ಆದರೆ ಆ ಮಾತಿಗೆ ಪ್ರತಿಕ್ರಿಯಿಸದೆ 'ನೀವು ಮೊದಲು ಹೋಗಿ ಆ ವಾಹನವನ್ನು ಕಳಿಸಿರಿ. ಅದರಲ್ಲಿ ನಾನು ಬರುವೆ' ಎಂದು ನಿರ್ಧಾರದಿಂದ ಹೇಳಿದರು. ಈ ಮಾತು ಕೇಳಿದಾಗ ಎಲ್ಲರಿಗೂ ಆಶ್ಚರ್ಯ, ಆತಂಕ, ಆನಂದ, ಎಲ್ಲವೂ ಒಡನೆಯೇ ಆದವು. ಶ್ರೀಪಾದರ ಈ ನಿರ್ಧಾರಕ್ಕೆ ಅಡ್ಡಿಯನ್ನುಂಟುಮಾಡಬಾರದೆಂದು ಶಿಷ್ಯಮಂಡಲಿ ನಿರ್ಧರಿಸಿತು. ಅಂತೆಯೇ ಪಲಿಮಾರು ಶ್ರೀಪಾದರು ಮುಂಚಿತವಾಗಿ ಅದಮಾರಿಗೆ ತೆರಳಿದರು. ಅಲ್ಲಿ ಅದಮಾರು ಶ್ರೀಪಾದರ ಸುಧಾನುವಾದ ಪ್ರಾರಂಭವಾಗಿತ್ತು ಬೇಗನೆ ಭಿಕ್ಷೆಯನ್ನು ಪೂರೈಸಿ

ಪೇಜಾವರ ಶ್ರೀಪಾದರ ಕಾಂಟೆಸ್ಸಾಕಾರಿನಲ್ಲಿ ಕುಳಿತು ಮಹಾಗುರುಗಳು ಸಾವಕಾಶವಾಗಿ ಅದಮಾರಿಗೆ ಆಗಮಿಸಿದರು. ಕಾರಿನಲ್ಲಿ ಗುರುಗಳೊಂದಿಗೆ ಡಾ|| ಕೇಶವ ಕುಲಕರ್ಣಿಯವರೂ ಜೊತೆಗಿದ್ದರು. ಅವಿದ್ಯಾಗುರುಗಳ ಅನುಪಸ್ಥಿತಯಲ್ಲಿ ಸುಧಾಮಂಗಲ ಮಾಡುವುದುಂಟೆ ಎಂಬ ಖೇದದಿಂದ ಕೂಡಿದ್ದ ಶ್ರೀವಿಶ್ವಪ್ರಿಯತೀರ್ಥರಲ್ಲಿ, ಅನಿರೀಕ್ಷಿತವಾಗಿ ಗುರುಗಳು ಅಸ್ವಸ್ಥರಾಗಿದ್ದರೂ ಸಹ ಅದಮಾರಿಗೆ ಬಂದಿರುವುದು ಅಮಿತಾಶ್ಚರ್ಯ, ಆನಂದ, ಧನ್ಯತೆಗಳನ್ನು ಮೂಡಿಸಿತು. ಅವರ ಹೃದಯ ಕರಗಿತು. ಗುರುಗಳು ಬಂದ ವಿಷಯ ತಿಳಿದ ತಕ್ಷಣದಲ್ಲಿ ವೇದಿಕೆಯಲ್ಲಿ ಸುಧಾನುವಾದ ಮಾಡುತ್ತಿದ್ದಂತೇ ಅರ್ಧದಲ್ಲಿಯೇ ಬಿಟ್ಟು ಮಠದ ಮಹಾದ್ವಾರದಲ್ಲಿ ಬಂದು ಗುರುಗಳನ್ನು ಭಕ್ತಿಪೂರ್ವಕವಾಗಿ ನಮಿಸಿ, ಸ್ವಾಗತಿಸಿದರು. ಅವರ ಎಂದಿನ ವಿನಮ್ರತೆಗೆ ಅಂದಿನ ವಿಶೇಷಧನ್ಯತೆಯೂ ಸೇರಿತ್ತು. ಆಗಿನ ಆ ಗುರುಶಿಷ್ಯರ ಪ್ರೇಮ ವಾತ್ಸಲ್ಯಗಳ ನೋಟ ನೋಡುಗರ ಹೃದಯವನ್ನು ನೀರಾಗಿಸಿತು. ಮೈ ರೋಮಾಂಚಿತ ವಾಯಿತು.

ಅಂತೂ ಗುರುಗಳ ಸಮ್ಮುಖದಲ್ಲಿಯೇ ಭಗವಂತನಿಗೆ 4ನೆಯ ಸುಧಾಪ್ರವಚನವನ್ನು ಅರ್ಪಿಸುವ ಯೋಗ ಶ್ರೀವಿಶ್ವಪ್ರಿಯತೀರ್ಥರಿಗೆ ಪ್ರಾಪ್ತವಾಯಿತು. ಆ ಗುರುಗಳ ಪೂರ್ಣಪ್ರೀತಿಯ ಉಪಸ್ಥಿತಿ, ಅರಳುಗಣ್ಣಿನ ನೋಟಗಳೇ ಶ್ರೀವಿಶ್ವಪ್ರಿಯ ತೀರ್ಥರನ್ನು ಪುಳಕಿತರನ್ನಾಗಿಸಿದ್ದವು. ಶ್ರೀವಿಶ್ವಪ್ರಿಯ ತೀರ್ಥರ ಸುಧಾನುವಾದದ ಬಳಿಕ ಶ್ರೀವಿದ್ಯಾಮಾನ್ಯತೀರ್ಥರು ಹೃತ್ಪೂರ್ವಕ ಮಂದಹಾಸವನ್ನು ಬೀರಿದರು. ಆಗ ನೆರೆದ ಭಕ್ತಸ್ತೋಮದಿಂದ ಪ್ರಚಂಡ ಕರತಾಡನವಾಯಿತು. ಏಕೆಂದರೆ ಆ ಗುರುಗಳು ಆ ಮುಗುಳ್ನಗೆಯಲ್ಲಿ ಎಲ್ಲವನ್ನೂ ತುಂಬಿ ಹರಸಿದ್ದರು. ಶ್ರೀವಿಶ್ವಪ್ರಿಯ ತೀರ್ಥರು ಶ್ರೀವಿದ್ಯಾಮಾನ್ಯತೀರ್ಥರ ಪ್ರೀತಿ ಕೃಪೆಗಳಿಗೆ ಪಾತ್ರರಾದವರು ಎನ್ನುವುದಕ್ಕೆ ಈ ಒಂದು ನಿದರ್ಶನವೇ ಸಾಕು.

ಶಿಷ್ಯರೆಲ್ಲರ ಸುಧಾಮಂಗಲಗಳಲ್ಲಿ ಭಾಗವಹಿಸುತ್ತಿದ್ದ ಶ್ರೀವಿದ್ಯಾಮಾನ್ಯ ತೀರ್ಥ ಶ್ರೀಪಾದರ ಬಾಗವಹಿಸಿದ ಅಂತಿಮ ಮಂಗಲ ಅದು ಅದಮಾರು ಶ್ರೀಪಾದರ ಸುಧಾಮಂಗಲವಾಯಿತು. ದಾಖಲೆಯಾಯಿತು. ಅಂತಹ ಅಪೂರ್ವ ಯೋಗ ಶ್ರೀವಿಶ್ವಪ್ರಿಯ ತೀರ್ಥರಿಗಿತ್ತು. ಈ ಸುಧಾಮಂಗಲದಲ್ಲಿ ಅಸ್ವಸ್ಥರೆಂದು ಪ್ರಸಿದ್ಧರಾದ ಶ್ರೀಪಾದರ ಉಪಸ್ಥಿತಿ ಪತ್ರಿಕಾಕರ್ತರನ್ನು, ವೈದ್ಯರನ್ನು, ಜನತೆಯನ್ನು ಅಚ್ಚರಿಪಡಿಸಿತು. ಆಗ ಅವರೆಲ್ಲ ನುಡಿದರು ಆಶ್ರೀಪಾದರ ಆತ್ಮಬಲವೇ ಹೊರತು ದೇಹಬಲ ಅಲ್ಲ ಅಂತೆಯೇ ಶ್ರೀವಿಶ್ವಪ್ರಿಯ ತೀರ್ಥರಲ್ಲಿ ಗುರುಗಳಿಗಿದ್ದ ಪ್ರೀತಿಯಬಲಟಿ ಎಂದು.

ಪುತ್ತಿಗೆ ಮಠದ ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದರು ಮಾಡಿದ ಮೂರು ಸುಧಾಮಂಗಲಗಳಲ್ಲೂ ಉಪಸ್ಥಿತರಾಗಿದ್ದು, ಶ್ರೀಪಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶತೀರ್ಥರು ಮಾಡಿದ ನಾಲ್ಕು ಸುಧಾಮಂಗಲ ಮಹೋತ್ಸವಗಳಲ್ಲಿ ಹಾಗೂ ಶ್ರೀ ಭಂಡಾರಕೇರಿ ಮಠದ ಶ್ರೀ ಶ್ರೀ ವಿದ್ಯೇಶತೀರ್ಥರು ನಡೆಯಿಸಿದ ಎರಡು ಸುಧಾಮಂಗಲಗಳಲ್ಲಿ ಉಪಸ್ಥಿತರಾಗಿ ಅನುಗ್ರಹಿಸಿದ್ದರು.

ಈ ರೀತಿ ಯತಿಶಿಷ್ಯರ ಸುಧಾಪ್ರವಚನ ಮಂಗಲಗಳಲ್ಲಿ

ಭಾಗವಹಿಸಿ ಅನುಗ್ರಹಿಸಿದ ಶ್ರೀ ಶ್ರೀಪಾದರು ಗೃಹಸ್ಥಶಿಷ್ಯರ ಸುಧಾಮಂಗಲಗಳನ್ನೂ ವೀಕ್ಷಿಸಿ, ಆನಂದಿಸಿ ಆ ಶಿಷ್ಯರನ್ನು ಅನುಗ್ರಹಿಸಿದರು.

ಪಂಡಿತವರೇಣ್ಯರಾದ ಶ್ರೀ ಕೊಯಂಬತ್ತೂರು ವಾದಿರಾಜಾಚಾರ್ಯರು, ಶ್ರೀಕಾವು ಹಯಗ್ರೀವಾ ಚಾರ್ಯರು, ಶ್ರೀ ವೆಂಕಟರಮಣ ಐತಾಳರು, ಶ್ರೀ ಗುರುರಾಜ ಬಲ್ಲಾಳರು, ಶ್ರೀ ಜಾಲಿಹಾಳ ರಾಘವೇಂದ್ರಾಚಾರ್ಯರು, ಶ್ರೀ ಬಿದರಹಳ್ಳಿ ಶ್ರೀನಿವಾಸಾಚಾರ್ಯರು, ಶ್ರೀ ತೆರಗುಂಡಿ ಗೋಪಾಲಕೃಷ್ಣಾಚಾರ್ಯರು, ಮೊದಲಾದ ಹಳೆಯ ಶಿಷ್ಯರು ಮಾಡಿದ ಸುಧಾ ಪ್ರವಚನ ಮಂಗಲಗಳಲ್ಲಿ ಉಪಸ್ಥಿತರಾಗಿದ್ದರು. ಕೆಲವು ದಶಕಗಳ ಹಿಂದೆ ಯುವ ಪೀಳಿಗೆಯ ಶಿಷ್ಯವರ್ಗದಲ್ಲಿ ಶ್ರೀ ಕೊರ್ಲಹಳ್ಳಿ ಜಯತೀರ್ಥಾಚಾರ್ಯರು ಧಾರವಾಡದಲ್ಲಿ ಹಾಗೂ ಉಡುಪಿಯಲ್ಲಿ ನಡೆಸಿದ ಸುಧಾಮಂಗಲಗಳಲ್ಲಿ, 1995ರಲ್ಲಿ ಶ್ರೀ ಕೊರ್ಲಹಳ್ಳಿ ನರಸಿಂಹಾಚಾರ್ಯರು ಧಾರವಾಡದಲ್ಲಿ ಮಾಡಿದ ಸುಧಾಮಂಗಲದಲ್ಲಿ ಸಶಿಷ್ಯರಾಗಿ ಉಪಸ್ಥಿತರಾಗಿ ಅನುಗ್ರಹಿಸಿದರು. 19 98ರಲ್ಲಿ ಶ್ರೀ ಜೋಶಿಗುರುರಾಜಾಚಾರ್ಯರು ಬೆಳಗಾಂನಲ್ಲಿ ಮಾಡಿದ ಸುಧಾಪ್ರವಚನ ಮಂಗಲದಲ್ಲಿ ಭಾಗವಹಿಸಿ ಅನುಗ್ರಹಿಸಿದರು.

ಆ ಮಹಾಗುರುಗಳ ದಿವ್ಯಸನ್ನಿಧಿಯಲ್ಲಿ ಸುಧಾ ಚಂದ್ರಿಕಾಂತ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡುವ ಸುಯೋಗವನ್ನು ಹೊಂದಿದ ಹಾಗೂ ಅತ್ಯಂತ ಚಿಕ್ಕ ವಿದ್ಯಾರ್ಥಿಯಾದ ನನಗೆ ಹುಬ್ಬಳ್ಳಿಯ 93ರ ಹರೆಯದ ಹಿರಿಯ ವಿದ್ವಾಂಸರಾದ ಶ್ರೀಕೌಲಗಿ ಶೇಷಾಚಾರ್ಯರಿಗೆ ನ್ಯಾಯಸುಧೆಯ ಪ್ರವಚನ ನೀಡುವ ಯೋಗ ದೊರಕಿತ್ತು. ಆ ಪ್ರವಚನದ ಮಂಗಲವು 1999ರಲ್ಲಿ ಪಲಿಮಾರು ಗ್ರಾಮದಲ್ಲಿ ನಡೆದ ಶ್ರೀ ಹನುಮಜಯಂತೀ ಮಹೋತ್ಸವ ಸಂದರ್ಭದಲ್ಲಿ ಪೂಜ್ಯ ಗುರುಗಳ ಹಾಗೂ ಪೇಜಾವರ, ಅದಮಾರು, ಪಲಿಮಾರು, ಭಂಡಾರಕೇರಿ, ಮುಳಬಾಗಿಲು, ಶ್ರೀಪಾದರೆಲ್ಲರ ಸಮ್ಮುಖದಲ್ಲಿ ನಡೆಯಿತು, ಜೊತೆಯಲ್ಲೇ ಗುರುಗಳು ನನಗೆ ಮಾಡಿದ ಸುಧಾ ಪಾಠದ ಮಂಗಲವೂ ಸೇರಿತ್ತು. ಆ ಮಂಗಲದಲ್ಲಿ ಗುರುದಕ್ಷಿಣೆಯಂತೆ ನನ್ನ ಪ್ರವಚನದ ಮಂಗಲ ವಾಯಿತು. ಅಂದು ಗುರುಗಳು ಶ್ರೀ ರಾಜಗೋಪಾಲ ಉಪಾಧ್ಯಾಯ ಎಂಬ ವಿದ್ಯಾರ್ಥಿಗೆ ಮಾಡಿದ ಚಂದ್ರಿಕಾ ಮಂಗಲವೂ ಜೊತೆಯಾಗಿತ್ತು.

ಈ ರೀತಿ ಯತಿಶಿಷ್ಯರ ಹಾಗೂ ಗೃಹಸ್ಥಶಿಷ್ಯರ ಸುಧಾದಿಗ್ರಂಥ ಪ್ರವಚನ ಮಂಗಲಗಳನ್ನು ವೀಕ್ಷಿಸಿ, ಆನಂದಿಸುವ ಅಪೂರ್ವ ಭಾಗ್ಯಶಾಲಿಗಳು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು.

ತಮ್ಮ ಎಲ್ಲ ಶಿಷ್ಯರ ಸುಧಾಮಂಗಲಗಳಲ್ಲಿ ಉಪಸ್ಥಿತರಿದ್ದು ಪ್ರಸನ್ನತೆಯಿಂದ ಶಿಷ್ಯರನ್ನು ತುಂಬು ಹೃದಯದಿಂದ ಹರಿಸಿದ ಅನುಗ್ರಹಾಮೃತಧಾರೆಯ ಒಂದು ಬಿಂದು, ಪ್ರಿಯಶಿಷ್ಯ ಪೇಜಾವರ ಶ್ರೀಪಾದರಿಗೆ ನೀಡಿದ ಶುಭಾಶೀರ್ವಚನ-

श्रीभण्डारकेरि- पलिमारुमठाधीशैः

## श्रीश्री विद्यामान्यतीर्थ श्रीमच्चरणैः

श्रीपेजावरमठाधीशेभ्यः

## श्रीश्रीविश्वेशतीर्थश्रीमच्चरणेभ्यः

तेषां पीठारोहणवज्रमहोत्सवशुभावसरे

# शुभाशीर्वचनम्

भक्तिज्ञानविरक्त्यादियतिसद्गुणभूषणः ।
अभूषणः स्वर्णवर्णः वामनात्मा महामतिः ॥१॥

अद्भुतप्रतिभाशाली श्रुतिस्मृत्यविरोधतः ।
आदर्शविद्यापीठस्य स्थापको व्यासराजवत् ॥ २ ॥

पञ्चविंशतिवारं यः सुधामङ्गलमातनोत् ।
राजतेऽसङ्ख्यशिष्यैः सह नक्षत्रैरिव चन्द्रमाः ॥ ३ ॥

अखिले भारते वर्षे माध्वानां मण्डलं व्यधात् ।
पर्याये प्रथमे बाल्ये वयस्येव किलाद्भुतम् ॥ ४ ॥

न्यायवेदान्तशास्त्रेषु सभायां पण्डितोत्तमान् ।
विश्वेशो विश्वमान्योऽयं चकार च निरुत्तरान् ॥ ५ ॥

निर्मिता बदरीक्षेत्रे विशाला वसतिः सताम् ।
अन्यैः कर्तुमशक्या सा विश्वेशेन कृता किल ॥ ६ ॥

असाध्या बदरीयात्रा निर्माणं वसतेः कथम् ।
मूर्तेरानन्दतीर्थस्य स्थापनाऽत्र कृता किल ॥ ७ ॥

हरिद्वारे च देहल्यां काश्यां वृन्दावने तथा ।
वसतिं माध्वविद्यायाः पीठानि स्थापयिष्यति ॥ ८ ॥

सम्पादितानि स्थानानि तदर्थं तेन तत्र हि ।
अन्यान्यपि बहून्येवं विश्वेशेन कृतानि वै ॥ ९ ॥

जन्मन्यस्मिन् ध्रुव इव श्रीमध्वगुरुसेवया ।
ब्रह्मापरोक्षज्ञानित्वं विश्वेशः प्राप्नुयाद् यति : ॥१०॥

इति विद्यामान्यतीर्थो विश्वेशाय यशस्विने ।
तस्मा आशिषमाशास्ते प्रसन्नमनसा सदा ॥ ११ ॥

बहुधान्यसंवत्सरस्य
मार्गशिरबहुलदशमी
२९-११-१९९८

इति नारायणस्मरणं
**श्रीश्रीविद्यामान्यतीर्थ श्रीपादाः**
श्रीभण्डारकेरि- पलिमारुमठाधीशाः
उडुपि

# ದಾಸ ಸಾಹಿತ್ಯದೊಲವು

ನ್ಯಾಯ, ವ್ಯಾಕರಣ, ವೇದಾಂತ, ಮೀಮಾಂಸಾ, ಜ್ಯೋತಿಷ್ಯ ಧರ್ಮಶಾಸ್ತ್ರಾದಿ ಸಕಲ ಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಹೊಂದಿದ ಓರ್ವ ವಿದ್ವಾಂಸನನ್ನು ನಾವು ಊಹಿಸಿದರೆ, ಪ್ರಾಯಃ ಆ ವ್ಯಕ್ತಿಯಲ್ಲಿ ಅಲ್ಪವಾದರೂ ಬಿಗು ತೋರೀತು. ಅರ್ಥಾತ್, ಕನ್ನಡ ಭಾಷೆಯ ಹರಿದಾಸ ಸಾಹಿತ್ಯವನ್ನು ಸ್ವೀಕರಿಸುವ, ಸವಿಯುವ ಸರಳತೆ ಇರದು. ಆದರೆ ತಲಸ್ಪರ್ಶಿ ಪಾಂಡಿತ್ಯದಿಂದ ಪೂರ್ಣರಾದ ಅನುಭವ ಸಂಪನ್ನರಾದ ವ್ಯಕ್ತಿಗಳು ಮಾತ್ರ ಆ ಸಾಹಿತ್ಯವನ್ನು ಸವಿಯುವುದರಲ್ಲಿ ಎರಡು ಮಾತಿಲ್ಲ. ಅಂತಹ ವ್ಯಕ್ತಿಗಳು ಬಹಳ ವಿರಳ. ತಲೆಯ ತುಂಬ ತತ್ವವನ್ನೇ ಚಿಂತಿಸುವವರಿಗೆ ಭಾಷೆ ಸಂಸ್ಕೃತವಾದರೇನು? ಕನ್ನಡವಾದರೇನು? ಶಾಸ್ತ್ರಗಳಲ್ಲಿರುವ ಸಾರವನ್ನೇ ಬಿತ್ತರಿಸುವ ಸಾಹಿತ್ಯವನ್ನು ನೀಡಿದವರು ಹರಿದಾಸರು. ಅವರ ನುಡಿ ಶಾಸ್ತ್ರಾನುವಾದ ಅವರ ನಡೆ ಭಾಗವತ. ಅಂತಹವರ ಪಂಕ್ತಿಯಲ್ಲಿ ಸೇರುವವರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು. ಆಶ್ಚರ್ಯವಾಯಿತೆ? ಸಹಜ. ಪ್ರಾಕೃತಸಾಹಿತ್ಯ ಯಾವಾಗಲೂ ಒಂದೇ. ಅದು ದಾಸಸಾಹಿತ್ಯ, ಅದು ವೇದ ಸಾಹಿತ್ಯಕ್ಕೆ ಅನುಸಾರಿಯಾದ ಸಾಹಿತ್ಯ. ಅದನ್ನು ಆರಂಭಿಸಿದವರು ನಿಜವಾದ ಹರಿಯ ದಾಸರಾದ ಶ್ರೀಮದಾಚಾರ್ಯರು ಅವರನಂತರ ಶಿಷ್ಯರು ಅದನ್ನೇ ಮುಂದುವರೆಸಿದರು. ಆದರೆ ಭಾಷೆ ಎರಡಾಯಿತು. ಶೈಲಿ ಎರಡಾಯಿತು. ಸಾಮಾನ್ಯ ಭಕ್ತನಿಗೂ ತತ್ವ ತಿಳಿಯಲು ಕನ್ನಡದಲ್ಲಿ ಸಾಹಿತ್ಯ ಹೊರಹೊಮ್ಮಿತು. ಅದನ್ನು ಬೆಳಕಿಗೆ ತಂದವರು ಶ್ರೀನರಹರಿತೀರ್ಥರು ಶ್ರೀಪಾದರಾಜರು ಶ್ರೀವ್ಯಾಸರಾಜರು, ಶ್ರೀವಾದಿರಾಜರು ಮೊದಲಾದ ದಿಗ್ಗಜ ಪಂಡಿತ ಯತಿವರರು. ಮುಂದೆ ಪುರಂದರದಾಸರೇ ಮೊದಲಾದವರು ಮುಂದುವರೆಸಿದರು. ಇದನ್ನೆಲ್ಲ ಗಮನಿಸಿದಾಗ ಸಾಧಕನಿಗೆ ಭಾಷೆ ತೊಡಕಾಗುವುದಿಲ್ಲ. ಅಲ್ಲಿ ಬಿಗುಮಾನವಿರುವುದಿಲ್ಲ. ಅದೇ ಪೀಳಿಗೆಯಲ್ಲಿಯೇ ನಡೆದು ಬಂದ ಶ್ರೀ ವಿದ್ಯಾಮಾನ್ಯ ತೀರ್ಥರಿಗೂ ಅದೇ ಸ್ವಭಾವವಿದ್ದಲ್ಲಿ ಆಶ್ಚರ್ಯವೇನಿಲ್ಲ. ಆದರೆ ಇಂದಿನ ಸ್ಥಿತಿಯನ್ನೇ ಕಂಡವರಿಗೆ ಮಾತ್ರ ಇದು ಆಶ್ಚರ್ಯದ ಸಂಗತಿ.

ಶ್ರೀವಿದ್ಯಾಮಾನ್ಯ ತೀರ್ಥರಿಗೆ ಕನ್ನಡದ ಹರಿದಾಸ ಸಾಹಿತ್ಯದಲ್ಲಿ ಒಲವಿನ ಕುರಿತು ಕೆಲವು ಪುಟ್ಟದೃಷ್ಟಾಂತಗಳು.

ಶ್ರೀಅದಮಾರು ಶ್ರೀಪಾದರ ಶ್ರೀಕೃಷ್ಣಪೂಜಾ ಪರ್ಯಾಯದ ಸಂದರ್ಭ. ಶ್ರೀಅದಮಾರು ಶ್ರೀಪಾದರು ಅಖಿಲ ಭಾರತ ಹರಿ ದಾಸ ಸಮ್ಮೇಳನವನ್ನು ಉಡುಪಿ ಶ್ರೀಕೃಷ್ಣ ಮಠದಲ್ಲಿ 15 ದಿನಗಳ ಕಾಲ ಅಭೂತ ಪೂರ್ವವಾಗಿ ನೆರ ವೇರಿಸಿದರು. ಸಮಾರೋಪ ಸಮಾರಂಭಕ್ಕೆ ಶ್ರೀ ವಿದ್ಯಾಮಾನ್ಯತೀರ್ಥರು ಅಧ್ಯಕ್ಷರು. ಅಧ್ಯಕ್ಷ ಸ್ಥಾನದಿಂದ ಮಾತನಾಡುವ ಮುಂಚೆ ಶ್ರೀವಿದ್ಯಾಮಾನ್ಯತೀರ್ಥರು ಒಂದು ಆಶ್ಚರ್ಯವನ್ನು ಆನಂದವನ್ನು ನೀಡಿದರು. ಅದು ದಾಸರ ಪದಗಳನ್ನು ತಮ್ಮ ಸುಮಧುರ ಕಂಚಿನ ಕಂಠದಿಂದ ಹಾಡುವ ಮೂಲಕ. ಕರುಣಿಸೋ, ರಂಗ ಕರುಣಿಸೋ ರಂಗ ಬಾರೋ ಪಾಂಡುರಂಗ ಬಾರೋ, ಗೋಪೀಗೀತ, ಮೊದಲಾದ ವದಗಳನ್ನು ಭಾವಪೂರ್ಣವಾಗಿ ಹಾಡಿದರು. ಆನಂದಿಸಿದರು. ಆನಂದನೀಡಿದರು. ಅವರು ಹಾಡುವಾಗ ಕೇಳಿದವನ ಮೈಯೆಲ್ಲ ಕಿವಿಯಾಗಿತ್ತು, ರೋಮಾಂಚಿತವಾಗಿತ್ತು. ರಾಜಾಂಗ ಣದಲ್ಲಿ ಕಿಕ್ಕಿರಿದ ಜನಸ್ತೋಮದ ಕರತಾಡನ ಅಲೆ ಅಲೆಯಾಗಿ ಬಂತು. ಇದಾವುದೂ ಉತ್ಪ್ರೇಕ್ಷೆಯಲ್ಲ ಇಂದಿಗೂ ಧ್ವನಿಸುರುಳಿಯಲ್ಲಿ ಸ್ಥಿರವಾಗಿದೆ.

ಅಂತೂ, ಶಾಸ್ತ್ರ ಸಾಹಿತ್ಯದಲ್ಲಿ ಸಿದ್ಧಪುರುಷರಾದ ಶ್ರೀಪಾದರ ಮುಖದಿಂದ ದಾಸರ ಕನ್ನಡ ಸಾಹಿತ್ಯವೂ ಹೊರಹೊಮ್ಮಿತು. ಸುಮಾರು 70 ವರ್ಷಗಳ ಕಾಲ ಶಾಸ್ತ್ರದಲ್ಲಿಯ ರತರಾದ ಶ್ರೀಪಾದರು ಒಂದೊಮ್ಮೆಲೇ ಒಂದು ವಾರದಲ್ಲಿ ದಾಸರ ಪದಗಳನ್ನು ಹೇಳಲು ಅಭ್ಯಾಸ ಮಾಡಿದರು. ಇಂದಿನ ಯುವಕರಿಗೂ ನಾಚುವಂತೆ ಅಭ್ಯಾಸ ಮಾಡಿದರು. ಹಾಡಿದರು. ಹಾಡುವಾಗ ಅವರಲ್ಲಿ ಕೀರ್ತಿಯ ಆಕಾಂಕ್ಷೆಯ ಛಾಯೆಯೂ ಇರಲಿಲ್ಲ. ಬದಲಾಗಿ ದಾಸರ ಮಾತಿನಲ್ಲಿ ತನ್ಮಯತೆಯಿತ್ತು. ಇಷ್ಟಕ್ಕೆಲ್ಲ, ಆ ಸಾಹಿತ್ಯದ ಒಲವಿತ್ತು. ಅದು ಎಲ್ಲರಿಗೂ ಆದರ್ಶವಾಗಿತ್ತು. ಪ್ರಾಯಃ ಅಂದು ಶ್ರೀಕೃಷ್ಣ ಈ ಮಹಾಭಕ್ತನ ಹಾಡಿಗೆ ಕುಣಿದು ಕುಪ್ಪಳಿಸಿರಬೇಕು.

ಎಲ್ಲೇ ದಾಸರ ಪದಗಳು ಕೇಳಿದರೂ, ಅಲ್ಲಿ ನಿಂತು ಅದನ್ನು ಆಸ್ವಾದನೆ ಮಾಡುವ ಸ್ವಭಾವ ಶ್ರೀವಾದರದ್ದು. ಬೆಂಗಳೂರಿನ ನರಸಿಂಹರಾಜ ಕಾಲೋನಿಯ ಶ್ರೀ ವಿಜಯೀಂದ್ರ ದೇಶಪಾಂಡೆ ದಂಪತಿಗಳ ಪುತ್ರಿ ಕುಮಾರಿ ಪವಿತ್ರಾ ಎಂಬ ಬಾಲಕಿಯು ಶ್ರೀಪಾದರ ಬಳಿ ಹರಿಕಥಾಮೃತ ಸಾರದ ಮೊದಲ ಸಂಧಿಯನ್ನು ಕಂಠಸ್ಥವಾಗಿ ಒಪ್ಪಿಸಿದಳು. ಆಗ ಕೋಣೆಯ ಹೊರಗಿನಿಂದ ಬಹಳ ಶಬ್ದಮಾಲಿನ್ಯ ಬರುತ್ತಿತ್ತು. ಅದು ಆ ಬಾಲಕಿಯ ಧ್ವನಿಗೆ ಪ್ರತಿಬಂಧಕವಾಗಿತ್ತು. ಆಗ ಶ್ರೀಪಾದರು ಆ ಶಬ್ದ ಬಾರದಂತೆ ಬಾಗಿಲನ್ನು ಹಾಕಿಸಿ ಪೂರ್ಣ ಹರಿಕಥಾಮೃತಸಾರವನ್ನು ಕೇಳಿ ಸಂತೋಷಪಟ್ಟರು. ಅನುಗ್ರಹಿಸಿದರು. ಅದರ ಫಲವಾಗಿ ಇಂದು ಆ. ಪವಿತ್ರೆಯು ಹರಿಕಥಾಮೃತಸಾರವನ್ನು ಪೂರ್ಣವಾಗಿ ಕಂಠಸ್ಥವಾಗಿ ಸುಮಧುರವಾಗಿ ಹಾಡುವಳು.

ಮದರಾಸಿನ ಶ್ರೀರಾಮಪ್ರಸಾದ ಭಟ್ ಅವರ ಪುತ್ರ ಚಿ। ಪ್ರಹ್ಲಾದ. ಅವನು ಮಾತಾಪಿತೃಗಳಂತೆ

ವೈಷ್ಣವದೀಕ್ಷಾಬದ್ಧ. ಹೆಸರಿಗೆ ಸರಿಯಾಗಿ ಇರುವ ಬಾಲಕ. ಅವನೊಮ್ಮೆ ಶ್ರೀವಿದ್ಯಾಮಾನ್ಯತೀರ್ಥರು ಮನೆಗೆ ಬಂದಾಗ ಹಾಡನ್ನು ಹಾಡಿದ. ಅದು ಶ್ರೀವಿಜಯದಾಸರ ಕೃತಿ 'ವಾತನ್ನ ಜಯ ಜಾತನ್ನ'. ದೇಹ ಬಗ್ಗಿ, ಅಶಕ್ತರಾಗಿದ್ದರೂ ಶ್ರೀಪಾದರು ನಿಂತಲ್ಲೇ ನಿಂತು ಹಸನ್ಮುಖಿಗಳಾಗಿ ಅರಳುಗಣ್ಣುಗಳಿಂದ ಆ ಪುಟ್ಟಪೋರನು ನುಡಿದ ಹಾಡನ್ನು ಕೇಳಿದರು. ಅದು ಪೂರ್ಣಗೊಳ್ಳುವವರೆಗೆ ನಿಂತು ಕೇಳಿದರು. ಅವನನ್ನು ಹರಸಿದರು. ಅದು ಮುಗಿದಂತೆ 'ಇದು ವಿಜಯದಾಸರದ್ದಲ್ಲವಾ?' ಎಂದು ಪ್ರತಿಕ್ರಿಯಿಸಿದರು.

ಹೀಗೆ ಕಿರಿಯರಾಗಲಿ, ಹಿರಿಯರಾಗಲಿ ಹರಿದಾಸ ವಾಙ್ಮಯವನ್ನು ಹಾಡಿದರೆ ಸಂತೋಷದಿಂದ ಆಸ್ವಾದನೆ ಮಾಡುವ ಸಾಧಕರು ಶ್ರೀ ಶ್ರೀ ವಿದ್ಯಾ ಮಾನ್ಯತೀರ್ಥರು.

## 1996 ಮೆಟ್ಟಿಲೋತ್ಸವ ವಿಶೇಷ:

ಸಪ್ತಗಿರೀಶ ಶ್ರೀವೇಂಕಟೇಶನ ಕೃಪೆಯಿಂದ ಹರಿದಾಸರ ಹರಿದಾಸರ ಸಾಹಿತ್ಯದ ಸವಿಯನ್ನು ಎಲ್ಲೆಡೆ ಪೊಸರಿಸುವಂತೆ ಮಾಡಿದ ತಿರುಮಲ-ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ನಡೆಸುವ ಮೆಟ್ಟಿಲೋತ್ಸವವೆಂಬ ಕ್ರಾಂತಿಕಾರಿ ಕಾರ್ಯಕ್ರಮದಲ್ಲಿ 84ರ ಇಳಿಯ ವಯಸ್ಸಿನ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಸಶಿಷ್ಯರಾಗಿ ಪಾಲ್ಗೊಂಡು ಸಮಸ್ತಹರಿದಾಸಬಂಧುಗಳಿಗೆ ಸ್ಫೂರ್ತಿಯನ್ನಿತ್ತು ಅನುಗ್ರಹಿಸಿದರು.

ಆ ದಿನ ಮಾರ್ಗಶೀರ್ಷಪೂರ್ಣಿಮಾ. ಅಂದು ಪ್ರತಿವರುಷವೂ ತಮ್ಮ ಪಲಿಮಾರು ಮಠದ ಆರಾಧ್ಯಮೂರುತಿ ಶ್ರೀರಾಮನಿಗೆ ಸಹಸ್ರಶಂಖ ಕ್ಷೀರಾಭಿಷೇಕವನ್ನು ಮಾಡುವ ಸಂಕಲ್ಪಗೈದರು. ಪ್ರಾರಂಭದ ಕ್ಷೀರಾಭಿಷೇಕಸೇವೆಯ ಸೌಭಾಗ್ಯ ಶ್ರೀಪಾದರ ಪ್ರಿಯಭಕ್ತರಾದ ತಿರುಪತಿಯ ಶ್ರೀಸೀತಾ ಮನೋಹರ ರಾವ್ ದಂಪತಿಗಳ ಪಾಲಿಗಿತ್ತು.

ಗುರುಗಳ ಆಜ್ಞೆಯಂತೆ ಅವರ ಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರು ಪ್ರತಿವರ್ಷವೂ ಆ ದಿನದಂದೇ ಸಹಸ್ರಶಂಖ ಕ್ಷೀರಾಭಿಷೇಕವನ್ನು ನೆರವೇರಿಸುತ್ತಿರವರು.

# ಕೃಪಾಲು

ಭಕ್ತಾಭೀಷ್ಟಪ್ರದಾಯಕರು ಭಕ್ತಾನಿಷ್ಟ ನಿವಾರಕರು

ಏಳಧಿಕ ಎಂಟು ದಶಕಗಳ ಬದುಕಿನಲ್ಲಿ ತಮ್ಮ ತ್ರಿಕರಣ ಪೂರ್ವಕವಾದ ತಪದ ಫಲವಾಗಿ ಪರಮಾತ್ಮನ ಪರಮ ಪ್ರಸಾದವನ್ನು ಪಡೆದ ಪರಮ ಹಂಸಕುಲಭೂಷಣರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು. ಆ ಪ್ರಸಾದದ ಪ್ರಭಾವ ಈ ಪ್ರಪಂಚದ ಮೇಲೂ ಆಯಿತು. ಅದರ ಪ್ರಯೋಜನವನ್ನು ಸಾತ್ವಿಕ ಪ್ರಜೆಗಳು ಪಡೆದರು.

ಸಂತಾನವಿರದವರು ಸಂತಾನವನ್ನು ಪಡೆದರು, ಮಾಂಗಲ್ಯಭಾಗ್ಯವನ್ನು ಪಡೆಯದ ಜನರು ಅದನ್ನೂ ಹೊಂದಿದರು, ನಿರುದ್ಯೋಗಿ ಎಂಬ ದೂಷಣದಿಂದ ನೊಂದ ಮಂದಿ ಉತ್ತಮ ಉದ್ಯೋಗವನ್ನು ಹೊಂದಿದರು. ಮಾತು ಬಾರದ ವ್ಯಕ್ತಿ ಮಾತನಾಡಿದ. ರುಚಿಯ ಪರಿಚಯವಿರದಂತಾಗಿದ್ದ ನಾಲಿಗೆಗೆ ರುಚಿ ಆಸ್ವಾದನಶಕ್ತಿ ಬಂದಿತು. ಕಳೆದ ಕಣ್ಣು ಮರಳಿತು. ಕೇಳದ ಕಿವಿಗಳು ಶಬ್ದಗಳನ್ನಾಲಿಸಿದವು. ಕುಷ್ಠರೋಗಗ್ರಸ್ತವಾದ ಚರ್ಮ ನಿರ್ದುಷ್ಟವಾಯಿತು. ಶಾಶ್ವತವಾಗಿ ಹೊರಗೆ ಹೋಗಿದ್ದ ಗಾಳಿ ಮತ್ತೆ ಮರಳಿತು. ನಿಷ್ಕ್ರಿಯವಾಗಿದ್ದ ಬುದ್ಧಿ ಬಲು ಚುರುಕಾಯಿತು. ನಡೆಯಲಾಗದ ವ್ಯಕ್ತಿ ನಡೆಯಲಾರಂಭಿಸಿದ. ಬರೆಯಲಾಗದವನು ಬರೆಯಲಾರಂಭಿಸಿದ. ಹೀಗೆ ವಿಧ ವಿಧವಾಗಿ ಬಯಸಿದ ವ್ಯಕ್ತಿ ಎಲ್ಲವನ್ನೂ ಪಡೆದ.

ಈ ರೀತಿ ತಮ್ತಮ್ಮ ಮನೋಭಿಲಾಷೆಗಳನ್ನು ಪಡೆದ ಜನರು ಸಹಸ್ರಾರು. ನಮ್ಮ ಎಣಿಕೆಗೆ ಸಿಗದ ಅವರೆಲ್ಲರ ಅನುಭವವೂ ಒಂದೇ. 'ಈ ಮಹಾ ವರದಾಯಕ ಕಲ್ಪತರು'. ಅವರ ಅನುಗ್ರಹದಿಂದ ಇಷ್ಟಾರ್ಥಸಿದ್ಧಿಯ ಪ್ರವಾಹವೇ ಹರಿಯಿತು. ಅವರ ಅನುಗ್ರಹದ ಫಲವನ್ನು ತಿಳಿಯಹೊರಟರೆ ಸಮಯ ಸಾಲದು. ಬರೆಯಹೊರಟರೆ ಪುಸ್ತಕ ಸಾಲದು. ಆದರೂ ಕೆಲವನ್ನಾದರೂ ತಿಳಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಪಂಚಜ್ಞಾನೇಂದ್ರಿಯಗಳ ದೋಷವನ್ನು ಪರಿಹರಿಸಿ ಅನುಗ್ರಹಿಸಿದ ಬಗೆಯನ್ನು ತಿಳಿಯೋಣ.

**ವನಿತೆಯ ಕುಷ್ಠವನ್ನು ಪರಿಹರಿಸಿದರಂತೆ.** ಅಂದೊಮ್ಮೆ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ಕಲ್ಕತ್ತಾ ಮಹಾನಗರಕ್ಕೆ ತೆರಳಬೇಕಿತ್ತು. ಬಹುದೂರದ ಪ್ರಯಾಣವಾದ್ದರಿಂದ ಒಂದು ಹಳ್ಳಿಯಲ್ಲಿಳಿದು ಚಿಕ್ಕ ದೇವಸ್ಥಾನದಲ್ಲಿ ಸ್ನಾನ, ಜಪ, ಪೂಜೆ, ಭಿಕ್ಷೆಗಳನ್ನು ಪೂರೈಸಿದ ಶ್ರೀಪಾದರನ್ನು ಓರ್ವ ವನಿತೆ ಕಂಡಳು. ತನ್ನ ಕೈಗಳನ್ನು ತೋರಿಸಿ ಚರ್ಮರೋಗದ ಸಮಸ್ಯೆಯನ್ನು ತೋಡಿಕೊಂಡಳು. ದಯಾಮಯಿಗಳಾದ ಶ್ರೀಪಾದರು ಕರುಣಾ ಕಟಾಕ್ಷ ಬೀರಿದರು. ಶ್ರೀಪಾದರು ತಾವು ಮಂತ್ರಾಲಯದಿಂದ ತಂದಿದ್ದ ಶ್ರೀರಾಘವೇಂದ್ರ ಸ್ವಾಮಿಗಳವರ ಮೃತ್ತಿಕೆಯನ್ನು ಆಕೆಗೆ ನೀಡಿ, ಇದನ್ನು ಹಚ್ಚಿ ಕೊಂಡು ತೀರ್ಥವನ್ನು ತೆಗೆದುಕೊಂಡರೆ ವಾಸಿಯಾಗುವುದುಟಿ ಎಂದು ನುಡಿದರು. ಅದನ್ನು ಪಡೆದ ಆ ಮಹಿಳೆ ನಡೆದಳು. ಸಂಚಾರವನ್ನು ಮುಂದುವರೆಸಿದ ಶ್ರೀಪಾದರು ಕಲ್ಕತ್ತಾ, ಗಂಗಾಸಾಗರಸಂಗಮದರ್ಶನ ಸ್ನಾನಗಳನ್ನು ಪೂರೈಸಿ ಮರಳುವಾಗ ಅನೇಕ ದಿನಗಳು ಕಳೆದವು. ಮರಳುವ ಶ್ರೀಪಾದರು ಮಾರ್ಗ ಮಧ್ಯದಲ್ಲಿ ಅದೇ ಹಳ್ಳಿಯ ದೇವಸ್ಥಾನದಲ್ಲಿ ತಂಗಿದರು. ಬೆಳಗಿನ ಹೊತ್ತು ನಿತ್ಯದ ವಾಡಿಕೆಯಂತೆ ಆ ಮಹಿಳೆ ಬಂದಳು. ಶ್ರೀಪಾದರನ್ನು ಕಂಡಳು. ತನ್ನ ಕೈಗಳನ್ನು ತೋರಿಸಿದಳು. ಆಗ ಆ ಕೈಗಳು ಮೊದಲಿನಂತೆ ಇರಲಿಲ್ಲ. ಪೂರ್ಣ ಗುಣಮುಖ ವಾಗಿದ್ದವು. 'ರೋಗಗ್ರಸ್ತ ಚರ್ಮವಾಗಿತ್ತೇ?' ಎಂಬ ಸಂಶಯ ಬರುವಷ್ಟು ಗುಣಮುಖವಾಗಿದ್ದವು. 'ಸ್ವಾಮೀಜಿ! ನೀವು ನೀಡಿದ ಮಣ್ಣನ್ನು ಹಚ್ಚಿದೆ ನನ್ನ ಚರ್ಮರೋಗ ವಾಸಿಯಾಯಿತು' ಎಂದು ಅತ್ಯಂತ ಸಂತೋಷದಿಂದ ನುಡಿದಳು. ನಮಿಸಿದಳು. ಆಗ ಶ್ರೀಪಾದರು 'ಇದು ನಮ್ಮ ಶಕ್ತಿಯಲ್ಲ ಶ್ರೀರಾಘವೇಂದ್ರ ಶ್ರೀಪಾದರ ಶಕ್ತಿ' ಎಂದರು. ಆದರೆ ಶ್ರೀರಾಘವೇಂದ್ರ ಸ್ವಾಮಿಗಳ ಪರಿಚಯವೇ ಇರದ ಆ ಮಹಿಳೆಗೆ ಅದು ಎಲ್ಲಿ ತಿಳಿಯಬೇಕು? ಅವಳಿಗೆ ಶ್ರೀಪಾದರೇ ಶ್ರೀರಾಘವೇಂದ್ರ ಸ್ವಾಮಿಗಳು. ಅಂತೂ ಅವಳು ವೇಗವಾಗಿ ತನ್ನ ಮನೆಗೆ ನಡೆದಳು. ತನ್ನ ರೋಗವನ್ನು ಪರಿಹರಿಸಿದ ಸ್ವಾಮಿಗಳು ಬಂದಿರುವ ವಿಷಯವನ್ನು ಎಲ್ಲರಲ್ಲಿಯೂ ಹೇಳಿದಳು. ಕೇಳಿದ್ದೇ ತಡ ಶ್ರೀಪಾದರನ್ನು ಕಂಡು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾವಿರಾರು ಜನರು ಧಾವಿಸಿ ಬಂದರು. ಜನ ರಹಿತವಾಗಿದ್ದ ಆ ದೇವಸ್ಥಾನ ಜನನಿಬಿಡವಾಯಿತು. ಶ್ರೀಪಾದರು ಆಶ್ಚರ್ಯಪಟ್ಟರು. ಜೊತೆಯಲ್ಲಿ ಜನಸಂಮರ್ದವನ್ನು ಇಷ್ಟಪಡದ ಶ್ರೀಪಾದರಿಗೆ ಅವರನ್ನೆಲ್ಲ ಸಮಾಧಾನ ಪಡಿಸಿ ಮಂತ್ರಾಕ್ಷತೆಯಿತ್ತು ಕಳಿಸುವಾಗ ಸಾಕುಸಾಕಾಗಿತ್ತು. ಇನ್ನು ಕೆಲವುದಿನಗಳಕಾಲ ಅಲ್ಲಿಯೇ ಉಳಿಯಲು ಆ ಗ್ರಾಮದ ಜನರ ಒತ್ತಾಯವಿತ್ತು. ಇದು ಶ್ರೀಪಾದರಿಗೆ ಬಲು ಕಠಿಣವಾಯಿತು, ರಾತ್ರಿಯ ಕತ್ತಲೆ ಪಸರಿಸಿದಾಗ ಗ್ರಾಮ ಮಲಗಿತ್ತು. ಬೆಳಿಗ್ಗೆ ಎಚ್ಚೆತ್ತು ನೋಡಿದಾಗ ಸಪರಿವಾರಶ್ರೀಪಾದರ ಸಹಿತ ಮಠದ ವಾಹನ ಕಣ್ಮರೆಯಾಗಿತ್ತು. ಇದು ಶ್ರೀಪಾದರು ತ್ವಗೀಂದ್ರಿಯ ಸಮಸ್ಯೆಯನ್ನು ಪರಿಹರಿಸಿದುದಕ್ಕೆ ಪುಟ್ಟ ದೃಷ್ಟಾಂತ.

**ಮೂಕ ಮಾತನಾಡಿದ, ಕಿವುಡ ಕೇಳಿದ** - ಬೆಂಗಳೂರಿನ ನರಸಿಂಹರಾಜ ಕಾಲೋನಿಯಲ್ಲಿ ಶ್ರೀಲಕ್ಷ್ಮೀಪತಯ್ಯ ಎಂಬ ಭಕ್ತರು ಇದ್ದರು. ಅವರು ವೃತ್ತಿಯಲ್ಲಿ ಕಂಟ್ರಾಕ್ಟರ್. ಸಾತ್ವಿಕ ಸ್ಮಾರ್ತಬ್ರಾಹ್ಮಣರು. ಅವರ

ಹನ್ನೆರಡರ ಹರೆಯದ ಮಗ ವಾಸುದೇವ. ಅವನಿಗೆ ಮಾತು ಬಾರದಾಗಿತ್ತು. ಬಹಳ ಸಿರಿವಂತರಾದ ಲಕ್ಷ್ಮೀಪತಯ್ಯನವರು ಎಲ್ಲ ಪ್ರಸಿದ್ಧ ವೈದ್ಯರಿಗೂ ತೋರಿಸಿ ಚಿಕಿತ್ಸೆಗಾಗಿ ನೀರಿನಂತೆ ಧನವನ್ನು ಖರ್ಚುಮಾಡಿದರು, ಆದರೆ ಮಗ ವಾಸುದೇವ ಮಾತ್ರ ಮಾತನ್ನಾಡಲಾಗಲಿಲ್ಲ. ಸೇವೆ, ಜಪಗಳೆಲ್ಲವೂ ನಡೆದವು. ಪ್ರಾಯಃ ಸಮಯ ಬಂದಿರಲಿಲ್ಲ.

ಶ್ರೀಭಂಡಾರಕೇರಿ ಶ್ರೀಪಾದರಾದ ಶ್ರೀವಿದ್ಯಾ ಮಾನ್ಯತೀರ್ಥರು ಬೆಂಗಳೂರಿಗೆ ಚಾತುರ್ಮಾಸ್ಯಕ್ಕಾಗಿ ದಯಮಾಡಿಸಿದ್ದರು. ವಾಸ್ತವ್ಯಕ್ಕೆ ಸ್ಥಳ ಬೇಕಿತ್ತು. ಆಗೊಂದು ಮನೆ ಸಿಕ್ಕಿತು. ಅದು ಲಕ್ಷ್ಮೀಪತಯ್ಯ ನವರದೇ ಆಗಿತ್ತು. ಶ್ರೀಪಾದರ ಮಹಿಮ ಲಕ್ಷ್ಮೀಪತಯ್ಯ ನವರಿಗೆ ಯಾರಿಂದಲೋ ತಿಳಿಯಿತು ತಮ್ಮ ಮಗನ ಮಾತಿಗಾಗಿ ಶ್ರೀಪಾದರಲ್ಲಿ ಭಿನ್ನವಿಸಿದರು. ಆಗ ಶ್ರೀಪಾದರು ನಿತ್ಯವೂ ಪೂಜೆಯ ಕಾಲಕ್ಕೆ ಬಂದು ತೀರ್ಥ, ಗಂಧಾದಿಗಳನ್ನು ಸ್ವೀಕರಿಸಲು ಆದೇಶಿಸಿದರು. ಜೊತೆಯಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಸೇವೆಯನ್ನೂ ಮಾಡಲು ಆದೇಶಿಸಿದರು. ನಿತ್ಯವೂ ಆ ಬಾಲಕ ಹಾಗೂ ಹೆತ್ತವರು ಶ್ರೀಪಾದರ ಬಳಿ ಬಂದು. ತೀರ್ಥ ಸ್ವೀಕಾರ ಮಾಡಿದರು. ಹೀಗೆ ಮೂರು ತಿಂಗಳುಗಳು ಕಳೆದವು. ಆ ಹೊತ್ತಿಗೆ ಆ ವಾಸುದೇವನ ನಾಲಿಗೆಯಿಂದ ಅಅಮ್ಮಾಟಿ ಎಂಬ ಶಬ್ದ ಹೊಮ್ಮಿತು. ಆರು ತಿಂಗಳು ಕಳೆದಾಗ ಒಂದು ದಿನ ಶ್ರೀಪಾದರು ಆ ಹುಡುಗನನ್ನು ಮುಂದೆ ಕುಳ್ಳಿರಿಸಿಕೊಂಡು 'ಪೂಜ್ಯಾಯ ರಾಘವೇಂದ್ರಾಯ'ಎಂಬ ಶ್ಲೋಕವನ್ನು ಹೇಳಿದರು. ಅಂದು ಮಾತನಾಡಲು ಆರಂಭಿಸಿದ ಆ ವಾಸುದೇವ ಇಂದು ಚೆನ್ನಾಗಿ ಮಾತನಾಡಬಲ್ಲವನಾಗಿರುವನು.

**ರುಚಿಯಿಲ್ಲದಾಕೆ ರುಚಿ ಕಂಡಳು** - ಧಾರವಾಡದಲ್ಲಿ ಓರ್ವ ಭಕ್ತೆ ಶ್ರೀಮತಿ ಸೀತಾಬಾಯಿ ಅವರಿಗೆ ಮೊದಲಿಂದಲೂ ಇದ್ದ ನಾಲಿಗೆಯ ರುಚಿ ಒಮ್ಮೆಲೆ ಇಲ್ಲದಂತಾಯಿತು. ಯಾವ ಪದಾರ್ಥದ ರುಚಿಯೂ ತಿಳಿಯಲಿಲ್ಲ. ಎಲ್ಲ ರೀತಿಯ ಔಷಧೋಪಚಾರ ನಡೆಯಿತು. ಫಲಕಾರಿಯಾಗಲಿಲ್ಲ. ಒಂದೊಮ್ಮೆ ಶ್ರೀವಿದ್ಯಾಮಾನ್ಯತೀರ್ಥರು ಧಾರವಾಡಕ್ಕಾಗಮಿಸಿದರು. ಅವರ ಬಳಿಯಲ್ಲಿ ನಿವೇದಿಸಿಕೊಂಡಾಗ ಶ್ರೀಪಾದರು ಧನ್ವಂತರಿಯನ್ನು ಪ್ರಾರ್ಥಿಸಿ 'ಅಚ್ಯುತಾನಂತ ಗೋವಿಂದ ಸ್ಮೃತಿ ಮಾತ್ರಾರ್ತಿನಾಶನ ರೋಗಾನ್ಮೇ ನಾಶಯಾಶೇಷಾನ್ ಆಶು ಧನ್ವಂತರೇ ಹರೇ'ಎಂಬ ಶ್ಲೋಕವನ್ನು ಜಪಿಸುವಂತೆ ಹೇಳಿ ಕಲ್ಲುಸಕ್ಕರೆ ಹಾಗೂ ಮಂತ್ರಾಕ್ಷತೆ ನೀಡಿದರು. ಏಳುದಿನಗಳು ಕಳೆಯುವುದರೊಳಗೆ ಶ್ರೀಮತಿ ಸೀತಾಬಾಯಿಯವರ ನಾಲಿಗೆಗೆ ರುಚಿ ಪ್ರಜ್ಞೆ ಚೆನ್ನಾಗಿ ಬಂತು.

**ಕಾಣದ ಕಣ್ಣು ಜಗವ ಕಂಡಿತು** - ಬೆಂಗಳೂರಿನ ರಾಜಾಜಿನಗರದ ಶ್ರೀ ಎ.ಎನ್.ನರಹರಿರಾವ್ ಅವರಿಗೆ ದುರ್ದೈವದಿಂದ 40ರ ಹರೆಯದಲ್ಲಿಯೇ (ಕ್ಯಾಟರಾಕ್ಟ್) ಕಣ್ಣಿನ ಪೊರೆಯ ದೋಷದಿಂದ ಶಸ್ತ್ರ ಚಿಕಿತ್ಸೆಯಾಯಿತು. ಕೆಲವು ತಿಂಗಳ ಬಳಿಕ ಪುನಃ ಕಣ್ಣಿಗೆ ಪೊರೆ ಬಂತು. ಕೆಲಸಕ್ಕೂ ಹೋಗದದಂತಾಯಿತು. ವೈದ್ಯರೂ ಅಚ್ಚರಿ ಪಡುವಂತಾಯಿತು. ಆಗ ನರಹರಿ ರಾಯರು ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪಾಠ ಹೇಳುತ್ತಿದ್ದ ಶ್ರೀ ವಿದ್ಯಾಮಾನ್ಯತೀರ್ಥರ ಬಳಿ ಬಂದರು. ಗಳಗಳನೇ ಅತ್ತರು ಅವರ ಆ ಅಳುವಿನ ಕಾರಣವನ್ನು ಶ್ರೀ ಪಾದರು ಕೇಳಿದರು. ಚಕಿತರಾದರು. ಏಕೆಂದರೆ

ಆಗ ಶ್ರೀಪಾದರಿಗೆ 70 ದಾಟಿದ್ದರೂ ಇನ್ನೂ ಕ್ಯಾಟರಾಕ್ಟ್ ಸಮಸ್ಯೆ ಬಂದಿರಲಿಲ್ಲ. ಈ ಕಿರಿಯ ಹರೆಯದ ನರಹರಿಯರ ಸ್ಥಿತಿಯನ್ನು ಕಂಡು ಕೃಪಾದೃಷ್ಟಿಯನ್ನು ಬೀರಿದರು. ಒಂದು ಆದೇಶವನ್ನು ನೀಡಿದರು. 'ಘೃಣಿಃ, ಸೂರ್ಯ' ಎಂಬ ಮಂತ್ರವನ್ನು ದಿನಕ್ಕೆ ನೂರೆಂಟು ಬಾರಿ ಜಪಿಸಲು ಹೇಳಿದರು. ಮಂತ್ರಾಕ್ಷತೆ ನೀಡಿದರು. ನರಹರಿರಾಯರು ಶ್ರೀಪಾದರ ಆದೇಶದಂತೆ ನಿತ್ಯವೂ ತಮ್ಮ ಸಂಧ್ಯಾವಂದನೆಯ ನಂತರ ಆ ಮಂತ್ರವನ್ನು ಜಪಿಸಿದರು. ಒಂದು ವರ್ಷದ ನಂತರ ಮತ್ತೆ ವಿದ್ಯಾಪೀಠಕ್ಕೆ ಬಂದರು. ಬರುವಾಗ ಯಾರ ಸಹಾಯವೂ ಇಲ್ಲದೇ ಒಬ್ಬರೇ ಬಂದರು. ಶ್ರೀಪಾದರಿಗೆ ತಿಳಿಸಿದರು. ತಾವು ನಿತ್ಯದಲ್ಲಿ ತಮ್ಮ ಫ್ಯಾಕ್ಟರಿ ಕೆಲಸಕ್ಕೆ ಹೋಗುವುದನ್ನೂ ತಿಳಿಸಿದರು. ''ತಮ್ಮ ಅನುಗ್ರಹದಿಂದ ಯಾವ ವಿಶೇಷ ವೈದ್ಯಕೀಯ ಖರ್ಚಿಲ್ಲದೆ ಕಣ್ಣು ಕಾಣುವಂತಾಯಿತು. ಅದು ಸೂರ್ಯನಾರಾಯಣನ ಅನುಗ್ರಹ ಅಷ್ಟೇ'' ಎಂದರು. ಅಂತೂ ನರಹರಿರಾಯರಿಗೆ ಸೂರ್ಯನಾರಾಯಣನ ಅನುಗ್ರಹವು ಶ್ರೀಪಾದರ ಮೂಲಕವಾಯಿತು. ಅವರು ಮತ್ತೊಮ್ಮೆ ಸ್ಪಷ್ಟವಾಗಿ ಪ್ರಪಂಚವನ್ನು ಕಾಣುವಂತಾಯಿತು. ಹೀಗೆ ಬಾಹ್ಯಪ್ರಪಂಚವನ್ನು ಕಾಣದ ಕಣ್ಣಿಗೆ ಕಾಣುವ ಶಕ್ತಿಯನ್ನು ನೀಡಿದ ಶ್ರೀಶ್ರೀಪಾದರು ಶಾಸ್ತ್ರಗ್ರಂಥಗಳ ಪಾಠವನ್ನು ಹೇಳಿ ಅಜ್ಞಾನದ ಪೊರೆಯನ್ನು ನಿವಾರಿಸಿ ಜ್ಞಾನಚಕ್ಷುಸ್ಸುಗಳನ್ನು ನೀಡಿದ ಮಹಾಪ್ರಭುಗಳು.

**ಸಂತಾನಭಾಗ್ಯ:** ಗದುಗಿನ ಶ್ರೀನಾರಾಯಣರಾವ್ ದಂಪತಿಗಳಿಗೆ ಸಂತಾನಭಾಗ್ಯವನ್ನನ್ನು ಕರುಣಿಸಿದ್ದು ಮಕ್ಕಳಿಲ್ಲದ ಅನೇಕ ಮಂದಿಗೆ ತಮ್ಮ ಫಲಮಂತ್ರಾಕ್ಷತೆಯನ್ನು ಅಭಿಮಂತ್ರಿಸಿ ಸಂತತಿಯಾಗುವ ಭಾಗ್ಯಪಡೆವಂತೆ ಅನುಗ್ರಹಿಸಿದ ಸಾವಿರಾರು ಪ್ರಸಂಗಗಳಲ್ಲೊಂದು.

**ಪ್ರೇತಬಾಧೆನಿವಾರಣೆ:** ಆದೋನಿಯ ಶ್ರೀ ಹಾಲ್ವಿ ಹನುಮಂತರಾವ್ ಅವರ ಪತ್ನೀ ಶ್ರೀಮತಿ ವೆಂಕಮ್ಮ ನವರನ್ನುಪ್ರೇತಬಾಧೆಯಿಂದ ವಿಮುಕ್ತಿಗೊಳಿಸಿದ ತಪಃಶಕ್ತಿ ನಮ್ಮ ಶ್ರೀಪಾದರದ್ದು. ಇದು ಅತೀಂದ್ರಿಯವಾದ ಪ್ರೇತಬಾಧೆಯನ್ನು ನಿವಾರಿಸಿದ ಶ್ರೀಪಾದರ ಮಹಿಮಾಸಾಗರದಲ್ಲಿ ಒಂದು ನಿದರ್ಶನ.

**ಸಮದರ್ಶಿಗಳು:** ಇರುವೆಯ ಉರಿಯ ಹಿಂದೆ ಹರಿಯ ಇರವಿನ ಅರಿವು

ಮೇಲ್ನೋಟಕ್ಕೆ ಇದೊಂದು ಸಾಮಾನ್ಯ ಘಟನೆ. ಆದರೆ ಅದರ ಸಂದೇಶ ಅಸಾಮಾನ್ಯ.

ಘಟಿಕಾಚಲ ಕ್ಷೇತ್ರದಲ್ಲಿ ಚಾತುರ್ಮಾಸ್ಯದ ಸಂದರ್ಭ. ನನಗೆ '' ಚಂದ್ರಿಕಾ'' ಗ್ರಂಥದಲ್ಲಿ ಎರಡನೆಯ ಅಧ್ಯಾಯದ ಸಮಯ.ಪಾದದ ಪಾಠದ ಸಮಯ. ಪ್ರಾಯಃ ಈ ಭಾಗದ ಪಾಠಕ್ಕೆ ಬಹಳ ವಿಘ್ನ. ಒಂದು ದಿನ, ಕೆಂಪಿರುವೆಯ ಗುಂಪು ಪೂಜ್ಯ ಗುರುಗಳನ್ನು ಮುತ್ತಿತ್ತು. ಅವರ ಆಸನದಲ್ಲಿ ಕೆಲವು ಇರುವೆಗಳು. ವಸ್ತ್ರದಲ್ಲಿ ಕೆಲವು. ಕಣ್ಣಿಗೆ ಕಾಣಸಿಗದ ಅವುಗಳು ಗುರುಗಳನ್ನುಕಚ್ಚಿದವು. ಆಗ ಗುರುಗಳು''ಚ್ಚು ಚ್ಚು ಚ್ಚು ಚ್ಚು'' ಎಂದರು.

ನಾನು ''ಏನು ಸ್ವಾಮಿ? '' ಎಂದೆ.

'' ಇರುವೆ ಕಚ್ಚಿತು ಕಚ್ಚಿತು'' ಎಂದರು.

'' ಎಲ್ಲಿ?'' ಎಂದು ಪ್ರಶ್ನಿಸಿದಾಗ ಬೆನ್ನನ್ನು ತೋರಿಸಿದರು.

ಬೆನ್ನನ್ನು ನೋಡಿ ಹುಡುಕಿದೆ. ಇರುವೆ ನನ್ನಕೈ ಸೇರಿತು. ಅಸು ನೀಗಿತು. ಗುರುಗಳು ಕೇಳಿದರು. '' ಏನು ಮಾಡಿದೆ?''

ನಾನು '' ಕೊಂದೆ'' ಎಂದೆ

'' ಛೆ! ಎಂತಹ ಕೆಲಸ ಮಾಡಿದೆ?'' ಎಂದು ಮರುಗಿದರು.

'' ಕಚ್ಚಿದ ತಪ್ಪಿಗೆ ತಕ್ಕ ಶಿಕ್ಷೆ'' ಎಂದು ನಾನು ಸಮರ್ಥಿಸಿಕೊಂಡೆ.

ಗುರುಗಳ ಮುಖದಲ್ಲಿ ಗಾಂಭೀರ್ಯ ಮೂಡಿತ್ತು. ಧ್ವನಿ ಗದ್ಗದವಾಗಿತ್ತು. ಆ ಧ್ವನಿಯಲ್ಲಿ ವೇದಾಂತದ ಸಾರ ಅಡಗಿತ್ತು. ಗುರುಗಳು ಹೇಳಿದರು-'' ಶಿಕ್ಷೆ ನೀಡಲು ನಾವು ಯಾರು? ಈ ಪರಿಯ ಶಿಕ್ಷೆಗೆ ಸರಿಯಾದ ತಪ್ಪೂ ನಡೆದಿಲ್ಲ. ಅನ್ಯಾಯವಾಗಿ....! ಛೆ! ಛೆ!''

ಮೌನ ಆವರಿಸಿತು. ಕೆಲಕ್ಷಣಗಳ ನಂತರ ಪಾಠ ಮುಂದುವರೆಯಿತು. ಪುನಃ ಗುರುಗಳು (ನಗುತ್ತ) '' ಚ್ಚು ಚ್ಚು ಕಚ್ಚಿತು ,ಕಚ್ಚಿತು '' ಎಂದರು ನಾನು '' ಸ್ವಾಮಿ ಎಲ್ಲಿ?'' ಎಂದು ಕೆಳಿದೆ. ಆಗ ಅವರು ಮೌನಿಗಳಾದರು. ಕಾರಣ ಹಿಂಸೆಯು ನಡೆಯದಿರಲೆಂದಿರಬಹುದು.

ಕಾವಿವಸ್ತ್ರದ ಒಳಗೆ ಹೊಕ್ಕು ಕಚ್ಚುತ್ತಿರುವ ಇರುವೆಯನ್ನು ತಾವೇ ಹುಡುಕಿ ತೆಗೆದು ಬೆರಳುಗಳಿಂದ ಮೃದುವಾಗಿ ಹಿಡಿದು ತಮ್ಮ ಕಣ್ಣ ಮುಂದೆ ಹಿಡಿದರು. ನೋಡಿದರು. ನೋಡುತ್ತ ತನ್ಮಯರಾದರು. ಅನಿಮಿಷರಂತೆ ಆ ಇರುವೆಯನ್ನು ನೋಡುತ್ತಿದ್ದರು. ಆ ನೋಟದಲ್ಲಿ ಆಶ್ಚರ್ಯ ತುಂಬಿತ್ತು. ಮೈ ರೋಮಾಂಚಿತವಾಗಿತ್ತು. ಅವರ ತುಟಿಗಳ ನಡುವೆ ನುಡಿಮುತ್ತು ಸುರಿದಿತ್ತು. '' ಏನು ಆಶ್ಚರ್ಯ! ಇಷ್ಟು ಚಿಕ್ಕ ಜೀವ ಕಚ್ಚಿದರೆ ನಮ್ಮಷ್ಟು ದೊಡ್ಡ ಜೀವಕ್ಕೆ ವೇದನೆಯಾಗುವುದಲ್ಲ? ನಮ್ಮ ಜೀವವಕ್ಕೆ ಅಗತ್ಯವಾದ ಪದಾರ್ಥಗಳು, ಅವುಗಳನ್ನು ಭೋಗಿಸಲು ಬೇಕಾದ ಇಂದ್ರಿಯಗಳು ಇರುವಂತೆ ಈ ಪುಟ್ಟ ಇರುವೆಗೂ ತಕ್ಕುದಾದ ಹೊಟ್ಟೆ, ಆಹಾರ, ನಡೆದಾಡಲು ಕಾಲು, ನೋಡಲು ಕಣ್ಣು ಎಲ್ಲವನ್ನೂ ಸೃಷ್ಟಿಸಿದ ಆ ಭಗವಂತ ಮಾತ್ರ ನಮಗೆ ಕಾಣಲಾರ. ಆನೆಯಂತಹ ಬೃಹದ್ಗಾತ್ರದ ಪ್ರಾಣಿಯನ್ನೂ ಸೃಷ್ಟಿಸಿ ಇರುವೆಯಂತಹ ಜಂತುವನ್ನೂ ಸೃಷ್ಟಿಸಿ ಅವುಗಳ ಪಾಲನೆಗಾಗಿ ಎಲ್ಲ ವ್ಯವಸ್ಥೆಯನ್ನು ಮಾಡುವ ನಿಷ್ಕಾಮಿ ಪರೋಪಕಾರಿಯಾದ ಆ ಹರಿಯನ್ನು ಅರಿಯುವುದು ಹೇಗೆ? ಅರಿತು ಕಾಣುವುದು ಹೇಗೆ? ನಾವು ಮಾಡಿದ ಪ್ರಯತ್ನವೆಲ್ಲ ವಿಫಲವೆ? ಸಫಲವೆ? ತಿಳಿಯದು. ಆದರೆ ನುಡಿಯುವಂತೆ ನಡೆದಾಗ ಅವನು ನಮ್ಮನ್ನು ನೋಡಲು ಬಯಸುವನು. ಆಗಲೇ ನಾವು ಅವನನ್ನು ಕಂಡೇವು''...

ಎಂದು ನುಡಿಯುತ್ತಾ ಮೆಲ್ಲನೆ ಇರುವೆಯನ್ನು ಜೀವಂತವಾಗಿ ಬಿಟ್ಟರು. ಅದು ಸರಸರನೆ ಓಡಿತು. ನನ್ನ ಮನಸ್ಸು ನಾಚಿತು. ಕರಗಿತು. ಆ ಇರುವೆಯು ಕಚ್ಚಿದ ವೇದನೆಯನ್ನು ಲೆಕ್ಕಿಸದೆ, ಆ ಇರುವೆಯೊಳಗೆ, ನಮ್ಮೆಲ್ಲರಲ್ಲೂ ಒಳಗೆ ಕುಳಿತು ಜನನ,ಪಾಲನ,ಮರಣ, ನಿಯಮನ, ಜ್ಞಾನ, ಅಜ್ಞಾನ, ಬಂಧನ ಹಾಗೂ ಮೋಚನೆಗಳನ್ನಿತ್ತು ಪೊರೆವ ಆ ಸಿರಿಯರಸನಾದ ಹರಿಯ ಇರವನ್ನು ಅರಿತು ಅನುಸಂಧಾನಿಸಿದ ವಿದ್ಯಾಮಾನ್ಯರು.

**ಕ್ರಿಕೇಟಿನಲ್ಲೂ ಶ್ರೀಪಾದರು:** ಚೆನ್ನೈ ಮಹಾನಗರದ ವಾಸಿಗಳಾದ ಧರ್ಮಭೂಷಣ ಶ್ರೀಸೀತಾರಾಮರಾಯರ ಸುಪುತ್ರರಲ್ಲಿ ಶ್ರೀ ನಾರಾಯಣದಾಸರೊಬ್ಬರು. ಅವರ

ಇಬ್ಬರು ಪುತ್ರರಲ್ಲಿ ಒಬ್ಬ ವಾಸುದೇವ ದಾಸ. ಆತ ಮಾತಾಪಿತೃಗಳಂತೆ ಉತ್ತಮ ಸಂಸ್ಕಾರವಂತ. ನಿತ್ಯ ಸ್ನಾನ ಸಂಧ್ಯಾವಂದನೆ, ಪೂಜೆ, ಭಜನೆಗಳೆಲ್ಲವನ್ನು ತಪ್ಪದೇ ಮಾಡುವಾತ, ಅವನಿಗೆ ಕ್ರಿಕೇಟ್ ಎಂದರೆ ಬಲು ಇಷ್ಟ. ಉತ್ತಮ ವಿದ್ಯಾರ್ಥಿಯಾಗಿದ್ದು ಕ್ರೀಡೆಯಲ್ಲೂ ಉತ್ತಮ ಕ್ರೀಡಾಪಟು. 12ರ ಹರೆಯದ ಈ ಪೋರ ತನ್ನ ಮನೆಗೆ ಬಂದ, ಶ್ರೀವಿದ್ಯಾಮಾನ್ಯ ತೀರ್ಥರ ಬಳಿ ಬಂದು ತನ್ನ ಕ್ರಿಕೇಟ್ ಬ್ಯಾಟನ್ನು ನೀಡಿದ, 'ಅದನ್ನು ಮುಟ್ಟಿ ಅನುಗ್ರಹಿಸಲು,' ಪ್ರಾರ್ಥಿಸಿದ. ಅವನ ಪ್ರಾರ್ಥನೆ, ಶ್ರದ್ಧೆಗೆ ಶ್ರೀನಾರಾಯಣ ದಾಸರ ಪೂರ್ಣ ಬೆಂಬಲವಿತ್ತು. 'ಕ್ರಿಕೇಟ್ ಎಂದರೇನು?' ಎಂದರಿಯದ ಶ್ರೀಪಾದರು ಮುಗ್ಧಮನಸ್ಸಿನಿಂದ ಆ ಬ್ಯಾಟನ್ನು ತೆಗೆದುಕೊಂಡು ಕಣ್ಮುಚ್ಚಿ, ಪ್ರಾರ್ಥಿಸಿ ಜಪಿಸಿ, ಹಸನ್ಮುಖಿಗಳಾಗಿ ಆ ವಾಸುದೇವದಾಸನಿಗೆ ನೀಡಿದರು. ಈ ಸನ್ನಿವೇಶವನ್ನು ವೀಕ್ಷಿಸುತ್ತಿದ್ದ ಜನರಿಗೆ ಇದೊಂದು ಹಾಸ್ಯಾಸ್ಪದ ವಿಷಯದಂತಾಗಿತ್ತು. ಹಾಗಾಗಿ ಅವರೆಲ್ಲ ಇದನ್ನೋಡಿ ನಕ್ಕರು. ಆದರೆ, ಆ ಬ್ಯಾಟಿನ ಮಹತ್ವ ಏನಾಯಿತು? ಮುಂದೆ ಕೆಲವೆ ದಿನಗಳಲ್ಲಿ ತಿಳಿಯಿತು. ಆ ವಾಸುದೇವ ದಾಸನು ಶಾಲಾ ಮಟ್ಟದ ವಲಯದಲ್ಲಿ ಕ್ರಿಕೇಟ್ ಪಂಧ್ಯಕ್ಕೆ ಆಯ್ಕೆಯಾಗಿ ದ್ವಿಶತಕವನ್ನು ಬಾರಿಸಿ ಅಜೇಯನಾಗಿ ಉಳಿದನು. ಇದರಿಂದ ಆತ ರಾಜ್ಯ ಮಟ್ಟದ ತಂಡದಲ್ಲಿ ಆಯ್ಕೆಯಾದ. ಅದರಲ್ಲೂ ಉತ್ತಮ ಪಲಿತಾಂಶ ಕಂಡ. ಅಲ್ಲಿಂದ, ಇಂಗ್ಲೆಂಡ್ ನಲ್ಲಿ ನಡೆದ ಭಾರತ ಹಾಗೂ ಗಳ ನಡುವೆ ನಡೆದ ಪಂಧ್ಯದಲ್ಲಿ ದಕ್ಷಿಣ ಭಾರತದಿಂದ ಏಕೈಕ ಕ್ರಿಕೇಟರ್ ಆಗಿ ಆಯ್ಕೆಗೊಂಡು ಅಲ್ಲಿಯೂ ತನ್ನ ಜಾಣ್ಮೆಯನ್ನು ತೋರಿದನು. ಎಲ್ಲ ವೃತ್ತ ಪತ್ರಿಕೆಗಳೂ ಆತನನ್ನು ಹೊಗಳಿದವು. ಆದರೆ ಆತ ಮಾತ್ರ ಇಷ್ಟಕ್ಕೆಲ್ಲ ಕಾರಣವಾದ 'ಶ್ರೀಪಾದರು ಮುಟ್ಟಿ ಜಪಿಸಿ ನೀಡಿದ ಬ್ಯಾಟ್' ಎಂದು ಧನ್ಯತೆಯಿಂದ ನುಡಿಯುವನು. ಆ ಬ್ಯಾಟನ್ನು ಜೋಪಾನವಾಗಿ ಇಟ್ಟಿರುವನು.

**ಅಂತಿಮ ಭಾಗ್ಯಶಾಲಿ:** ಮೈಸೂರಿನ ತಂತ್ರಸಾರಾಗಮ ಪರೀಕ್ಷಾ ಮಂಡಳಿಯ ಅಧ್ಯಕ್ಷರ ಶ್ರೀ ಎಸ್. ಎನ್. ರಾಮಚಂದ್ರಾಚಾರ್ಯರ ದೌಹಿತ್ರ ಚಿ| ಅನಂತ ಮಾಧವ. 1999ರ ಕೊನೆಯಲ್ಲಿ ಎಳೆಯವಯಸ್ಸಿನ ಅನಂತ ಮಾಧವ ಅಪಘಾತಕ್ಕೀಡಾದ. ತಲೆಗೆ ಬಲವಾದ ಏಟು ತಾಗಿ ಬೆಂಗಳೂರಿನ ಮಣಿಪಾಲ್ ಆಸ್ಪತ್ರೆಯಲ್ಲಿ ಸೇರಿಸಿದರು. ಆ ಸಮಯದಲ್ಲೇ ಶ್ರೀವಿಶ್ವೇಶತೀರ್ಥರೂ ಅಪಘಾತಕ್ಕೀಡಾಗಿ ಶುಶ್ರೂಷೆಗಾಗಿ ಆ ಆಸ್ಪತ್ರೆಗೆ ಆಗಮಿಸಿದ್ದರು. ತಮ್ಮ ನೋವನ್ನು ಮರೆತು ಬಲು ಗಾಯಗೊಂಡಿದ್ದ ಚಿ| ಅನಂತಮಾಧವನಿಗೆ ಮಂತ್ರಾಕ್ಷತೆಯನ್ನಿತ್ತರು. ಶುಶ್ರೂಷೆ ಮುಂದುವರೆಯಿತು. ಆದರೆ ದೈಹಿಕವಾಗಿ ಗುಣಮುಖನಾದರೂ ಪ್ರಜ್ಞೆ ಮಾತ್ರ ಮರಳಲಿಲ್ಲ. ಹೀಗೆ 27 ದಿನಗಳು ಕಳೆದವು. ಕುಟುಂಬದ ಹಿರಿಯರಿಗೆ ಆಂತಂಕವು ಬಲವಾಗುತ್ತಿತ್ತು. ಕೊನೆಯಲ್ಲಿ 2000ದ ಫೆಬ್ರುವರಿ 14ರಂದು ಮಧ್ವನವಮೀಗಾಗಿ ಉಡುಪಿಗೆ ಆಗಮಿಸಿದ ಶ್ರೀರಾಮಚಂದ್ರಾಚಾರ್ಯರು ಶ್ರೀವಿದ್ಯಾಮಾನ್ಯತೀರ್ಥರ ಬಳಿಯಲ್ಲಿ ತಮ್ಮ ಮೊಮ್ಮಗನ ದುಗುಡವನ್ನು ಹೇಳಿದರು. ಪ್ರಾರ್ಥಿಸಿದರು. ಆಗ ಶ್ರೀಪಾದರು ಮಂತ್ರಾಕ್ಷತೆಯನ್ನು ತೆಗೆದುಕೊಂಡು ಜಪಿಸುತ್ತಾ ಶ್ರೀರಾಮಚಂದ್ರಚಾರ್ಯರಿಗೆ ನೀಡಿದರು. 'ಏನೂ ಯೋಚನೆ ಬೇಡ' ಎಂದರು. ಬೆಂಗಳೂರಿಗೆ ಬಂದ ಶ್ರೀರಾಮಚಂದ್ರಾಚಾರ್ಯರು ತಮ್ಮ ಮೊಮ್ಮಗನ ತಲೆಯಮೇಲೆ ಆ ಮಂತ್ರಾಕ್ಷತೆಯನ್ನು ಹಾಕಿದರು.

ಆಶ್ಚರ್ಯವೆಂದರೆ ಕೆಲವೇ ದಿನಗಳಲ್ಲಿ ಅನಂತಮಾಧವ ಪ್ರಜ್ಞಾವಂತನಾದ. ಇಂದು ಚೆನ್ನಾಗಿ ನೋಡ ಬಲ್ಲ, ಮಾತನಾಡಬಲ್ಲ. ಓದಬಲ್ಲ, ಆಡಬಲ್ಲ, ಸಮರ್ಥನಾದ ಹುಡುಗನಾಗಿದ್ದಾನೆ. ಶ್ರೀಪಾದರು ಆ ರೀತಿ ಅನುಗ್ರಹಿಸಿ ನೀಡಿದ ಮಂತ್ರಾಕ್ಷತೆಯಿಂದ ಸಮಸ್ಯೆ ಪರಿಹರಿಸಿಕೊಂಡವರಲ್ಲಿ ಪ್ರಾಯಃ ಆ ಅನಂತಮಾಧವನೇ ಅಂತಿಮ ಭಾಗ್ಯಶಾಲಿ. ಅವನು ಇರುವ ಊರು ತುಮಕೂರು ಜಿಲ್ಲೆಯ, ಶಿರಾ ತಾಲೂಕು ಅವನ ಮಾತಾ ಪಿತೃಗಳು ಶ್ರೀ ರಘುನಾಥಾಚಾರ್ಯ ಶ್ರೀಮತೀಸುಧಾ ★



# ಪಾಠಪ್ರಿಯ

ವಿದ್ವತ್ತು ದೊರೆತಾಗ ಜಗತ್ತು ತೋರದು. ಹೀಗಾಗಿ ಉದ್‌ಗ್ರಂಥಹಿಡಿದಾಗ ಚಿಕ್ಕ ಗ್ರಂಥವ ನೋಡರು. ಹೇಳರೂ ಕೂಡ ಆದರೆ ಇದಕ್ಕೆ ಅಪವಾದವಾಗಿ. ಏಕಕಾಲದಲ್ಲಿ ನ್ಯಾಯಸುಧಾದಿಂದ ರಾಮಶಬ್ದದವರೆಗೂ ಪಾಠಗಳನ್ನು ನಡೆಸಿ,

ಪಾಠ-ಪ್ರವಚನಾಚಾರ್ಯರಾಗಿ ಮೆರೆದ ಶ್ರೀವಿದ್ಯಾಮಾನ್ಯತೀರ್ಥರ ಬಳಿ ಅಧ್ಯಯನ ಮಾಡಿದ ಸುಜೀವಿಗಳು ನೂರಾರು. ಅವರಲ್ಲಿ ಎಲ್ಲ ತರಹದ ಜನರೂ ಇದ್ದರು. ಸಾಮಾನ್ಯರು ಮೊದಲ್ಗೊಂಡು ಅಸಾಮಾನ್ಯ ವಿದ್ವಾಂಸರವರೆಗೂ ಇದ್ದರು. ಅವರೆಲ್ಲರನ್ನು ಇಲ್ಲಿ ಸ್ಮರಿಸುವುದು, ಸೂಕ್ತ. ಆದರೆ ದೊರೆತ ಮಾಹಿತಿಯ ಪ್ರಕಾರ ಇಲ್ಲಿಯ ಬಿತ್ತರ.

ಶ್ರೀಕಾಣಿಯೂರು ಮಠದ ಶ್ರೀವಿದ್ಯಾವಾರಿಧಿತೀರ್ಥ ಶ್ರೀಪಾದರಿಗೆ ತತ್ವನಿರ್ಣಯಾದಿ ಪಾಠವನ್ನು ಮಾಡಿದವರು ಶ್ರೀಪಾದರು.

ಸಮಾಜದ ಪ್ರಸಿದ್ಧ ವಿದ್ವಾಂಸರಾದ ವಿದ್ಯಾರತ್ನಾಕರ ಬನ್ನಂಜೆ ಗೋವಿಂದಾಚಾರ್ಯರು ಶ್ರೀಪಾದರಲ್ಲಿ ಚಂದ್ರಿಕಾಗ್ರಂಥದ ಅಧ್ಯಯನವನ್ನು ನಡೆಸಿದ್ದರು. 15 ಬಾರಿ ಸುಧಾಪ್ರವಚನ ಮಾಡಿದ ಶ್ರೀಪಾದರಲ್ಲಿ ಮಧ್ಯ-ಮಧ್ಯದಲ್ಲಿ ಅನೇಕರು ವಿಧವಿಧಗ್ರಂಥಗಳನ್ನೂ ಅಭ್ಯಸಿಸಿದರು. ಶ್ರೀವಿದ್ಯಾಮಾನ್ಯತೀರ್ಥರು ಮುಂಬಯಿಯಲ್ಲಿ ಚಾತುರ್ಮಾಸ್ಯಕ್ಕಾಗಿ ಇದ್ದಾಗ. ಅವರಲ್ಲಿ ಶ್ರೀವಲ್ಲಭಾಚಾರ್ಯಪೀಠದ ಗೋಸ್ವಾಮಿದೀಕ್ಷಿತರ ಮಕ್ಕಳಾದ ಶ್ರೀಶ್ಯಾಮಮೋಹನ ದೀಕ್ಷಿತರು ತತ್ವಪ್ರಕಾಶಿಕಾ ಪಾಠವನ್ನು ಓದಿದರು.

ಅದೇ ಸಂದರ್ಭದಲ್ಲಿ ಶ್ರೀಪಾದರಲ್ಲಿ ವಿದ್ವಾನ್ ಶ್ರೀಕುಷ್ಟಗಿ ಪ್ರಹ್ಲಾದಾಚಾರ್ಯರು ನ್ಯಾಯಸುಧಾ ಗ್ರಂಥವನ್ನು ಅಭ್ಯಸಿಸುತ್ತದ್ದರು. ಅವರ ಉತ್ತಮ ಪ್ರತಿಭೆಯ ಫಲವಾಗಿ ಶ್ರೀಪಾದರು, ಪ್ರಹ್ಲಾದಾಚಾರ್ಯರು ಹೇಳಿದ '' ಕಿಮಪಿ ಚ ವದಂತೋ ಮಹತಾಂ'' ಎಂಬ ನ್ಯಾಯಸುಧಾಮಂಗಲಶ್ಲೋಕದ ವಿಶಿಷ್ಟವಾದ ಅರ್ಥವನ್ನು ತಮ್ಮ ಎಲ್ಲ ಪಾಠಗಳಲ್ಲೂ ಹೇಳುತ್ತದ್ದರು. ಕಾಲನಿಯಾಮಕನ ಸಂಕಲ್ಪಂತೆ ಶ್ರೀಪ್ರಹ್ಲಾದಾಚಾ

ರ್ಯರು ಅಕಾಲದಲ್ಲಿಯೇ ಇಹಲೋಕಯಾತ್ರೆಯನ್ನು ಪೂರೈಸಿದರು.

ಶ್ರೀಪಾದರಲ್ಲಿ ಪ್ರಾಯಃ ಪೂರ್ಣಪ್ರಜ್ಞವಿದ್ಯಾಪೀಠದ ಹೆಚ್ಚಿನ ವಿದ್ಯಾರ್ಥಿಗಳು ಚಂದ್ರಿಕಾದಿ ಗ್ರಂಥಗಳ ಅಧ್ಯಯನವನ್ನು ಮಾಡಿರುವರು. ಅಲ್ಲದೆ ಮಧುಸೂದನ ಭಟ್ ಹಾಗೂ ಮಾದನೂರು ಪವಮಾನಾಚಾರ್ಯ ಎಂಬ ಇಬ್ಬರು ವಿದ್ವಾಂಸರಿಗೆ ತಿಂಗಳಿಗೆ ಒಂದು ಸಾವಿರ ರೂಗಳ ಸಂಭಾವನೆಯನ್ನೂ ನೀಡಿ ಚಂದ್ರಿಕಾಪಾಠವನ್ನು ಹೇಳಿದ ಉದಾರಿಗಳು ಶ್ರೀವಿದ್ಯಾಮಾನ್ಯತೀರ್ಥರು. ಶ್ರೀಗುರು ರಾಜ ಮಠದ ಎಂಬ ವಿದ್ವಾಂಸರಿಗೆ ಚಂದ್ರಿಕಾ, ದ್ವೈತದ್ಯುಮಣಿ ಮೊದಲಾದ ಉದ್ಗ್ರಂಥಗಳನ್ನು ಪಾಠ ಮಾಡಿ ಅನುಗ್ರಹಿಸಿದರು.

ತಾತ್ಪರ್ಯಚಂದ್ರಿಕಾ, ತರ್ಕತಾಂಡವಗ್ರಂಥಗಳನ್ನು ಅಧ್ಯಯನ ಮಾಡಿದವರು.

1ಹಯವದನ ಪುರಾಣಿಕರು. 2 ಡಿ. ಪ್ರಹ್ಲಾದಾಚಾರ್ಯ3. ಪಿ ಎಸ್. ಶೇಷಗಿರಿ ಆಚಾರ್ಯ. ಪಿ. ಕೇಶವಬಾಯರಿ.

ಬೇದೋಜ್ಜೀವನಕಾಶಿಕಾ, ತತ್ತನಿರ್ಣಯ . ತಾತ್ಪರ್ಯಚಂದ್ರಿಕಾ ಅಧ್ಯಯನ ಮಾಡಿದವರು.

ಮಾಳಗಿ ರಾಮಾಚಾರ್ಯ. ಕುಂಟಾಡಿ ವೇಂಕಟೇಶ ಭಟ್ಟ ಮಾಧವ ಪುರಾಣಿಕ, ಎಸ್. ವಿಠಲದಾಸ ಭಟ್. ಡಿ. ರಾಮಾಚಾರ್ಯ. ಸೂರ್ಯನಾರಾಯಣ. ಎಸ್. ಮುರಳೀಧರಭಟ್. ಖೇಡ ವೇದವ್ಯಾಸಾಚಾರ್ಯ.

ಅಂತೆಯೇ ಶ್ರೀಪಾದರಲ್ಲಿ ಶ್ರೀ ಹೆಚ್. ಪಿ. ನಾಗರಾಜಾ ಚಾರ್ಯ ಎಂಬ ಪೂರ್ಣಪ್ರಜ್ಞವಿದ್ಯಾಪೀಠದ ವಿದ್ವಾಂಸರಿಗೆ ಹಾಗೂ ಪಲಿಮಾರಿನ ಯೋಗದೀಪಿಕಾ ಗುರುಕುಲದ ವಿದ್ವಾಂಸರಾದ ಶ್ರೀ ಕೆ.ರಾಜಗೋಪಾಲ ಉಪಾಧ್ಯಾಯರಿಗೂ ಚಂದ್ರಿಕೆಪಾಠವನ್ನು ಹೇಳಿ ಅನುಗ್ರಹಿಸಿದರು. ಶ್ರೀಪಾದರ ಬಳಿ ಅಂತಿಮವಾಗಿ ಚಂದ್ರಿಕೆಯನ್ನು ಅಭ್ಯಸಿಸುವ ಯೋಗ ನನ್ನ ಪಾಲಿಗಿತ್ತು. ಘಟಿಕಾಚಲ ಹಾಗೂ ಹರಿದ್ವಾರ ಚಾತುಮಾಥಸ್ಯಗಳಲ್ಲಿ ಚಂದ್ರಿಕೆಯನ್ನು ಪಾಠ ಮಾಡಿ ಅನುಗ್ರಹಿಸಿದರು ಶ್ರೀಪಾದರು.

ಚಂದ್ರಿಕಾ, ಸುಧಾದಿ ಉದ್ಗ್ರಂಥಗಳ ಜೊತೆಯಲ್ಲಿಯೇ ಪ್ರಾಥಮಿಕ ಪಾಠವನ್ನು ಮಾಡುವ ಕೌಶಲ ಶ್ರೀಪಾದರದ್ದು. ವಿಘ್ನೇಶ್ವರ ಭಟ್, ಕೊರ್ಲಹಳ್ಳಿ ಸಮೀರಣಾಚಾರ್ಯ ಮೊದಲಾದಶಿಷ್ಯರಿಗೆ ತೀರ್ಥ ಪ್ರಬಂಧ, ಪವಮಾನಸೂಕ್ತ, ತಾತ್ಪರ್ಯನಿರ್ಣಯ, ತರ್ಕಸಂಗ್ರಹ, ಲಘುಕೌಮುದಿ ಮೊದಲಾದವುಗಳನ್ನು ಪಾಠ ಮಾಡುತ್ತಿದ್ದರು.

ಶ್ರೀಪಾದರು ಚಾತುರ್ಮಾಸ್ಯಕ್ಕಾಗಿ ಪಲಿಮಾರಿನಲ್ಲಿದ್ದಾಗ ಅಲ್ಲಿಯ ಅಧ್ಯಾಪಕರಾಗಿದ್ದ ಶ್ರೀ ಪಿ.ಎಸ್. ಲಕ್ಷ್ಮೀಶಾಚಾರ್ಯರಿಗೆ ತತ್ವಪ್ರಕಾಶಿಕಾ ಹಾಗೂ ಜಿಜ್ಞಾಸಾಧಿಕರಣ ನ್ಯಾಯಸುಧೆಯನ್ನು ಪಾಠ ಮಾಡುತ್ತಿದ್ದರು. ಯೋಗದೀಪಿಕಾಗುರುಕುಲದ ದಿನೇಶ ಭಟ್. ಗುರುಪ್ರಸಾದ ಭಟ್ ಎಂಬ ವಿದ್ಯಾರ್ಥಿಗಳಿಗೆ ಭೇದೋಜ್ಜೀವನ ಪಾಠವನ್ನು ಮಾಡುತ್ತಿದ್ದರು.

ಗುರು ಶ್ರೀ ಸ್ವಧ್ಯಾನತೀರ್ಥರಚಿತವಾದ 'ಭೇದ ಪರಾಣ್ಯೇವ ಖಲು ಬ್ರಹ್ಮಸೂತ್ರಾಣಿ'' ಎಂಬ ಗ್ರಂಥದ ಪಾಠವನ್ನು ಕೊರ್ಲಹಳ್ಳಿ ಜಯತೀರ್ಥಾ ಚಾರ್ಯ, ಕಡ್ಡೀ ಬದರೀ ನಾರಾಯಣಾಚಾರ್ಯ, ಜಿ.ಪಿ ನಾಗರಾಜಾ

ಚಾರ್ಯ, ಪಿ. ವೆಂಕಟರವಣ ಉಪಾಧ್ಯಾಯ ಇವರುಗಳಿಗೆ ಪಾಠ ಮಾಡಿದ್ದಾರೆ.

ಬೆಂಗಳೂರಿನ ಕೆ. ಎಸ್. ವೇಂಕಟೇಶ್ ಎಂಬ ಜಿಜ್ಞಾಸು ಯುವಕ ಶ್ರೀಪಾದರ ಸನ್ನಿಧಿಯಲ್ಲಿ ನ್ಯಾಯಸುಧಾ ಗ್ರಂಥದ ಅನುವಾದ ಮಾಡಿ ಮಂಗಲವನ್ನು ಮಾಡಿದರು. ಶ್ರೀಪಾದರಿಂದ ಬದರಿಯಲ್ಲಿ ಶಾಂತಿಪಾಠವನ್ನು ಮಾಡಿಸಿದರು.

ಶ್ರೀಪಾದರ ಬಳಿ ಅಧ್ಯಯನ ಮಾಡುವ ಯೋಗವನ್ನು ಪಡೆದ ಅಂತಿಮ ಭಾಗ್ಯಶಾಲಿಗಳು ಶ್ರೀನಂದಿಕೂರು ಗಿರೀಶಭಟ್ ಹಾಗೂ ಶ್ರೀಸುಬ್ರಹ್ಮಣ್ಯ ಸರಳಾಯ. ಶ್ರೀಗಿರೀಶಭಟ್ ಅವರು ಶ್ರೀಪಾದರ ಸೇವೆಯೊಂದಿಗೆ ಶ್ರೀಮಧ್ವವಿಜಯವನ್ನು ಶ್ಲೋಕ, ಪದಚ್ಛೇದ, ಅರ್ಥ, ವಿಗ್ರಹವಾಕ್ಯ ಮೊದಲಾಗಿ ಎಲ್ಲ ಕ್ರಮದಿಂದಲೂ ಅಭ್ಯಸಿಸಿದ ಸಾಧಕರು. ಗುರುಗಳ ಅಂತ್ಯದವರೆಗೂ ಸೇವೆ ನಲ್ಲಿಸಿದ ಭಾಗ್ಯಶಾಲಿಗಳು. ಯೋಗದೀಪಿಕಾ ಗುರುಕುಲದ ವಿದ್ಯಾರ್ಥಿಯಾಗಿದ್ದ ಶ್ರೀಸುಬ್ರಹ್ಮಣ್ಯ ಸರಳಾಯರು ತರ್ಕಸಂಗ್ರಹ ಭೇದೋಜ್ಜೀವನಗ್ರಂಥಗಳ ಅಧ್ಯಯನವನ್ನು ಮಾಡಿ ಶ್ರೀಪಾದರ ಅಂತಿಮ ಸೇವೆಯನ್ನು ಮಾಡಿದ ಭಾಗ್ಯಶಾಲಿಗಳು.

ಹೀಗೆ ವಿಧವಿಧವಾಗಿ ಗ್ರಂಥಾವಲೋಕನ ಮಾಡಲಿಚ್ಛಿಸಿದ ಯಾವುದೇ ಜಿಜ್ಞಾಸುವನ್ನು ನಿರಾಶೆಗೊಳಿಸದೆ ಗ್ರಂಥಶ್ರವಣವನ್ನು ಮಾಡಿಸಿ ಬೋಧಿಸಿದ ಗುರುವರ್ಯರು ಶ್ರೀಶ್ರೀವಿದ್ಯಾಮಾನ್ಯ ತೀರ್ಥಶ್ರೀಪಾದರು.



# ಅನುವ್ಯಾಖ್ಯಾನನ್ಯಾಯಸುಧಾ ಮಂಗಲ

ಆರುದಶಕಗಳಿಂದ ಅವಿಚ್ಛಿನ್ನವಾಗಿ ಪಾಠ-ಪ್ರವಚನಗಳನ್ನು ನಡೆಸಿದವರುಶ್ರೀಶ್ರೀ ವಿದ್ಯಾಮಾನ್ಯ ತೀರ್ಥರು. ದಶಪ್ರಕರಣ, ವ್ಯಾಸತ್ರಯ ಗಳೊಂದಿಗೆ ನ್ಯಾಯಸುಧಾ ಪ್ರವಚನಗಳನ್ನು ಒಟ್ಟು ಹದಿನೈದು ಬಾರಿ ನೆರವೇರಿಸಿ ಮಂಗಲವನ್ನು ಮಾಡಿದ ಕೀರ್ತಿ ಶ್ರೀಪಾದ ರದ್ದು. ಮೊದಲ ಪಾಠದ ಉತ್ಸಾಹ, ಶ್ರದ್ಧೆ ಪಾಠಕ್ರಮ ಗಳೆಲ್ಲವೂ ಕೊನೆಯ ಪಾಠದವರೆಗೂ ಸ್ಥಿರವಾಗಿತ್ತು. ಅವರ ಸನ್ನಿಧಿಯಲ್ಲಿ ಸುಧಾಂತ ಅಧ್ಯಯನವನ್ನು ಮಾಡಿದ ಭಾಗ್ಯಶಾಲಿಗಳ ಮಂಗಲಗಳ ವಿವರ ಇಂತಿದೆ.

ಶ್ರೀಅನುವ್ಯಾಖ್ಯಾನನ್ಯಾಯಸುಧಾಪ್ರವಚನ ಮಂಗಲದ ಸಂಖ್ಯೆ ನ್ಯಾಯಸುಧಾವಿದ್ಯಾರ್ಥಿಗಳು ಮಂಗಲಸ್ಥಳ

1. ಕೊಯಮತ್ತೂರು ಬಿ. ವಾದಿರಾಜಾಚಾರ್ಯರು
   ಪಿ.ಕೆ. ಹರಿದಾಸಾಚಾರ್ಯರು.
   ಕೊರ್ಲಹಳ್ಳಿ ರಾಘವೇದ್ರಾಚಾರ್ಯರು.
   ಜಕ್ಕಲ ಬೋಧರಾಯಾಚಾರ್ಯರು.
   ಕೊಡಂಚ ಲಕ್ಷ್ಮೀನಾರಾಯ ಣಾಚಾರ್ಯರು
   ಸ್ಥಳ: ತಿರುಪತಿ
2. ಕಲಕೇರಿ ರಾಮಾಚಾರ್ಯರು ಶ್ರೀರಂಗಂ
   ಸ್ಥಳ : ಶ್ರೀರಂಗನ ಸನ್ನಿಧಾನ
3. ಬಿದರಹಳ್ಳಿ ಶ್ರೀನಿವಾಸಾಚಾರ್ಯರು.
   ಯಲಬುರ್ಗಿ ಶ್ರೀನಿವಾಸಾಚಾರ್ಯರು.
   ಸ್ಥಳ : ಭಂಡಾರಕೇರಿ ಮಠ ಭಂಡಾರಕೇರಿ
4. ಕಾಶಿ ಹರಿದಾಸಾಚಾರ್ಯ
   ಸ್ಥಳ : ಭಂಡಾರಕೇರಿ ಮಠ ಭಂಡಾರಕೇರಿ
5. ಬಿ.ಡಿ. ಭೀಮಸೇನಾಚಾರ್ಯರು
   ಸ್ಥಳ : ಭಂಡಾರಕೇರಿ ಮಠ ಭಂಡಾರಕೇರಿ
6. ಪೇಜಾವರಮಠದ ಶ್ರೀವಿಶ್ವೇಶತೀರ್ಥರು.
   ಕಾಪು ಹಯಗ್ರೀವಾಚಾರ್ಯರು.

ಗುರುರಾಜ ಬಲ್ಲಾಳರು.

ವೆಂಕಟರಮಣ ಐತಾಳರು

ಜಾಲಿಹಾಳ ರಾಘವೇಂದ್ರಾಚಾರ್ಯರು

ಸ್ಥಳ : ಪೇಜಾವರ ಮಠ ಉಡುಪಿ

7. ಕಾರ್ಕಳ ವಾಸುದೇವ ಭಟ್ಟರು.

ಮಹಿಷಿ ವೆಂಕಣ್ಣಾಚಾರ್ಯರು

ಸ್ಥಳ : ಭಂಡಾರಕೇರಿ ಮಠ ಭಂಡಾರಕೇರಿ

8. ತೆರಗುಂಡಿ ಗೋಪಾಲಕೃಷ್ಣಾಚಾರ್ಯರು.

ಸ್ಥಳ : ಭಂಡಾರಕೇರಿ ಮಠ ಭಂಡಾರಕೇರಿ

9. ಗಡಚಿಂತಿರಾಮಾಚಾರ್ಯರು

ಮೂಗೂರು ಮಧ್ವಾಚಾರ್ಯರು

ಹಾಗೂ ಅನೇಕಜಿಜ್ಞಾಸುಗಳು

ಸ್ಥಳ : ಉಡುಪಿ ಶ್ರೀಕೃಷ್ಣಮಠ

ಪರ್ಯಾಯಶ್ರೀಪಲಿಮಾರುಮಠ

10. ಕೊರ್ಲಹಳ್ಳಿ ನರಸಿಂಹಾಚಾರ್ಯರು

ವೇದವ್ಯಾಸ ತಂತ್ರಿಗಳು

ಬಲರಾಮ ಭಟ್

ಗುರುರಾಜಾಚಾರ್ಯ ಜೋಷಿ

ಕೊಡಂಗಳ ಕೃಷ್ಣಮೂರ್ತಿ ಭಟ್

ಸ್ಥಳ : ಶ್ರೀಕೃಷ್ಣಮಠ

ಪರ್ಯಾಯಶ್ರೀಪುತ್ತಿಗೆ ಮಠ

11. ಕೊರ್ಲಹಳ್ಳಿ ಜಯತೀರ್ಥಾಚಾರ್ಯರು

ಸ್ಥಳ : ಬಾಣತೀರ್ಥ ಅದಮಾರು ಮಠ

12. ಶ್ರೀಅದಮಾರು ಮಠ ಶ್ರೀವಿಶ್ವಪ್ರಿಯತೀರ್ಥರು.

ಶ್ರೀಸುಗುಣೇದ್ರತೀರ್ಥರು. ಪುತ್ತಿಗೆ ಮಠ.

ಶ್ರೀವಿದ್ಯಾಧೀಶರು ಶ್ರೀಪಲಿಮಾರುಮಠ.

ಶ್ರೀವಿದ್ಯೇಶತೀರ್ಥರು ಶ್ರೀ ಭಂಡಾರಕೇರಿ ಮಠ

ಸ್ಥಳ : ಶ್ರೀ ಅದಮಾರು ಮಠ ಅದಮಾರು.

13. 40ಕ್ಕೂ ಹೆಚ್ಚು ಶಾಸ್ತ್ರಾಭ್ಯಾಸರತ ಜಿಜ್ಞಾಸುಗಳು

ಸ್ಥಳ : ಉಡುಪಿ ಶ್ರೀಕೃಷ್ಣಮಠ

ಎರಡನೆ ಪರ್ಯಾಯ

14. ಶ್ರೀಲಕ್ಷ್ಮೀಂದ್ರತೀರ್ಥಶ್ರೀಪಾದರು
ಶ್ರೀಕುಂದಾಪುರ ವ್ಯಾಸರಾಜಮಠ.

ಸ್ಥಳ : ಅಬ್ಬೂರು. ಬ್ರಹ್ಮಣ್ಯತೀರ್ಥರ ಸನ್ನಿಧಿಯಲ್ಲಿ

15. ಕೊರ್ಲಹಳ್ಳಿ ವೇಂಕಟೇಶಾಚಾರ್ಯ

ಸ್ಥಳ : ಪಲಿಮಾರು ಮಠ ಪಲಿಮಾರು.



# ಚಾತುರ್ಮಾಸ್ಯ

75 ಚಾತುರ್ಮಾಸ್ಯಗಳನ್ನು ನಿಷ್ಠೆಯಿಂದ ಯಶಸ್ವಿಯಾಗಿ ಪೂರ್ಣಮಾಡಿದ ಪರಮಹಂಸ ಚಕ್ರವರ್ತಿಗಳಾದ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರ 75 ಚಾತುರ್ಮಾಸ್ಯದ ಸಂಕ್ಷಿಪ್ತ ಮಾಹಿತಿ.

ವರ್ಷ ಸ್ಥಳ

1926 ಮಣಿಪುರ
1927 ಘಟಿಕಾಚಲ
1928 ಘಟಿಕಾಚಲ
1929 ಘಟಿಕಾಚಲ
1930 ಮಣಿಪುರ
1931 ಅದಮಾರು
1932 ಅದಮಾರು
1933 ಭಂಡಾರಕೇರಿ
1934 ಭಂಡಾರಕೇರಿ
1935 ಭಂಡಾರಕೇರಿ
1936 ಭಂಡಾರಕೇರಿ
1937 ತಿರುಪತಿ
1938 ಬಿಜಾಪುರ
1939 ಮುಂಬೈ
1940 ಕಿನ್ನಾಳ
1941 ಶ್ರೀರಂಗ
1942 ಗಯಾ
1943 ಭಂಡಾರಕೇರಿ
1944 ಭಂಡಾರಕೇರಿ
1945 ಭಂಡಾರಕೇರಿ
1946 ಭಂಡಾರಕೇರಿ
1947 ಭಂಡಾರಕೇರಿ
1948 ಭಂಡಾರಕೇರಿ
1949 ಭಂಡಾರಕೇರಿ
1950 ಭಂಡಾರಕೇರಿ
1951 ಉಡುಪಿ
1952 ಉಡುಪಿ
1953 ಧಾರವಾಡ
1954 ಉಡುಪಿ
1955 ಉಡುಪಿ
1956 ರಾಯಚೂರು
1957 ಹೈದರಾಬಾದ್
1958 ಮದ್ರಾಸ್
1959 ಮಾನವಿ
1960 ಕಲ್ಕತ್ತಾ
1961 ಬೆಂಗಳೂರು
1962 ಮುಂಬೈ
1963 ಭಂಡಾರಕೇರಿ
1964 ಮಾನವಿ
1965 ಮೊದಲ್‌ಕಲ್
1966 ಜಯಪುರ್
1967 ಜಯಪುರ್
1968 ಉಡುಪಿ
1969 ಬೆಂಗಳೂರು
1970 ಉಡುಪಿಪರ್ಯಾಯ
1971 ಉಡುಪಿ
1972 ಬೆಂಗಳೂರು
1973 ಉಡುಪಿ
1974 ಅದಮಾರು

| | | |
|---|---|---|
| 1975 ಅದಮಾರು | 1984 ಉಡುಪಿ | 1993 ಉಡುಪಿ ಪುತ್ತಿಗೆ ಪರ್ಯಾಯ |
| 1976 ಉಡುಪಿ | 1985 ಬೆಂಗಳೂರು | 1994 ಬೆಂಗಳೂರು ವಿದ್ಯಾಮಾನ್ಯನಗರ |
| 1977 ಉಡುಪಿ | 1986 ಉಡುಪಿ | 1995 ಬೆಂಗಳೂರು ರಾಮಧಾಮ |
| 1978 ಅದಮಾರು | 1987 ಉಡುಪಿ | 1996 ಮುದಗಲ್ |
| 1979 ಅದಮಾರು | 1988 ಹೈದ್ರಾಬಾದ್ | 1997 ಪಲಿಮಾರು |
| 1980 ಅದಮಾರು | 1989 ಮುಂಬೈ | 1998 ಘಟಿಕಾಚಲ |
| 1981 ಅದಮಾರು | 1990 ಹುಬ್ಬಳ್ಳಿ | 1999 ಹರಿದ್ವಾರ |
| 1982 ಅದಮಾರು | 1991 ಮಾನವಿ | 2000 ಹರಿಯಪದ? |
| 1983 ಅದಮಾರು | 1992ಬೆಂಗಳೂರು ವಿದ್ಯಾಪೀಠ | |

★★★

# ವೇದಾಂತಸಾಮ್ರಾಜ್ಯಾಧೀಶರ ಅಂತಿಮದಿನಗಳು

ಶಕಪುರುಷರಾಗಿ ಮೆರೆದ ಶ್ರೀವಿದ್ಯಾಮಾನ್ಯತೀರ್ಥರು ತಮ್ಮ ಶಿಷ್ಯನ ಪರ್ಯಾಯೋತ್ಸವದಲ್ಲಿ ಪಾಲ್ಗೊಳ್ಳಲು ಬೆಂಗಳೂರಿನಿಂದ ಪಲಿಮಾರಿಗೆ ಬಂದು ನೆಲೆಸಿದರು. ಪರ್ಯಾಯೋತ್ಸವವು ದ್ವಾದಶೀ ದಿನವೇ ಬಂದಿದ್ದರಿಂದ ಆ ಮೆರವಣಿಗೆಯಲ್ಲಿ ಭಾಗವಹಿಸಲಿಲ್ಲ. ಆ ಉತ್ಸವವು ನಾಲ್ಕು ದಿನಗಳ ಕಾಲ ನಡೆದುದರಿಂದ ಒಂದು ದಿನ ಸಾಯಂಕಾಲದ ಸಭೆಯಲ್ಲಿ ಮಾತ್ರ ಉಪಸ್ಥಿತರಾಗಿದ್ದರು. ಪುನಃ ಪಲಿಮಾರಿಗೆ ತೆರಳಿದರು. ಅನಂತರ ಅವರು ಉಡುಪಿಯಲ್ಲೇ ಉಳಿಯುಲು ಮರಳಿ ಬಂದದ್ದು ಜನವರಿ ಇಪ್ಪತ್ತೆಂಟರಂದು.

ಅನೇಕ ವರ್ಷಗಳ ಬಳಿಕ ಮತ್ತೆ ಶ್ರೀಕೃಷ್ಣನನ್ನು ಮುಟ್ಟಿ ಪೂಜಿಸುವುದಕ್ಕಾಗಿ ಉತ್ಸಾಹದಿಂದ ಉಡುಪಿಗೆ ಆಗಮಿಸಿದರು. ಅವರ ವಾಸಸ್ಥಾನ, ವಸಂತಮಹಲ್, ಬಡಗುಮಾಳಿಗೆಗಳ ಹಿಂಬದಿಯ 'ವಾದಿರಾಜಮಂದಿರ' ಅವರ ಶರೀರ ಬಲು ಕೃಶವಾಗಿ ಬಗ್ಗಿದ್ದರೂ, ಅವರ ಅನುಷ್ಠಾನ ಅಧ್ಯಯನ ಅಧ್ಯಾಪನಗಳು ಮಾತ್ರ ತಗ್ಗಿರಲಿಲ್ಲ. ಉತ್ಸಾಹದ ಬುಗ್ಗೆಯಾಗಿ ಪ್ರತಿದಿನ ಬೆಳಿಗ್ಗೆ ಮಧ್ವಸರೋವರಕ್ಕೆ ಆಗಮಿಸುತ್ತಿದ್ದರು. ಅನೇಕ ಮೆಟ್ಟಲನ್ನಿಳಿದು, ತೀರ್ಥಪ್ರೋಕ್ಷಣೆಯನ್ನು ಮಾಡಿಕೊಂಡು ತುಳಸೀಸ್ಪರ್ಶ ಹಾಗೂ ಮೃತ್ತಿಕಾ ಧಾರಣವನ್ನು ಮಾಡಿ ಭಾಗೀರಥದೇವಿಯರನ್ನು ಸಂದರ್ಶಿಸುತ್ತಿದ್ದರು. ಒದ್ದೆ ಕೌಪೀನವನ್ನು ಧರಿಸುತ್ತಿದ್ದರು. ತಮ್ಮ ಕಾವೀವಸ್ತ್ರವನ್ನು ತಾವೇ ಮೊದಲು ನೀರಿನಲ್ಲಿ ತೋಯಿಸಿ, ಎರಡು ಬಾರಿ ಕುಕ್ಕುತ್ತಿದ್ದರು. ಅನಂತರ ಆಚಮನ ಹಾಗೂ ಸ್ನಾನಸಂಕಲ್ಪಗಳನ್ನು ಮಾಡಿ ಅವಗಾಹನಸ್ನಾನವನ್ನು ಮಾಡುತ್ತಿದ್ದರು. ದಂಡಸ್ನಾನವೂ ಆಗುತ್ತಿತ್ತು. ಬಳಿಕ ಅವರ ಶಿಷ್ಯರು ನಿಧಾನವಾಗಿ ಅವರ ಕೈ ಪಿಡಿದು ಗರ್ಭಗುಡಿಯ ಒಳಗೆ ಕರೆದೊಯ್ಯುತ್ತಿದ್ದರು. ಗರ್ಭಗುಡಿಯ ಆಹ್ನೀಕಮಂಟಪದಲ್ಲಿ ಶ್ರೀಪಾದರ ವಿಸ್ತಾರವಾದ ಮಂತ್ರ ಜಪಾನುಷ್ಠಾನ ನಡೆಯುತ್ತಿತ್ತು. ಅಲಂಕಾರಪೂಜೆಯ ಬಳಿಕ ಶ್ರೀಪಾದರು ಶ್ರೀಕೃಷ್ಣನನ್ನು ಸ್ಪರ್ಶಿಸಿ, ಅರ್ಚಿಸಿ, ಆರತಿ ಬೆಳಗುತ್ತಿದ್ದರು. ಅನಂತರ ಮುಖ್ಯಪ್ರಾಣದೇವರ ಪೂಜೆ, ಮಧ್ವಾಚಾರ್ಯರ ಪೂಜೆ. ಇಷ್ಟಾಗುವಾಗಲೇ ಅವರಿಗೆ ಬಹಳ ಆಯಾಸವಾಗುತ್ತಿತ್ತು. ಆದರೂ ಸಂಪ್ರದಾಯದಂತೆ ತಾವು ಮೆಲ್ಲಮೆಲ್ಲನೆ

ಹೆಜ್ಜೆಗಳನ್ನಿಡುತ್ತಾ ಭಕ್ತಿಪುರಸ್ಸರವಾಗಿ ಒಂದು ಪ್ರದಕ್ಷಿಣೆ ಬಂದು ನಮಸ್ಕಾರವನ್ನು ಮಾಡುತ್ತಿದ್ದರು. ಇಂತಹ ಒಂದು ನಮಸ್ಕಾರವೇ ಶ್ರೀಕೃಷ್ಣನಿಗೆ ಬಲು ಇಷ್ಟ. ಅನಂತರ ಸಿಂಹಾಸನದ ಕೋಣೆಯಲ್ಲಿ ಕುಳಿತು ದಂಡೋದಕದ ಬಳಿಕ. ವೃಂದಾವನಗಳಿಗೆ ಪೂಜೆ, ಹಸ್ತೋದಕಗಳನ್ನು ಮಾಡುತ್ತಿದ್ದರು. ಹಾಗೆಯೇ ತಾವೂ ತೀರ್ಥವನ್ನು ಸ್ವೀಕರಿಸುತ್ತಿದ್ದರು. ತಮ್ಮ ಕೋಣೆಗೆ ಮರಳುತ್ತಿದ್ದರು.

ಮಧ್ಯಾಹ್ನ ಮಹಾಪೂಜಾದಿಗಳ ಬಳಿಕ ವೃಂದಾವನಗಳಿಗೆ ಹಸ್ತೋದಕವನ್ನಿತ್ತು ಶ್ರೀವಿಶ್ವೇಶತೀರ್ಥರು ತಮ್ಮ ಗುರುಗಳಿರುವಲ್ಲಿಗೇ ಬರುತ್ತಿದ್ದರು. ಅವರಿಗೆ ಮೊದಲು ತೀರ್ಥವನ್ನು ನೀಡುತ್ತಿದ್ದರು. ನಂತರ ಅವರಿಂದ ತಾವೂ ತೀರ್ಥವನ್ನು ತೆಗೆದುಕೊಳ್ಳುತ್ತಿದ್ದರು. ಅವರಿಂದ ಮಂತ್ರಾಕ್ಷತೆಯನ್ನು ಪಡೆಯುತ್ತಿದ್ದರು. ಗುರುಗಳಿಗೆ ಗಂಧ ಅಂಗಾರಾಕ್ಷತೆಗಳನ್ನು ನೀಡುತ್ತಿದ್ದರು. ಅವರಿಗೆ ಅಲ್ಲಿಯೇ ಭಿಕ್ಷೆಯವ್ಯವಸ್ಥೆಯನ್ನುಮಾಡಿದ್ದರು. 'ಆ ವ್ಯವಸ್ಥೆ ಗುರುಗಳಿಗೆ ಆಯಾಸವಾಗದಿರಲಿ' ಎಂದು. ಆದರೆ ಅದರಿಂದ 'ಅಯೋಗ್ಯರ ಪಂಕ್ತಿಯಲ್ಲಿ ಭೋಜನ ನಿಷಿದ್ಧ' ಎಂಬ ಶಾಸ್ತ್ರೀಯ ನಿಯಮವನ್ನು ಪಾಲಿಸುತ್ತಿದ್ದ ಶ್ರೀಪಾದರಿಗೆ ಅದು ಬಹಳ ಅನುಕೂಲವಾಯಿತು. ಮಧ್ಯಾಹ್ನದ ಭಿಕ್ಷೆಯ ಬಳಿಕ ಕೆಲವು ವಿದ್ಯಾರ್ಥಿಗಳಿಗೆ ಶಾಸ್ತ್ರಾಭ್ಯಾಸದ ಕ್ರಮವನ್ನು ಬೋಧಿಸುವುದು. ವಿಶೇಷವಾಗಿ ತಾವೇ ಪರಭಾಷ್ಯಖಂಡನಗಳ ಕುರಿತು, ಏಕಾದಶೀನಿರ್ಣಯಗಳ ಕುರಿತು. ಆಲೋಚಿಸುವುದು, ಬರೆಯುವುದು, ಬರೆಯಿವುದು ಅವರ ತಪ್ಪದ ಚಟುವಟಿಕೆಯಾಗಿತ್ತು. ರಾತ್ರಿ ಮತ್ತೆಸ್ನಾನ, ಆಹ್ನೀಕ, ಅಲ್ಪೋಪಹಾರ, ಹಾಗೂ ವಿಶ್ರಾಂತಿ, ಹೀಗೆ ಅನೇಕ ದಿನಗಳವರೆಗೆ ತಮ್ಮ ಚಟುವಟಿಕೆಗಳನ್ನು ಲವಲವಿಗೆಯಿಂದ ನಡೆಸಿದರು.

ಶ್ರೀಪಾದರ ಶಾರೀರಿಕಶಕ್ತಿ ಕ್ರಮೇಣ ಕುಂಠಿತವಾದಂತೆ ಭಾಸವಾಯಿತು. ಅವರು ಮಧ್ವಸರೋವರದಲ್ಲಿ ಮಿಂದು ಪೀಠಿಕೆಮಡಿಯಲ್ಲಿ ಬಂದರೂ ಶ್ರೀಕೃಷ್ಣನ್ನು ಮುಟ್ಟುವಷ್ಟು ಬಲವಿಲ್ಲದಂತಾಗಿತ್ತು. ಆಗ ಅವರಿಗೆ ಸಹಾಯ ಮಾಡಿ ಜಗದೊಡೆಯನ ವಿಗ್ರಹವನ್ನು ಸ್ಪರ್ಶಿಸುವಂತೆ, ಅರ್ಚಿಸುವಂತೆ ಮಾಡಿದ ಭಾಗ್ಯಶಾಲಿಗಳು ಶ್ರೀಪೇಜಾವರ ಮಠದ ಕಿರಿಯಶ್ರೀಪಾದರಾದ ಶ್ರೀಶ್ರೀವಿಶ್ವಪ್ರಸನ್ನತೀರ್ಥ ಶ್ರೀಪಾದರು. ಅವರು ಬಾಲ್ಯದಿಂದಲೂ ಆ ಮಹಾಗುರುಗಳ ಸನ್ನಿಧಿಯಲ್ಲೇ ತರಬೇತಿ ಪಡೆದವರು. ಅವರಲ್ಲಿ ನಿಸ್ಸೀಮಭಕ್ತಿಯುಳ್ಳವರು. ಅವರ ಕೃಪೆ, ವಾತ್ಸಲ್ಯಪಾತ್ರರು. ಹೀಗೆ ಶಿಷ್ಯರಶಿಷ್ಯರ(ಪ್ರಶಿಷ್ಯರ) ಸೇವೆಯೊಡನೆ ಶ್ರೀವಿದ್ಯಾಮಾನ್ಯತೀರ್ಥರ ಶ್ರೀಕೃಷ್ಣಪೂಜೆ ಸಾಂಗವಾಗಿ ನೆರವೇರುತ್ತಿತ್ತು.

ಫೆ. 14ರ ನಂತರ ಕೆಲವು ದಿನ ಶ್ರೀಕೃಷ್ಣನನ್ನು ಮುಟ್ಟಿಪೂಜಿಸಲೂ ಅಸಾಧ್ಯವಾಯಿತು. ಆದರೂ ಬಹಳ ಶ್ರಮವಹಿಸಿ ಪೂಜಿಸದರು. ಕೆಲ ದಿನಗಳ ಬಳಿಕ ಅದೂ ಅಸಾಧ್ಯವಾಯಿತು. ಆಗ ಶ್ರೀಪಾದರ ಹಿತದೃಷ್ಟಿಯಿಂದ 'ವಾದಿರಾಜಮಂದಿರ'ದಲ್ಲೇ ಆಹ್ನೀಕ, ಪೂಜೆಗಳನ್ನು ಮಾಡಲು ಒತ್ತಾಯದಿಂದ ಅವರನ್ನು ಪ್ರಾರ್ಥಿಸಲಾಯಿತು. ಒಮ್ಮೆಲೆ ಒಂದು ದಿನ ಶ್ರೀಪಾದರಿಗೆ ವಾಂತಿಯು ಆರಂಭವಾಯಿತು. ಅದು ಮೇಲಿಂದ ಮೇಲಾಯಿತು. ಶ್ರೀಪಾದರು ಬಹಳ ನಿತ್ರಾಣರಾದರು. ಪೇಜಾವರ ಶ್ರೀಪಾದರು ಮೊದಲ್ಗೊಂಡು ಎಲ್ಲ ಶಿಷ್ಯರೂ ಭಯಗ್ರಸ್ತರಾದರು. ಚಿಂತಾಕ್ರಾಂತರಾದರು. ವೈದ್ಯಕೀಯ ಪರೀಕ್ಷೆನಡೆಯಿತು. ವೈದ್ಯರ ದೃಷ್ಟಿಯಲ್ಲಿ ಶ್ರೀಪಾದರ ಉದರದಲ್ಲಿ ಕ್ಯಾನ್ಸರ್ ಭಾಸವಾಗುತ್ತಿತ್ತು.

ಆದರೆ ಕ್ಯಾನ್ಸರ್ ರೋಗಪೀಡಿತರೋಗಿಗಳ ಕುರುಹು, ವೇದನೆ ಶ್ರೀಪಾದರ ಮುಖದಲ್ಲಿರಲಿಲ್ಲ. ಊಟದ ರುಚಿಮಾತ್ರ ಇರಲಿಲ್ಲ. ಅಂತೂ ಏನನ್ನೋ ಊಹಿಸಿ ವೈದ್ಯರು ಔಷಧಗಳನ್ನು ನೀಡಿದರು. ನಿಪುಣವೈದ್ಯರೆಲ್ಲ ಬಂದು ಶ್ರೀಪಾದರನ್ನು ಪರೀಕ್ಷಿಸಿದರು. ಕೆಲವರಿಗೆ ಅರ್ಥವಾಗಲಿಲ್ಲ. ಕೆಲವರಿಗೆ ಅರ್ಥವಾದಂತಾಯಿತು. ಆದರೆ ಆ ಎಲ್ಲ ವೈದ್ಯರೂ ಸೇರಿ ನಿರ್ಣಯ ತೆಗೆದುಕೊಂಡು ಒಂದು ಉತ್ತಮ ಪರಿಹಾರವನ್ನು ಚಿಕಿತ್ಸೆಯನ್ನು ನೀಡಬಹುದಾಗಿತ್ತು. ಸಮಾಜದ ಅನರ್ಘ್ಯಸಂಪತ್ತಾದ ಶ್ರೀಪಾದರನ್ನು ಉಳಿಸಿಕೊಳ್ಳ ಬಹುದಿತ್ತು. ಆದರೆ ಆ ಯೋಗ ಸಮಾಜಕ್ಕೆ, ಶಿಷ್ಯರಿಗೆ ಇರಬೇಕಲ್ಲ. ಓರ್ವ ವೈದ್ಯರು ಸಿದ್ಧೌಷಧದ ಮೂಲಕ ಪರಿಹಾರವನ್ನಿತ್ತು ಶ್ರೀಪಾದರನ್ನು ಗುಣಮುಖವನ್ನಾಗಿಸುವ ಭರವಸೆಯಿತ್ತರು. ಆದರೆ ಅದಕ್ಕೂ ಅನೇಕ ತೊಂದರೆಗಳು ಬಂದವು. ಅದು ಬರೀ ಮಾತಾಗಿಯೇ ಉಳಿಯಿತು.

ಮಾರ್ಚ್ 6ರಂದು ಶ್ರೀಪಾದರ ದೇಹಸ್ಥಿತಿ ಬಹಳ ಕ್ಷೀಣ ವಾಗುತ್ತಾ ಬಂದಿತ್ತು. ಆದರೂ ಅವರ ಮಾನಸಿಕಸ್ಥೈರ್ಯ, ಮುಖದ ವರ್ಚಸ್ಸು, ಏಕಾದಶ್ಯಾದಿ ವಿಚಾರ, ಮಂಥನಗಳು ಮಾತ್ರ ಕ್ಷೀಣಿಸಿರಲಿಲ್ಲ. ಅವರ ಧ್ವನಿ, ದೇಹಗಳು ಕುಗ್ಗಿದ್ದರೂ ಅವರ ಕಂಗಳ ತೇಜಸ್ಸು ಮಾತ್ರ ಕುಗ್ಗದೆ ಹೊಳೆಯುತ್ತಿತ್ತು. ಶ್ರೀಪಾದರಶಕ್ತಿ ದಿನದಿಂದ ದಿನಕ್ಕೆ ಕುಂಠಿತವಾದಂತೆ ಶಿಷ್ಯರ ಭಯ ವೃದ್ಧಿಯಾಗುತ್ತಿತ್ತು. ಪತ್ರಿಕೆಗಳು ಶ್ರೀಪಾದರ ಅಸ್ವಾಸ್ಥ್ಯವನ್ನು ಪ್ರಕಟ ಪಡಿಸಿದವು. ಅದನ್ನು ತಿಳಿದ ದೂರದ ಭಕ್ತರೆಲ್ಲ ಭಯಪಟ್ಟು ಶ್ರೀಪಾದರನ್ನು ನೋಡಲು ಉಡುಪಿಗೆ ಧಾವಿಸಿದರು. ನೋಡಿದರು. ಕೆಲವು ಭಾವುಕರಿಗಂತೂ ದುಃಖ ಉಮ್ಮಳಿಸುತ್ತಿತ್ತು. ಅತ್ತು ಬಿಡುತ್ತಿದ್ದರು. ಅಂತಹವರೇ ಅಧಿಕವಾಗಿದ್ದರು. ಕಾರಣ, ಶ್ರೀಪಾದರ ಸಂದರ ದೇಹದ ಆ ದಾರ್ಢ್ಯ, ಆ ಎತ್ತರಗಳನ್ನು ಕಂಡವರಿಗೆ ಈಗಿನ ಅವರ ದೇಹವನ್ನು ಕಂಡಾಗ ಕರುಳು ಕಿತ್ತಿದಂತಾಗುತ್ತಿತ್ತು. ಆದರೆ ಶ್ರೀಪಾದರಿಗೆ ನಮಸ್ಕರಿಸಿ ಅವರ ಮುಂದೆ ನಿಂತಾಗ, ಅವರು ಅದೇ ಅರಳುಗಣ್ಣುಗಳಿಂದ ಭಕ್ತರನ್ನು ಶಿಷ್ಯರನ್ನು ನೋಡುತ್ತಿದ್ದರು. ಅವರ ಆ ಮುಗುಳುನಗೆಯ ಮೊಗ, ಆ ಅರಳುಗಣ್ಣುಗಳನ್ನು ಕಂಡು 'ಶ್ರೀಪಾದರಿಗೆ ಏನೂ ಆಗಿಲ್ಲ. ಸುಮ್ಮನೆ ಪ್ರಚಾರ'ಎಂದು ಸಮಾಧಾನ ಪಟ್ಟು ಭಕ್ತರು ತೆರಳುತ್ತಿದ್ದರು. ಶ್ರೀಪಾದರ ದೇಹದೊಳಗೆ ಎಂತಹ ವೇದನೆಯಿತ್ತೆಂಬುದನ್ನು ಯಾರು ಬಲ್ಲರು? ಆದರೆ ಹೊರಗಿನಿಂದ ಅವರ ಮುಖದಲ್ಲಿ ಕಾಣುತ್ತಿದುದು ಅದೇ ಮಂದಹಾಸ. ಅದೇ ನೋಟ.

ಶ್ರೀಪಾದರ ಅನಾರೋಗ್ಯವನ್ನು ತಿಳಿದು ಭಯಪಟ್ಟು ಬಂದ ಅನೇಕ ಭಕ್ತರ,ಶಿಷ್ಯರ ಪೈಕಿ ಚಿಕ್ಕವನಾದ ನಾನೂ ಒಬ್ಬ. ಮಾರ್ಚ್ 24ರಂದು ಸೋದೆಯಲ್ಲಿ ಶ್ರೀಮದ್ವಾದಿ ರಾಜಶ್ರೀಮಚ್ಚರಣರ ಆರಾಧನೆ ಪೂರೈಸಿ ಉಡುಪಿಗೆ ಬಂದೆ ಪೂಜ್ಯಗುರುಗಳನ್ನು ಕಾಣುವುದಕ್ಕಾಗಿಯೇ ಬಂದೆ. ಬಂದಾಗ ಮಲಗಿದ ಶ್ರೀಪಾದರನ್ನು ಕಂಡೆ. ಅವರ ವಿಶ್ರಾಂತಿಗೆ ಅಡ್ಡಿಯುಂಟುಮಾಡಲಿಲ್ಲ. ಕಾದು ನಿಂತೆ ಶ್ರೀಪಾದರ ಸೇವೆಯನ್ನು ನಿರಂತರ ಮಾಡುವ ಭಾಗ್ಯಶಾಲಿಗಳಾದ ಮಿತ್ರರಾದ ಶ್ರೀ ಪಿ. ಎಸ್. ವೇಂಕಟೇಶರಾವ್ ಹಾಗು ಶ್ರೀನಂದಿಕೂರು ಗಿರೀಶಭಟ್ ಅವರನ್ನು ವಿಚಾರಿಸಿದೆ. ಆ ಗುರುಗಳಿಗೆ ನನ್ನಿಂದ ಯಾವ ಪ್ರಯೋಜನವಾಗದಿದ್ದರೂ ನನಗಾಗಿ ಕೇಳಿದೆ. ಅವರಿಬ್ಬರೂ ವಿವರಿಸಿದರು. ಗುರುಗಳು ಎದ್ದರು

ನಮಸ್ಕರಿಸಿದೆ. ಆ ಆಯಾಸದಲ್ಲೂ ಗುರುಗಳು 'ನಾರಾಯಣ ಚೆನ್ನಾಗಿದ್ದೀಯಾ?'ಎಂದು ನುಡಿದರು. 'ತಮ್ಮ ಆನುಗ್ರಹದಿಂದ' ಎಂದೆ. ಸ್ವಲ್ಪಮೌನ ಆವರಿಸಿತು. ಬಳಿಕ ಗುರುಗಳೇ ತಮ್ಮ ಅಸ್ವಾಸ್ಥ್ಯದ ಬಗ್ಗೆ ವಿವರವನ್ನಿತ್ತರು. ಮತ್ತೆ ಮಲಗಿದರು. ನಾನು ಪಕ್ಕದಲ್ಲೇ ಕುಳಿತಿದ್ದೆ. ಕೆಲವು ಹೊತ್ತಿನ ನಂತರ ಗುರುಗಳು ಎದ್ದರು. ಅವರ ದೇಹದ ಬಣ್ಣ ವಿಶಿಷ್ಟವಾಗಿತ್ತು. ದೇಹಸಂಪೂರ್ಣತಂಪಾಗಿತ್ತು. ಎದ್ದಾಗ ಗುರುಗಳಿಗೆ ಬಾಹ್ಯಪ್ರಪಂಚದ ಎಚ್ಚರವಿರಲಿಲ್ಲ ಎನ್ನುವುದು ಅವರ ಮಾತುಗಳಿಂದ ತಿಳಿದು ಬಂದಿತು. ನನ್ನ ಕೈಯ್ಯನ್ನು ಗಟ್ಟಿಯಾಗಿ ಹಿಡಿದಿದ್ದರು. ಕಣ್ಣನ್ನು ಮುಚ್ಚಿದ್ದರು. 'ಸಪ್ತ ಅಭಯದಾನೇ' ಎಂದು ನುಡಿಯುತ್ತಿದ್ದರು. ನನಗೆ ಶಬ್ದಾರ್ಥವಾಯಿತೇ ಹೊರತು ಅದರ ತಾತ್ಪರ್ಯ ತಿಳಿಯಲಿಲ್ಲ. ಮತ್ತೆ ಮತ್ತೆ 'ಸಪ್ತ' 'ಸಪ್ತ' ಎನ್ನುತ್ತಿದ್ದರು ಕೆಲಕ್ಷಣಗಳ ಬಳಿಕ 'ಸಃ ಅಭಯಪ್ರದಃ ಕಿಲ?

ಎಂದು ಪ್ರಶ್ನಿಸಿದರು. ಅವರ ಕೈಮುಷ್ಟಿಯಲ್ಲಿ ಬಂಧಿತನಾಗಿದ್ದ ನಾನು 'ಸತ್ಯಂ ಸ್ವಾಮೀ! ಸಃ ಅಭಯಪ್ರದ ಏವ' ಎಂದುತ್ತರಿಸಿದೆ. ಅವರು ಸ್ವಲ್ಪ ಕಣ್ಣನ್ನು ತೆರೆದು ನನ್ನನ್ನು ನೋಡಿದರು. ಆಗ ನನ್ನಲ್ಲಿದ್ದ ಕೊಂಚ ಆತಂಕ ಮರೆಯಾಯಿತು.

ಸಂಜೆಯ ಗಂಟೆ ಆರರನಂತರ ಪೇಜಾವರಶ್ರೀಪಾದರೂ, ಕಿರಿಯ ಪಲಿಮಾರು ಶ್ರೀಪಾದರೂ, ಭಂಡಾರಕೇರಿ ಶ್ರೀಪಾದರೂ ಹಾಗೂ ಎಲ್ಲ ಶಿಷ್ಯರೂ ಗುರುಗಳನ್ನು ನೋಡಲು ಆಗಮಿಸಿದ್ದರು. 'ಗುರುಗಳು ಗುಣಮುಖರಾಗಬೇಕೆಂದೇ' ಎಲ್ಲರ ಹೆಬ್ಬಯಕೆ. ಅದಕ್ಕಾಗಿ ಎಲ್ಲರೂ ಜೊತೆಗೂಡಿ ಸಾಮೂಹಿಕ ಭಗವಂತನ ಪ್ರಾರ್ಥನೆಯನ್ನು ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ಗುರುಗಳು,

'ಸಪ್ತವಾಕ್ಯಗಳನ್ನು ಕೊಡಿರಿ. ಸರಿಮಾಡಿಕೊಡುವೆ' ಎಂದರು ಪಕ್ಕದಲ್ಲೇ ಕುಳಿತಿದ್ದ ನನಗೆ ಆ ಮಾತು ಕೇಳಿತು. 'ಯಾವ ಸಪ್ತ ವಾಕ್ಯ ಸ್ವಾಮೀ' ಎಂದು ಪ್ರಶ್ನಿಸಿದೆ. 'ಸಪ್ತವಾಕ್ಯವಪ್ಪ'ಎಂದು ನುಡಿದರು. ನನಗೆ ಅರ್ಥವಾಗಲಿಲ್ಲ. ಪೇಜಾವರ ಶ್ರೀಪಾದರಿಗೆ ಹಾಗೂ ಉಳಿದ ಶ್ರೀಪಾದರಿಗೆ ವಿವರಿಸಿದೆ. ಆಗ ಪೇಜಾವರಶ್ರೀಪಾದರು 'ಸಪ್ತವಾಕ್ಯ 'ಎಂದರೇನು?' ಎಂದು ಗುರುಗಳನ್ನು ಪ್ರಶ್ನಿಸಿದರು. ಅವರಿಗೂ ಅದೇ ಉತ್ತರವಾಗಿತ್ತು. ಆಗ ಗುರುಗಳನ್ನು ಸಾಮಾನ್ಯವಾಗಿ ಕಾಣುತ್ತಿದ್ದ ಅಲ್ಲಿದ್ದ ಸ್ವಲ್ಪಜನರು ನಕ್ಕರು. ಆಗ ಗುರುಗಳು 'ನಾನು ಹೇಳುವುದು ನಿಮಗೆ ಅರ್ಥವಾಗುವುದಿಲ್ಲ.' ಎಂದರು. ನಿಜ ಗುರುಗಳಿಗೆ ಅಸ್ವಾಸ್ಥ್ಯಪ್ರಯುಕ್ತ ಬುದ್ಧಿ ಭ್ರಮಣೆಯಾಗಿದೆ ಎಂದು ತಿಳಿದು ವ್ಯಂಗ್ಯವಾಗಿ ನಗುವುದು ನೀಚರಸ್ವಭಾವ. ಆದರೆ ವಸ್ತುಸ್ಥಿತಿಯನ್ನು ತಿಳಿಯಹೊರಟರೆ 'ಅಸ್ವಾಸ್ಥ್ಯವಿದ್ದರೂ ಪರಿಪೂರ್ಣವಾಗಿ ಶುದ್ಧವಾಗಿ ಜಾಗೃತವಾದ ಬುದ್ಧಿಯುಳ್ಳವರು ಗುರುಗಳು. ಬುದ್ಧಿಭ್ರಮಣೆ ಆಗಿದ್ದರೆ ಆ ನಕ್ಕ ಜನರಿಗೆ.

ಅವರ ಬುದ್ಧಿ ಎಷ್ಟು ಶಾಸ್ತ್ರಗಳಲ್ಲಿ ಭಗವಂತನಲ್ಲಿ ತನ್ಮಯವಾಗಿತ್ತು ಎನ್ನುವುದಕ್ಕೆ ಅವರ ಅಂತಿಮಸ್ಥಿತಿಯೇ ಉತ್ತಮ ನಿದರ್ಶನವಾಗಿತ್ತು. ಒಂದು ಸಂಜೆ,

'ಬದ್‌ಕೊಲೆ ಬದ್‌ಕೊಲೆ (ಬದುಕಿಸಿರಿ ಬದುಕಿಸಿರಿ) ಎಂದು ಗುರುಗಳು ತುಳುವಿನಲ್ಲಿ ನುಡಿದರು. ಈ ಮಾತು ಕೇಳಿದ ಎಲ್ಲರಿಗೂ ವಿಸ್ಮಯ, ದುಃಖ ಎಲ್ಲವೂ ಆಯಿತು. 'ಬದುಕಿಸಿರಿ' ಎಂದು ಶ್ರೀಪಾದರು ನುಡಿಯ ಬೇಕಾದರೆ ಅವರು ಎಷ್ಟು ವೇದನೆ ಪಡುತ್ತಿರುವರೋ? ಎಂದು

ಸಾಮಾನ್ಯಭಾವುಕರ ಮಾತು. 'ಅವರಿಗೆ ಮರಣದ ಭಯಬಂದಿರಬೇಕು. ಅದಕ್ಕೆ ಈ ಮಾತುಗಳು' ಎಂದು ಕೆಲವರ ನುಡಿ. ಕೆಲವರಂತೂ 'ಮಹಾವಿರಕ್ತರೆಂದೆನಿಸಿದ ಈ ಸ್ವಾಮಿಗಳಿಗೂ ಇನ್ನೂ ಬದುಕಬೇಕೆಂಬ ಆಸೆಯೇ?' ಎಂದು ವ್ಯಂಗ್ಯವಾಗಿ ನುಡಿದರು. ಹೀಗೆ ಒಬ್ಬೊಬ್ಬರಲ್ಲಿ ಏನೇನೋ ವಿಚಾರಗಳು ಬಂದವು. ಇದೆಲ್ಲ ಒಂದು ನಿಮಿಷದೊಳಗೆ ನಡೆದ ಸಂಗತಿ. ಮತ್ತೊಂದು ಕ್ಷಣದೊಳಗೆ ಗುರುಗಳಿಂದ ಮತ್ತೊಂದು ಮಾತು ಬಂದಿತು. 'ವೇದ ವಾಕ್ಯನಿ ಬದ್‌ಕೊಲೆ ಪೂರ್ಣಪ್ರಜ್ಞಾಚಾರ್ಯನೋರ್‌ವಾಕ್ಯನಿ ಬದಕೊಲೆ' ( ವೇದವಾಕ್ಯವನ್ನು ಬದುಕಿಸಿರಿ ಪೂರ್ಣ ಪ್ರಜ್ಞಾಚಾರ್ಯರ ವಾಕ್ಯವನ್ನು ಬದುಕಿಸಿರಿ) ಎಂದು ನುಡಿದರು. ಈ ನುಡಿ ಎಲ್ಲ ಊಹಾಪೋಹಗಳಿಗೆ ಸರಿಯಾದ ತಿರುಗೇಟನ್ನು ನೀಡಿತ್ತು. ಈ ಮಾತುಗಳೆರಡನ್ನು ಕೇಳಿದ ಪೇಜಾವರಶ್ರೀಪಾದರೇ ಮೊದಲಾದ ಅನೇಕ ಶಿಷ್ಯರಿಗೆ ಅತ್ಯಾಶ್ಚರ್ಯವಾಯಿತು. ಗುರುಗಳಲ್ಲಿ ಧರ್ಮರಕ್ಷಣ ಹಾಗೂ ಸಿದ್ಧಾಂತದೀಕ್ಷೆ ಎಷ್ಟು ಜಾಗೃತವಾಗಿದೆ ಎಂಬುದರ ಅರಿವಾಯಿತು. 'ಬದುಕಿಸಿರಿ' ಎಂಬ ಮಾತು 'ತಮ್ಮನ್ನು ಬದುಕಿಸಲು ಹೇಳುತ್ತಿದ್ದುದಲ್ಲ ವೇದಗಳ ಶ್ರೀಮದಾ ಚಾರ್ಯರ ವಾಕ್ಯಗಳ ಗ್ರಂಥಗಳ ರಕ್ಷಣೆಯನ್ನು ಸಾರುತ್ತಿತ್ತು. ಅಂದರೆ ಅವುಗಳ ಅನುಷ್ಠಾನ, ಪಾಠ-ಪ್ರವಚನಗಳ ಬಗ್ಗೆ ಎಚ್ಚರವನ್ನು ನೀಡುತ್ತಿತ್ತು. ಅಂತಹ ಶೋಚನೀಯ ಸ್ಥಿತಿಯಲ್ಲೂ ಆಚಾರ್ಯರ ಸಿದ್ಧಾಂತದೀಕ್ಷೆ, ಉತ್ತಮ ಜೀವರಿಗಲ್ಲದೆ ಸಾಮಾನ್ಯ ಮಾನವರಿಗೆ ಬರಬಲ್ಲದೇ? ಊಹಿಸಲೂ ಸಾಧ್ಯವಿಲ್ಲ.

ಇದೇ ರೀತಿಯಾಗಿ ಆಗಾಗ ಅವರ ಮುಖದಿಂದ ಶಾಸ್ತ್ರೀಯ ವಚನಗಳು ಬರುತ್ತಲೇ ಇದ್ದವು. ಅವುಗಳನ್ನೆಲ್ಲ ಬರೆದಿಟ್ಟೆ. ಬರೆಯುವುದಕ್ಕಾಗಿಯೇ ಅವರ ಬಳಿಯಲ್ಲಿ ಉಳಿದೆ. ಕೆಲವೊಂದು ತಿಂಗಳಾದರೂ ಅವರ ಸೇವೆ ಸೌಭಾಗ್ಯವನ್ನುಪಡೆದೆ. ಅದೊಂದು ನನ್ನಎಷ್ಟೋ ಜನ್ಮಗಳ ಹಾಗೂ ಪೂರ್ವಜರ ಸುಕೃತ.

ಪೂಜ್ಯಗುರುಗಳು ಶಾಸ್ತ್ರೀಯವಾಗಿ ನುಡಿಯುತ್ತಿದ್ದ ದೃಶ್ಯವನ್ನು ಕಂಡವರು, ಕಿವಿಗೊಟ್ಟು ಕೇಳಿದವರು ಅಲ್ಲಿಗೆ ಬಂದವರೆಲ್ಲರೂ. ಆ ಮಾತುಗಳಲ್ಲಿ ಕೆಲವನ್ನು ಇಲ್ಲಿ ನೀಡಲಾಗಿದೆ. ಎಂಬತ್ತೇಳು ವರ್ಷಗಳ ಕಾಲ ಪವಿತ್ರಮಯ ಋಷಿಜೀವನವನ್ನು ನಡೆಸಿದ ಗುರುಗಳ ಆ ಮಾತುಗಳೆಲ್ಲವೂ ಅರ್ಥಪೂರ್ಣವಾದವುಗಳು. ಅವುಗಳಲ್ಲಿ ಕೆಲವೊಂದನ್ನು ಮಾತ್ರ ಇಲ್ಲಿ ವಾಚಕರ ಅವಗಾಹನೆಗೆ ನೀಡಲಾಗಿದೆ.

'ವ್ರಜಾಮಿ ಶರಣಂ ಹರಿಮ್'

'ಪ್ರಣಯಬಂಧುರಬಾಂಧವವಾನಸೌ '

ನಾರಾಯಣಃ ಸರ್ವಮಂಗಲಕಾರಕಃ'

ರಾಜ್ಞೀವ ದೇವತವಶಮ್'

ದುಃಖಹಾನಿಂ ಪ್ರಾಪಯಸ್ವ'

ಅವ್ಯಯಃ ಪುರುಷಃ ಸಾಕ್ಷೀ'

'ಪುರುಷಃ ವ್ಯಾವರ್ತ್ಯಃ'

ಉತ್ತರದೇಶಪ್ರಾಪ್ತ್ಯನುಕೂಲವ್ಯಾಪಾರಃ'

'ಪತಗೇಂದ್ರ ಪೃಷ್ಠೇ'

'ಭವತಿ ಯದನುಭಾವಾತ್ ಏಡಮೂಕೋಽಪಿ ವಾಗ್ಮೀ...'

(ಪೂರ್ಣಶ್ಲೋಕ)

'ತಮದ್ಭುತಂ ಬಾಲಕಮಂಬುಜೇಕ್ಷಣಮ್..'

(ಪೂರ್ಣಶ್ಲೋಕ)

'ಮಂಗಲಂ ಭಗವಾನ್ ವಿಷ್ಣುಃ..'

(ಪೂರ್ಣಶ್ಲೋಕ)

'ಶ್ರಿಯಃ ಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ.....' ಇತ್ಯಾದಿಯಾಗಿ ನ್ಯಾಯಸುಧೆಯ ಮಂಗಲಪದ್ಯಗಳೆಲ್ಲವನ್ನೂ ಉಚ್ಚರಿಸುತ್ತಿದ್ದರು.

'ಸರ್ವದೇವಸ್ತುತೋ ಹರಿಃ'

'ಇದಂ ವಿಷ್ಣುರ್ವಿಚಕ್ರಮೇ...'(ವಿಷ್ಣುಸೂಕ್ತಪೂರ್ಣ)

'ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾಕರ್ಮಸುತಾ ಇತಿ ।

'ಇತಿ ವೇದೋದಿತಂ ವಾಕ್ಯಂ'

'ಉಮಾಮಹೇಶ್ವರ ಮಹೀಯಸ್ತ್ವ ಅಭ್ಯಧಿಕಾಶಂಕಾ ಪರಿಹಾರ್ಯಾ' 'ವಂದ್ಯತ್ವಪ್ರಯೋಜಕ ಧರ್ಮಾಃ ಇಷ್ಟತ್ವ, ವಿಶಿಷ್ಟತ್ವ,ಅಧಿಕೃತತ್ವಾದಯಃ' (ನ್ಯಾಯಸುಧಾವಾಕ್ಯ)

'ಇದೆಲ್ಲ ಅತ್ರಿಋಷಿಗಳ ಆಶ್ರಮ'

ಇದೇ ರೀತಿಯಾದ ಮಾತುಗಳು ಪುಂಖಾನುಪುಂಖವಾಗಿ ಬರುತ್ತಿದ್ದವು. ಕೆಲವು ಮಾತುಗಳ ಅಭಿಪ್ರಾಯವಂತೂ ಅತಿಸ್ಪಷ್ಟವಾಗಿದ್ದವು. ಅವುಗಳು ನಮಗೆ ಸಂದೇಶವಾಗಿದ್ದವು.

ಒಂದು ದಿನ ಮಧ್ಯಾಹ್ನದಲ್ಲಿ ಗುರುಗಳು 'ವಾಲಿಸುಗ್ರೀವರ ಕಾದಾಟದ ಫಲಿತಾಂಶವನ್ನು ನುಡಿದು. "ರಾಮದೇವರ ಎದುರಿನಲ್ಲಿ ಆ ವಾಲಿಸುಗ್ರೀವರ ಸಂಧಾನವಾಗಿ ಪ್ರೀತಿಬೆಳೆದುದು. ಒಳ್ಳೆಯ ಸನ್ನಿವೇಶವಲ್ಲವಾ? ಆ ಒಗ್ಗಟ್ಟು ಸುಂದರ ಅಲ್ಲವಾ? ನಾವೆಲ್ಲರೂ ಅಣ್ಣತಮ್ಮಂದಿರಂತೆ ಇರಬೇಕಲ್ಲವಾ ಅದಕ್ಕಾಗಿ ದೇವರಲ್ಲಿ ಪ್ರಾರ್ಥನೆ ಮಾಡಿರಿ" ಎಂದು ನುಡಿದರು.

'ಲಕ್ಷ್ಮೀಪತಿಃ ವಾಯುಃ', 'ಇದು ಸರಿಯಲ್ಲ.' ಎಂದು ಒಂದೊಮ್ಮೆ ಗುರುಗಳು ನುಡಿದರು. ಆಗ ಶ್ರೀಭಂಡಾರಕೇರಿಶ್ರೀಪಾದರೂ ಇದ್ದರು. ಈ ಮಾತಿನ ಅಭಿಪ್ರಾಯವನ್ನು ಅವರು ತೋರಿದರು. ಈ ಎರಡು ವಾಕ್ಯಗಳೂ 'ಅತ ಏವ ಪ್ರಾಣಃ' ಎಂಬ ಬ್ರಹ್ಮಸೂತ್ರದ ಅರ್ಥವನ್ನು ನೀಡುತ್ತಿವೆ. ಪ್ರಾಣಶಬ್ದವಾಚ್ಯನಾದವನು ಮುಖ್ಯಪ್ರಾಣನಲ್ಲ ಏಕೆಂದರೆ ಲಕ್ಷ್ಮೀಪತಿತ್ವರೂಪಲಿಂಗ ಅವನಲ್ಲಿಲ್ಲ. ಅದು ಇರುವುದು ಕೇವಲ ಭಗವಂತನಲ್ಲಿ ಆದ್ದರಿಂದ "ಪ್ರಾಣ" ಎಂಬ ಪದದಿಂದ ಮುಖ್ಯವಾಚ್ಯನಾದವನು ಶ್ರೀಹರಿಯೇ' ಎಂಬ ಅಭಿಪ್ರಾಯ ಅದರಲ್ಲಡಗಿದೆ ಎಂದರು. -

ಒಂದು ದಿನದ ಮಧ್ಯಾರಾತ್ರಿಯಲ್ಲಿ ಎದ್ದ ಗುರುಗಳು 'ಕೃಷ್ಣಪತ್ನಿಯರು ರಾಜಪುತ್ರಿಯರಲ್ಲವಾ ? ಅವರೆಲ್ಲ ಬಹಳಪುಣ್ಯಮಾಡಿದ್ದರಲ್ಲವಾ? ಅಷ್ಟು ಪುಣ್ಯವನ್ನು ನಾನು ಮಾಡಿಲ್ಲವಲ್ಲಾ? ' ಎಂದು ವ್ಯಥೆಯಿಂದ ನುಡಿದರು. ಆಗ 'ಸ್ವಾಮೀ ಹತ್ತಾರು ಸಾವಿರವರ್ಷಕಾಲ ತಪವನ್ನಾಚರಿಸಿದ ಅಗ್ನಿಪುತ್ರರೇ ಕೃಷ್ಣಪತ್ನಿಯರಾಗಿ ಜನಿಸಿದರು. ಅವು ಬಹಳ ಪುಣ್ಯಶಾಲಿಗಳು. ಅಂತೆಯೇ ತಾವೂ ಕೂಡ ಪುಣ್ಯಪುರುಷರೇ. ಏಕೆಂದರೆ ಸಂಬಂಧವಿರದಂತಾದರೂ ಸಂಬಂಧಹುಟ್ಟಿ ಕೃಷ್ಣಪೂಜೆಯ ಭಾಗ್ಯ ದೊರೆಯಿತು.

ಕೃಷ್ಣಪತ್ನಿಯರ ಪುಣ್ಯದಂತೆ ತಮ್ಮ ಪುಣ್ಯವೂ ಕೂಡ' ಎಂದು ಶಿಷ್ಯರು ಪ್ರತಿಕ್ರಿಯಿಸಿದರು. ಇದು ಅಕ್ಷರಶಃ ಸತ್ಯವೆನ್ನುವುದನ್ನು ಮತ್ತೆ ವಿವರಿಸಬೇಕಿಲ್ಲ.

ಹೀಗೆ ಹಗಲೆನ್ನದೆ ರಾತ್ರಿಯೆನ್ನದೆ ಅನಾರೋಗ್ಯವೆನ್ನದೆ, ಆರೋಗ್ಯವೆನ್ನದೆ ಯಾವ ಸ್ಥಿತಿಯಲ್ಲೂ ಯಾವಕಾಲದಲ್ಲೂ ಭಗವತ್ಪರವಾದ ತತ್ವಚಿಂತನೆಗಳನ್ನು ಬಿಡದೆ ಬದುಕಿದ ಯತಿಕುಲಭೂಷಣರು ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು.



# ಹರಿದಿನದಂದು ಹರಿಪದಾರೋಹಣ

ಅಂದು ವಿಕ್ರಮ ಸಂವತ್ಸರದ ವೈಶಾಖ ಶುದ್ಧ ಏಕಾದಶೀ. (14-5-2000) ವೇದವ್ಯಾಸರೂಪಿ ಭಗವಂತನ ಜಯಂತೀ ಉತ್ಸವದ ಸಡಗರ. ಆ ಉತ್ಸವವನ್ನು ಅವರ ಶಿಷ್ಯರಾದ ಶ್ರೀವಿದ್ಯೇಶತೀರ್ಥರು ವಿಶೇಷವಾಗಿ ಮಂಗಳೂರಿನಲ್ಲಿ ಆಚರಿಸುತ್ತಿದ್ದರು. ಪೇಜಾವರ ಶ್ರೀಪಾದರು,ಅದಮಾರು ಶ್ರೀಪಾದರು, ಪಲಿಮಾರು ಶ್ರೀಪಾದರೂ ಉಡುಪಿಯಲ್ಲಿ ಆಚರಿಸುತ್ತಿದ್ದರು. ಆ ದಿನದ ಪ್ರಾತಃ ಕಾಲದಲ್ಲಿ ಪೂಜ್ಯಗುರುಗಳ ಆಹ್ನೀಕ, ಸಾಲಿಗ್ರಾಮ, ಶ್ರೀಕೃಷ್ಣ ಪೂಜೆಗಳೆಲ್ಲವೂ ಸಾಂಗವಾಗಿ ಜರುಗಿದವು. ಗುರು ಪೂಜೆಯೂ ಆಯಿತು. ಕಳೆದೈದು ದಿನಗಳಿಂದ ತೀರ್ಥವನ್ನು ಮಾತ್ರ ಸ್ವೀಕರಿಸಿ ಆಹಾರವನ್ನು ನೀರನ್ನೂ ಸ್ವೀಕರಿಸದೇ ಪ್ರಾಯೋಪವೇಶರೀತಿಯಲ್ಲಿದ್ದ ಗುರುಗಳು ಬಹಳ ಅಶಕ್ತರಾಗಿದ್ದರು. ಪಲಿಮಾರು ಮಠದ ಶ್ರೀವಿದ್ಯಾಧೀಶ ತೀರ್ಥರು ಕೃಷ್ಣಪೂಜೆಯ ನಂತರ ಬಂದು ಗುರುಗಳ ಸನ್ನಿಧಿಯಲ್ಲಿ ಕುಳಿತು ಮೂರುಸಾವಿರ ಪ್ರಣವ ಹಾಗೂ ಎಲ್ಲ ಮಂತ್ರಗಳ ಜಪಗಳನ್ನೂ ವಿಶೇಷವಾಗಿ ಮಾಡಿದರು. ಸುಮಾರು 9 ಘಂಟೆಗೆ ಶ್ರೀಗುರುರಾಜಾಚಾರ್ಯಜೋಶಿ, ಶ್ರೀರಾಜ ಗೋಪಾಲ ಉಪಾಧ್ಯಾಯ, ಶ್ರೀನಂದಿಕೂರು ಗಿರೀಶಭಟ್, ಶ್ರೀಸುಬ್ರಹ್ಮಣ್ಯ ಸರಳಾಯ, ಶ್ರೀಗುರುರಾಜ ಪಾಟೀಲ ಎಂಬ ಶಿಷ್ಯರು ಸೇರಿ, ಮಲಗಿದ್ದ ಗುರುಗಳ ಬಳಿ ಕುಳಿತು ನೂರೆಂಟುಬಾರಿ ಶ್ರೀರಾಘವೇಂದ್ರಗುರು ಸ್ತೋತ್ರವನ್ನು ಪಠಿಸಿದರು. ಅವರೊಂದಿಗೆ ನಾನೂ ಜೊತೆಗೂಡಿದ್ದೆ ಎಂಬುದು ನನ್ನ ಸೌಭಾಗ್ಯ. ರಾಘವೇಂದ್ರಗುರುಸ್ತೋತ್ರದ ಪಠನದ ನಂತರ, ವಾಯುಸ್ತುತಿ, ವಿಷ್ಣುಸಹಸ್ರನಾಮ, ಸುಂದರಕಾಂಡ ರಾಮಾಯಣ, ಸೂತ್ರಭಾಷ್ಯಗಳ ಪಾರಾಯಣಗಳು ನಡೆದವು. ಮಧ್ಯದಲ್ಲಿ ಶ್ರೀ ವೇಂಕಟರಮಣ ಐತಾಳರು, ಶ್ರೀಗುರುರಾಜ ಬಲ್ಲಾಳರು, ಶ್ರೀಕಾಪು ಹಯ ಗ್ರೀವಾಚಾರ್ಯರು, ಶ್ರೀಸೀತಾರಾಮ ಭಟ್ ಇವರೇ ಮೊದಲಾಗಿ ವಿಪ್ರರೂ ಆಗಮಿಸಿ ಮಂತ್ರ ಜಪಗಳನ್ನು ನಡೆಸುತ್ತಿದ್ದರು. ಗುರುಗಳು ಇದನ್ನೆಲ್ಲವನ್ನೂ ಮಲಗಿದಲ್ಲೇ ಎಚ್ಚರದಿಂದ ಶ್ರವಣ ಮಾಡುತ್ತ

'ಹರಿನಾಮ' ಸ್ಮರಣೆಯನ್ನು ಮಾಡುತ್ತಿದ್ದರು. ಇದೆಲ್ಲ ಮುಗಿದಾಗ ಸೂರ್ಯನ ತಾಪ ಇಳಿಮುಖವಾಗಿತ್ತು.

ಮುಸ್ಸಂಜೆಯ ಹೊತ್ತು. ಇಳೆಗೆ ಬೆಳಕನ್ನು ನೀಡಿದ ಸೂರ್ಯ ಪಡುಗಡಲದೊಳಗೆ ಇಳಿಯುತ್ತಿದ್ದ. ಶ್ರೀಪಾದರೂ ಸಿದ್ಧರಾಗಿದ್ದರು. ತಮ್ಮ ಭೌತಿಕದೇಹವನ್ನು ತ್ಯಜಿಸಿ ಆನಂದನಿಲಯನ ಪಾದಾರವಿಂದವನ್ನು ಹೊಂದಲು ಉತ್ಸುಕರಾಗಿದ್ದರು. ಅವರ ಪಲಿಮಾರು ಮಠದ ಉತ್ತರಾಧಿಕಾರಿಗಳಾದ ಹಾಗೂ ಪ್ರಿಯ ಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರು ಗುರುಗಳ ತಲೆಯನ್ನು ತಮ್ಮ ತೊಡೆಯಲ್ಲಿಟ್ಟು ಕೊಂಡರು. ಬಹುದುಃಖಿತರಾಗಿದ್ದರೂ ಶಾಸ್ತ್ರೀಯವಾಗಿ ಲಯಚಿಂತನೆಯನ್ನು ಮಾಡಿದರು. ಹರಿದ್ವಾರದಿಂದ ತಂದ ಹರಿ ಪಾದೋದಕತೀರ್ಥವಾದ ಗಂಗೆಯನ್ನು ಗುರುಗಳ ಬಾಯಿಯಲ್ಲಿ ಹಾಕಿದರು. ಶ್ರೀವಿಶ್ವೇಶತೀರ್ಥರೂ ಹಾಕಿದರು ಪರಿಸರ ಗಂಭೀರವಾಗಿತ್ತು. ಗುರುಗಳ ತುಟಿಗಳು ಮಾತ್ರ 'ರಾಮ ರಾಮ ರಾಮ' ಎಂದು ಉಚ್ಚರಿಸುತ್ತಲೇ ಇದ್ದವು. ತೀರ್ಥವು ನಾಲಿಗೆಗೆ ಬಿದ್ದಕ್ಷಣದಲ್ಲಿ ಗುರುಗಳು ಶ್ರೀವಿದ್ಯಾಧೀಶತೀರ್ಥರನ್ನೊಮ್ಮೆ ಪೂರ್ಣವಾಗಿ ನೋಡಿದರು. ಪ್ರಾಣದೇವರು ತಮ್ಮ ಸ್ವಾಮಿಯನ್ನು ಹಾಗೂ ಪ್ರಿಯಭಕ್ತನನ್ನು ಕರೆದು ಕೊಂಡು ಹೊರಟರು. ಅವರ ನಿರ್ಗಮನ ನಮ್ಮಂಥ ಮನುಜರ ಕಣ್ಣಿಗೆ ಗೋಚರಿಸುವುದೇ?

ಅಂತೂ ಪ್ರಾಣದೇವರು ದೇಹದಿಂದ ದೂರವಾದಾಗ ಗುರುಗಳ ತುಟಿಗಳು ತಟಸ್ಥವಾದವು ಆಗ ಸಮಯ 7-32 ಆಗಿತ್ತು. ಅಷ್ಟು ಹೊತ್ತಿಗೆ, ಅತ್ತ ಆಗಸದಲ್ಲಿ ಸೂರ್ಯಕಾಣದಾಗಿದ್ದ. ಇತ್ತ ಮಹಾನ್ ಜ್ಞಾನಸೂರ್ಯ ಅಸ್ತಂಗತನಾಗಿದ್ದ. ಅಷ್ಟರವರಗೆ ಶಿಷ್ಯರ ಕಿವಿಗಳಿಗೆ ಕೇಳುತ್ತಿದ್ದ 'ರಾಮ ರಾಮ'ಎಂಬ ನಾಮಸ್ಮರಣೆ ಕೇಳದಂತಾಯಿತು.

ಶಿಷ್ಯರ ಬುದ್ಧಿಸ್ತಬ್ಧವಾಯಿತು. ಕಂಗಳಲ್ಲಿ ನೀರು ಮಡುಗಟ್ಟಿ ಧಾರೆಯಾಗಿ ಹರಿಯಹತ್ತಿತ್ತು. ದುಃಖಉಮ್ಮಳಿಸಿತು. ಅಲ್ಲಿ ಆಗ ಸಮಾಧಾನ ಪಡಿಸಲು ............ಯಾರೂ ಇರಲಿಲ್ಲ. ಕಾರಣ ಎಲ್ಲರೂ ದುಃಖಸಾಗರದಲ್ಲೇ ಮುಳುಗಿದ್ದರು.

ಭೌತಿಕ ಪ್ರಪಂಚದಲ್ಲಿ ಅಭಿಮಾನವನ್ನಿಟ್ಟುಕೊಂಡ ನಮ್ಮೆಲ್ಲರ ಮುಖಗಳು ತೇಜೋ ಹೀನವಾಗಿದ್ದವು. ಆದರೆ ಸಚ್ಚಿದಾನಂದ ಸ್ವರೂಪಿ ಶ್ರೀರಾಮನನ್ನು ಸ್ಮರಿಸುತ್ತ ಆನಂದದಿಂದ ಅವನ ಬಳಿ ಸಾಗಿದ ಪೂಜ್ಯಗುರುಗಳ ಮುಖದ ತೇಜಸ್ಸು ಸ್ವಲ್ಪವೂ ಕುಂದಿರಲಿಲ್ಲ. ಅವರ ಪವಿತ್ರತಮ ಜೀವಿತದ ಈ ಅಂತ್ಯವೇ ಅವರ ಉಚ್ಚತಮ ವ್ಯಕ್ತಿತ್ವವನ್ನು ಚೆನ್ನಾಗಿ ಸಮರ್ಥಿಸಿತು.

''ಸಂತತಂ ಚಿಂತಯೆನಂತಂ ಅಂತಕಾಲೇ ವಿಶೇಷತಃ'' ಎಂದು ಶ್ರೀಮದಾಚಾರ್ಯರ ಮಾತು 'ಬದುಕಿನುದ್ದಕ್ಕೂ ಭಗವಂತನನ್ನು ಚಿಂತಿಸಬೇಕು. ಬಾಳಿನ ಕೊನೆಯ ಘಳಿಗೆಯಲ್ಲಿ ವಿಶೇಷವಾಗಿ ಚಿಂತಿಸಬೇಕು ಎಂಬ ಆ ಮಾತಿಗೆ ಶ್ರೀಶ್ರೀವಿದ್ಯಾಮಾನ್ಯತೀರ್ಥರೇ ಉತ್ತಮನಿದರ್ಶನ.

ಬಾಲ್ಯದಿಂದ ವೃದ್ಧಾಪ್ಯದ ಅಂತ್ಯದವರೆಗೂ ಎಡೆಬಿಡದೆ ಭಗವಂತನ ಸ್ಮರಣೆ, ಶಾಸ್ತ್ರಪಾಠ, ಪ್ರವಚನಗಳನ್ನು ನಡೆಸಿದ ಫಲವಾಗಿ ಶ್ರೀಪಾದರ ಮಹಾಪ್ರಸ್ಥಾನ ಸಮಯದಲ್ಲಿ 'ರಾಮ ರಾಮ'ಎಂಬ ನಾಮಸ್ಮರಣೆ ಬಂದಿತು. ಇದರ ಫಲ ಅನುಪಮ, ಅತ್ಯುನ್ನತ ಎಂದು ಶಾಸ್ತ್ರಕಾರರ ಮಾತು.

ಅಂತೂ ಶ್ರೀಕೃಷ್ಣನ ಪೂಜೆಗಾಗಿಯೇ ಅವನ ಒಲುಮೆಯನ್ನು ಪಡೆಯುವುದಕ್ಕಾಗಿಯೇ ಭುವಿಗಿಳಿದ ಶ್ರೀಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಶ್ರೀಕೃಷ್ಣನ ಹಾಗೂ ಶ್ರೀಮುಖ್ಯಪ್ರಾಣದೇವರ ಸನ್ನಿಧಿಯಲ್ಲೇ ಇಹಲೋಕಯಾತ್ರೆಯನ್ನು ಪೂರೈಸಿದರು. ಶ್ರೀಕೃಷ್ಣನಿಗೆ ಅರ್ಪಿಸಿದರು.

★★★

ಶ್ರೀವಿದ್ಯಾಮಾನ್ಯತೀರ್ಥರ ಹರಿಪದಾರೋಹಣವನ್ನು ತಿಳಿದ ತತ್ಕ್ಷಣದಲ್ಲಿ ಶ್ರೀಅದಮಾರು ಮಠದ ಶ್ರೀವಿಶ್ವಪ್ರಿಯ ತೀರ್ಥರು, ಶ್ರೀಶೀರೂರು ಮಠದ ಶ್ರೀಲಕ್ಷ್ಮೀವರ ತೀರ್ಥರು, ಶ್ರೀಪೇಜಾವರ ಮಠದ ಶ್ರೀವಿಶ್ವಪ್ರಸನ್ನತೀರ್ಥರು, ಶ್ರೀಕಾಣಿಯೂರು ಮಠದ ಶ್ರೀವಿದ್ಯಾವಲ್ಲಭ ತೀರ್ಥರು ಆಗಮಿಸಿದರು. ಶ್ರೀವಿದ್ಯಾಮಾನ್ಯತೀರ್ಥರ ಭಂಡಾರಕೇರಿ ಮಠದ ಉತ್ತರಾಧಿಕಾರಿಗಳಾದ ಶ್ರೀವಿದ್ಯೇಶ ತೀರ್ಥಶ್ರೀಪಾದರು ಮಂಗಳೂರಿನಲ್ಲಿ ವೇದವ್ಯಾಸ ಜಯಂತಿ ಕಾರ್ಯಕ್ರಮವನ್ನು ನಡೆಸುತ್ತಿದ್ದರು.ವಿಷಯ ತಿಳಿದ ತತ್ಕ್ಷಣ ಅವರೂ ಉಡುಪಿಗೆ ಧಾವಿಸಿದರು.

ಶ್ರೀಪಾದರ ಪಾರ್ಥಿವ ಶರೀರದ ಅಂತಿಮ ದರ್ಶನವನ್ನು ಪಡೆಯಲು ದುಃಖತಪ್ತ ಭಕ್ತರು ಸಹಸ್ರ ಸಹಸ್ರಸಂಖ್ಯೆಯಲ್ಲಿ ಶ್ರೀಕೃಷ್ಣಮಠದಲ್ಲಿ ಜಮಾಯಿಸಿದ್ದರು. ದರ್ಶನಕ್ಕಾಗಿ ಹಾತೊರೆಯುತ್ತಿದ್ದರು. ಅಷ್ಟಮಠಗಳ ಸಾಂಪ್ರದಾಯಿಕ ಗೌರವದಂತೆ ಸಾಲು ಫಿರಂಗಿಗಳನ್ನು, ಸಿಡಿಮದ್ದುಗಳನ್ನು ಹಾರಿಸಲಾಯಿತು. ನಗಾರಿಯನ್ನು ಮೊಳಗಿಸಲಾಯಿತು. ಅದು ನಿರಂತರವಾಗಿತ್ತು.

ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಹೋನ್ನತ ಸಾಧನೆಗೈದ ಶ್ರೀಪಾದರ ದೇಹತ್ಯಾಗದ ಸಂದರ್ಭದಲ್ಲಿ ಭಕ್ತರಿಗೆ ಅಮಿತ ದುಃಖವಾಗುವುದು ಸಹಜ. ಆದರೆ ಶಾಸ್ತ್ರರೀತಿಯಿಂದ ನಿರಭಿಮಾನಿಗಳಾಗಿದ್ದ ಶ್ರೀಪಾದರಂತೆ ಎಲ್ಲರೂ ಅಭಿಮಾನವನ್ನು ತೊರೆದು ದುಃಖವನ್ನು ಸಹಿಸಿ ಹರಿಭಜನೆ ಮಾಡುವುದು ಸೂಕ್ತವಾದುದು. ಅದಕ್ಕನುಗುಣವಾಗಿ ಶ್ರೀಪಾದರ ಪವಿತ್ರಪಾರ್ಥಿವಶರೀರವನ್ನು ಶ್ರೀಕೃಷ್ಣಧಾಮ ದಿಂದ ಶ್ರೀಕೃಷ್ಣಮಠಕ್ಕೆ ತರುವ ಸಂದರ್ಭದಲ್ಲಿ ಓರ್ವ ಸುಮಧುರ ಗಾಯಕ ಭಕ್ತರು ಶ್ರೀಮದ್ವಾದಿರಾಜರ 'ನಾರಾಯಣನ ನೆನೆ ಮನವೆ 'ಎಂಬ ಪದ್ಯವನ್ನು ಸುಶ್ರಾವ್ಯವಾಗಿ ಹಾಡಿದರು. ಸಂದರ್ಭಕ್ಕನುಗುಣವಾದ ಆ ಪದ್ಯವು ಪರಿಸರವನ್ನು ಭಾವನಾತ್ಮಕವನ್ನಾಗಿಸಿತ್ತು. ಶ್ರೀಪಾದರ ಪಾರ್ಥಿವ ದೇಹವನ್ನು ಶ್ರೀಕೃಷ್ಣಮಠದ ವಸಂತ ಮಹಲ್ ನಲ್ಲಿ ಎತ್ತರದ ಪೀಠದಲ್ಲಿ ಕುಳ್ಳಿರಿಸಲಾಯಿತು. ಆಂತಕ ಆತುರತೆಯಿಂದ ಆಗಮಿಸಿದ್ದ ಭಕ್ತರ ಕಣ್ಣುಗಳು ಶ್ರೀಪಾದರ ಅಂತಿಮದರ್ಶನವನ್ನು ಪಡೆದು ಒಂದು ರೀತಿಯಲ್ಲಿ ಅಪಾರವಾದ ದುಃಖವನ್ನು ಮತ್ತೊಂದೆಡೆಯಲ್ಲಿ ಅಂತಿಮ ದರ್ಶನದ ಧನ್ಯತೆಯನ್ನೂ ಅನುಭವಿಸಿದರು.

ಸಹಸ್ರಸಂಖ್ಯೆ ಭಕ್ತರ ದರ್ಶನದ ವ್ಯವಸ್ಥೆಗಾಗಿ ಪೋಲೀಸ್ ವಿಶೇಷ ಪಡೆ ಹಾಜರಾಗಿತ್ತು. ಜನ ಜಂಗುಳಿಯ ಮಧ್ಯ ಕೇಳಿ ಬರುತ್ತಿತ್ತು ತಾಳಬದ್ಧವಾದ ಹರಿನಾಮ ಸಂಕೀರ್ತನೆ. ಸ್ವತಃ ಶ್ರೀಪೇಜಾವರ ಮಠದ ಕಿರಿಯ ಶ್ರೀಪಾದರಾದ ಶ್ರೀವಿಶ್ವಪ್ರಸನ್ನತೀರ್ಥರೇ ತಾಳ ಹಿಡಿದು ತುಳಸೀ ಸಂಕೀರ್ತನೆಯನ್ನು ಪಾಡುತ್ತಿದ್ದರು.

ಶ್ರೀಪಾದರ ಪವಿತ್ರದೇಹದ ಮುಂಭಾಗದಲ್ಲಿ ಕುಳಿತ

ಶ್ರೀವಿಶ್ವೇಶತೀರ್ಥರು, ಶ್ರೀವಿಶ್ರಪ್ರಿಯತೀರ್ಥರು, ಶ್ರೀವಿದ್ಯಾಧೀಶತೀರ್ಥರು, ಶ್ರೀವಿದ್ಯೇಶತೀರ್ಥರು, ಸೇರಿ ಬೃಂದಾವನ ಸ್ಥಾಪನಾದಿ ವಿಷಯಗಳ ಕುರಿತು, ಚರ್ಚೆಯನ್ನು ನಡೆಸುತ್ತಿದ್ದರು. ಸುಮಾರು ರಾತ್ರಿ 9-30 ಕ್ಕೆ ಸರಿಯಾಗಿ ಶ್ರೀಪಾದರ ಹರಿಪದಾರೋಹಣ ನಿಮಿತ್ತ ಶಾಲಿಗ್ರಾಮ, ದೀಪ, ಜಪ, ಎಳ್ಳು,ಸುವರ್ಣ, ಗೋಪಿಚಂದನ ಮೊದಲಾದ ಪವಿತ್ರ ದಾನಗಳನ್ನು ಬ್ರಾಹ್ಮಣರಿಗೆ ನೀಡಲಾಯಿತು. ನಂತರ ಶ್ರೀಪಾದರನ್ನು ಬಿದುರಿನ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮಧ್ವಸರೋವರಕ್ಕೆ ಕರೆದೊಯ್ಯಲಾಯಿತು. ವೇಗದ ದುಃಖದ ಜೊತೆಯಲ್ಲಿಯೇ 'ಹರಿ ಸರ್ವೋತ್ತಮ ವಾಯು ಜೀವೋತ್ತಮ ಗೋವಿಂದ ಗೋವಿಂದ'ಇತ್ಯಾದಿಯಾಗಿ ಶಿಷ್ಯರ ಘೋಷಣೆಯಾಗುತ್ತಿತ್ತು. ಪಲ್ಲಕ್ಕಿಯ ಎದುರಲ್ಲಿ ಹಿಂಬದಿಯಲ್ಲಿ ಎಡಬಲಗದಲ್ಲಿ ಭಕ್ತರ ನೂಕು ನುಗ್ಗಲು ಅಧಿಕವಾಗಿತ್ತು. ಕಾರಣ ಶತಮಾನದ ಅತ್ಯಂತ ಅಪರೂಪದ ಋಷಿಶ್ರೇಷ್ಠರ ಸೇವೆಯನ್ನು ಪಾರ್ಥಿವಶರೀರವನ್ನು ಕಿಂಚಿತ್ ಆದರೂ ಹೊತ್ತು ಅವರ ಸೇವೆಯನ್ನು ಮಾಡಿದ ಫಲಪ್ರಾಪ್ತಿಯಾಗಲಿ ಎಂಬ ಹೆಬ್ಬಯಕೆ ಭಕ್ತರಿಗಿತ್ತು. ಭಕ್ತರ ಗುಂಪಿನ ಮುಂದೆ ನಾದಸ್ವರ ಬ್ಯಾಂಡ್ ಸೆಟ್, ಚೆಂಡೆವಾದ್ಯ ಮೊದಲಾದ ವಾದ್ಯವೃಂದ ಸಾಗುತ್ತಿತ್ತು. ಮಧ್ವಸರೋವರಕ್ಕೆ ಶ್ರೀಪಾದರನ್ನು ಕರೆತಂದು ಶ್ರೀಪಾದರೊಡನೆ ಎಲ್ಲಾ ಶ್ರೀಪಾದರುಗಳು ಶಿಷ್ಯವರ್ಗವೆಲ್ಲವೂ ಕೊನೆಯ ಅವಗಾಹನ ಸ್ನಾನವನ್ನು ಮಾಡಿತು. ಆದೃಶ್ಯ ಶ್ರೀಶ್ರೀವಿದ್ಯಾಮಾನ್ಯ ತೀರ್ಥರ 87 ವರ್ಷಗಳ ಸುದೀರ್ಘ ಕಾಲದಲ್ಲಿ ನಡೆದ ಪವಿತ್ರ ಜೀವನ ಯಜ್ಞದ ಅವಭೃತ ಸ್ನಾನದಂತಿತ್ತು. ಸ್ನಾನದ ಬಳಿಕ ಶ್ರೀಪಾದರ ಶಿರೋಭಾಗದಲ್ಲಿ ಅವರ ಉಪಾಸ್ಯ ಸಾಲಿಗ್ರಾಮವನ್ನು ಇರಿಸಿ ಪುರುಷಸೂಕ್ತವನ್ನು ಪಠಿಸುತ್ತ ಅಭಿಷೇಕವನ್ನು ಮಾಡಲಾಯಿತು. ಗೋಪಿಚಂದನದಿಂದ ದ್ವಾದಶ ಊರ್ಧ್ವಪುಂಡ್ರಗಳಿಂದ ಪಂಚಮುದ್ರೆಗಳಿಂದ ಶ್ರೀಪಾದರ ಪವಿತ್ರ ಪಾರ್ಥಿವ ಶರೀರವನ್ನು ಸಿಂಗರಿಸಲಾಯಿತು. ಭಗವಂತನ ಅಂಗಾರಕವನ್ನೂ ಲೇಪಿಸಲಾಯಿತು. ನಿರ್ಮಾಲ್ಯ ತುಳಸೀಮಾಲೆಯನ್ನು ಹಾಕಲಾಯಿತು. ನಂತರ ಶ್ರೀಕೃಷ್ಣಮಠದ ಒಳ ಪ್ರಾಂಗಣದೊಳಗೆ ಕೊಂಡೊಯ್ಯಲಾಯಿತು. ಶ್ರೀಕೃಷ್ಣನ ಮುಂಭಾಗದಲ್ಲಿರುವ ತೀರ್ಥಮಂಟಪದ ಎದುರುನಿಂದರೆ ಶ್ರೀಪಾದರ ಹಸ್ತಸ್ಪರ್ಶವನ್ನು ಮಾಡಿಸಿ ಶ್ರೀಕೃಷ್ಣನಿಗೆ ಶ್ರೀಮುಖ್ಯಪ್ರಾಣದೇವರಿಗೆ ಮಂಗಳಾರತಿಯನ್ನು ಮಾಡಿಸಲಾಯಿತು. ಅದೇ ಕೊನೆಯ ಮಂಗಳಾರತಿ ಯಾಯಿತು. ನಂತರ ಶ್ರೀಕೃಷ್ಣನಿಗೆ ಪ್ರದಕ್ಷಿಣೆ ಬಂದು ರಥಬೀದಿಗೆ ಶ್ರೀಪಾದರನ್ನು ಕರೆತರಲಾಯಿತು. ಅದೊಂದು, ದುಃಖವಿದ್ದರೂ ವೈಭವದ ಮೆರವಣಿಗೆಯಾಗಿತ್ತು. ಉತ್ಸವದ ಸಂಭ್ರಮವಿತ್ತು. ಈ ವೈಭವಕ್ಕೆ ನಿಮಿತ್ತ ಅನೇಕ ಬಗೆಯಾಗಿತ್ತು. ಒಂದು ಶ್ರೀವಿದ್ಯಾಮಾನ್ಯತೀರ್ಥರು ಮಹಾತಪಸ್ವಿಗಳು, ಅನುಪಮ ಜ್ಞಾನಿಗಳು ಎಂಬ ಜ್ಞಾನ, ಮಿಗಿಲಾಗಿ ಅವರ ಶಾಪಾನುಗ್ರಹ ಶಕ್ತಿಯ ಪರಿಚಯ ಭಕ್ತಜನತೆಗಿತ್ತು. ಅವರೇ ತಮಗೆ ಗುರುಗಳು ಎಂಬ ಭಾವನೆ ಎಲ್ಲರಲ್ಲಿಯೂ ಇತ್ತು. ಈ ಭಾವನೆಯ ಫಲವೇ ಶ್ರೀಪಾದರ ಮಹಾಪ್ರಸ್ಥಾನದ ವೈಭವವಾಗಿತ್ತು. ಇನ್ನೊಂದು ಕಾರಣವೆಂದರೆ ಅವರು ಭಂಡಾರಕೇರಿ ಮಠಾಧಿಪತ್ಯವಾಗಿತ್ತು. ಮತ್ತೊಂದು ಮುಖ್ಯವಿಶೇಷವೆಂದರೆ ಅಷ್ಟಮಠಗಳಲ್ಲಿ ಫಲಿಮಾರು ಮಠಾಧಿಪತ್ಯವಾಗಿತ್ತು. ಅಷ್ಟಮಠಗಳ ಶ್ರೀಪಾದರೆಲ್ಲ ದೇಹತ್ಯಾಗದ ಸಮಯದಲ್ಲಿ ಈ ರೀತಿಯ

ಕೃಷ್ಣಮುಖ್ಯಪ್ರಾಣದೇವರಿಗೆ ಮಂಗಳಾರತಿ, ಮೆರವಣಿಗೆ ಮೊದಲಾದ ಗೌರವವನ್ನು ನೀಡುವುದು ಉಡುಪಿಯ ಸಂಪ್ರದಾಯವಾಗಿತ್ತು. ಸಹಸ್ರ,ಸಹಸ್ರ ಭಕ್ತರ ಪ್ರವಾಹ ಶ್ರೀಪಾದರ ಅಂತಿಮಯಾತ್ರೆಯಲ್ಲಿ ಪಾಲ್ಗೊಂಡರು. ಆ ಶೋಭಾಯಾತ್ರೆಯಲ್ಲಿ ಎದುರಿನಲ್ಲಿ ಗಜರಾಜದ್ವಯ ಬಿರುದಾವಳಿಗಳು, ವಾದ್ಯವೃಂದಗಳೆಲ್ಲವೂ ಸಾಗುತ್ತಿದ್ದವು. ಅದರ ಹಿಂದೆ ಪರ್ಯಾಯಶ್ರೀಪೇಜಾವರ ಶ್ರೀಗಳು, ಅದಮಾರುಶ್ರೀಪಾದರು, ಪಲಿಮಾರು ಶ್ರೀಪಾದರು, ಭಂಡಾರಕೇರಿಶ್ರೀಪಾದರು, ಪೇಜಾವರ ಕಿರಿಯಶ್ರೀಪಾದರು, ಹಾಗೂ ಕಾಣಿಯೂರು ಶ್ರೀಪಾದರು. ಗಂಭೀರವಾಗಿ ಭಗವಂತನನ್ನು ಸ್ತುತಿಸುತ್ತ ಸಾಗುತ್ತಿದ್ದರು. ವಿದ್ವಾಂಸರು ವಿದ್ಯಾರ್ಥಿಗಳು ಮೌನರಾಗಿ ನಾಗುತ್ತಿದ್ದರು. ಆ ಭಕ್ತಸಾಗರದ ಯಾವ ಮುಖದಲ್ಲೂ ಶುಭ್ರತೆಯಿರಲಿಲ್ಲ ದುಃಖದ ಕಪ್ಪುನೆಲೆಯಾಗಿತ್ತು. ಅಂತೂ ಪೂರ್ಣರಥಬೀದಿಗೆ ಒಂದು ಪ್ರದಕ್ಷಿಣೆಯನ್ನು ಬಂದ ಶ್ರೀಪಾದರ ಅಂತಿಮಶೋಭಾಯಾತ್ರೆ 'ಕನಕದಾಸ'ರಸ್ತೆ ಮೂಲಕವಾಗಿ (ಪಲಿಮಾರುಮಠದ ಪಕ್ಕದಲ್ಲಿರುವ) ಸಂಸ್ಕೃತ ಮಹಾಪಾಠಶಾಲೆಯ ಬಳಿಸಾಗಿತ್ತು. ಅಲ್ಲಿ ಅನೇಕ ಹೂ ಮಾಲೇಗಳಿಂದ ಅಲಂಕೃತವಾದ ವಾಹನ ಬಂದು ಸಿದ್ಧವಾಗಿತ್ತು ಅದರಲ್ಲಿ ಶ್ರೀಪಾದರನ್ನು ಕುಳ್ಳಿರಿಸಲಾಯಿತು. ಆ ವಾಹನದ ಮುಂದಿನ ಪಯಣ ಪಲಿಮಾರಿನ ಮಠಕ್ಕಾಗಿತ್ತು. ಇತ್ತ ಶ್ರೀಪಾದರ ನೆಚ್ಚಿನ ಶಿಷ್ಯೋತ್ತಮ ಶ್ರೀಪೇಜಾವರ ಮಠಾಧೀಶಶ್ರೀವಿಶ್ವೇಶತೀರ್ಥರ ಹೃದಯ ಬಹಳ ಮಿಡಿಯಿತು. ತನ್ನಪ್ರಾಣಸಮ ಗುರುಗಳ ನಿರಂತರದ ವಿರಹದಿಂದ ವಿಲವಿಲನೆ ಒದ್ದಾಡುತ್ತಿತ್ತು. ಅವರ ತುಟಿ ಚಟಪಡಿಸುತ್ತಿತ್ತು. ಅವರ ಕಂಗಳಲ್ಲಿ ಧಾರಾಕಾರವಾಗಿ ನೀರಿಳಿಯುತಿತ್ತು. ಗಂಟಲು ಬಿಗಿದಿತ್ತು. ಮಾತು ಮೌನವಾಗಿತ್ತು. ಬುದ್ಧಿ ಕೆಲಸಮಾಡದಂತಾಗಿತ್ತು. ಇಷ್ಟಕ್ಕೆಲ್ಲ ಕಾರಣ ಶ್ರೀವಿಶ್ವೇಶತೀರ್ಥರಿಗೆ ಹಾಗೂ ಶ್ರೀವಿದ್ಯಾಮಾನ್ಯ ತೀರ್ಥರಿಗೆ ಸುಮಾರು 60 ವರ್ಷಗಳಿಂದ ಬೆಳದಿದ್ದ ಅಪ್ಪ,ಅಮ್ಮ, ಅಣ್ಣ,ಗುರು, ಮಿತ್ರ, ಎಲ್ಲಾ ರೀತಿಯ ಸಂಬಂಧದ ಅನುಪಮ ಪ್ರೀತಿಯಾಗಿತ್ತು. ಅವರ ದುಃಖ ಯಾರ ಊಹೆಗೂ ನಿಲುಕದಾಗಿತ್ತು. ಇಷ್ಟಾದರೂ ಅವರಲ್ಲಿ ಸ್ಥಿತಪ್ರಜ್ಞಜಾಗೃತವಾಗಿತ್ತು. ಕಾರಣ ಆ ಮಹಾಗುರುಗಳಿಂದಲೇ ಬಳುವಳಿಯಾಗಿ ಬಂದ ಅಗಾಧವಾದ ಪಕ್ವವಾದ ಶಾಸ್ತ್ರಜ್ಞಾನವಾಗಿತ್ತು. ಶ್ರೀಪಾದರ ಪಾರ್ಥಿವಶರೀರದೊಡನೆ ಫಲಿಮಾರಿಗೆ ಹೋಗದಂತಾಗಿತ್ತು ಕಾರಣ ,ಪರ್ಯಾಯ ಪೀಠಸ್ಥ ಶ್ರೀಪಾದರಿಗೆ ಉಡುಪಿಯ ರಥಬೀದಿಯ ಗಡಿ ದಾಟದಂತೆ ನಿರ್ಬಂಧವಿತ್ತು. ಅಂತೂ ಪೇಜಾವರಶ್ರೀಪಾದರನ್ನು ಬಿಟ್ಟು ಆ ಶೋಭಾಯಾತ್ರೆ ಫಲಿಮಾರಿಗೆ ತೆರಳಬೇಕಿತ್ತು. ವಾಹನ ಚಲಿಸಲಾರಂಭಿಸಿತು. ಶ್ರೀಪೇಜಾವರ ಶ್ರೀಪಾದಕು ಘುರುಗಳನ್ನು ಕಟ್ಟಕಡೆಯದಾಗಿ ನೋಡಲು ಬಯಸಿದರು. ಅದರಂತೆ ಗುರುಗಳನ್ನು ನೋಡಿದರು ಪೂರ್ಣಪಿಡಿದರು ಗುರುಗಳ ಚರಣವನ್ನು ಹಿಡಿದರು, ವಾಹನ ಸ್ವಲ್ಪಸ್ವಲ್ಪವಾಗಿ ಮುನ್ನಡೆಯಲು ಪೇಜಾವರಶ್ರೀಪಾದರು ಆ ರಸ್ತೆಯಲ್ಲಿಯೇ ಸಾಷ್ಟಾಂಗವೆರಗಿದರು. ಆ ದೃಶ್ಯ ಎಂಥ ಕಟುಕನ ಕಲ್ಲಮನಸ್ಸನ್ನೂ ಕರಗಿಸುವಂಥದಾಗಿತ್ತು. ಶ್ರೀಪಾದರ ವಾಹನ ವೇಗವಾಗಿ ಚಲಿಸಲು ಭಕ್ತಾದಿಗಳೊಂದಿಗೆ ಸೇರಿದ ಪೇಜಾವರಶ್ರೀಪಾದರು ಎರಡೂ ಕೈಗಳನ್ನು ಮೇಲೆತ್ತಿ ಗುರುಗಳನ್ನು ಪ್ರಣಮಿಸಿ ವಿದಾಯ ಕೋರಿದರು. ವಾಹನ ಕಣ್ಮರೆಯಾಗುವವರೆಗೂ ಅಲ್ಲಿಯೇ ನಿಂತಿದ್ದರು. ತಮ್ಮ ಎರಡನೆಯ ಪರ್ಯಾಯದ

ಒಂದನೆಯ ವರ್ಷದಲ್ಲಿ ತಮ್ಮ ಗುರುಗಳನ್ನು ಪಲಿಮಾರುಮಠಕ್ಕೆ ಬರಮಾಡಿಕೊಂಡಿದ್ದರು. ತಮ್ಮ ನಾಲ್ಕನೆಯ ಪರ್ಯಾಯದಲ್ಲಿ ಅದೇ ಗುರುಗಳನ್ನೇ ಶಾಶ್ವತವಾಗಿ ಪಲಿಮಾರಿನ ಪಲಿಮಾರುಮಠಕ್ಕೆ ಬೀಳ್ಕೊಟ್ಟರು.

ಅತ್ತ ಶ್ರೀಪಾದರ ಪಾರ್ಥಿವಶರೀರದೊಡನೆ ಶ್ರೀವಿಶ್ವಪ್ರಿಯತೀರ್ಥರು, ಶ್ರೀವಿದ್ಯಾಧೀಶತೀರ್ಥರು, ಶ್ರೀವಿದ್ಯೇಶತೀರ್ಥರು ಹಾಗು ಐದಾರು ಜನ ಶಿಷ್ಯರು ಇದ್ದರು. ಅವರು ಮಾರ್ಗದಲ್ಲಿ ಸಾಗುತ್ತಿದ್ದಾಗ ವಿಷ್ಣುಸಹಸ್ರನಾಮ, ವಾಯುಸ್ತುತಿ, ಸುಂದರಕಾಂಡ ರಾಮಾಯಣ, ಮಧ್ವವಿಜಯ, ಪುರುಷೋತ್ತಮಯೋಗ ಭಗವದ್ಗೀತೆ ಹಾಗೂ ಅಣುಭಾಷ್ಯಗಳನ್ನು ಪಾರಾಯಣ ಮಾಡುತ್ತಿದ್ದರು. ಶ್ರೀಪಾದರ ಈ ಯಾತ್ರೆಯ ವೈಶಿಷ್ಟ್ಯವೆಂದರೆ ಉಡುಪಿಯಿಂದ ಸುಮಾರು 35 ಕಿ.ಮಿ. ದೂರದಲ್ಲಿರುವ ಪಲಿಮಾರಿಗೆ ಮೆರವಣಿಗೆಯಲ್ಲಿಯೇ ಸಾಗುತ್ತಿದ್ದ ಶ್ರೀಪಾದರ ಅಲಂಕೃತವಾಹನದ ಮುಂದೆ 10-15 ಟೆಂಪೊ ಟ್ರಾವಲರ್ ವಾಹನಗಳಲ್ಲಿ ಎಲ್ಲಾ ವಿಧದ ವಾದ್ಯಗಳ ತಂಡಗಳು ಸಾಗುತ್ತಿದ್ದವು. ಮಾರ್ಗದಲ್ಲಿ ಸಾಗುತ್ತಿರುವಾಗ ತಮ್ಮ ವಾದನವನ್ನು ಮಾಡುತ್ತಲೇ ಇದ್ದವು. ಶ್ರೀಪಾದರ ವಾಹನವನ್ನು ಅನುಸರಿಸಿ ಬಂದ ಭಕ್ತಾದಿಗಳ ವಾಹನಸಮೂಹ ಅಸಂಖ್ಯ ಶ್ರೀಪಾದರ ವೃಂದಾವನ ಪ್ರವೇಶವನ್ನು ವೀಕ್ಷಿಸಲು ಬಯಸುವ ಭಕ್ತರಿಗಾಗಿ ಉಡುಪಿಯಿಂದ ವಿಶೇಷ ಬಸ್‌ಗಳ ವ್ಯವಸ್ಥೆಯನ್ನು ಮಾಡಲಾಗಿತ್ತು. ಶ್ರೀಪಾದರ ಪಾರ್ಥಿವ ಶರೀರ ಪಲಿಮಾರನ್ನು ತಲುಪಿದಾಗ ರಾತ್ರಿ 11-30 ಆಗಿತ್ತು. ಆ ಸಮಯದಲ್ಲೂ ಪಲಿಮಾರಿನ ಗ್ರಾಮದ ಹೆಬ್ಬಾಗಿಲಿನಲ್ಲಿ ಸಹಸ್ರಾರು ಭಕ್ತಾದಿಗಳ ಸಮೂಹ ಶ್ರೀಪಾದರನ್ನು ಸ್ವಾಗತಿಸಲು ಕಾದು ನಿಂತಿತ್ತು. ಪುಷ್ಪವೃಷ್ಟಿ ಲಾಜಾವೃಷ್ಟಿಗಳಿಂದ ಸ್ವಾಗತಿಸುತ್ತ ಜಯಕಾರಗಳನ್ನು ಮಾಡುತ್ತ ಶ್ರೀಪಾದರನ್ನು ಪಲಿಮಾರು ಮಠಕ್ಕೆ ಕರೆತರಲಾಯಿತು. ಅಲ್ಲಿಯೂ ಉಪಾಸ್ಯ ಮೂರುತಿ ವೇದವ್ಯಾಸದೇವರಿಗೂ ಶ್ರೀರಘುಪ್ರವೀರ ತೀರ್ಥಪ್ರತಿಷ್ಠಿತ ಶ್ರೀಮುಖ್ಯಪ್ರಾಣ ದೇವರಿಗೂ ಮಂಗಳಾರತಿಯನ್ನು ಮಾಡಿಸಲಾಯಿತು. ಅಷ್ಟು ಹೊತ್ತಿಗೆ ಶ್ರೀಪಾದರ ಭಕ್ತಅಭಿಮಾನಿ ಯುವವೃಂದ ಶ್ರೀಪಾದರ ಬೃಂದಾವನ ಪ್ರವೇಶಕ್ಕಾಗಿ ಭೂಮಿಯನ್ನು ನಾಲ್ಕೈದು ಅಡಿಗಳಷ್ಟು ಅಂತರದಲ್ಲಿ ಅಗೆದು ವ್ಯವಸ್ಥೆಯನ್ನು ಕಲ್ಪಿಸಿತ್ತು. ಪುರೋಹಿತರಾದ ವಿದ್ವಾನ್ ಶ್ರೀ ಹೆರ್ಗ ಸುಬ್ರಾಯಭಟ್ಟರ ನೇತೃತ್ವದಲ್ಲಿ ಅಂತಿಮ ಸಂಸ್ಕಾರ ಆರಂಭವಾಯಿತು. ಆ ನೆಲದ ಗುಳಿಯಲ್ಲಿ ದರ್ಭೆಗಳನ್ನು ಹಾಸಿ ಶ್ರೀಪಾದರನ್ನು ಕುಳ್ಳಿರಿಸಿಸಲಾಯಿತು. ಶಾಸ್ತ್ರೋಕ್ತರೀತಿಯಲ್ಲಿ ಮಂತ್ರೋಚ್ಚಾರಣೆಯನ್ನು ಮಾಡುತ್ತ ಶ್ರೀಪಾದರ ಪಾರ್ಥಿವ ಶರೀರವನ್ನು ನೀರಿನಿಂದ ಪ್ರೋಕ್ಷಿಸಲಾಯಿತು. ಶ್ರೀವಿಶ್ವಪ್ರಿಯತೀರ್ಥರು, ಶ್ರೀವಿದ್ಯಾಧೀಶತೀರ್ಥರು, ಶ್ರೀವಿದ್ಯೇಶತೀರ್ಥರು ಈ ಸಂಸ್ಕಾರಗಳಲ್ಲಿ ಪಾಲ್ಗೊಂಡರು. ಶ್ರೀಪಾದರು ಮುಂಬಾಗದ ಗೂಡಿನಲ್ಲಿ ಒಂದು ಕ್ಷೇತ್ರ ಶಾಲಿಗ್ರಾಮಗಳನ್ನು ಸ್ಥಾಪಿಸಲಾಯಿತು. ನವರತ್ನಗಳನ್ನು ಇಡಲಾಯಿತು. ದೀಪ ಮೊದಲಾದ ಪೂಜಾಪರಿಕರಗಳನ್ನು ಇಡಲಾಯಿತು. ಶ್ರೀಪಾದರ ದಂಡ, ಗಿಂಡಿ, ಪಾದುಕೆ, ಕಾವಿವಸ್ತ್ರ ತುಳಸೀಮಣಿಸರ ಮೊದಲಾದವುಗಳನ್ನು ಅವರೊಂದಿಗೆ ಇಡಲಾಗಿತ್ತು. ಅಷ್ಟು ಹೊತ್ತಿಗೆ ಶ್ರೀಪಾದರ ಉತ್ತರಾಧಿಕಾರಿಗಳಾದ ಶಿಷ್ಯರು ಗುರುಗಳ

ಪವಿತ್ರಶರೀರದಲ್ಲಿರುವ ಶಕ್ತಿಯನ್ನು ತಮ್ಮಲ್ಲಿ ಕಳಾಕರ್ಷಿಸಿಕೊಂಡರು. ಆ ನಂತರದಲ್ಲಿ ಶ್ರೀಪಾದರ ಪಾರ್ಥಿವ ಶರೀರದ ಶಿರೋಭಾಗಕ್ಕೆ ತೆಂಗಿನಕಾಯಿಯನ್ನು ಒಡೆಯಲಾಯಿತು. ಶರೀರದ ಸುತ್ತಲೂ ಹತ್ತಿಯನ್ನು ಸುತ್ತಿ ಅದರ ಸುತ್ತಲೂ ಕರ್ಪೂರ, ಕರಿಮೆಣಸು, ಸಾಸಿವೆ, ಹಾಗೂ ಉಪ್ಪುಗಳನ್ನು ಮೂಟೆ ಮೂಟೆಗಳಲ್ಲಿ ಸುರಿಯಲಾಯಿತು. ಆನಂತರದಲ್ಲಿ ಮಣ್ಣನ್ನು ಹಾಕಬೇಕಿತ್ತು. ಅದರ ಆರಂಭವನ್ನು ಯತಿತ್ರಯರು ನೆರವೇರಿಸಿದರು. ಆಗ ಎಲ್ಲಾ ಶಿಷ್ಯರು, ಎಲ್ಲಾ ಭಕ್ತರು ಸೇರಿ ತಮ್ಮ ತಮ್ಮ ಕೈಯಿಂದ ಮೃತ್ತಿಕೆಯನ್ನು ಸಲ್ಲಿಸಿದರು. ಆ ಮೃತ್ತಿಕಾ ಬೃಂದಾವನದ ಮೇಲೆ ತುಳಸೀಸಸಿಯನ್ನು ನೆಡಲಾಯಿತು. ಆಗ ಎಲ್ಲರೂ ಕಂಡ ವಿಸ್ಮಯವೆಂದರೆ ಎಲ್ಲೂ ಇರದ ಮಳೆ ಸುರಿಯಲಾರಂಭಿಸಿತು. ಎಷ್ಟು ಹೊತ್ತು? ಕ್ಷಣಮಾತ್ರ. ಎಷ್ಟು ನೀರು ತುಂತುರು ಮಾತ್ರ.ಅಂತೂ ಆ ಮಹಾಗುರುಗಳಿಂದ ಪವಿತ್ರ ಏಕಾದಶಿಯ ಜಾಗರಣೆ ಎಲ್ಲರಿಂದರೂ ಆಚರಿತವಾಗಿತ್ತು. ಎಲ್ಲರೂ ತುಂತುರುವೃಷ್ಟಿಯನ್ನು ಸುಮನಸರ ಸುಮವೃಷ್ಟಿಯೆಂದೇ ನಿಶ್ಚಯಿಸಿದರು. ಎಂಟು ದಶಕಗಳಿಗಿಂತಲೂ ಅಧಿಕವಾಗಿ ಪವಿತ್ರ ಜೀವನವನ್ನು ನಡೆಸಿದ ಶುದ್ಧ ಭೀಷ್ಮರ ಈ ಮಹಾಪ್ರಸ್ಥಾನ ಅಚ್ಚಳಿಯದೆ ಮನದಲ್ಲಿ ಉಳಿಯುವಂತಾಯಿತು. ಆಗ ಸಮಯ 2-30 ಆಗಿತ್ತು.

ಅತ್ತ ಉಡುಪಿಯಲ್ಲಿ ಆಶ್ಚರ್ಯವೆಂದರೆ ಅನಿರೀಕ್ಷಿತಮಳೆ ಬರಲಾರಂಭಿಸಿತು. ಹೇಗೆಂದರೆ ತಡೆಯಲಾರದಷ್ಟು, ಪ್ರವಾಹದಂತೆ ಧಾರಾಕಾರವಾಗಿ ಸುರಿಯುತ್ತಿತ್ತು. ಎಲ್ಲಿಯವರೆಗೆ ?ಬೆಳಗಿನ ನಾಲ್ಕು ಗಂಟೆಯವರಗೆ.

ಶ್ರೀವಿದ್ಯಾಮಾನ್ಯತೀರ್ಥರ ನಿರಂತರ ವಿರಾಮದ ದುಃಖಸೂಚಕವಾಗಿ ಮರುದಿನವಿಡೀ ಉಡುಪಿ ಬಂದ್ ಆಗಿತ್ತು. ಶ್ರೀಪಾದರ ಅಂತಿಮ ದರ್ಶನವನ್ನು ಪಡೆಯಲು ವಿಧಾನಪರಿಷತ್ ಸದಸ್ಯ ಡಾ|| ವಿ. ಎಸ್. ಆಚಾರ್ಯ , ನಗರಸಭಾ ಉಪಾಧ್ಯಕ್ಷ ಶ್ರೀ ರೆನೊಲ್ಡ್ ಪ್ರವೀಣ್ ಕುಮಾರ್ , ಪ್ರೊ|ಫೆಸರ್ ಶ್ರೀಪತಿತಂತ್ರಿ ಮೊದಲಾದ ಅನೇಕ ಗಣ್ಯವ್ಯಕ್ತಿಗಳು ಆಗಮಿಸಿದ್ದರು. ಉಡುಪಿ ಜಿಲ್ಲಾಧಿಕಾರಿ ಶ್ರೀಗೌರವ್ ಗುಪ್ತ ಎಸ್. ಪಿ ಶ್ರೀ ಎಂ. ಎ ಸಲೀಮ್ ವೃತ್ತನಿರೀಕ್ಷಕ ಶ್ರೀ ಜಿ. ಎ . ಜಗದೀಶ್. ಮೊದಲಾದ ಗಣ್ಯರಿದ್ದರು. ಶ್ರೀಹರಿಕೃಷ್ಣಪುನರೂರು, ಪ್ರದೀಪ್ ಕಲ್ಕೂರ್ , ಮೊದಲಾದವರು ಪಲಿಮಾರಿನಲ್ಲಿ ಉಪಸ್ಥಿತರಿದ್ದರು.



# ವಿಶಿಷ್ಟ ಯತಿಯ ವಿಶಿಷ್ಟ ವೃಂದಾವನ

ಪರಮಹಂಸಾಶ್ರಮವನ್ನು ಸ್ವೀಕರಿಸಿ ಪ್ರಣವ ಮಂತ್ರವನ್ನು ಜಪಿಸಿ ಪರಮಾತ್ಮತತ್ವವನ್ನು ಒಲಿಸುವ ಸಾಧಕರು, ಭೌತಿಕದೇಹವನ್ನು ತ್ಯಜಿಸಿದಾಗ.ಅವರ ಆ ಪವಿತ್ರ ದೇಹವನ್ನು ಭೂಮಿಯಲ್ಲಿರಿಸಿ, ಸಾಲಿಗ್ರಾಮ ಗಳನ್ನಿಟ್ಟು ಮೇಲೆ ವೃಂದಾವನವನ್ನು ನಿರ್ಮಿಸುವ ಸಂಪ್ರದಾಯ ನಮ್ಮದು. ಆ ವೃಂದಾವನದ ಕಲ್ಪನೆ ಯೇನು?ಎಂಬುವುದಕ್ಕೆ ಉತ್ತರವಾಗಿ ಶಾಸ್ತ್ರಾಧಾರಿತ ವಾದ ಹರಿದಾಸರ ಮಾತೊಂದಿದೆ. ಅದು ಎಲ್ಲ ಮಾಧ್ವಪರ 'ಮಹಂಸರ ವೃಂದಾವನಗಳಿಗೂ ಅನ್ವಯವಾಗುತ್ತದೆ. ಆದರೆ ಎಲ್ಲವೃಂದಾವನಗಳಲ್ಲಿಯೂ ಅದನ್ನು ಅನುಸಂಧಾನಿಸುವ ಕಣ್ಣು, ಪ್ರಜ್ಞೆ ಎಲ್ಲರಲ್ಲಿಯೂ ಅಗತ್ಯವಾಗಿರಬೇಕು. ಆ ಅನುಸಂಧಾನ "ಪರಮಹಂಸರು ಶಿರದಮೇಲ್ಹೊತ್ತ ಪರಮಾತ್ಮನ ಮಂದಿರ" ಅದಕ್ಕೆ ಮಾದರಿಯಾಗಿ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರ ವೃಂದಾವನ.

ಅದು ಶ್ರೀಗುರುಜಗನ್ನಾಥದಾಸರ ವಂಶಜರಾದ ಶ್ರೀಶ್ರೀನಿವಾಸಪರಬ್ರಹ್ಮನ ಹಾಗೂ ದಾಸರ ಪೂರ್ಣಕೃಪಾಛತ್ರದಲ್ಲಿರುವ, ತಿರುಮಲ ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಗಳಾದ ಶ್ರೀ.ಅಪ್ಪಣ್ಣಾ ಚಾರ್ಯರ ಸಲಹೆಯಂತೆ ಶ್ರೀಪಲಿಮಾರುಮಠದ ಶ್ರೀಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು ತಮ್ಮ ಗುರುಗಳ ವೃಂದಾನವನ್ನು ವಿಶಿಷ್ಟವಾದರೀತಿಯಲ್ಲಿ ನಿರ್ಮಿಸಲಪೇಕ್ಷಿಸಿದರು. ಆದಕ್ಕಾಗಿ ತಿರುಪತಿಯಲ್ಲಿರುವ ಶ್ರೀ ಮಾರುತಿ ಎಂಬ ಶಿಲ್ಪಿಯನ್ನು ನಿಯೋಜಿಸಲಾಯಿತು. ಅದೊಂದು ಆ ಶಿಲ್ಪಿಯಸೌಭಾಗ್ಯ.

ಸುಮಾರು ನಾಲ್ಕುವರೆ ಅಡಿ ಎತ್ತರದ, ಏಕಶಿಲಾಮಯ ವೃಂದಾವನದ ನಿರ್ಮಾಣ ಪ್ರಾರಂಭಗೊಂಡಿತು.

ವೃಂದಾವನದ ಕೆಳಭಾಗದಲ್ಲಿ ಕೂರ್ಮಪೀಠ. ಆ ಕೂರ್ಮದಲ್ಲಿ ಮೂರುವಿಧ. ವಿಷ್ಣುಕೂರ್ಮ, ಶ್ರೀಕೂರ್ಮ, ವಾಯುಕೂರ್ಮಗಳ ಕಲ್ಪನೆ. ಅದರಮೇಲೆ ಶೇಷ. ಶೇಷನಮೇಲೆಧರಣೀದೇವಿಯರ ಮೂರ್ತಿಗಳನ್ನು ಕೆತ್ತಲಾಗಿದೆ. ಇದೊಂದು ಪೀಠಪೂಜೆಯಲ್ಲಿರುವ ಅನುಸಂಧಾನ. ಈ ಮೂರ್ತಿಗಳ ಮೇಲಿನ ಭಾಗದಲ್ಲಿ

ದಿಗಭಿಮಾನಿ ದೇವತೆಗಳ ವಿಗ್ರಹಗಳನ್ನು ನೀಡಲಾಗಿದೆ. ಅದರ ಮೇಲೆ ವಾಯುದೇವರ ನಾಲ್ಕುರೂಪಗಳು. ವೃಂದಾವನದ ಮುಂಭಾಗದಲ್ಲಿ ಮೂಲರೂಪಿ ವಾಯುದೇವರು. ಬಲಭಾಗದಲ್ಲಿ ಘಟಿಕಾಚಲದಲ್ಲಿರುವ ಯೋಗಾಂಜನೇಯ. ಹಿಂಭಾಗದಲ್ಲಿ ಭೀಮಸೇನ, ಎಡಭಾಗದಲ್ಲಿ ಶ್ರೀಮದಾಚಾರ್ಯರ ವಿಗ್ರಹಗಳು ಕೆತ್ತಲ್ಪಟ್ಟಿವೆ. ಅದರ ಮೇಲ್ಭಾಗದಲ್ಲಿ; ವೃಂದಾವನ ಮುಂಭಾಗದಲ್ಲಿ ಶ್ರೀಪಾದರ ಉಪಾಸ್ಯ ಮೂರುತಿಯಾದ ಶ್ರೀಲಕ್ಷ್ಮಣ, ಸೀತಾಸಹಿತ ಶ್ರೀರಾಮಚಂದ್ರ ದೇವರು. ಬಲಭಾಗದಲ್ಲಿ ಶ್ರೀಭೂಸಮೇತನಾದ ನಾರಾಯಣ ದೇವರು, ಹಿಂಭಾಗದಲ್ಲಿ ಆನಂದನಿಲಯನಾದ ಪರಬ್ರಹ್ಮ ಶ್ರೀನಿವಾಸದೇವರು, ಎಡಭಾಗದಲ್ಲಿ ಶೇಷಶಾಯಿಯಾದ ಶ್ರೀರಂಗನಾಥದೇವರು. ಇದುಮಧ್ಯಭಾಗ. ಅದರ ಮೇಲಿನ ಪಂಕ್ತಿಯಲ್ಲಿ ಕ್ರಮವಾಗಿ ನಾಲ್ಕೂಭಾಗಗಳಲ್ಲಿ ಕ್ರಮವಾಗಿ ಆರು ಆರು ಕೇಶವಾದಿ ಇಪ್ಪತ್ತನಾಲ್ಕು ಭಗವದ್ರೂಪಗಳು ತೋರುವುವು. ಇದರ ಮೇಲೆ ಮುಂಭಾಗದ ಮಧ್ಯಭಾಗದಲ್ಲಿ ಶ್ರೀ ವಿದ್ಯಾಮಾನ್ಯ ತೀರ್ಥಶ್ರೀಪಾದರಿಂದ ಪೂಜೆಗೊಂಡ ಉಡುಪಿಯ ಕಡೆಗೋಲಪಿಡಿದ ಶ್ರೀಕೃಷ್ಣ. ಎಡಬಲದಲ್ಲಿ ವೇದವ್ಯಾಸ, ಹಯಗ್ರೀವ, ಧನ್ವಂತರಿ ಹಾಗೂ ಯೋಗನರಸಿಂಹರ ವಿಗ್ರಹಗಳು. ಎಡ-ಬಲ ಭಾಗದಲ್ಲಿ ಐದೈದರಂತೆ ಮತ್ಸ್ಯಾದಿ ದಶರೂಪಗಳು. ಹಿಂಭಾಗದಲ್ಲಿ ವಾಸುದೇವಾದಿ ಐದುರೂಪಗಳು. ಹೀಗೆ ವೃಂದಾವನದ ಪ್ರಧಾನ ಭಾಗಗಳಲ್ಲಿ ಭಗವದ್ರೂಪಗಳನ್ನು ಕೆತ್ತಲಾಗಿದೆ. ವೃಂದಾವನದೊಳಗೆ 12 ಕ್ಷೇತ್ರ ಸಾಲಿಗ್ರಾಮಗಳನ್ನು ಸ್ಥಾಪಿಸಲಾಗಿದೆ. ಈರೀತಿ ಶ್ರೀಪಾದರ ಶಿರೋ ಭಾಗದಲ್ಲಿರುವ ವೃಂದಾವನ ಕೇವಲ ವೃಂದಾವನವಾಗಿರದೆ ಅದೊಂದು ಭಗವನ್ಮಂದಿರವೆಂಬ ಭಾವನೆ ಬಾರದೇ ಇರದು.

ಈ ರೀತಿ ವೃಂದಾವನದಸ್ಪಷ್ಟ ಚಿತ್ರಣ ಶ್ರೀ ವಿದ್ಯಾಮಾನ್ಯ ತೀರ್ಥರ ವೃಂದಾವನದಿಂದ ವ್ಯಕ್ತವಾಗುವುದು. ಈ ವಿಷಯದಲ್ಲೂ ಇದೊಂದು ಶ್ರೀ ವಿದ್ಯಾಮಾನ್ಯ ತೀರ್ಥರ ದಾಖಲಾರ್ಹವಾದ ಸಂಗತಿ.

ವಿಶಿಷ್ಟವಾದ ಈ ವೃಂದಾವನವು ತಿರುಪತಿಯಿಂದ ಪಲಿಮಾರುಗ್ರಾಮಕ್ಕೆ ವೃಷ ಸಂವತ್ಸರದ ಚೈತ್ರಶುದ್ಧ ಪೂರ್ಣಿಮೆ ಹನುಮಜ್ಜಯಂತೀ ಮಹೋತ್ಸವದ ಪರ್ವಕಾಲದಲ್ಲಿ ಪಲಿಮಾರುಗ್ರಾಮಕ್ಕೆ ಆಗಮಿಸಿತು. ವೃಂದಾವನವು ಮಧ್ಯಾಹ್ನದ ವೇಳೆಗೆ ಆಗಮಿಸಿತು. ಅಭಿಜಿನ್ಮುಹೂರ್ತದಲ್ಲಿ ಶೋಭಾಯಾತ್ರೆಯಲ್ಲಿ ವೃಂದಾವನವನ್ನು ಮಠಕ್ಕೆಕರೆತರಲಾಯಿತು. ಮಠದ ಮಹಾದ್ವಾರದಲ್ಲಿ ಶ್ರೀ ಅದಮಾರು ಮಠದ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು ಹಾಗೂ ಶ್ರೀವಿದ್ಯಾಧೀಶ ತೀರ್ಥರೂ ಪುಷ್ಪಾರ್ಚನೆಮಾಡಿ ಆರತಿ ಬೆಳಗಿದರು. ಹಿರಿದಾದ ವಾಹನ ಲಾರಿಯಲ್ಲಿರುವ ಈ ಭಾರದ ವೃಂದಾವನವನ್ನು ವಾಹನದಿಂದ ನಿಧಾನವಾಗಿ ಕೆಳಗಿಳಿಸುವವರೆಗೆ ನಭ ಶುಭ್ರವಾಗಿತ್ತು. ವೃಂದಾವನವು ಕೆಳಗಿಳಿಯುತ್ತಿದ್ದಂತೆ ಆಕಾಶಮಂಡಲದಲ್ಲಿ ಮೇಘಗಳು ಸೇರಿದವು. ಸುಮಾರು ಹದಿನೈದು ನಿಮಿಷಗಳಕಾಲ ಮಳೆಯಾಯಿತು. ಇದೇನು? ಎಂದು ಪ್ರಶ್ನಿಸಿದರಾ!

ಅಂದು, ಶ್ರೀಪಾದರು ಕಾಲವಾದ ರಾತ್ರಿಯಲ್ಲಿ ವೃಂದಾವನ ಸ್ಥಾಪನೆ ಕಾಲದಲ್ಲಿ ಇರದ ಮಳೆ, ಮೃತ್ತಿಕಾ ಪೂರಣದನಂತರ ತುಲಸೀ ಸಸಿಯನ್ನು ನೆಡುತ್ತಿದ್ದಂತೆ ಆಗಸದಿಂದ ತುಂತುರು ಹನಿಯಿತು. ಆಗ ಅದು ಸುಮನಸ

ಸುಮವೃಷ್ಟಿ ಎಂದರು ಭಾವುಕರು. ಇಂದು, ಅವರ ವೃಂದಾವನವೂ ಭೂಸ್ಪರ್ಶಮಾಡುವಾಗಲೂ ಆ ವರುಣ ದೇವ ಜಲಪುಷ್ಪವೃಷ್ಟಿಯನ್ನು ಹರಿಸಿ ತನ್ನ ಸಂತಸವನ್ನು ವ್ಯಕ್ತಪಡಿಸಿದ. ಅಂತೂ ಈ ವೃಂದಾವನ ಪ್ರವೇಶ ಪವಿತ್ರರೀತಿಯಲ್ಲೇ ಆಯಿತು.

ವೃಷ ಸಂವತ್ಸರದ ವೈಶಾಖಶುದ್ಧ ದಶಮೀ (1-5-2001)ದಿನದಂದು ಶ್ರೀಮುಖ್ಯಪ್ರಾಣದೇವರ ಹಾಗೂಪಲಿಮಾರು ಮಠದ ಪ್ರಾಚೀನ ಯತಿಗಳ ವೃಂದಾವನಸನ್ನಿಧಿಯಲ್ಲಿ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ವೃದಾವನ ಪ್ರತಿಷ್ಠಾಪನಾಕಾರ್ಯಕ್ರಮವು ಶಾಸ್ತ್ರೀಯ ವಿಧಾನದಿಂದ ನೆರವೇರಿತು.

ವೃಂದಾವನದ ಸುತ್ತ ಮೂರುಭಾಗಗಳಲ್ಲಿ ಕಲ್ಲಿನ ಕಿಡಕಿಗಳನ್ನು ಅಳವಡಿಸಲಾಗಿದೆ, ಮುಂಭಾಗದಲ್ಲಿ ಸುಂದರದ್ವಾರ. ಗರ್ಭಗೃಹದ ಸುತ್ತಲೂ ಸುಂದರ ಶಿಲ್ಪದಿಂದ ಕೂಡಿದ ಕಲ್ಲಿನ ಕಂಬಗಳು,ಕಮಾನುಗಳು ಶೋಭಿಸುವುವು.

ಹೀಗೆ ಸುಂದರ ಪರಿಸರದಲ್ಲಿ ವಿಶಿಷ್ಟರೀತಿಯ ವೃಂದಾವನವನ್ನು ವೀಕ್ಷಿಸಿದ ಭಕ್ತನಿಗಿರಬೇಕಾದ ಅನುಸಂಧಾನ ''ಇದು ಶ್ರೀ ವಿದ್ಯಾಮಾನ್ಯ ತೀರ್ಥರ ಅಂತರ್ಗತ ಮಧ್ವಾಂತರ್ಗತ ಭಗವಂತನ ಮಂದಿರ, ಅದನ್ನು ಶ್ರೀಪಾದರು ಭಗವಂತನನ್ನು ಧ್ಯಾನಿಸುತ್ತ ಶಿರದಮೇಲಿರಿಸಿಕೊಂಡಿಹರು '' ಎಂದು.



# ಈಗಲೂ ಬೆದರಿದ ಭಕುತರ ಕಣ್ಣಿಗೆ ಗೋಚರರಾಗದೆ ಪೊರೆಯುವ ದೊರೆಗಳು

ಸುಮಾರು ಏಳು ದಶಕಗಳಿಗೂ ಅಧಿಕವಾಗಿ ತಮ್ಮ ತಪಶ್ಶಕ್ತಿಯಿಂದ ಶಿಷ್ಯ-ಭಕ್ತ ಕೋಟಿ ಸಂಕಟಗಳನ್ನು ಪರಿಹರಿಸಿದ ಪರಮಹಂಸ ಚಕ್ರವರ್ತಿಗಳು ಶ್ರೀವಿದ್ಯಾಮಾನ್ಯ ತೀರ್ಥರು ಅವರು ವಿಕ್ರಮ ಸಂವತ್ಸರದ ವೈಶಾಖಶುದ್ಧ ಏಕಾದಶೀ ಪವಿತ್ರದಿನದಂದು ಉರುಕ್ರಮ ಶ್ರೀರಾಮನನ್ನು ಸ್ಮರಿಸುತ್ತ ಮಹಾಪ್ರಸ್ಥಾನಗೈದರು.

ಅಲ್ಲಿಯವರೆಗೂ ನಿಶ್ಚಿಂತೆಯಿಂದ ಭಕ್ತ ಶಿಷ್ಯ ಸಮೂಹಕ್ಕೆ ಆಘಾತವಾಯಿತು. ಏಕೆಂದರೆ ಅಲ್ಲಿಯತನಕ ಆ ಸಮೂಹಕ್ಕೊದಗಿದ ದುಗುಡಗಳನ್ನು ಆ ಗುರುಗಳೇ ನಿವಾರಿಸುತ್ತಿದ್ದರು. ಈಗ ಯಾರು? ಎಂಬ ಪ್ರಶ್ನೆ ಸಹಜವಾಗಿತ್ತು. ಆದರೆ ಆ ಗುರುಗಳನ್ನು ಅನನ್ಯವಾಗಿ ಆರಾಧಿಸುತ್ತಿದ್ದ ಆ ಶಿಷ್ಯ-ಭಕ್ತ ಸಮೂಹ ತಮ್ಮ ಆರಾಧ್ಯ ಗುರುಗಳನ್ನು ಬಿಡಲಿಲ್ಲ. ಮನಸಾರೆ ಹಿಡಿದರು. ಅದರ ಫಲವನ್ನು ಪಡೆದರು. ಅದಕ್ಕೆ ಕೆಲವು ಪುಟ್ಟ ಉದಾಹರಣೆಗಳು ಹಲವು.

ಚೆನ್ನೈಯಲ್ಲಿರುವ ಶ್ರೀರಾಮಪ್ರಸಾದ್ ಭಟ್ ಅವರ ಆಪ್ತರೊಬ್ಬರ ಮಗ ಒಂದು ದಿನ ಕಾಣೆಯಾದ. ಅವನು ಕಾಣದಾದಾಗ ಹೆತ್ತವರು ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ. ಏನೊಂದು ಮಾಹಿತಿಯೂ ದೊರಕಲಿಲ್ಲ. ತಂದೆ-ತಾಯಿಗಳು ಬಂಧು ಮಿತ್ರರೆಲ್ಲ ಚಿಂತೆಗೊಳಗಾದರು. ಆ ತಂದೆ ಶ್ರೀರಾಮಪ್ರಸಾದರಲ್ಲಿ ದೂರವಾಣಿ ಮುಖಾಂತರ ತಮ್ಮ ದುಃಖವನ್ನು ತೋಡಿಕೊಂಡರು. ಆಗ ಶ್ರೀರಾಮಪ್ರಸಾದರಿಗೂ ಒಂದು ಬಾರಿ ದಿಗಿಲು ಬಡಿದಂತಾಯಿತು. ಮರುಕ್ಷಣದಲ್ಲಿ ರಾಮಪ್ರಸಾದರು ಆ ಆಪ್ತರಿಗೆ ಅನಿಮುಗೆ ಶ್ರೀ ವಿದ್ಯಾಧೀಶತೀರ್ಥರು ನೀಡಿದ ಹಿರಿಯ ಶ್ರೀಪಾದರ ಫೋಟೋ ಎದುರು ಏಕಾಗ್ರಚಿತ್ತದಿಂದ ಅವರನ್ನೇ ಪ್ರಾರ್ಥಿಸಿ ಅವರೇ ಈ ಸಮಸ್ಯೆಗೆ ಪರಿಹಾರ ನೀಡುವರುಬಿ ಎಂದುತ್ತರಿಸಿದರು. ಅದರಂತೆ ಆ ಆಪ್ತರು ಆ ಕ್ಷಣದಲ್ಲೇ ಆ ಗುರುಗಳ ಭಾವಚಿತ್ರವನ್ನು ಕಣ್ಣೆದುರು ತಂದು, ಕಣ್ಣೀರು ಸುರಿಸುತ್ತಾ, ಬಹಳ ತನ್ಮಯರಾಗಿ ಪ್ರಾರ್ಥಿಸಿದರು. 'ನನ್ನ ಮಗನು ಎಲ್ಲಿರುವನು,

ಸುರಕ್ಷಿತವಾಗಿರುವನೆಂಬ ಮಾಹಿತಿಯಾದರೂ ದೊರಕುವಂತಾಗಲಿ'ಎಂದು ಭಿನ್ನವಿಸಿದರು. ಭಿನ್ನವಿಸಿದಾಗ ಸಮಯ ರಾತ್ರಿ 10 ಘಂಟೆ. 10 ನಿಮಿಷಗಳ ಬಳಿಕ ಒಂದು ದೂರವಾಣಿ ಕರೆ ಬಂದಿತು. ಆಪ್ತರು ಆ ಕರೆಯನ್ನು ಸ್ವೀಕರಿಸಿದರು. ಆ ಕರೆ ಅವರ ಅಕ್ಕರೆಯ ಕುವರನದ್ದಾಗಿತ್ತು. 'ಅವನು ಕಾಣೆಯಾದುದರ ಮಾಹಿತಿ ಅವನು ಮರಳುವುದನ್ನು ಅದು ನೀಡಿತು. ಆಗ ಆ ಆಪ್ತರಿಗೆ ಆದ ಆನಂದ ಇನ್ನಿಲ್ಲದಷ್ಟು. ಅವರು ಆ ಕ್ಷಣವೇ ರಾಮಪ್ರಸಾದರಿಗೆ ದೂರವಾಣಿ ಮಾಡಿ ಈ ವಿಷಯವನ್ನು ತಿಳಿಸಿದರು. ಎಲ್ಲರಿಗೂ ಆನಂದ, ಆಶ್ಚರ್ಯಗಳೆಲ್ಲ ಜೊತೆಯಲ್ಲೇ ಆದವು. ಆ ಆಪ್ತರಿಗಂತೂ ಶ್ರೀ ವಿದ್ಯಾಮಾನ್ಯತೀರ್ಥರ ಮೇಲೆ ಶ್ರದ್ಧೆ ಭಕ್ತಿಗಳು ವೃದ್ಧಿಗೊಂಡವು. ಕಂಗಳು ತೇವಭರಿತವಾದವು.

**ಮೇಲಿನ ವೃತ್ತಾಂತದ ಶ್ರವಣಫಲ** - ಮೊದಲಿನ ಮಹಿಮೆಯ ವೃತ್ತಾಂತವನ್ನು ಶ್ರೀಪಲಿಮಾರು ಮಠಾಧೀಶ ಶ್ರೀ ಶ್ರೀ ವಿದ್ಯಾಧೀಶ ತೀರ್ಥರಿಗೆ ಶ್ರೀರಾಮಪ್ರಸಾದರು ತಿಳಿಸಿದರು. ಶ್ರೀ ವಿದ್ಯಾಧೀಶತೀರ್ಥರು ಮಾನ್ವಿಕ್ಷೇತ್ರಕ್ಕೆ ಹೋಗಿದ್ದಾಗ ಅದ್ಭುತ ಪ್ರಸಂಗವೊಂದು ನಡೆಯಿತು.

ಉಪನ್ಯಾಸದ ಸಂದರ್ಭದಲ್ಲಿ ಶ್ರೀ ವಿದ್ಯಾಧೀಶ ತೀರ್ಥರು ತಮ್ಮ ಗುರುಗಳ ಮಹಿಮೆಯನ್ನು ವರ್ಣಿಸುವ ವೇಳೆ. ಕಾಣೆಯಾದ ಹುಡುಗನ ಮಾಹಿತಿಯನ್ನು ಕೊಡಿಸಿದ ಗುರುಗಳ ಪವಾಡ / ಭಕ್ತರ ಪ್ರಾರ್ಥನಾ ಶಕ್ತಿಯನ್ನು ಅರುಹಿದರು. ಆ ಉಪನ್ಯಾಸವನ್ನು ಕೇಳುತ್ತಿದ್ದರು ಸಾವಿರಾರು ಜನರು. ಉಪನ್ಯಾಸ ಮೊದಲಾದ ಕಾರ್ಯಕ್ರಮಗಳನ್ನು ಪೂರೈಸಿ ಶ್ರೀವಿದ್ಯಾಧೀಶ ತೀರ್ಥರು ಉಡುಪಿಗೆ ಹೊರಟರು. ತಾವು ತಂಗಿದಲ್ಲಿಂದ ಹೊರಟು ಭಕ್ತರೊಬ್ಬರಮನೆಯಲ್ಲಿ ಪಾದಪೂಜೆಯನ್ನು ಸ್ವೀಕರಿಸಿ ವಾಹನದಲ್ಲಿಯೂ ಆಸೀನರಾಗಿದ್ದರು. ಆಗ ಓರ್ವ ಯುವ ಉದ್ಯಮಿ ಭಕ್ತರೊಬ್ಬರು ಅವಸರದಿಂದ ಧಾವಿಸಿ ಬಂದರು. ಬಂದು ಶ್ರೀಪಾದರಿಗೆ ನಮಿಸಿದರು. 15,000/- ರೂಗಳ ಕಾಣಿಕೆಯನ್ನು ನೀಡಿದರು. ಎಲ್ಲರಿಗೂ ಆಶ್ಚರ್ಯ. ಶ್ರೀವಿದ್ಯಾಧೀಶತೀರ್ಥರು ಕೇಳಿದರು ಅಏನಿದು? ಏಕಿದು?ಟಿ ಆಗ ಆ ತರುಣ ಭಕ್ತರು ಅಸ್ವಾಮಿ! ತಾವು ಬೆಳಿಗ್ಗೆ ಉಪನ್ಯಾಸದಲ್ಲಿ ನಿಮ್ಮ ಗುರುಗಳ ಮಹಿಮೆಯನ್ನು ಹೇಳುವಾಗಲೇ ನಾನು ಆ ಗುರುಗಳ ಭಾವಚಿತ್ರವನ್ನು ಸ್ಮರಿಸಿ ಅಇಂದು ರಾಯಚೂರಿನ ಕೋರ್ಟಿನಲ್ಲಿ ಒಂದು ಕೋಟ್ಯಂತರ ರೂಪಾಯಿಗಳ ವಿಷಯದಲ್ಲಿ ವ್ಯಾಜ್ಯ ನಡೆಯುತ್ತಿದೆ. ಅದನ್ನು ಗೆಲ್ಲುವಂತಾಗಬೇಕುಟಿ ಎಂದು ಮನದಲ್ಲೇ ಬಲವಾಗಿ ಪ್ರಾರ್ಥಿಸಿದೆ. ಉಪನ್ಯಾಸದ ಬಳಿಕ ನೇರವಾಗಿ ಕೋರ್ಟಿಗೆ ನಡೆದೆ. ವ್ಯಾಜ್ಯ ನಡೆಯಿತು. ಜಯ ನನ್ನದಾಯಿತು. ಸ್ವಾಮಿ! ಆ ಗುರುಗಳು ಆಶೀರ್ವದಿಸಿ ನನಗೆ ಜಯತಂದಿತ್ತರುಟಿ ಎಂದು ಭಾವೋದ್ವೇಗದಿಂದ ನುಡಿದು ಆ ಕಾಣಿಕೆಯನ್ನರ್ಪಿಸಿದರು. ಇದನ್ನೆಲ್ಲ ವೀಕ್ಷಿಸುತ್ತಿದ್ದ, ಕೇಳುತ್ತಿದ್ದ ಜನಕ್ಕೆ ಆಶ್ಚರ್ಯದ ಜೊತೆ ಗುರುಗಳ ಮಹಿಮೆಯ ಗಾಢತೆ ಮೂಡಿತು. ಆ ಕಾಣಿಕೆ ಶ್ರೀವಿದ್ಯಾಮಾನ್ಯತೀರ್ಥರ ವೃಂದಾವನ ನಿರ್ಮಾಣಕ್ಕೆ ವಿನಿಯೋಗಿಸಲಾಯಿತು. ಆ ಕಾಣಿಕೆಯನ್ನಿತ್ತ ಹಾಗೂ ಆ ಅದ್ಭುತ ಅನುಭವವನ್ನು ಪಡೆದ ಮಹಾಭಕ್ತ ಶ್ರೀ ಭಂಡಾರಿ ಅವರು. ★

# ಶ್ರೀವಿದ್ಯಾಮಾನ್ಯ ತೀರ್ಥರಗುರುತ್ರಯ

## ಕೃಷ್ಣಮಂತ್ರೋಪದೇಶಕರು

### ಉಡುಪಿ ಶ್ರೀಶ್ರೀಪುತ್ತಿಗೆ ಮಠಾಧೀಶರಾದ ಪರಮಪೂಜ್ಯ ಪ್ರಾತಃಸ್ಮರಣೀಯ ಶ್ರೀಶ್ರೀಸುಧೀಂದ್ರತೀರ್ಥಶ್ರೀಪಾದರು

ಜನ್ಮಸ್ಥಳ : ಹೆಜಮಾಡಿ

ದಿನಾಂಕಕ್ರಿಶ 1856 ನಳ ಸಂವತ್ಸರ ಮೀನ ಚೈತ್ರಶುದ್ಧ ಏಕಾದಶೀ ಮಖಾನಕ್ಷತ್ರ

ನಾಮಧೇಯ : ಗೋಪಾಲಕೃಷ್ಣ ಭಟ್ಟ (ಕೃಷ್ಣಉಪಾಧ್ಯಾಯ)

ಪೂರ್ವಾಶ್ರಮ ಮಾತಾಪಿತೃಗಳು : ಶ್ರೀರಂಗನಾಥ ಭಟ್ಟ(ಕುಪ್ಪಾಭಟ್ಟ) ಶ್ರೀಮತಿ ಮಹಾಲಕ್ಷ್ಮೀ ಭಟ್ಟ (ತಿಮ್ಮಕ್ಕ)

ಉಪನಯನ ಸ್ಥಳ : ಸ್ವಗೃಹ

ದಿನಾಂಕ1863(ಗರ್ಭಾಷ್ಟಮ)

ಪ್ರಾಥಮಿಕ ಶಾಸ್ತ್ರಾಭ್ಯಾಸಗುರು : ಶ್ರೀಕೃಷ್ಣಾಪುರ ಮಠಾಧೀಶಶ್ರೀವಿದ್ಯಾಧೀಶತೀರ್ಥಶ್ರೀಪಾದರು

ಸಂನ್ಯಾಸಸ್ವೀಕಾರ ಸ್ಥಳ : ಉಡುಪಿ ಸರ್ವಜ್ಞಸಿಂಹಾಸನ

ದಿನಾಂಕ : 1878 ಬಹುಧಾನ್ಯ ಸಂ|| ಚೈತ್ರ ಶುದ್ಧ ರಾಮನವಮೀ

ಸಂನ್ಯಾನಾಶ್ರಮಗುರುಗಳು ಶ್ರೀಕೃಷ್ಣಾಪುರಮಠದ ಶ್ರೀವಿದ್ಯಾಧೀಶತೀರ್ಥಶ್ರೀಪಾದರು:

ಸಂನ್ಯಾಸ ನಾಮಧೇಯ : ಶ್ರೀಸುಧೀಂದ್ರತೀರ್ಥಶ್ರೀಪಾದರು

ಉನ್ನತವ್ಯಾಸಂಗದಗುರುಗಳು ಶ್ರೀ ಶೀರೂರು ಮಠದ ಶ್ರೀಲಕ್ಷ್ಮೀವಲ್ಲಭತೀರ್ಥಶ್ರೀಪಾದರು

ಶ್ರೀಕೃಷ್ಣಪೂಜಾಪರ್ಯಾಯ ನಾಲ್ಕು

1896 ರಲ್ಲಿ ಮೊದಲ ಪರ್ಯಾಯ

1912 ರಲ್ಲಿ ಎರಡನೆಯ ಪರ್ಯಾಯ

1928 ರಲ್ಲಿ ಮೂರನೆಯ ಪರ್ಯಾಯ

1944 ರಲ್ಲಿ ನಾಲ್ಕನೆಯ ಪರ್ಯಾಯ

ಶ್ರೀಸುಧೀಂದ್ರತೀರ್ಥರಿಂದ ಸಂನ್ಯಾಸ ದೀಕ್ಷೆಪಡೆದ

ಶಿಷ್ಯರು ಶ್ರೀಕೃಷ್ಣಾಪುರ ಮಠದ
ಶ್ರೀವಿದ್ಯಾಪೂರ್ಣತೀರ್ಥರು

ಶ್ರೀಕೃಷ್ಣಾಪುರ ಮಠದ ಶ್ರೀವಿದ್ಯಾರತ್ನತೀರ್ಥರು

ಶ್ರೀ ಪುತ್ತಿಗೆ ಮಠದ ಶ್ರೀಸುಜ್ಞಾನೇಂದ್ರತೀರ್ಥರು

ಶ್ರೀಬಾಳಗಾರು ಮಠದ ಆರ್ಯಅಕ್ಷೋಭ್ಯಮಠದ
ಶ್ರೀ ರಘುಮಾನ್ಯತೀರ್ಥರು

ಶ್ರೀ ಆದಿ ಉಡುಪಿ ಕೆರೆಮಠದ ಶ್ರೀಕೃಷ್ಣದಾಸತೀರ್ಥರು

ಶತಮಾನೋತ್ಸವದ ದಿನಾಂಕ : 22-3-1956

ಹರಿಪದವನ್ನೇರಿದ ದಿನ 1957 ದುರ್ಮುಖ ಸಂ ||
ಫಾಲ್ಗುಣ ಶುದ್ಧ ಪೂರ್ಣಿಮೆ

ವೃಂದಾವನಸ್ಥಳ : ಉಡುಪಿ ಶ್ರೀಕೃಷ್ಣಮಠದ ಹಿಂಭಾಗ

ವೈಶಿಷ್ಟ್ಯ : ನಿರಂತರದಲ್ಲಿ 'ಸ್ವಾಮಿ ಶ್ರೀಕೃಷ್ಣಾಯ ನಮಃ' ಎಂದು ಜಪಿಸುತ್ತಲೇ 101 ವರುಷಗಳನ್ನು ಬಾಳಿದವರು. ತಮ್ಮ ದ್ವಿತೀಯ ಪರ್ಯಾಯದಲ್ಲಿ ವೃಂದಾವನದ ಸುತ್ತಲೂ ಭದ್ರವಾದ ಗೋಡೆಗಳನ್ನು ಕಟ್ಟಿಸಿದರು. ಪಲಿಮಾರು ಮಠದ ಪರ್ಯಾಯಕಾಲದಲ್ಲಿ ಶ್ರೀಕೃಷ್ಣದೇವರ ಮಠದ ಗರ್ಭಗುಡಿಯ ಜೀರ್ಣೋದ್ಧಾರದ ಸಂದರ್ಭದಲ್ಲಿ ಶ್ರೀಸುಧೀಂದ್ರತೀರ್ಥರೇ ಶ್ರೀಕೃಷ್ಣಪ್ರತಿಮೆಯನ್ನು ಎತ್ತಿ ಸಿಂಹಾಸನದಲ್ಲಿಟ್ಟು ಪೂಜಿಸುತ್ತಿದ್ದು, ಮರಳಿ ಸುಮುಹೂರ್ತದಲ್ಲಿ ಅದರ ಪ್ರತಿಷ್ಠೆ ಮಾಡುವಲ್ಲಿ ಮುಂದಾಳುವಾಗಿದ್ದರು. ತಮ್ಮ ಇನ್ನೊಂದು ಪರ್ಯಾಯದಲ್ಲಿ ಮಧ್ವಸರೋವರದ ಮಧ್ಯಮಂಟಪದ ಜೀರ್ಣೋದ್ಧಾರ, ದೇವರೆದುರಿರುವ ಚಪ್ಪರದ ನಿರ್ಮಾಣ ತಾಮ್ರದ ಹೊದಿಕೆ ಮೊದಲಾದ ನವೀಕರಣವನ್ನು ಮಾಡಿದವರು. ನಾಲ್ಕು ಶ್ರೀಕೃಷ್ಣಪೂಜಾಪರ್ಯಾಯವನ್ನು ನೆರವೇರಿಸಿ 'ಯದುಕುಲ ಚಕ್ರವರ್ತಿ' ಎಂಬ ಬಿರುದನ್ನು ಪಡೆದವರು. 1904 ನೇ ಇಸವಿಯ ಶ್ರಾವಣ ಬಹುಳ ದ್ವಿತೀಯಾ ಶ್ರೀರಾಘವೇಂದ್ರಸ್ವಾಮಿಗಳವರ ಆರಾಧನೆಯಂದು ಶ್ರೀಮದನಂತೇಶ್ವರ ದೇವಸ್ಥಾನದಲ್ಲಿ ಅಷ್ಟಮಠಾಧೀಶರು ಸೇರಿ ಆರಂಭಿಸಿದ ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿದಾಗ ಅದರ ಹಿರಿತನವನ್ನು ಹೊಂದಿದವರು ಶ್ರೀಸುಧೀಂದ್ರತೀರ್ಥರು. ತಪಶ್ಶಕ್ತಿಯಿಂದ ಅದ್ಭುತ ಪವಾಡಗಳನ್ನೂ ತೋರಿದವರು. ಮುಗ್ಧಜೀವಿಗಳು. ಕೋಪ ಎಂಬ ದೋಷವಿಲ್ಲದವರು. ತಮ್ಮ ಸಿದ್ಧಿಯನ್ನು ಮಂತ್ರೋಪದೇಶದ ಮೂಲಕ ಶ್ರೀವಿದ್ಯಾಮಾನ್ಯತೀರ್ಥರಲ್ಲಿ ಹರಸಿದವರು.



## ಪ್ರಣವೋಪದೇಶಕರು

### ಉಡುಪಿ ಶ್ರೀಅದಮಾರು ಮಠಾಧೀಶರಾದ ಪರಮಪೂಜ್ಯಪ್ರಾತಃಸ್ಮರಣೀಯ ಶ್ರೀವಿಬುಧಪ್ರಿಯತೀರ್ಥಶ್ರೀಪಾದರು

ಜನ್ಮಸ್ಥಳ : ಕುಂಜಾರುಗಿರಿ ದುರ್ಗಾದೇವಿಯ ಸನ್ನಿಧಿ ಸಮೀಪ ಎಡನೀರು ಗ್ರಾಮ

ಜನ್ಮದಿನ : ಪ್ರಮೋದೂತ ಸಂವತ್ಸರ ಮಿಥುನಮಾಸ ,ಜ್ಯೇಷ್ಠ ಬಹುಳ ಅಮಾವಾಸ್ಯಾ ಮಂಗಳವಾರ ಆರ್ದ್ರಾ ನಕ್ಷತ್ರ

ನಾಮಧೇಯ ; ಕೃಷ್ಣದಾಸಾಚಾರ್ಯ

ಪೂರ್ವಾಶ್ರಮ ಮಾತಾಪಿತೃಗಳು :
ಶ್ರೀರಂಗಾಚಾರ್ಯ ಹಾಗೂ ಶ್ರೀಮತೀ ಪದ್ಮಾವತಿ ಅಮ್ಮ ದಂಪತಿಗಳು

ಯತ್ಯಾಶ್ರಮಸ್ವೀಕಾರ ದಿನ : ಧಾತು ಸಂವತ್ಸರ ಮಾಘ ಶುದ್ಧ ಪೂರ್ಣಿಮಾ ಶುಕ್ರವಾರ

ಸ್ಥಳ : ಶ್ರೀಅದಮಾರು ಮಠ ಅದಮಾರು

ಆಶ್ರಮನೀಡಿದಗುರುಗಳು : ಶ್ರೀಅದಮಾರು ಮಠದ ಶ್ರೀಶ್ರೀವಿಬುಧಾಧಿರಾಜತೀರ್ಥಶ್ರೀಪಾದರು

ಸಕಲಶಾಸ್ತ್ರಾಧ್ಯಯನವನ್ನು ಮಾಡಿಸಿದ ಗುರುಗಳು:
ಶ್ರೀಸೋದೆ ವಾದಿರಾಜಮಠದ
ಶ್ರೀಶ್ರೀವಿಶ್ವಾಧೀಶತೀರ್ಥಶ್ರೀಪಾದರು

ಶ್ರೀವಿಬುಧಪ್ರಿಯತೀರ್ಥರ ವಿದ್ಯಾಶಿಷ್ಯರು
ಶ್ರೀಕಾಣಿಯೂರು ಮಠದ
ಶ್ರೀಶ್ರೀವಿದ್ಯಾಸಮುದ್ರತೀರ್ಥರು

ಶ್ರೀಪೇಜಾವರಮಠದ ಶ್ರೀಶ್ರೀವಿಶ್ವಮಾನ್ಯತೀರ್ಥರು

ಶ್ರೀಪುತ್ತಿಗೆ ಮಠದ ಶ್ರೀಶ್ರೀಸುಜ್ಞಾನೇಂದ್ರತೀರ್ಥರು

ಶ್ರೀವಿಬುಧಪ್ರಿಯರಿಂದ ಯತ್ಯಾಶ್ರಮವನ್ನು ಸ್ವೀಕರಿಸಿ ಅಧ್ಯಯನಗೈದ ಶಿಷ್ಯರು ಶ್ರೀಪಲಿಮಾರು ಮಠದ ಶ್ರೀರಘುಪ್ರಿಯತೀರ್ಥರು

ಶ್ರೀಪಲಿಮಾರುಮಠದ ಶ್ರೀರಘುಮಾನ್ಯತೀರ್ಥರು

ಶ್ರೀಭಂಡಾರಕೇರಿ ಹಾಗೂ ಶ್ರೀಪಲಿಮಾರುಮಠಗಳ

ಶ್ರೀಶ್ರೀವಿದ್ಯಾಮಾನ್ಯತೀರ್ಥರು

ಶ್ರೀಅದಮಾರು ಮಠದ ಶ್ರೀವಿಬುಧಮಾನ್ಯತೀರ್ಥರು

ಶ್ರೀಕೃಷ್ಣಪೂಜಾಪರ್ಯಾಯ : ಮೂರುಬಾರಿ

ಶ್ರೀಹರಿಪದವನ್ನೈದಿದ ದಿನ : ಚೈತ್ರ ಬಹುಳ ತ್ರಯೋದಶಿ ಮಂಗಳವಾರ, ಸ್ಥಳ ತಿರುಪತಿಶ್ರೀನಿವಾಸನ ಸಮ್ಮುಖ

ವೃಂದಾವನವಿರುವ ಕ್ಷೇತ್ರ : ಘಟಿಕಾಚಲ

ವೈಶಿಷ್ಟ್ಯ : ಅಷ್ಟಮಠಾಧೀಶರ ಪೈಕಿ ಅಸದೃಶವಾದ ಲೌಕಿಕ ಹಾಗೂ ವೈದಿಕ ಕಾರ್ಯನಿರ್ವಹಣಾಶಕ್ತಿಯುಳ್ಳವರು, ನ್ಯಾಯ, ವೇದಾಂತಶಾಸ್ತ್ರದಲ್ಲಿ ಅಪ್ರತಿಮ ಪಾಂಡಿತ್ಯಗಳಿಂದ ಕೂಡಿದವರು, ತಮ್ಮ ಪರ್ಯಾಯದ ಅವಧಿಯಲ್ಲಿ ಶ್ರೀಕೃಷ್ಣಮಠದ ಚೌಕಿಭೋಜನಕ್ಕಾಗಿ ವಿಶಾಲ ಶಿಲಾಮಯ ಕಟ್ಟಡವನ್ನು ಕಟ್ಟಿಸಿದವರು.

ಘಟಿಕಾಚಲದಲ್ಲಿರುವ ನರಸಿಂಹ ಹಾಗೂ ಆಂಜನೇಯ ದೇವರ ಬೆಟ್ಟಗಳನ್ನೇರಿ ನಿತ್ಯವೂ 300ಕ್ಕಿಂತ ಅಧಿಕ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿ ಅನೇಕ ವರ್ಷಗಳ ಕಾಲ ಸೇವೆ ಮಾಡಿ ನರಸಿಂಹ ದೇವರಿಗೆ ಸುಂದರವಾದ ಬ್ರಹ್ಮರಥವನ್ನು ಸಮರ್ಪಿಸಿದವರು.

ಸಂಸ್ಕೃತ ಹಾಗು ಶಾಸ್ತ್ರಪ್ರವಚಗಳ ಪುನರುಜ್ಜೀವನಕ್ಕಾಗಿ ಉಡುಪಿಯಲ್ಲಿ ದ್ವೈತವೇದಾಂತ ಸಂಸ್ಕೃತ ಕಾಲೇಜನ್ನು ಸ್ಥಾಪಿಸಿದವರು.

ಕೇವಲ ಕ್ಷೀರವನ್ನು ಸ್ವೀಕರಿಸಿ ಅತಿಕಠಿಣವಾದ ಸೇವೆಯನ್ನು ಸಲ್ಲಿಸಿದ ಮಹಾವಿರಕ್ತರು.

ತಿರುಪತಿಯಾತ್ರೆಯ ಗೈದು ಶ್ರೀನಿವಾಸನ ದರ್ಶನದ ನಂತರ ಅವನ ಮುಂಭಾಗದಲ್ಲಿಯೇ ದೇಹತ್ಯಾಗ ಮಾಡಿ ಅವನ ಪದವನ್ನು ಸೇರಿದರು. 'ಶ್ರೀವಿದ್ಯಾಮಾನ್ಯತೀರ್ಥ'ಎಂಬ ಸಾರ್ಥಕನಾಮಕರಣವನ್ನು ಮಾಡಿ ಅನುಗ್ರಹಿಸಿ ಸಮಾಜಕ್ಕೆ ಒಂದು ಯತಿರಾಜಮಣಿಯನ್ನು ಕೊಡುಗೆಯನ್ನಾಗಿ ನೀಡಿದ ಮಹಾತಪಸ್ವಿಗಳು. ★



## ಸಿದ್ಧಾಂತದೀಕ್ಷಾಪ್ರದರು

### ಶ್ರೀಮದುತ್ತರಾದಿಮಠಾಧೀಶರಾದ ಪರಮಪೂಜ್ಯ ಪ್ರಾತಃಸ್ಮರಣೀಯ ಶ್ರೀಶ್ರೀಸತ್ಯಧ್ಯಾನತೀರ್ಥಶ್ರೀಪಾದರು.

ಜನ್ಮಸ್ಥಳ : ಚಿಕ್ಕೋಡಿ

ಜನ್ಮ ದಿನ : 24-12-1872 ಅಂಗಿರಾ ಸಂವತ್ಸರದ ಮಾರ್ಗಶೀರ್ಷ ಕೃಷ್ಣನವಮೀ ಮಂಗಳವಾರ

ನಾಮಧೇಯ : ಕೊರ್ಲಹಳ್ಳಿ ಸೇತುರಾಮಾಚಾರ್ಯ

ಪೂರ್ವಾಶ್ರಮ ಮಾತಾಪಿತೃಗಳು : ಶ್ರೀಕೊರ್ಲಹಳ್ಳಿ ಜಯಾಚಾರ್ಯ ಹಾಗೂ ಶ್ರೀಮತೀ ಕೃಷ್ಣಾಬಾಯಿ ದಂಪತಿಗಳು

ಯತ್ಯಾಶ್ರಮಸ್ವೀಕಾರದ ದಿನ :ಕ್ರಿ. ಶಿ 18 ಮಾಘ ಶುದ್ಧ ಸಮಪ್ತಮೀ

ಸ್ಥಳ : ಆಂಧ್ರಪ್ರದೇಶದ ರಾಜಮಹೇಂದ್ರಿ ಸಮೀಪದ ವೀರವಲ್ಲಿ ಗ್ರಾಮ

ನೀಡಿದ ಗುರುಗಳು ಶ್ರೀಮದುತ್ತರಾದಿಮಠಾಧೀಶ ಶ್ರೀಶ್ರೀಸತ್ಯಜ್ಞಾನತೀರ್ಥಶ್ರೀಪಾದರು

ಯತ್ಯಾಶ್ರಮನಾಮಧೇಯ :ಶ್ರೀಸತ್ಯಧ್ಯಾನತೀರ್ಥ

ಶ್ರೀಸತ್ಯಧ್ಯಾನತೀರ್ಥರ್ರ ವಿದ್ಯಾಶಿಷ್ಯರು ಶ್ರೀಭಂಡಾರಕೇರಿಮಠದ ಶ್ರೀಶ್ರೀವಿದ್ಯಾಮಾನ್ಯ ತೀರ್ಥರು

ಶ್ರೀಶಿರೂರುಮಠದ ಶ್ರೀಶ್ರೀಲಕ್ಷ್ಮೀಂದ್ರತೀರ್ಥರು

ಶ್ರೀಕುಂದಾಪುರವ್ಯಾಸರಾಜಮಠದ ಶ್ರೀಶ್ರೀ ಲಕ್ಷ್ಮೀಂದ್ರ ತೀರ್ಥರು

ಶ್ರೀಸುಬ್ರಹ್ಮಣ್ಯಮಠದ ಶ್ರೀವಿದ್ಯಾಸಿಂಧುತೀರ್ಥರು

ಶ್ರೀಬಾಳಗಾರು ಮಠದ ಶ್ರೀಶ್ರೀರಘುಮಾನ್ಯತೀರ್ಥರು

ಶ್ರೀಕೂಡ್ಲಿ ಅಕ್ಷೋಭ್ಯತೀರ್ಥಮಠದ ಸ್ವಾಮಿಗಳು

ಶ್ರೀಸಾಗರಕಟ್ಟೆ ಸ್ವಾಮಿಗಳು

ಶ್ರೀಗೋಸ್ವಾಮಿ ಕೃಷ್ಣದೀಕ್ಷಿತ ಮಹಾರಾಜ್ ಶ್ರೀವಲ್ಲಭಾಚಾರ್ಯ ಸಂಸ್ಥಾನ

ಶ್ರೀಕಿನ್ನಾಳ ಜಯಾಚಾರ್ಯರು(ಮುಂದೆ

ಶ್ರೀಸತ್ಯಜ್ಞಾನತೀರ್ಥರು)

ಅಲ್ಲದೆ ನೂರಾರು ಘನವಿದ್ವಾಂಸರು

ಶ್ರೀಪಾಂಡುರಂಗಿ ಜಯಾಚಾರ್ಯರು( ಮುಂದೆ ಶ್ರೀಸತ್ಯಪ್ರಜ್ಞತೀರ್ಥರು)

ಹರಿಪದವನ್ನೈದಿದ ದಿನ : 1943 ರ ವೃಷ ಸವತ್ಸರದ ಚೈತ್ರ ಶುದ್ಧ ಅಷ್ಟಮೀದಿನ

ಸ್ಥಳ :ಪಂಢರಪುರ

ವೃಂದಾವನ ಕ್ಷೇತ್ರ : ಪಂಢರಪುರ

ವೈಶಿಷ್ಟ್ಯ ; ತಾವು ಬಾಲ್ಯದಲ್ಲಿಯೇ ತಮ್ಮ ಪರಮಗುರುಗಳ ಗುರುಗಳಿಂದ ( ಕೊರ್ಲಹಳ್ಳಿಯ ಶ್ರೀಸತ್ಯವೀರ ತೀರ್ಥರಿಂದ) ಭಾವೀಪೀಠಾಧೀಪತ್ಯದ ಸೂಚನೆಯನ್ನು ಪಡೆದು ಅನುಗ್ರಹೀತರಾದವರು. ಪೂರ್ವಾಶ್ರಮದಲ್ಲಿ ತಮ್ಮ ತೀರ್ಥರೂಪರೂ, ಯತ್ಯಾಶ್ರಮದಲ್ಲಿ ತಮ್ಮ ಪರಮಗುರುಗಳಾದ ಶ್ರೀಸತ್ಯಧೀರತೀರ್ಥರಿಂದ ವಿಶೇಷಪ್ರಭಾವವನ್ನು ಹೊಂದಿ ಪ್ರಕಾಶಿಸಿದವರು. ವಿದ್ಯಾಪಕ್ಷಪಾತಿಗಳು, ದೀನಜನರಲ್ಲಿ ದಯಾವಂತರು. ಪರವಾದಿ ಭಯಂಕರರು. ಪರವಾದಿಗಳನ್ನು ವಾಕ್ಯಾರ್ಥದಲ್ಲಿ ಸೋಲಿಸಿ ಅವರನ್ನು ಸನ್ಮಾನಿಸಿದವರು. ಆಸೇತು ಹಿಮಾಹಾಚಲದಲ್ಲಿ ದ್ವೈತವಿಜಯದ ಝೇಂಕಾರವನ್ನು ಮಾಡಿಸಿದವರು. ಅಸಾಧ್ಯವೆನಿಸಿದ ಯೋಗ್ಯಕಾರ್ಯಗಳನ್ನು ಸಾಧ್ಯವನ್ನಾಗಿಸಿ ತೋರುವ ಸಮರ್ಥರು. ವ್ಯವಹಾರಕುಶಲರು, ಅಹರ್ನಿಶಿ ಪಾಠ ಪ್ರವಚನಶೀಲರು, ರಜತ ನಾಣ್ಯ ಪಾತ್ರಗಳನ್ನು ತೂರಿ ತೂರಿ ದಾನ ಮಾಡಿದವರು. ಯಥೇಷ್ಟ ಅನ್ನ ದಾತೃಗಳು, ಧರ್ಮರಕ್ಷಣದೀಕ್ಷರು. ಅಧರ್ಮನಿವಾರಕರು. ಸಕಲಶಾಸ್ತ್ರಪ್ರವೀಣರು. ತಮ್ಮಲ್ಲಿರುವ ಅಗಾಧವಾದ ಸಿದ್ಧಾಂತರಸವನ್ನು ಶ್ರೀವಿದ್ಯಾಮಾನ್ಯತೀರ್ಥರಿಗೆ ಧಾರೆಯೆರೆದು ಅವರನ್ನು ಸಾರ್ಥಕನಾಮಕರನ್ನಾಗಿಸಿದವರು. ಅಂತಹ ಶಿಷ್ಯಶ್ರೇಷ್ಠರ ಚಟುವಟಿಕೆಗಳಿಂದ ತಮ್ಮ ಧ್ಯಾನವನ್ನು ಸತ್ಯವನ್ನಾಗಿಸಿ ಕೊಂಡ ಸಾರ್ಥಕನಾಮರು. ಸುಮಾರು ಮೂರು ದಶಕಗಳಿಗಿಂತಲೂ ಅಧಿಕವಾಗಿ ಶ್ರೀಉತ್ತರಾದಿಮಠದ ಪೀಠವನ್ನಾಳಿದವರು. ಅನೇಕ ಕೃತರಚನೆಗಳಮೂಲಕ ಎಂದೆಂದೂ ಅಮರರಾಗಿರುವವರು.

ಅವರ ಕೃತಿಗಳು

ಸಿವಿಲ್ ಸೂಟ್

ಭೇದಪರಾಣ್ಯೇವ ಖಲು ಬ್ರಹ್ಮಸೂತ್ರಾಣಿ

ಚಂದ್ರಿಕಾ ಮಂಡನಂ

ಗೀತಾಪ್ರತಿಪದಾರ್ಥಚಂದ್ರಿಕಾ

- ಇತ್ಯಾದಿ



# ಯತಿಶಿಷ್ಯಪರಂಪರೆ

## ಶ್ರೀಪೇಜಾವರ ಮಠಧೀಶರಾದ ಶ್ರೀವಿಶ್ವೇಶತೀರ್ಥಶ್ರೀಪಾದರು

ಜನ್ಮಸ್ಥಳ : ರಾಮಕುಂಜ (ಸುಬ್ರಹ್ಮಣ್ಯಸಮೀಪ)

ಜನ್ಮದಿನಾಂಕ : 27-41931 ಪ್ರಜಾಪತಿ ಸಂವತ್ಸರ ವೈಶಾಖ ಶುದ್ಧ ಸೋಮವಾರ.

ನಾಮಧೇಯ : ವೇಂಕಟರಮಣಾಚಾರ್ಯ

ಪೂರ್ವಾಶ್ರಮಮಾತಾಪಿತೃಗಳು ಶ್ರೀ ಎಂ ನಾರಾಯಣಚಾರ್ಯ ಹಾಗೂ ಶ್ರೀಮತೀ ಕಮಲ ಅಮ್ಮ

ಪ್ರಾಥಮಿಕ ವಿದ್ಯಾಭ್ಯಾಸ : ರಾಮಕುಂಜ ನಂಸ್ಕೃತಪಾಠಶಾಲೆ

ಉಪನಯನದಿನ :1938 (ಗರ್ಭಾಷ್ಟಮ) ದ ಸುಮೂರ್ತ

ಸ್ಥಳ: ಸ್ವಗೃಹ

ಸಂನ್ಯಾಸಾಶ್ರಮಸ್ವೀಕಾರ ದಿನ : ಬಹುಧಾನ್ಯ ಸಂವತ್ಸರದ ಮಾರ್ಗಶಿರ ಶುದ್ಧ ಪಂಚಮೀ(3-12-1938) ಶುಕ್ರವಾರ

ನೀಡಿದ ಗುರುಗಳು : ಶ್ರೀಪೇಜಾವರಮಠದ 31 ನೆಯ ಯತಿಗಳಾದ ಶ್ರೀವಿಶ್ವಮಾನ್ಯತೀರ್ಥಶ್ರೀಪಾದರು

ಸ್ಥಳ : ಹಂಪೆಯ ಯಂತ್ರೋದ್ಧಾರಪ್ರಾಣದೇವರ ಸನ್ನಿಧಿ

ನಾಮಧೇಯ : ಶ್ರೀವಿಶ್ವೇಶತೀರ್ಥ

ಶಾಸ್ತ್ರಾಭ್ಯಾಸಪ್ರಾರಂಭ : ಅಡ್ಡೆ ವೇದವ್ಯಾಸಾಚಾರ್ಯ ಮೊದಲಾದ ವಿದ್ವಾಂಸರು

ಉನ್ನತ ಶಾಸ್ತ್ರಾಭ್ಯಾಸ ಗುರುಗಳು : ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು

ಪಾಠ ಪ್ರಾರಂಭದ ಸ್ಥಳ :ಶ್ರೀಎರಕಿಮಠ

ನಿರಂತರ ಪಾಠದ ಸ್ಥಳ :ಶ್ರೀಭಂಡಾರಕೇರಿಮಠ ಭಂಡಾರಕೇರಿ

ಸುಧಾಮಂಗಲ ಮಹೋತ್ಸವ :1951 ರಲ್ಲಿ

ಸ್ಥಳ: ಉಡುಪಿ ಶ್ರೀಪೇಜಾವರಮಠದಲ್ಲಿ

ಪುತ್ತಿಗೆ ಮಠದ ಶತಾಯುಷಿ ಶ್ರೀಪಾದರ ಸನ್ನಿಧಿಯಲ್ಲಿ

ಸುಧಾಮಂಗಲಗಳು : 21 ಬಾರಿ

ಶ್ರೀಕೃಷ್ಣಪೂಜಾಪರ್ಯಾಯ :ನಾಲ್ಕು ಬಾರಿ

ವೈಶಿಷ್ಟ್ಯ : 1943 ಫೆಬ್ರುವರಿಯಲ್ಲಿ ಶ್ರೀಮಾಧ್ವ ರಾದ್ಧಾಂತ ಸಂವರ್ಧಕ ಸಭೆಯ ಮೊದಲ ಅಧಿವೇಶನದ ಮೊದಲ ಅಧ್ಯಕ್ಷತೆ. ಗುರುಗಳ ಪ್ರತೀ ಮಾಧ್ವರಾದ್ಧಾಂತ ಸಂವರ್ಧಕ ಸಭೆಯ ಅಧ್ಯಕ್ಷರು. ತಮ್ಮ 21 ಸುಧಾಮಂಗಲಗಳಲ್ಲೂ ಗುರುಗಳ ಉಪಸ್ಥಿತಿ. ವಿದ್ಯಾರ್ಥಿದೆಸೆಯಲ್ಲೇ 'ಸಾಂಬವಿಜಯ' ಎಂಬ ಸಂಸ್ಕೃತಕಾವ್ಯದ ರಚನೆ. 4-1-1953 ರಲ್ಲಿ ಅಖಿಲಭಾರತಮಾಧ್ವಮಹಾಮಂಡಲ ಸ್ಥಾಪನೆ. ತತ್ವಜ್ಞಾನ ಸಮ್ಮೇಲನ. 28-7-1956 ರಂದು ಟೀಕಾಚಾರ್ಯರ ಪುಣ್ಯದಿನದಂದು ಬೆಂಗಳೂರು ಮಹಾನಗರದಲ್ಲಿ ಪೂರ್ಣಪ್ರಜ್ಞವಿದ್ಯಾಪೀಠದ ಸ್ಥಾಪನೆ, ಗುರುಗಳ ವಿಶ್ವಕಲ್ಯಾಣಯಾಗ ಮೊದಲಾದ ಸಂದರ್ಭಗಳಲ್ಲಿ ಪರಮತೀಯ ಘನವಿದ್ವಾಂಸರೊಡನೆ ವಾಕ್ಯಾರ್ಥ ಮಾಡಿ ನಿರುತ್ತರರನ್ನಾಗಿಸಿ ಪ್ರಶಂಸೆಗಳಿಗೆ, 1968 ರಲ್ಲಿ ವಿಶ್ವ ಹಿಂದೂ ಪರಿಷತ್ತಿನ ಸಮ್ಮೇಳನದ ಮುಂದಾಳುತನ, 3-2-19 ರಂದು ವಿದ್ಯಾಗುರುಗಳಿಗೆ ಶ್ರೀಕೃಷ್ಣಪೂಜಾ ಸೌಭಾಗ್ಯರೂಪ ಕಾಣಿಕೆ ಪ್ರದಾನ. 4-10-1978 ರಲ್ಲಿ ಬದರೀಕ್ಷೇತ್ರದಲ್ಲಿ ಅನಂತಮಠಸ್ಥಾಪನೆ. 26-6-83 ರಂದು ತಿರುಮಲ ಕ್ಷೇತ್ರದಲ್ಲಿ ಶ್ರೀಪೇಜಾವರ ಮಠದ ಉದ್ಘಾಟನೆ. 10-10-89 ರಂದು ಬದರಿಯಲ್ಲಿ ಶ್ರೀಮಧ್ವಪ್ರತಿಷ್ಠೆ, 27 10-90 ರಂದು ಗುರುಗಳನ್ನು ಸೇರಿಕೊಂಡು 9 ಯತಿಗಳೊಂದಿಗೆ ಅಯೋಧ್ಯಾಕರಸೇವೆಯಲ್ಲಿ ಭಾಗವಹಿಸುವಿಕೆ. ಗೃಹಬಂಧನ. 20-2-94 ರಂದು ಗುರುಗಳಿಗೆ ರಜತತುಲಾಭಾರ, 'ಶ್ರೀವಿದ್ಯಾಮಾನ್ಯಪ್ರಶಸ್ತಿ' ಯ ವ್ಯವಸ್ಥೆ. 14-10-96 ರಂದು ಹರಿದ್ವಾರದಲ್ಲಿ ಮಧ್ವಾಶ್ರಮದ ಉದ್ಘಾಟನೆ, 26-3 97ರಲ್ಲಿ ಪಾಜಕದಲ್ಲಿಯ ಗಣಿಗಾರಿಕೆಯ ವಿರುದ್ಧ ಬೆಂಗಳೂರಿನಲ್ಲಿ ನಡೆಸಿದ ಪ್ರತಿಭಟನೆಯ ನೇತೃತ್ವ, 15-4-2000ರಂದು ಗುರುಗಳ ಅಮೃತ ಮಹೋತ್ಸವಾಚರಣೆ. ಗುರುಗಳ ಅಸ್ವಸ್ಥೆಯ ಪರಿಹಾರಕ್ಕಾಗಿ ಪೂರ್ಣಪ್ರಯತ್ನ, ಹಿರಿಯಮಗನಂತೆ ಗುರುಗಳ ಶುಶ್ರೂಷೆ, 14-5-2000 ರಂದು ಗುರುಗಳ ಮಹಾಪ್ರಸ್ಥಾನದ ಸಂದರ್ಭದಲ್ಲಿ ತೀರ್ಥಪ್ರದಾನ. ಅತ್ಯಂತ ನಿರಂತರದ ವಿರಹ ವೇದನೆಯಿಂದ ಗುರುಗಳನ್ನು ಪಲಿಮಾರಿಗೆ ಬೀಳ್ಕೊಡುವಿಕೆ. 17-1-2000 ರಂದು ರಾಜಾಂಗಣ ಸಭಾಭವನದ ಉದ್ಘಾಟನೆ. ಅನೇಕ ಅಪಘಾತಗಳಲ್ಲಿ ಪಾರಾಗಿ ಬಂದ ಇವರ ಕುರಿತು ಶ್ರೀವಿದ್ಯಾಮಾನ್ಯ ತೀರ್ಥರು'ವಿಶ್ವೇಶತೀರ್ಥರು ಪ್ರಹ್ಲಾಗನಂತೆ ಭಗವಂತನಿಗೆ ಬೇಕಾದವರು 'ಎಂದು ಉದ್ಗರಿಸಿದ್ದರು. ಪೇಜಾವರ ಶ್ರೀಪಾದರ ಅಸದೃಶ , ಅಸಾಧಾರಣ ಧಾರ್ಮಿಕ,ಸಮಾಜಿಕ, ಕಾರ್ಯಕ್ರಮಗಳನ್ನು ಸಮಾಜ ಬಹು ಚೆನ್ನಾಗಿ ಕಂಡಿದೆ. ಅಷ್ಟೇ ಅಲ್ಲದೆ ಎಣಿಕೆಗೆ ಎಟುಕದಷ್ಟು ಇರುವ ಮಹಾಮಹಿಮರ ಕಾರ್ಯಕ್ರಮುಗಳನ್ನು ಇಲ್ಲಿ ಬಿತ್ತರಿಸುವುದು ಅಸಾಧ್ಯವೆನಿಸಿದೆ. ಕಾರಣ, ಗ್ರಂಥ ಬಾಹುಲ್ಯಭಯ. ★

★★★

## ಉಡುಪಿ ಶ್ರೀಅದಮಾರು ಮಠಾಧೀಶರಾದ ಶ್ರೀವಿಬುಧೇಶತೀರ್ಥಶ್ರೀಪಾದರು

ಶ್ರೀಅದಮಾರು ಮಠದ ದ್ವಂದ್ವಮಠವಾದ ಶ್ರೀಪಲಿಮಾರು ಮಠದ ಶ್ರೀರಘುಮಾನ್ಯತೀರ್ಥ ಶ್ರೀಪಾದರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಶ್ರೀವಿಬುಧೇಶತೀರ್ಥರು, ಗುರುಗಳ ಚೈತನ್ಯವನ್ನುತಮ್ಮಲ್ಲಿ ಅಳವಡಿಸಿಕೊಂಡ ಮಹಾನ್‌ಕ್ರಾಂತಿಕಾರಿಗಳು. ಶ್ರೀರಘುಮಾನ್ಯತೀರ್ಥರು ಆರಂಭಿಸಿದ ಉಡುಪಿ ಸಂಸ್ಕೃತಮಹಾಪಾಠಶಾಲೆಯ ಬೃಹತ್‌ಕಟ್ಟಡವನ್ನು ಪೂರ್ಣಗೊಳಿಸಿ ಗುರುಗಳಿಗೆ ತಕ್ಕ ಸಮರ್ಥಶಿಷ್ಯರೆಂದೆನಿಸಿದವರು. ನ್ಯಾಯ-ಮೀಮಾಂಸಾ -ವೇದಾಂತಾದಿ ಶಾಸ್ತ್ರಗಳಲ್ಲಿ ತಳಸ್ಪರ್ಶಿಪಾಂಡಿತ್ಯವುಳ್ಳವರು. ಉಪನಿಷತ್ತು-ಗೀತಾಪ್ರಸ್ಥಾನಾದಿಗಳಲ್ಲಿ ವಿಶೇಷ ಪರಿಣತರು.

ಭಾರತೀಯತೆಯಲ್ಲಿ ಅತ್ಯುನ್ನತ ಅಭಿಮಾನವನ್ನು ಹೊಂದಿದ ಇವರು 'ಶ್ರೀಪೂರ್ಣಪ್ರಜ್ಞ ಎಜುಕೇಷನ್ ಕೌನ್ಸಿಲ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ 'ಅದಮಾರು' ಎಂಬ ತಮ್ಮ ಹಳ್ಳಿಯಿಂದ ಆರಂಭಿಸಿ ರಾಜಧಾನಿ ದೆಹಲಿಯವರೆಗೆ ಹತ್ತಾರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದವರು. ಭಾರತೀಯ ವಿಜ್ಞಾನಿಗಳಿಗಾಗಿ ಬೆಂಗಳೂರಿನ ಬಳಿ ದೇವನಹಳ್ಳಿಯಲ್ಲಿ ಸುಮಾರು 500ಕೋಟಿ ರೂಗಳ ವೆಚ್ಚದಲ್ಲಿ ಪೂರ್ಣಪ್ರಜ್ಞ ವಿಜ್ಞಾನಸಂಶೋಧನ ಮಂದಿರವನ್ನು ಸ್ಥಾಪಿಸಿದವರು.

ಶ್ರೀವಿದ್ಯಾಮಾನ್ಯತೀರ್ಥರಲ್ಲಿ ಅಪಾರವಾದ ಅಸದೃಶ ಭಕ್ತಿ ಗೌರವ ವಿಶ್ವಾಸವುಳ್ಳವರು. ಅದಮಾರುಗ್ರಾಮದ ಅದಮಾರುಮಠದಲ್ಲಿ ತಮ್ಮ ಉತ್ತರಾಧಿಕಾರಿಗಳಿಗೆ ಶ್ರೀವಿದ್ಯಾಮಾನ್ಯತೀರ್ಥರಿಂದ ಶಾಸ್ತ್ರರಬೇತಿ ನೀಡುವ ನೆಪದಿಂದ ಆದರ್ಶಪ್ರಾಯವಾದ ಉತ್ತಮ 'ಆದರ್ಶಗುರುಕುಲ'ವನ್ನು ಪೋಷಿಸಿದ ಧರ್ಮರಕ್ಷಣ ದೀಕ್ಷರು.

ಶ್ರೀವಿದ್ಯಾಮಾನ್ಯತೀರ್ಥರು ಯುವಯತಿಚತುಷ್ಟಯಕ್ಕೆ ಸಕಲ ಶಾಸ್ತ್ರಪಾಠಗಳನ್ನು ಮಾಡಿ ನಡೆಸಿದ ಹನ್ನೆರಡನೆಯ ಯಶಸ್ವೀ ಶ್ರೀಮದನುವ್ಯಾಖ್ಯಾನನ್ಯಾಯಸುಧಾಮಂಗಲ

ಮಹೋತ್ಸವಕ್ಕೆ ಮೂಲಸ್ಫೂರ್ತಿ ಹಾಗೂ ಬೆನ್ನೆಲುಬಿನಂತಿದ್ದವರು.

ವಿಶೇಷವೆಂದರೆ ಶ್ರೀವಿದ್ಯಾಮಾನ್ಯತೀರ್ಥರು ಶ್ರೀಪಲಿಮಾರುಮಠದ ಅಧಿಪತಿಗಳೂ ಆಗಲು ಪ್ರಮುಖಪಾತ್ರವಹಿಸಿದವರು. ಈ ಪೀಠಾಧಿಪತ್ಯದ ವಿಷಯದಲ್ಲಿ ಎಂತಹ ವಿಷಮಪರಿಸ್ಥಿತಿ ತೋರಿದರೂ ಅದನ್ನೆಲ್ಲ ನಿವಾರಿಸಿದ ಧೀರರು. ಅಲ್ಲದೇ ಶ್ರೀಪಲಿಮಾರುಮಠದ ಶ್ರೀವಿದ್ಯಾಧೀಶತೀರ್ಥರಿಗೆ ಆಶ್ರಮದೀಕ್ಷೆಯನ್ನಿತ್ತು ಅನುಗ್ರಹಿಸಿದವರು. ★

# ಶ್ರೀಅದಮಾರುಮಠಾಧೀಶರಾದ ಶ್ರೀಶ್ರೀವಿಶ್ವಪ್ರಿಯತೀರ್ಥಶ್ರೀಪಾದರು

ಜನ್ಮಸ್ಥಳ : ಮೂಡುಬಿದರೆ(ಪುತ್ತಿಗೆ)

ದಿನಾಂಕ : 30-6-1958

ನಾಮಧೇಯ : ರಾಘವೇಂದ್ರ ಮುಚ್ಚಿಂತಾಯ

ಪೂರ್ವಾಶ್ರಮ ಮಾತಾಪಿತೃಗಳು : ಶ್ರೀಗುರುರಾಜ ಮುಚ್ಚಿಂತಾಯ ಹಾಗೂ ಶ್ರೀಮತೀ ಲಕ್ಷ್ಮೀ

ಉಪನಯನಸ್ಥಳ : ತಿರುಮಲ ಶ್ರೀನಿವಾಸನಸನ್ನಿಧಿ

ದಿನಾಂಕ :1966 ಗರ್ಭಾಷ್ಟಮ

ಪ್ರಾಥಮಿಕವಿದ್ಯಾಭ್ಯಾಸ : ಪುತ್ತಿಗೆ ಶಾಲೆ ಹಾಗೂ ಪಲಿಮಾರು ಶಾಲೆ

ಸಂನ್ಯಾಸಾಶ್ರಮ ಸ್ವೀಕಾರ :1-6-1972

ಸ್ಥಳ :ಉಡುಪಿ ಸರ್ವಜ್ಞಾಚಾರ್ಯರ ಸಿಂಹಾಸನ

ಗುರುಗಳು :ಶ್ರೀ ಅದಮಾರುಮಠದ ಶ್ರೀವಿಬುಧೇಶತೀರ್ಥಶ್ರೀಪಾದರು

ನಾಮಧೇಯ ಶ್ರೀವಿಶ್ವಪ್ರಿಯತೀರ್ಥಶ್ರೀಪಾದರು.

ಶಾಸ್ತ್ರಾಭ್ಯಾಸಪ್ರಾರಂಭ

:ಶ್ರೀವಿದ್ಯಾಮಾನ್ಯತೀರ್ಥರಿಂದ ತಾತ್ಪರ್ಯ ನಿರ್ಣಯ 1974 ಶ್ರೀ ಪಿ. ಲಕ್ಷ್ಮೀನಾರಾಯಣಶರ್ಮರಿಂದ ಮಧ್ವವಿಜಯ

ಉನ್ನತವ್ಯಾಸಂಗಗುರು

:ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು

ಸ್ಥಳ :ಅದಮಾರು ಗ್ರಾಮದ ಶ್ರೀಅದಮಾರು ಮಠ

ಚಂದ್ರಿಕಾಮಂಗಳ ಸ್ಥಳ :ಬಾಣತೀರ್ಥ ಶ್ರೀಅದಮಾರು ಮಠ

ದಿನಾಂಕ1983ರ ಆಶ್ವಯುಜ ಶುದ್ಧ ದಶಮೀ

ನ್ಯಾಯಸುಧಾಮಂಗಲ ಸ್ಥಳ :ಅದಮಾರುಮಠ ಅದಮಾರು

ದಿನಾಂಕ 12-1-1984

ತಾವು ಪಾಠ ಮಾಡಿದ ನ್ಯಾಯಸುಧಾಮಂಗಲಗಳೂ 4

ಪರ್ಯಾಯ: 1 ಬಾರಿ

ವೈಶಿಷ್ಟ್ಯ : ಗುರುಗಳ ವಿಶೇಷ ಅನುಗ್ರಹಪಾತ್ರರು. ಉಚ್ಚತಮ ತಲಸ್ಪರ್ಶಿಸಕಲಶಾಸ್ತ್ರಪಂಡಿತರು, ಆಕರ್ಷಕ ಸೈದ್ಧಾಂತಿಕ ಪ್ರವಚನಕಾರರು. ವಿದ್ಯಾಗುರುಗಳಂತೆ ತಾವು, ಸೋದಾಕ್ಷೇತ್ರದಲ್ಲಿ ಪೂರ್ಣ ಚಾತುರ್ಮಾಸ್ಯದ ಸಮಯ ಕಾಷ್ಠಮೌನೋಪವಾಸವ್ರತವನ್ನು ಆಚರಿಸಿದವರು. ಆ ಸಂದರ್ಭದಲ್ಲಿ ಅಕ್ಷರಲಕ್ಷಶ್ರೀಕೃಷ್ಣಮಂತ್ರವನ್ನು ಜಪಿಸಿ ಭಗವಂತನನ್ನು ಒಲಿಸಿದವರು. ನಾರಾಳಮಠದ ಭೂತರಾಜರ ಸನ್ನಿಧಿಯಲ್ಲಿ ಒಂದು ಸಪ್ತಾಹದವರೆಗೆ ಉಪವಾಸದಿಂದ ಮನ್ಯುಸೂಕ್ತಪುರಶ್ಚರಣೆಯನ್ನು ಆಚರಿಸಿದವರು. ನಿರ್ಮಾಲ್ಯವಿಸರ್ಜನವನ್ನು ಮಾಡುವ ಮೂಲಕ ಅವನ ಅತ್ಯಂತ ಸುಂದರವಾದ ರೀತಿಯಲ್ಲಿ ವಿವಿಧರೂಪಗಳಿಂದ ಶ್ರೀಕೃಷ್ಣನನ್ನು ಅಲಂಕರಿಸಲು ಅಭ್ಯಸಿಸಿದ ಅತ್ಯಂತ ಸಿದ್ಧಹಸ್ತರು, ಕಲಾಭಿಜ್ಞರು. ಶ್ರೀವಿಬುಧೇಶತೀರ್ಥರ ಆದೇಶದಂತೆ ಎರಡು ವರ್ಷಕಾಲ ಶ್ರೀಕೃಷ್ಣನ ಪೂಜಾಪರ್ಯಾಯವನ್ನು ನಡೆಸಿದ ಮಹಾಭಾಗ್ಯಶಾಲಿಗಳು. ತಮ್ಮ ಪರ್ಯಾಯ ಕಾಲದಲ್ಲಿ ಸುಮಾರು 500 ದಿನಗಳಿಗೆ ಕಡಿಮೆಯಿಲ್ಲದೆ ಮಹಾಭಾರತ ಪ್ರವಚನವನ್ನು ನೆರವೇರಿಸಿದವರು. ತಮ್ಮ ಅಸ್ಖಲಿತ ಸುಮಧುರ ವಾಣಿಯಿಂದ ಭಾಗವತ, ರಾಮಾಯಣ, ಮಹಾಭಾರತ, ಹರಿಕಥಾಮೃತಸಾರ ಮೊದಲಾದಿ ಗ್ರಂಥಗಳ ಕುರಿತಾದ ಪ್ರವಚನಗಳಿಂದ ಬಹುಸಂಖ್ಯಾಕ ಭಕ್ತರನ್ನು ಆಕರ್ಷಿಸಿ ಧರ್ಮಮಾರ್ಗಿಗಳಾಗುವಂತೆ ಮಾಡುವ ಕ್ರಾಂತಿಕಾರಿಗಳು. ನಿರಂತರ ಪಾಠ ಪ್ರವಚನ ರತರು, ಸದಾಚಾರಿಗಳು, ಉದಾರಿಗಳು, ಮಿತಮಧುರಭಾಷಿಗಳು, ವಿದ್ಯಾಗುರುಗಳ ಅಪೇಕ್ಷೆಯಂತೆ ಅವರಿಂದ ನಿರ್ಮಿಸಲ್ಪಟ್ಟ ವಜ್ರಕಿರೀಟವನ್ನು ಶ್ರೀಕೃಷ್ಣನಿಗೆ ಅರ್ಪಿಸಿ, ತೊಡಿಸಿದ ಭಾಗ್ಯಶಾಲಿಗಳು, ತಮ್ಮ ವಿದ್ಯಾಗುರುಗಳು ಕೊನೆಯದಾಗಿ ಭಾಗವಹಿಸಿದ ಸುಧಾಮಂಗಳವನ್ನು ನೆರವೇರಿಸಿದ ಮಹಾಸೌಭಾಗ್ಯ ಪುರುಷರು. 8 ಬಾರಿ ಆಸೇತು ಹಿಮಾಚಲಯಾತ್ರೆಯನ್ನು ಮಾಡಿದವರು. ಯತ್ಯಾಶ್ರಮಗುಣಾಕರರು. ★



## ಶ್ರೀಪುತ್ತಿಗೆ ಮಠಾಧೀಶರಾದ ಶ್ರೀಸುಗುಣೇಂದ್ರತೀರ್ಥಶ್ರೀಪಾದರು

ಜನ್ಮಸ್ಥಳ :ಮಾಣಿಯೂರು ಗ್ರಾಮ

ದಿನಾಂಕ :1961

ನಾಮಧೆಯ :ಹಯವದನಾಚಾರ್ಯ

ಪೂರ್ವಾಶ್ರಮಮಾತಾಪಿತೃಗಳು :ಶ್ರೀಮಾಣಿಯೂರು ಗೋವಿಂದಾಚಾರ್ಯ ಶ್ರೀಮತೀ ಕಮಲಾ ಆಚಾರ್ಯ

ಉಪನಯನಸ್ಥಳ :ಸ್ವಗೃಹ

ದಿನಾಂಕ : 1971

ಸಂನ್ಯಾಸಾಶ್ರಮ ಸ್ವೀಕಾರ :1974

ಸ್ಥಳ: ಉಡುಪಿ

ಗುರುಗಳು :ಶ್ರೀಸುಜ್ಞಾನೇಂದ್ರತೀರ್ಥರು

ನಾಮಧೇಯ :ಶ್ರೀಸುಗುಣೇಂದ್ರತೀರ್ಥಶ್ರೀಪಾದರು

ಶಾಸ್ತ್ರಾಭ್ಯಾಸ ಪ್ರಾರಂಭ :1975

ಗುರುಗಳು ಶಿ:ೄವಿದ್ಯಾಮಾನ್ಯತೀರ್ಥಶ್ರೀವಾದರು

ಸ್ಥಳ : ಶ್ರೀಅದಮಾರು ಮಠ ಅದಮಾರು

ಚಂದ್ರಿಕಾ ಮಂಗಳ :ಶ್ರೀಬಾಣತೀರ್ಥ ಮಠ.

ದಿನ 1983ರ ಆಶ್ವಯುಜ ಶುದ್ಧ ದಶಮೀ

ನ್ಯಾಯಸುಧಾಮಂಗಲ:12-1-1984

ಸ್ಥಳ ಶ್ರೀಅದಮಾರು ಮಠ ಅದಮಾರು

ತಾವು ಪ್ರವಚನಮಾಡಿದ ನ್ಯಾಯಸುಧಾಮಂಗಲ : 4

ಪರ್ಯಾಯ: 2 ಬಾರಿ

ವೈಶಿಷ್ಟ್ಯ: ಗುರುವಾತ್ಸಲ್ಯಪಾತ್ರರು, ಉತ್ತಮಶಾಸ್ತ್ರ ವಿದ್ವಾಂಸರು, 2 ಬಾರಿ ಶ್ರೀಕೃಷ್ಣಪೂಜಾಪರ್ಯಾಯವನ್ನು ನೆರವೇರಿಸಿದವರು, ಧರ್ಮಕ್ರಾಂತಿಗಾಗಿ 'ಸುಗುಣ ಮಾಲಾ' ಎಂಬ ಮಾಸ ಪತ್ರಿಕೆಯನ್ನು ಹೊರಡಿಸಿದವರು, ಒರಿಸ್ಸಾ ರಾಜ್ಯದಲ್ಲಿ ಸಂಸ್ಕೃತ ಮಹಾಪಾಠ ಶಾಲೆಗೆ ಸುಗುಣೇಂದ್ರಸ್ವಾಮಿ ಸಂಸ್ಕೃತವಿದ್ಯಾಲಯ ಎಂಬ ನಾಮಕರಣ ಮಾಡುವಷ್ಟು ಪ್ರಭಾವವನ್ನು ಬೀರಿದವರು. ತಮ್ಮ ದ್ವಿತೀಯ ಪರ್ಯಾಯ ಕಾಲದಲ್ಲಿ ಲಕ್ಷಗೀತಾ ಲೇಖನ ಯಜ್ಞವನ್ನು ಯೋಜಿಸಿದವರು. ಬೃಹತ್ ಗೀತಾಮಂದಿರವನ್ನು ನಿರ್ಮಿಸಿದವರು. ★

## ಶ್ರೀಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು

ಜನ್ಮಸ್ಥಳ: ಶಿಬರೂರು

ದಿನಾಂಕ :14-5-1956

ನಾಮಧೇಯ :ರಮೇಶ ತಂತ್ರಿ

ಪೂರ್ವಾಶ್ರಮ ಮಾತಾಪಿತೃಗಳು : ಶಿಬರೂರು ಶ್ರೀಹಯಗ್ರೀವತಂತ್ರಿಗಳು ಹಾಗೂ ಶ್ರೀಮತೀ ಕಸ್ತೂರಿ ಅಮ್ಮ ದಂಪತಿಗಳು

ಉಪನಯನ ಸ್ಥಳ :ತಿರುಮಲ ಶ್ರೀನಿವಾಸನ ಸನ್ನಿಧಿ

ಸಮಯ :ಹತ್ತನೆಯ ವಯಸ್ಸು

ಪ್ರಾಥಮಿಕ ವಿದ್ಯಾಭ್ಯಾಸ :ಶಿಬರೂರು ಕಡಂದಲೆ ಪ್ರಾಥಮಿಕ ಶಾಲೆ

ಸಂನ್ಯಾಸಾಶ್ರಮಸ್ವೀಕಾರ

ಸ್ಥಳ :ಅದಮಾರು ಗ್ರಾಮದ ಶ್ರೀಅದಮಾರು ಮಠ

ಗುರುಗಳು :ಶ್ರೀಪಲಿಮಾರು ಮಠದ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು

ಶ್ರೀ ಅದಮಾರು ಮಠದ ಶ್ರೀವಿಬುಧೇಶತೀರ್ಥಶ್ರೀಪಾದರು

ಶಾಸ್ತ್ರಾಭ್ಯಾಸಾರಂಭ :19 ರಲ್ಲಿ ಶ್ರೀವಿದ್ಯಾಮಾನ್ಯತೀರ್ಥರಿಂದ

ಉನ್ನತವ್ಯಾಸಂಗದ ಗುರು:ಶ್ರೀವಿದ್ಯಾಮಾನ್ಯ ತೀರ್ಥಶ್ರೀಪಾದರು

ಸ್ಥಳ :ಅದಮಾರು ಗ್ರಾಮದ ಶ್ರೀಅದಮಾರು ಮಠ ಚಂದ್ರಿಕಾಮಂಗಳ ಸ್ಥಳ ಬಾಣತೀರ್ಥ ಶ್ರೀಅದಮಾರು ಮಠ

ದಿನಾಂಕ :1983 ಆಶ್ವಯುಜ ಶುದ್ಧ ದಶಮೀ

ನ್ಯಾಯಸುಧಾಧ್ಯಯನದ ಮಂಗಲಸ್ಥಳ :ಅದಮಾರು ಗ್ರಾಮದ ಶ್ರೀ ಅದಮಾರು ಮಠ

ದಿನಾಂಕ :12-1-1984

ತಾವೇ ಪಾಠಮಾಡಿದ ನ್ಯಾಯಸುಧಾಮಂಗಲಗಳು: 4

ವೈಶಿಷ್ಟ್ಯ :- ಗುರುಗಳ ವಿಶೇಷಾನುಗ್ರಹಪಾತ್ರರು,

ನ್ಯಾಯ,ವ್ಯಾಕರಣ, ವೇದಾಂತ, ಮೀಮಾಂಸಾ, ಜ್ಯೋತಿಷ್ಯ, ಧರ್ಮಶಾಸ್ತ್ರಾದಿ ಸಕಲಶಾಸ್ತ್ರಗಳಲ್ಲೂ ತಲಸ್ಪರ್ಶಿಪಂಡಿತರು, ಸರ್ವಜನಮನೋಹರರು, ಸದಾ ಮಂದಸ್ಮಿತವದನರು, ಗುರುಗಳಿಗೆ ತಕ್ಕ ಶಿಷ್ಯರೆನಿಸಿದ ಸದಾ ಪಾಠ ಪ್ರವಚನಶೀಲರು, ಯುವ ತಪಸ್ವಿಗಳು, ಗುರುಗಳಂತೆ 17-5-1997 ರಿಂದ 3-7-1997 ರ ವರೆಗೆ 48 ದಿನಗಳ ಕಾಲ ಬದರೀನಾಥಕ್ಷೇತ್ರದಲ್ಲಿ ಕಾಷ್ಠಮೌನೋಪವಾಸ ವ್ರತವನ್ನಾಚರಿಸಿ ಶ್ರೀ ವಿದ್ಯಾಮಾನ್ಯತೀರ್ಥರ ಸಾರ್ಥಕ ಶಿಷ್ಯರೆನಿಸಿದವರು, ಆ ಸಂದರ್ಭದಲ್ಲಿ ವಿಶೇಷವಾಗಿ ಅಕ್ಷರಲಕ್ಷ ವೇದವ್ಯಾಸ ಮಂತ್ರ ಜಪವನ್ನಾಚರಿಸಿದವರು. 1990 ರಲ್ಲಿ ಬದರಿಯಲ್ಲಿ ,1996 ರಲ್ಲಿ ತಿರುಮಲ ಕ್ಷೇತ್ರದಲ್ಲಿ ಚಾತುರ್ಮಾಸ್ಯ ಸಂಕಲ್ಪಗೈದು ಆಗಲೂ ಮೌನವ್ರತವನ್ನಾಚರಿಸಿ ಪಾಠ ಪ್ರವಚನ ಮಾಡಿದವರು, ರಾಮಾಯಣ, ಭಾಗವತ, ಮಹಾಭಾರತಾದಿ ಗ್ರಂಥಗಳ ಉಪನ್ಯಾಸಗಳ ಮೂಲಕ ಎಲ್ಲ ನಾಡಿನ ಭಕ್ತರನ್ನು ತಮ್ಮೆಡೆಗೆ ಸೆಳೆದು ಅವರನ್ನೆಲ್ಲ ಧರ್ಮಮಾರ್ಗಿಗಳನ್ನಾಗಿಸಿದ ಪ್ರವರ್ತಕರು, ಗುರುಗಳ ಆದೇಶದಂತೆ ಪಶ್ಚಿಮಕರಾವಳಿಯ ಉಡುಪಿ ಜಿಲ್ಲೆಯ ಆಸುಪಾಸಿನಲ್ಲಿ ಉತ್ತಮ ಸಂಸ್ಕಾರ ಹಾಗೂ ಶಾಸ್ತ್ರೀಯ ತತ್ವಗಳ ಪ್ರಸಾರಕ್ಕಾಗಿ ಪಲಿಮಾರು ಗ್ರಾಮದ ಪಲಿಮಾರು ಮಠದಲ್ಲಿ 'ಯೋಗದೀಪಿಕಾ' ಎಂಬ ಗುರುಕುಲದ ಸಂಸ್ಥಾಪಕರು, ಗುರುಗಳಾದೇಶದಂತೆ ಪ್ರತಿವರುಷವೂ ಪಲಿಮಾರಿನ ಪ್ರಾಣದೇವರ ಸನ್ನಿಧಿಯಲ್ಲಿ ಹನುಮಜ್ಜಯಂತೀ ಉತ್ಸವವನ್ನಾಚರಿಸುವವರು, ಸಹಸ್ರಕೋಟಿ ರಾಮನಾಮಲೇಖನ ಯಜ್ಞ ಹಾಗೂ ಸಹಸ್ರಕೋಟಿಕೃಷ್ಣಮಂತ್ರ ಜಪಯಜ್ಞಗಳನ್ನು ಆಯೋಜಿಸಿದವರು, ಗಂಗಾತಟದ ಹರಿದ್ವಾರದಲ್ಲಿ ಗುರುಗಳೊಂದಿಗೆ ಚಾತುರ್ಮಾಸ್ಯ ಸಂಕಲ್ಪಗೈದು ಅಲ್ಲಿಯೇ ಮೂವತ್ತೆರಡು ಅಡಿ ಎತ್ತರದ ಆಂಜನೆಯನ ವಿಗ್ರಹವನ್ನು ಸ್ಥಾಪಿಸುವ ಮಹತ್ಸಂಕಲ್ಪಕರು "ತಿದ್ದಲು ಅವಕಾಶವಿಲ್ಲದಂತೆ ಇರುವ ಶಿಷ್ಯರು "ಎಂಬ ಹೆಗ್ಗಳಿಕೆಯನ್ನು ಗುರುಗಳಿಂದಲೇ ಪಡೆದ ಸಾರ್ಥಕಶಿಷ್ಯರು. ಶ್ರೀನಿವಾಸನ ಅತ್ಯಂತ ಭಕ್ತರಾಗಿ ಮೆಟ್ಟಿಲೋತ್ಸವಾದಿ ಟಿ.ಟಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ನ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಜನಮನವನ್ನು ಸೂರೆಗೊಂಡ ಧರ್ಮಕ್ರಾಂತಿ ಕಾರಿಪುರುಷರು, ಹತ್ತಾರು ಬಾರಿ ಆಸೇತುಹಿಮಾಚಲ ಸಂದರ್ಶನವನ್ನು ಮಾಡಿದವರು. ತಮ್ಮ ಜೀವನವನ್ನು ಪಾವನಗೊಳಿಸಿದ ಮಹಾಗುರುಗಳ ಪ್ರಾಣೋತ್ಕ್ರಮಣದ ಸಮಯದಲ್ಲಿ ಹರಿಪಾದೋದಕವನ್ನು ಗುರುಗಳವದನದಲ್ಲಿ ಸಮರ್ಪಿಸಿದ ಮಹಾಭಾಗ್ಯಶಾಲಿ ವರಕುಮಾರರು. ಶತಮಾನದ ಅಸದೃಶಯತೀಶ್ವರರಾಗಿ ಬಾಳಿದ ಗುರುಗಳಿಗೆ ಅಸದೃಶ ಅತ್ಯದ್ಭುತ ವೃಂದಾವನವನ್ನು ನಿರ್ಮಿಸಿ ಸ್ಥಾಪಿಸಿದ ಶಿಷ್ಯೋತ್ತಮರು. ತಮ್ಮ ಮೊದಲನೆಯ ಶ್ರೀಕೃಷ್ಣಪೂಜಾಪರ್ಯಾಯದ ಅವಧಿಯಲ್ಲಿ ಗುರುಗಳಂತೆ ತಾರತಮ್ಯೋಪೇತ ತಂತ್ರಸಾರೋಕ್ತ ಕ್ರಮದಲ್ಲಿ ಪೂಜೆ, ಅನ್ನದಾನ, ಸರ್ವಮೂಲ ಪಾಠ-ಪ್ರವಚನ, ವಿಶೇಷವಾಗಿ ಶ್ರೀಕೃಷ್ಣನಿಗೆ ಗುರುಸ್ಮರಣಾರ್ಥವಾಗಿ ಸಂಪೂರ್ಣವಜ್ರ ಕವಚ ಸಮರ್ಪಣಾ ಕಾರ್ಯಕ್ರಮಗಳ ಸಂಕಲ್ಪಗೈದವರು. ಹರಿವಾಯು ಗುರು ಅನುಗ್ರಹದಿಂದ, ಹಾಗೂ ಭಕ್ತರ ಸಹಕಾರದಿಂದ ಆ ಸೇವೆ ಪೂರ್ಣಗೊಳ್ಳುವ ವಿಶ್ವಾಸವನ್ನು ಹೊಂದಿದವರು. ಸತ್ಕರ್ಮಾನುಷ್ಠಾನರತರು, ಸಂನ್ಯಾಸಧರ್ಮಸಂಪನ್ನರು, ಧರ್ಮಶಾಸ್ತ್ರ ವೇದಾಂತ,ಜ್ಯೋತಿಷ್ಯ. ಪೌರೋಹಿತ್ಯಾದಿಕ್ಷೇತ್ರಗಳಲ್ಲಿ ನಿಷ್ಣಾತ ಸದಾಚಾರಿ ವಿದ್ವಾಂಸರಿಗೆ ಶ್ರೀರಾಜರಾಜೇಶ್ವರ ತೀರ್ಥ ಪ್ರಶಸ್ತಿಯನ್ನಿತ್ತು, ಪ್ರೋತ್ಸಾಹಿಸುವವರು. ★

## ಶ್ರೀಭಂಡಾರಕೇರಿಮಠಾಧೀಶರಾದ ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದರು

ಜನ್ಮಸ್ಥಳ :ಸೂರಾಲ್ ಗ್ರಾಮ

ದಿನಾಂಕ : 6-7-54 ಜಯ ಸಂವತ್ಸರ

ಪೂರ್ವಾಶ್ರಮ ನಾಮಧೇಯ :ಹರೇಕೃಷ್ಣ ಭಟ್

ಮಾತಾಪಿತೃಗಳು :ಶ್ರೀಪೂರ್ಣಭಟ್ ಹಾಗೂ ಶ್ರೀಮತೀ ವೇದವತಿ ಅಮ್ಮ

ಉಪನಯನ :ಯೋಗ್ಯಮುಹೂರ್ತದಲ್ಲಿ ಸ್ವಗೃಹದಲ್ಲಿ

ಪ್ರಾಥಮಿಕ ವಿದ್ಯಾಭ್ಯಾಸ :5ನೇ ತರಗತಿಯವರೆಗೆ ಸೂರಾಲ್ ಶಾಲೆ.

68-69ರಲ್ಲಿ ಉಡುಪಿಯಲ್ಲಿ ಸಂಸ್ಕೃತ, ವೇದಾಧ್ಯಯನ

ಪೂರ್ಣಪ್ರಜ್ಞವಿದ್ಯಾಪೀಠ ಪ್ರವೇಶ :1970

ಸಂನ್ಯಾಸಾಶ್ರಮ ಸ್ವೀಕಾರ :ಭಂಡಾರಕೇರಿ ಗ್ರಾಮದ ಭಂಡಾರಕೇರಿ ಮಠ

ಗುರುಗಳು :ಶ್ರೀಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು

ನ್ಯಾಯಸುಧಾದಿಗ್ರಂಥಗಳನ್ನು ಬೋಧಿಸಿದ ಗುರುಗಳು :ಶ್ರೀಶ್ರೀವಿದ್ಯಾಮಾನ್ಯತೀರ್ಥರು

ಚಂದ್ರಿಕಾಮಂಗಳಲ:1983 ರ ಆಶ್ವಯುಜ ಶುದ್ಧ ದಶಮೀ

ಸ್ಥಳ :ಬಾಣತೀರ್ಥ

ನ್ಯಾಯಸುಧಾ ಮಂಗಲ: 12-1-1984

ಸ್ಥಳ : ಶ್ರೀಅದಮಾರು ಮಠ ಅದಮಾರು

ಸುಧಾಮಂಗಲ: ಎರಡು ಬಾರಿ

ವೈಶಿಷ್ಟ್ಯ :- ಗುರುಗಳಂತೆ ಲೌಕಿಕವನ್ನು ಬಯಸದವರು. ಸದಾ ಗ್ರಂಥಾವಲೋಕನ, ಅಧ್ಯಾಪನಾದಿಗಳಲ್ಲೇ ರತರಾಗಿರುವವರು. ಪೂರ್ವಾಶ್ರಮದಲ್ಲಿ ನ್ಯಾಯಸುಧಾ ಗ್ರಂಥಾಧ್ಯಯನದವರೆಗೆ ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಶಾಸ್ತ್ರತರಬೇತಿ ಪಡೆದವರು. ಎಲ್ಲ ಗ್ರಂಥಗಳನ್ನು ಆಮೂಲಾಗ್ರವಾಗಿ ತಲಸ್ಪರ್ಶಿಯಾಗಿ ಅಭ್ಯಸಿಸಿ ಅನುಸಂಧಾನಿಸುವವರು. ವಿಶೇಷವಾಗಿ ಭಾಗವತ-ಗೀತೆ, ಉಪನಿಷತ್ತಿಗಳ ಪ್ರವಚನಗಳನ್ನು ವಾಯು ಜೀವೋತ್ತಮತ್ವ

ಪರವಾಗಿ ಸಪ್ರಮಾಣವಾಗಿ ನೀಡುವವರು. ಇದರಿಂದ ಗುರುಗಳ ವಿಶೇಷ ಅನುಗ್ರಹಕ್ಕೆ ಪಾತ್ರರಾದವರು. ಅಶ್ರುತಪ್ರತಿಭಾನ್ವಿತರು. ಜ್ಞಾನ, ಭಕ್ತಿ, ವಿರಕ್ತಿಗಳೇ ಮೂರ್ತಿಮತ್ತಾದವರು. ಇವೆಲ್ಲದಕ್ಕೂ ಕಲಶಪ್ರಾಯವಾಗಿ ಗುರುಶ್ರೀವಿದ್ಯಾಮಾನ್ಯತೀರ್ಥರು ಇವರ ಭಗವದ್ಗೀತೆಯ ವಾಯುಜೀವೋತ್ತಮತ್ವ ಪರವಾದ ಅರ್ಥವನ್ನು ಸಭೆಯೊಂದರ ಉಪನ್ಯಾಸದಲ್ಲಿ ಅನುವಾದಿಸಿದರು. ಮಾಧ್ವರಾದ್ಧಾಂತ ಸಂವರ್ಧಕ ಸಭೆಯ ಅಂಗವಾಗಿ ಪ್ರತಿವರುಷವೂ 'ಶ್ರೀವಿದ್ಯಾಮಾನ್ಯಪ್ರತಿಭಾ ಪುರಸ್ಕಾರ' ಎಂಬ ಪ್ರಶಸ್ತಿಯನ್ನು ನೀಡಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ವಿದ್ಯಾಪಕ್ಷಪಾತಿಗಳು. 1996 ರಿಂದ ಪ್ರತಿವರುಷವೂ ವೇದವ್ಯಾಸಜಯಂತೀ ಉತ್ಸವವನ್ನು ಜ್ಞಾನಯಜ್ಞ ಸಪ್ತಾಹವನ್ನು ಒಂದೊಂದು ನಗರಗಳಲ್ಲಿ ನಡೆಸುವವರು. 1995 ರಲ್ಲಿ ಗುರುಗಳಿಂದ 'ಭಾಗವತಾಶ್ರಮ ಪ್ರತಿಷ್ಠಾನ' ಎಂಬ ಸಂಸ್ಥೆಯ ಸ್ಥಾಪನೆಯನ್ನು ಮಾಡಿರಿದರು. ಅನೇಕ ಊರುಗಳಲ್ಲಿ ವಿದ್ಯಾಂಸರುಗಳಿಂದ ಭಾಗವತ ಸಪ್ತಾಹಗಳನ್ನು ಮಾಡಿಸಿ ತಮ್ಮ ಸಂಸ್ಥೆಯ ಮುಖಾಂತರ ಸಂಭಾವನೆಗಳನ್ನು ನೀಡುವ ಉತ್ತಮ ಪ್ರಾಯೋಜಕರು. ಮೈಸೂರಿನಲ್ಲಿ ಭಾಗವತಕೇಂದ್ರ ವನ್ನು, ಬೆಂಗಳೂರಿನ ಗಿರಿನಗರದಲ್ಲಿ ಭಾಗವತ ನೀಕೇತವನ್ನು ಸ್ಥಾಪಿಸಿರುವರು. ಭಂಡಾರಕೇರಿಯ ಮೂಲಮಠದಲ್ಲಿ ಗುರುಗಳ ಮೃತ್ತಿಕಾ ವೃಂದಾವನವನ್ನು ಸ್ಥಾಪಿಸಿದವರು. ಶ್ರೀಸುರೋತ್ತಮ ತೀರ್ಥರ ವೃಂದಾವನ ಮಂಟಪವನ್ನು ಜೀರ್ಣೋದ್ಧಾರಗೊಳಿಸಿ ಶಿಲಾಮಯವಾಗಿ ನಿರ್ಮಿಸದವರು.

ಇವರ ಕೃತಿಗಳು ಅನೇಕ ಅನುಪಮ

ಗುರಿಯಿಲ್ಲದ ದಾರಿ.  
ಹರಿತೀರ್ಥವಿವೇಕ  
ಅಹಂ ಬ್ರಹ್ಮಾಸ್ಮಿ  
ಗೀತಾಸಾರಸೌರಭ  
ಗೀತಾರ್ಥವೈಭವ  
ವಾಸುದೇವನಲ್ಲಿ ಗೀತಾಕಟಾಕ್ಷ  
ಹರಿತತ್ವಚೂಡಾಮಣಿ  
ಭಾಗವತ ಬೆಳಗಿದ ವೇದಾಂತದೀಪಾವಳಿ  
ಗಾಯತ್ರಿಯಲ್ಲಿ ಅಧ್ಯಾತ್ಮದೀಪ  
ಗಾಯತ್ರೀಹೃದಯ  
ಗಾಯತ್ರೀ ಕಂಡ ರಾಮಾಯಣ  
ಗಾಯತ್ರಿಯಲ್ಲಿ ವ್ಯಾಸಚಿಂತನ  
ಭಗವಂತ ನಿರ್ಗುಣ ನಿರಾಕಾರನೇ  
ಭಾಗವತ ಸಾರಸಂದೇಶ  
ಗೀತೆಯಲ್ಲಿ ಪ್ರಾಣತತ್ವದ ಮಹಿಮೆ  
ವಚನಪ್ರಸೂನಮಾಲಾ  
ಗಾಯತ್ರೀ ಭಾವತಿಲಕ ಸಂಸ್ಕೃತ



# ಶ್ರೀಪೇಜಾವರಮಠದ ಕಿರಿಯ ಶ್ರೀಪಾದರಾದ ಶ್ರೀಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರು

ಜನ್ಮಸ್ಥಳ :ಕೆಮ್ರಾಲ್ (ಮಂಗಳೂರು ತಾಲೂಕು)

ದಿನಾಂಕ: 3-3-64

ನಾಮಧೇಯ :ದೇವೀದಾಸ ಭಟ್

ಪೂರ್ವಾಶ್ರಮಮಾತಾಪಿತೃಗಳು :ಶ್ರೀಅಂಗಡಿಮಾರು ಕೃಷ್ಣಭಟ್ಟ ಹಾಗೂ ಶ್ರೀಮತೀ ಯಮುನಮ್ಮ

ಉಪನಯನ :ಸ್ವಗೃಹ

ದಿನಾಂಕ: ಎಂಟನೆ ವಯಸ್ಸಿನಲ್ಲಿ

ಪ್ರಾಥಮಿಕ ವಿದ್ಯಾಭ್ಯಾಸ :ಭಾರತಮಾತಾ ಹಿರಿಯ ಪ್ರಾಥಮಿಕಶಾಲೆ ಪುನರೂರು

ಶಾಸ್ತ್ರಾಭ್ಯಾಸ :ಸಂಸ್ಕೃತಮಹಾಪಾಠಶಾಲೆ ಉಡುಪಿ 1977-1978

ಅದಮಾರು ಗುರುಕುಲ ಪ್ರವೇಶ ಹಾಗೂ ಅಧ್ಯಯನ:1979ರಿಂದ 1984

ಉನ್ನತ ಶಾಸ್ತ್ರಾಭ್ಯಾಸ , ಕಾಲೇಜ್ ಅಧ್ಯಯನ :ಎಸ್.ಎಮ್. ಎಸ್.ಪಿ. ಸಂಸ್ಕೃತಮಹಾಪಾಠಶಾಲೆ ವೇದಾಂತವಿದ್ವತ್

ಪೂರ್ಣಪ್ರಜ್ಞಸಂಧ್ಯಾಕಾಲೇಜಿನಲ್ಲಿ ಬಿ.ಕಾಮ್.

ಸಂನ್ಯಾಸಾಶ್ರಮಸ್ವೀಕಾರ :21-2-1988

ಸ್ಥಳ :ಪೇಜಾವರಗ್ರಾಮದ ಶ್ರೀಪೇಜಾವರ ಮಠ

ಗುರುಗಳು :ಶ್ರೀಪೇಜಾವರ ಮಠದ ಶ್ರೀವಿಶ್ವೇಶತೀರ್ಥಶ್ರೀಪಾದರು

ನ್ಯಾಯಸುಧಾದಿ ಪಾಠಮಾಡಿದ ಗುರುಗಳು: ಶ್ರೀವಿಶ್ವೇಶ ತೀರ್ಥ ಶ್ರೀಪಾದರು

ನ್ಯಾಯಸುಧಾಮಂಗಳ ಸ್ಥಳ :ತಿರುಮಲ ಶ್ರೀನಿವಾಸಸನ್ನಿಧಿ

ವೈಶಿಷ್ಟ್ಯ- ಪೂರ್ವಾಶ್ರಮದಲ್ಲಿ ಆಟ, ಓಟ,ಈಜು,ಸೈಕಲ್, ವ್ಯಾಯಾಮ, ಯೋಗ, ಸಂಗೀತ, ಮಿಮಿಕ್ರಿ, ನಾಟಕಾದಿ ಸಕಲಕಲೆಗಳಲ್ಲಿ ತಮ್ಮ

ಪ್ರತಿಭೆಯನ್ನು ತೋರಿದವರು. ಪೂರ್ವಾಶ್ರಮದಲ್ಲಿ ಶ್ರೀವಿದ್ಯಾಮಾನ್ಯತೀರ್ಥರ ಅನುಗ್ರಹದೃಷ್ಟಿ ಪಥದಲ್ಲಿ ಸಾಗಿ ಶಾಸ್ತ್ರಾಭ್ಯಾಸಗೈದು ಅವರ ವಿಶೇಷ ಅನುಗ್ರಹವನ್ನು ಹೊಂದಿದವರು. ವಿಶೇಷವಾಗಿ ಯತ್ಯಾಶ್ರಮಧರ್ಮಾನುಷ್ಠಾನ, ನಿರಂತರ ಅಧ್ಯಯನ ಅಧ್ಯಾಪನಗಳಿಂದ ಉತ್ತಮ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು. ಇವರ ಅನದೃಶ ಮಹತ್ವವೆಂದರೆ ಚತುರ್ವೇದಾಧ್ಯಯನ . ಶ್ರೀವಿದ್ಯಾಮಾನ್ಯತೀರ್ಥರ ಅದಮಾರು ಗುರುಕುಲದಲ್ಲಿ ಶ್ರೀರಾಜಣ್ಣ ಅವರಿಂದ ಋಗ್ವೇದಾಧ್ಯಯನ, ಶ್ರೀವೇಂಕಟಸುಬ್ಬಾವಧಾನಿ ಗಳಿಂದ ಯಜುರ್ವೇದಾಧ್ಯಯನ, ಶ್ರೀಮಟ್ಟಾಡಿ ರಾಜಗೋಪಾಲಾ ಚಾರ್ಯ ರಿಂದ ಸಾಮ ವೇದಾಧ್ಯಯನ, ಶ್ರೀಕಾಪು ಹಯಗ್ರೀವಾ ಚಾರ್ಯರಿಂದ ಅಥರ್ವವೇದಾಧ್ಯಯ ನಗಳನ್ನು ಪೂರೈಸಿದ ನಂತರ ಅವುಗಳನ್ನು ನಿರಂತರ ಪಾರಮಾಡುತ್ತಿರುವ ಚತುರ್ವೇದವಿದ್ವಾಂಸರು. ಅಲ್ಲದೆ ದಿನಕ್ಕೆ ಸಮಯವ್ಯರ್ಥಮಾಡದೆ ಸುಮಾರು 13 ಘಂಟೆಗಳಿಗೆ ಕಡಿಮೆಯಿಲ್ಲದೆ ರಾಮಶಬ್ದಮೊದಲ್ಗೊಂಡು ನ್ಯಾಯಸುಧಾದಿ ಗ್ರಂಥಗಳ ಪಾಠಗಳನ್ನೂ ಮಾಡುವವರು. ಸಾಯಂಕಾಲದ ಹೊತ್ತು ತುಳಸೀಸಸ್ಯಗಳ ಪೋಷಣೆಯಲ್ಲಿ ರತರು. ಧರ್ಮಕ್ರಾಂತಿಯ ಉದ್ದೇಶದಿಂದ ಪಾವನಸಂಸತ್, ಹರಿಭಜನಾ ಸಂಸತ್, ಮಂಥನ ವೇದಿಕೆ ಎಂಬ ಸಂಸ್ಥೆಗಳನ್ನು ಸ್ಥಾಪಿಸಿದವರು. ಪ್ರಾಚೀನ ಶಾಸ್ತ್ರಪಾಠ ಪರಂಪರೆಯ ರಕ್ಷಣೆಗಾಗಿ 'ಪ್ರಹ್ಲಾದ ಗುರುಕುಲ' ಎಂಬ ಗುರುಕುಲವನ್ನು ಸ್ಥಾಪಿಸಿದವರು. ಈ ಗುರುಕುಲದಲ್ಲಿ ಈಗ 18 ಪುಟ್ಟ ಬಾಲಕರಿಗೆ ಶಾಸ್ತ್ರಪ್ರವೇಶ ಹಾಗೂ ಶಾಲಾಭ್ಯಾಸ ಗಳನ್ನು ಮಾಡಿಸುತ್ತಿರುವರು. ಜನಜಾಗ್ರತಿಗಾಗಿತೀರ್ಥಕ್ಷೇತ್ರಗಳಿಗೆ ಪಾದಯಾತ್ರೆಯನ್ನು ಹಮ್ಮಿಕೊಂಡ ಸಾಹಸಿಗಳುಧರ್ಮ ಜಾಗೃತಿಗಾಗಿ 'ಆಚಾರ-ವಿಚಾರ'ಎಂಬ ವಾರ್ಷಿಕಪತ್ರಿಕೆಯ ಪ್ರಕಾಶಕರು 1993 ರ ಶ್ರೀಪುತ್ತಿಗೆ ಶ್ರೀಪಾದರ ಪರ್ಯಾಯದಲ್ಲಿ ಶ್ರೀವಿದ್ಯಾಮಾನ್ಯ ತೀರ್ಥರಿಂದ 'ತತ್ವಮಂಜರಿ' ಗ್ರಂಥವನ್ನು ಅಧ್ಯಯನ ಮಾಡಿದವರು. ಶ್ರೀವಿದ್ಯಾಮಾನ್ಯತೀರ್ಥರ ಅಂತಿಮ ದಿನಗಳಲ್ಲಿ ಅವರ ಅಶಕ್ತಿಯ ಪ್ರಭಾವದಿಂದ ಶ್ರೀಕೃಷ್ಣಪೂಜೆಗೆ ತೊಂದರೆ ಯಾದಾಗ ತಾತನಿಗೆ ಮೊಮ್ಮಗನಿರುವಂತೆ ಆ ಮಹಾಗುರುಗಳ ಪೂಜೆಗೆ ಸಹಾಯವನ್ನು ಮಾಡುವ ಸುಯೋಗವನ್ನುಪಡೆದವರು. ಯತಿಗುಣಭರಿತರು.

1992 ರಲ್ಲಿ ಉಡುಪಿಯಿಂದ ತಿರುಪತಿ-ತಿರುಮಲ

1993 ರಲ್ಲಿ ಉಡುಪಿಯಿಂದ ಸುಬ್ರಹ್ಮಣ್ಯ

1994 ರಲ್ಲಿ ಉಡುಪಿಯಿಂದಮಂತ್ರಾಲಯ

1995 ರಲ್ಲಿ ಉಡುಪಿಯಿಂದಸೋದೆ

1996 ರಲ್ಲಿ ಉಡುಪಿಯಿಂದಹಂಪಿ

1997 ರಲ್ಲಿ ಹರಿದ್ವಾರದಿಂದ ಬದರಿನಾಥ್

1998 ರಲ್ಲಿ ಉಡುಪಿಯಿಂದ ವಿಷ್ಣುಮಂಗಳ

1999 ರಲ್ಲಿ ಮಂಜುಗಣಿಯಿಂದ ಕೊಲ್ಹಾಪುರ

2000 ರಲ್ಲಿ ಉಡುಪಿಯಿಂದ ಪಾಜಕಕ್ಷೇತ್ರ



## ಇತರ ಯತಿಶಿಷ್ಯರು:

ತತ್ವಜ್ಞಾನಪ್ರಸಾರದೀಕ್ಷಾ ಬದ್ಧರಾದ ಶ್ರೀ ವಿದ್ಯಾಮಾನ್ಯ ತೀರ್ಥರು ಶಿಷ್ಯರನ್ನುತರಬೇತಿಗೊಳಿಸಿ ತತ್ವಪ್ರಸಾರಕ್ಕಾಗಿ ನಿಯೋಜಿಸಿದರು. ಆ ಶಿಷ್ಯರುನೂರಾರು. ಅದರಲ್ಲಿ ಯತಿಗಳು, ಗೃಹಸ್ಥರು, ಬ್ರಹ್ಮಚಾರಿಗಳು. ಯತಿಗಳಲ್ಲಿ, ಶ್ರೀಪೇಜಾವರಮಠದ ಶ್ರೀವಿಶ್ವೇಶತೀರ್ಥ ಶ್ರೀಪಾದ ರಂತಹ ಸಾಧಕರತ್ನಗಳನ್ನು ನೀಡಿದರು. ಆ ಶಿಷ್ಯೆಲ್ಲರೂ ಮಠಾಧಿಪತಿಗಳು, ಮಠಾಧಿಪತಿ ಗಳಾಗದೇ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ತ್ಯಾಗಮಯ ಜೀವನದೊಂದಿಗೆ ತತ್ವಪ್ರಸಾರ ಮಾಡುವುದಕ್ಕಾಗಿ ಇರುವ ಸಂನ್ಯಾಸಿ ಶಿಷ್ಯರನ್ನುತರಬೇತಿಗೊಳಿಸಿದರು. ಅವರೆಲ್ಲ ದೇಶದ ನಾನಾಭಾಗಗಳಲ್ಲಿ ತಮ್ಮ ಕರ್ತವ್ಯಗಳನ್ನು ನಡೆಸಿ ಶ್ರೀಪಾದರ, ಶ್ರೀಮಧ್ವಾಚಾರ್ಯರ ಸೇವೆಯನ್ನು ಸಲ್ಲಿಸುತ್ತಿರುವರು.ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಸಂನ್ಯಾಸಾಶ್ರಮ ವನ್ನು ಸ್ವೀಕರಿಸಿ ಆ ಕಾರ್ಯದಲ್ಲಿ ತೊಡಗಿದ ಸಂನ್ಯಾಸಿಶಿಷ್ಯರಲ್ಲಿ ಪ್ರಯಾಗಕ್ಷೇತ್ರದ ಲ್ಲಿರುವ ಮಧ್ವಮಠದ ಅಧಿಪತಿಗಳಾದ ಶ್ರೀಶ್ರೀವಿದ್ಯಾವಲ್ಲಭ ತೀರ್ಥರು ಪ್ರಸಿದ್ಧರು. ಅವರು ಅನೇಕ ದಶಕಗಳ ಪೋಲೀಸ್ ಅಧಿಕಾರಿಕ್ಷೇತ್ರದಲ್ಲಿ ಉನ್ನತಹುದ್ದೆ ಯಲ್ಲಿದ್ದವರು. ಅವರ ಪೂರ್ವಾಶ್ರಮದಹೆಸರು ಶ್ರೀಗಡಚಿಂತಿ ರಾಮಾಚಾರ್ಯರು. ಅವರು ಶ್ರೀಪಲಿಮಾರು ಪರ್ಯಾಯದ ಅವಧಿಯಲ್ಲಿ ಆಶ್ರಮ ವನ್ನು ಸ್ವೀಕರಿಸಿ ಶ್ರೀವಿದ್ಯಾವಲ್ಲಭತೀರ್ಥ ಎಂಬ ನಾಮವನ್ನುಪಡೆದರು. ಅವರಿಂದ ಮಾಧ್ವದೀಕ್ಷಾಬದ್ಧ ಸಂಪನ್ನರಾದ ಶಿಷ್ಯರು ನೂರಾರು. ಅವರ ಹಿಂದೀಭಾಷೆಯ ಅದ್ಭುತ ಉಪನ್ಯಾಸದಿಂದ ಪ್ರಭಾವಿತವಾದ ಉತ್ತರಪ್ರದೇಶ ಸರ್ಕಾರವೂ ಪ್ರತಿ ವರ್ಷಅವರ ಉಪನ್ಯಾಸವನ್ನು ಏರ್ಪಡಿಸುತ್ತದೆ.ಸಕಲಗ್ರಂಥಗಳ ಕುರುತು, ಸದಾಚಾರಗಳ ಕುರಿತು ಉಪನ್ಯಾಸವನ್ನಿತ್ತು ಧರ್ಮಪ್ರಚಾರ ಮಾಡುವ ಶ್ರೀವಿದ್ಯಾವಲ್ಲಭ ತೀರ್ಥರ ಸಾರ್ಥಕ ಪ್ರಯತ್ನದ ಪುಣ್ಯದ ಹೆಚ್ಚಿನಭಾಗ ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಲಭಿಸುವುದು.

ಅಂತೆಯೇ ಶ್ರೀ ವಿದ್ಯಾಮಾನ್ಯ ತೀರ್ಥರಿಂದ ಸಂನ್ಯಾಸವನ್ನು ಸ್ವೀಕರಿಸಿ, ಸಾಧನಗೈದು, ಭಗವಂತನೊಲುಮೆಯನ್ನುಪಡೆದು ಸಂನ್ಯಾಸೀಸಾಧಕರು ಅನೇಕರು. ಅವರಲ್ಲಿ ಪಡುಬಿದ್ರಿಯ ಶ್ರೀವಿದ್ಯಾಪತಿ ತೀರ್ಥರು, ಪ್ರೊದ್ದಟೂರಿನ ಶ್ರೀವಿದ್ಯಾ ವಿನೋದ ತೀರ್ಥರು. ಹರತಾಳದ ಶ್ರೀವಿದ್ಯಾ ಮಿತ್ರತೀರ್ಥರು, ಈರೋಡಿನ ಶ್ರೀರಾಮ ವಿದ್ಯಾತೀರ್ಥರು ಪ್ರಸಿದ್ಧರು.

ಹೀಗೆ ಅನೇಕ ಸಂನ್ಯಾಸಕೂಟವನ್ನು ನಿರ್ಮಿಸಿದ ಪರಮಹಂಸ ಪರಿವ್ರಾಜಕಾಚಾರ್ಯವರ್ಯರು ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು. ★

# ಏಕಮಾತ್ರ ಯತಿ

ಭಾರತದ ಸಂನ್ಯಾಸಿ ಪರಂಪರೆಯಲ್ಲಿ ಬರುವ ಸಂನ್ಯಾಸಿಗಳಿಗೆ ಆಶ್ರಮ ಬದಲಾಗುವ ಸಂದರ್ಭದಲ್ಲಿ ಹೆಸರನ್ನೂ ಬದಲಾಯಿಸುವ ಸಂಪ್ರದಾಯವಿದೆ. ಅದಕ್ಕನುಗುಣವಾಗಿ ನಾರಾಯಣ ತಂತ್ರಿಗಳು'' ಶ್ರೀವಿದ್ಯಾಮಾನ್ಯತೀರ್ಥ'' ಎಂಬ ನಾಮವನ್ನು ಪಡೆದರು. ನಾಮಕರಣ ಮಾಡಿ ಸಂನ್ಯಾಸವನ್ನು ನೀಡಿದವರು ಶ್ರೀಅದಮಾರು ಮಠದ ಶ್ರೀವಿಬುಧಪ್ರಿಯತೀರ್ಥರು. ಶ್ರೀವಿದ್ಯಾಮಾನ್ಯ ತೀರ್ಥರು, ಆ ಹೆಸರನ್ನು ಸಾರ್ಥಕಪಡಿಸಿಕೊಂಡರು. ಆಶ್ಚರ್ಯವೆಂದರೆ, ಶ್ರೀವಿದ್ಯಾಮಾನ್ಯ ಎಂಬ ನಾಮ ಅಪರೂಪದ ನಾಮ. ಅಷ್ಟೇ ಅಲ್ಲ. ಆ ಹೆಸರು ಭಾರತೀಯ ಯಾವ ಮತದ ಸಂನ್ಯಾಸಿ ಪರಂಪರೆಯಲ್ಲಿ ಆ ವರೆಗೂ ಬಂದಿರದ ನಾಮ. ನಮ್ಮ ಮಾಧ್ವಪರಂಪರೆಯ ಯಾವ ಮಠದಲ್ಲೂ '' ಶ್ರೀವಿದ್ಯಾಮಾನ್ಯತೀರ್ಥ'' ಎಂಬ ಹೆಸರು ಆವೃತ್ತಿಯಾಗಿಲ್ಲ. ಅದೇ ಮೊದಲು ಪ್ರಾಯಃ ಎಲ್ಲ ಯತಿಗಳ ನಾಮಗಳೂ ಯಾವುದಾದರೊಂದು ಮಠದಲ್ಲಿ ಆವೃತ್ತವಾಗಿರುವುದು ಕಂಡಿದೆ. ಆದರೆ ಅದಕ್ಕೆ ಅಪವಾದವಾಗಿ ಎಲ್ಲೂ ಕೇಳಿ ಬಂದಿರದ ಹೆಸರು '' ನಮ್ಮ ಶ್ರೀಶ್ರೀ ವಿದ್ಯಾಮಾನ್ಯತೀರ್ಥ'' ರ ನಾಮ. ಅಕ್ಷರಶಃ ಸಾರ್ಥಕವಾದ ನಾಮ.



ಅರ್ಪಣೆ





ಶ್ರೀವಿದ್ಯಾಮಾನ್ಯತೀರ್ಥರ ಅಂತರ್ಯಾಮಿಯಾದ
ಮಧ್ವಾಂತರ್ಗತ ಶ್ರೀಕೃಷ್ಣನಿಗೆ



ಆಶ್ರಮ ನೀಡಿ ಹರಸಿದ
ಶ್ರೀವಿಬುಧಪ್ರಿಯತೀರ್ಥರು



ಮಂತ್ರೋಪದೇಶ ನೀಡಿದ ಶತಾಯುಷಿ
ಶ್ರೀಸುಧೀಂದ್ರತೀರ್ಥರು



ವಿದ್ಯೆಯನ್ನು ಧಾರೆಯೆರೆದ
ಶ್ರೀಸತ್ಯಧ್ಯಾನತೀರ್ಥರು











## ಸಮರ್ಪಣೆ

ಶ್ರೀವಿದ್ಯಾಮಾನ್ಯತೀರ್ಥಗುರ್ವಂತರ್ಗತ

ಶ್ರೀಮಧ್ವಾಂತರ್ಗತ

ಶ್ರೀವೇದವ್ಯಾಸದೇವರ ಪಾದಪದ್ಮಗಳಲ್ಲಿ

ವಿದ್ಯಾಸುಮಾನ್ಯವರ ವಿದ್ಯಾಧಿರಾಜಗುರು ವಿದ್ಯಾಸುಧಾಬ್ಧಿನಿಪುಣ
ವಿದ್ಯಾರ್ಥಿಕಲ್ಪತರು ವಿದ್ಯಾನ್ನದಾನಚಣ ವಿದ್ಯಾದಿಮಾನ್ಯಸುಗುರೊ
ವಿದ್ಯಾಸುಮಾನ್ಯವರ ವಿದ್ಯಾಕುಮಾರ ಸುಕುವಾದ್ಯಾಲಿಖಂಡನಪಟೋ
ವಿದ್ಯಾನಿಭೆಂಜಯ ಸುವಿದ್ಯಾಪ್ರಚಾರಭರ ವಿದ್ಯಾಸುಧಾಂ ಪ್ರದಿಶ ಮೇ

